ಛಂದಾಗ್ಂಸಿ ದೇವೇಭ್ಯೋಽಪಾಕ್ರಾಮನ್ನ ವೋಽಭಾಗಾನಿ ಹವ್ಯಂ ವಕ್ಷ್ಯಾಮ

ಇತಿ ತೇಭ್ಯ ಏತಚ್ಚತುರ್ಗೃಹೀತಮಧಾರಯನ್ಪುರೋನುವಾಕ್ಯಾಯೈ

---

ಛಂದಾಗ್ಂಸಿ । ದೇವೇಭ್ಯಃ । ಅಪೇತಿ । ಅಕ್ರಾಮನ್ನ್ । ನ । ವಃ । ಅಭಾಗಾನಿ । ಹವ್ಯಮ್ । ವಕ್ಷ್ಯಾಮಃ । ಇತಿ । ತೇಭ್ಯಃ । ಏತತ್ । ಚತುರ್ಗೃಹೀತಮಿತಿ ಚತುಃ-ಗೃಹೀತಮ್ । ಅಧಾರಯನ್ನ್ । ಪುರೋನುವಾಕ್ಯಾಯಾ ಇತಿ ಪುರಃ-ಅನುವಾಕ್ಯಾಯೈ ।

---

ಬ್ರಾಹ್ಮಣಭಾಗ ವಿವರಣೆ

**ಚತುರ್ಗೃಹೀತದ ಮತ್ತೊಂದು ವಿಧವಾದ ಪ್ರಶಂಸೆ**

| | |
|---|---|
| **ಛಂದಾಗ್ಂಸಿ ಅಭಾಗಾನಿ ವಃ ಹವ್ಯಮ್ ನ ವಕ್ಷ್ಯಾಮಃ ಇತಿ** | ಗಾಯತ್ರಿಯೇ ಮುಂತಾದ ಛಂದೋದೇವತೆಗಳು ನಮಗೆ ಭಾಗವನ್ನು ಕಲ್ಪಿಸದಿದ್ದರೆ ನಿಮಗಾಗಿ ಹವ್ಯಗಳನ್ನು ನಾವು ಒಯ್ಯುವುದಿಲ್ಲ [ಹವ್ಯಗಳನ್ನು ಸ್ವೀಕರಿಸಲು ನಿಮ್ಮನ್ನು ಆಹ್ವಾನಿಸುವುದಿಲ್ಲ] ಎಂದು |
| **ದೇವೇಭ್ಯಃ** | ಇಂದ್ರಾದಿದೇವತೆಗಳಿಂದ |
| **ಅಪಾಕ್ರಾಮನ್** | ದೂರಕ್ಕೆ ಹೊರಟು ಹೋದರು. |
| **ತೇಭ್ಯಃ** | [ಆಗ ಆ ದೇವತೆಗಳು] ಛಂದೋದೇವತೆಗಳಿಗಾಗಿ |
| **ಏತತ್ ಚತುರ್ಗೃಹೀತಮ್** | ಜುಹೂವಿನಲ್ಲಿ ಗೃಹೀತವಾದ ಹವಿಸ್ಸಿನ ಈ ಚತುರ್ಗೃಹೀತವನ್ನು |
| **ಅಧಾರಯನ್** | ಭಾಗವನ್ನಾಗಿ ಕಲ್ಪಿಸಿದರು. |
| **ಪುರೋನುವಾಕ್ಯಾಯೈ** | ಪುರೋನುವಾಕ್ಯೆಯ ಅಭಿಮಾನಿಯಾದ ಗಾಯತ್ರೀ ಛಂದೋದೇವತೆಗೂ |

---

ಕರ್ಮದಲ್ಲಿ ಪ್ರವೃತ್ತಿಗಾಗಿ ಎಂಟು ಮಂತ್ರಗಳಿಂದ ಒಂದು ಹೋಮವನ್ನು ಮಾಡಬೇಕು. **'ಯುಂಜಾನಃ'** ಎಂದು ಆರಂಭಗೊಂಡು **'ಸುವರ್ಜಿತಮ್'** ಎಂದು ಮುಕ್ತಾಯಗೊಳ್ಳುವ ಎಂಟು ಮಂತ್ರಗಳಿಂದ ಒಂದು ಹೋಮವನ್ನು ಮಾಡಬೇಕು. ಇದರಿಂದ ಸವಿತೃರೂಪನಾದ ಪರಮಾತ್ಮನ ಅನುಮತಿಯನ್ನು ಪಡೆದಂತಾಗುತ್ತದೆ.

ಈ ಸಾವಿತ್ರಹೋಮವನ್ನು ಏಳು ಋಕ್ಕುಗಳಿಂದ ಕೂಡಿದ ಎಂಟನೆಯದಾದ ಯಜುಸ್ಸಿನಿಂದ ಮಾಡಬೇಕು. ಈ ಹೋಮವು ಒಂದೇ ಆದರೂ ಮಂತ್ರಗಳು ಅನೇಕವಿರುವುದರಿಂದ **'ಸಾವಿತ್ರಾಣಿ'** ಎಂದು ಬಹುವಚನವಿದೆ.

ಈ ಸಾವಿತ್ರಹೋಮವನ್ನು ಚತುರ್ಗೃಹೀತ [ನಾಲ್ಕು ಬಾರಿ ಗ್ರಹಿಸಿದ ಹವಿಸ್ಸು] ದಿಂದ ಮಾಡಬೇಕು. ಚತುಃ ಸಂಖ್ಯೆಯನ್ನು ಶ್ರುತಿಯು ಪ್ರಶಂಸಿಸುತ್ತದೆ.

ಯಾಜ್ಯಾಯೈ ದೇವತಾಯೈ ವಷಟ್ಕಾರಾಯ ಯಚ್ಚತುರ್ಗೃಹೀತಂ ಜುಹೋತಿ
ಛಂದಾಗ್ಂಸ್ಯೇವ ತತ್ಪ್ರೀಣಾತಿ ತಾನ್ಯಸ್ಯ ಪ್ರೀತಾನಿ ದೇವೇಭ್ಯೋ ಹವ್ಯಂ
ವಹಂತಿ ಯಂ ಕಾಮಯೇತ [ಕಾಮಯೇತ(೧)]

---

ಯಾಜ್ಯಾಯೈ । ದೇವತಾಯೈ । ವಷಟ್ಕಾರಾಯೇತಿ ವಷಟ್–ಕಾರಾಯ । ಯತ್ । ಚತುರ್ಗೃಹೀತಮಿತಿ ಚತುಃ–ಗೃಹೀತಮ್ । ಜುಹೋತಿ । ಛಂದಾಗ್ಂಸಿ । ಏವ । ತತ್ । ಪ್ರೀಣಾತಿ । ತಾನಿ । ಅಸ್ಯ । ಪ್ರೀತಾನಿ । ದೇವೇಭ್ಯಃ । ಹವ್ಯಮ್ । ವಹಂತಿ । ಯಮ್ । ಕಾಮಯೇತ । (೧) ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯಾಜ್ಯಾಯೈ** | ಯಾಜ್ಯಾನುವಾಕ್ಯೆಯ ಅಭಿಮಾನಿಯಾದ ತ್ರಿಷ್ಟುಪ್ಛಂದೋದೇವತೆಗೂ |
| **ದೇವತಾಯೈ** | ದೇವತಾಭಿಮಾನಿಯಾದ ಜಗತೀಛಂದೋ ದೇವತೆಗೂ |
| **ವಷಟ್ಕಾರಾಯ** | ವಷಟ್ಕಾರಾಭಿಮಾನಿಯಾದ ಅನುಷ್ಟುಪ್ಛಂದೋ ದೇವತೆಗೂ[ಭಾಗವನ್ನು ಕಲ್ಪಿಸಿದರು] |
| **ಯತ್ ಚತುರ್ಗೃಹೀತಮ್ ಜುಹೋತಿ** | ಯಜಮಾನನು ಚತುರ್ಗೃಹೀತಹೋಮವನ್ನು ಮಾಡುವುದು ಯಾವುದುಂಟೋ |
| **ತತ್ ಛಂದಾಗ್ಂಸಿ ಏವ ಪ್ರೀಣಾತಿ** | ಅದು ಗಾಯತ್ರ್ಯಾದಿಛಂದೋದೇವತೆಗಳನ್ನು ತೃಪ್ತಿ ಪಡಿಸುತ್ತದೆ. |
| **ಪ್ರೀತಾನಿ ತಾನಿ** | ಹೀಗೆ ತೃಪ್ತಿಹೊಂದಿದ ಛಂದೋದೇವತೆಗಳು |
| **ದೇವೇಭ್ಯಃ ಅಸ್ಯ ಹವ್ಯಮ್ ವಹಂತಿ** | ದೇವತೆಗಳಿಗೆ ಈ ಯಜಮಾನನು ನೀಡುವ ಹವ್ಯವನ್ನು ಒಯ್ಯುತ್ತವೆ./ದೇವತೆಗಳನ್ನು ಆಹ್ವಾನಿಸುತ್ತವೆ. |

---

ಛಂದೋದೇವತೆಗಳು ತಮಗೆ ಹವಿಸ್ಸನ್ನು ತರುವಂತೆ ಮಾಡಲು ದೇವತೆಗಳು ಚತುರ್ಗೃಹೀತವನ್ನು ಆ ದೇವತೆಗಳಿಗೆ ಭಾಗವನ್ನಾಗಿ ಕಲ್ಪಿಸಿದರೆಂಬ ಇತಿಹಾಸದಿಂದ ಚತುರ್ಗೃಹೀತದ ಇನ್ನೊಂದು ಬಗೆಯ ಪ್ರಶಂಸೆಯನ್ನು ಶ್ರುತಿಯು ತಿಳಿಸುತ್ತಿದೆ.

ಪಾಪೀಯಾನ್ಥ್ಸ್ಯಾದಿತ್ಯೇಕೈಕಂ ತಸ್ಯ

ಜುಹುಯಾದಾಹುತೀಭಿರೇವೈನಮಪಗೃಹ್ಣಾತಿ ಪಾಪೀಯಾನ್ಭವತಿ

ಯಂ ಕಾಮಯೇತ ವಸೀಯಾನ್ಥ್ಸ್ಯಾದಿತಿ ಸರ್ವಾಣಿ ತಸ್ಯಾನುದ್ರುತ್ಯ

---

ಪಾಪೀಯಾನ್ । ಸ್ಯಾತ್ । ಇತಿ । ಏಕೈಕಮಿತ್ಯೇಕಮ್-ಏಕಮ್ । ತಸ್ಯ । ಜುಹುಯಾತ್ । ಆಹುತೀಭಿರಿತ್ಯಾಹುತಿ-ಭಿಃ । ಏವ । ಏನಮ್ । ಅಪೇತಿ । ಗೃಹ್ಣಾತಿ । ಪಾಪೀಯಾನ್ । ಭವತಿ । ಯಮ್ । ಕಾಮಯೇತ । ವಸೀಯಾನ್ । ಸ್ಯಾತ್ । ಇತಿ । ಸರ್ವಾಣಿ । ತಸ್ಯ । ಅನುದ್ರುತ್ಯೇತ್ಯನು-ದ್ರುತ್ಯ ।

---

| ಬ್ರಾಹ್ಮಣಭಾಗ | ವಿವರಣೆ |
|---|---|

### ಪ್ರತ್ಯೇಕ ಹೋಮದ ನಿಂದೆ

| | |
|---|---|
| **ಯಮ್ ಪಾಪೀಯಾನ್ ಸ್ಯಾತ್ ಇತಿ** | [ಅಧ್ವರ್ಯುವು] ಯಾವ ಯಜಮಾನನನ್ನು |
| **ಕಾಮಯೇತ** | ಅವನು ದರಿದ್ರನಾಗಲಿ ಎಂದು ಅಪೇಕ್ಷಿಸುವನೋ |
| **ತಸ್ಯ** | ಅವನ [ಸಾವಿತ್ರಹೋಮದಲ್ಲಿ] |
| **ಏಕೈಕಮ್ ಜುಹುಯಾತ್** | ಒಂದೊಂದು ಮಂತ್ರದಿಂದಲೂ ಪ್ರತ್ಯೇಕವಾಗಿ ಹೋಮ ಮಾಡಬೇಕು. |
| **ಆಹುತೀಭಿಃ ಏವ** | ಆಹುತಿಗಳಿಂದ |
| **ಏನಮ್ ಅಪಗೃಹ್ಣಾತಿ** | ಇವನನ್ನು ಧನದಿಂದ ದೂರವಾಗುವಂತೆ ಮಾಡುತ್ತಾನೆ. [ಪಾಪಿಷ್ಠನಾಗುವಂತೆ ಮಾಡುತ್ತಾನೆ] |
| **ಪಾಪೀಯಾನ್ ಭವತಿ** | ಆ ಯಜಮಾನನು ಅತಿ ದರಿದ್ರನಾಗುತ್ತಾನೆ. |

### ಏಕಹೋಮದ ಪ್ರಶಂಸೆ

| | |
|---|---|
| **ಯಮ್** | [ಅಧ್ವರ್ಯುವು] ಯಾವ ಯಜಮಾನನನ್ನು |
| **ವಸೀಯಾನ್ ಸ್ಯಾತ್ ಇತಿ ಕಾಮಯೇತ** | ಅತಿಧನಿಕನಾಗಲೆಂದು ಬಯಸುತ್ತಾನೆಯೋ |
| **ತಸ್ಯ** | ಆ ಯಜಮಾನನಿಗೆ ಸಂಬಂಧಿಸಿದ [ಸಾವಿತ್ರ ಹೋಮದಲ್ಲಿ] |
| **ಸರ್ವಾಣಿ ಅನುದ್ರುತ್ಯ** | ಎಲ್ಲ ಮಂತ್ರಗಳನ್ನೂ ಅನುಕ್ರಮವಾಗಿ ಹೇಳಿ |

ಜುಹುಯಾದಾಹುತ್ಯೈವೈನಮಭಿ ಕ್ರಮಯತಿ ವಸೀಯಾನ್ಭವತ್ಯಥೋ ಯಜ್ಞಸ್ಯೈವೈಷಾಽಭಿಕ್ರಾಂತಿರೇತಿ ವಾ ಏಷ ಯಜ್ಞಮುಖಾದೃದ್ಧ್ಯಾ ಯೋಽಗ್ನೇರ್ದೇವತಾಯಾ ಏತ್ಯಷ್ಟಾವೇತಾನಿ

---

ಜುಹುಯಾತ್ । ಆಹುತ್ಯಾ ಇತ್ಯಾ-ಹುತ್ಯಾ । ಏವ । ಏನಮ್ । ಅಭೀತಿ । ಕ್ರಮಯತಿ । ವಸೀಯಾನ್ । ಭವತಿ । ಅಥೋ ಇತಿ । ಯಜ್ಞಸ್ಯ । ಏವ । ಏಷಾ । ಅಭಿಕ್ರಾಂತಿರಿತ್ಯಭಿ-ಕ್ರಾಂತಿಃ । ಏತಿ । ವೈ । ಏಷಃ । ಯಜ್ಞಮುಖಾದಿತಿ ಯಜ್ಞ-ಮುಖಾತ್ । ಋದ್ಧ್ಯಾಃ । ಯಃ । ಅಗ್ನೇಃ । ದೇವತಾಯಾಃ । ಏತಿ । ಅಷ್ಟೌ । ಏತಾನಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಜುಹುಯಾತ್ | ಒಂದು ಹೋಮವನ್ನು ಮಾಡಬೇಕು. |
| ಆಹುತ್ಯಾ ಏವ | ಮಂತ್ರಸಮುದಾಯದ ಅನಂತರದಲ್ಲಿ ಮಾಡುವ ಆಹುತಿಯಿಂದ |
| ಏನಮ್ | [ಅವನು] ಈ ಯಜಮಾನನನ್ನು |
| ಅಭಿಕ್ರಮಯತಿ | ಎಲ್ಲರ ಮೇಲಿರುವಂತೆ ಮಾಡುತ್ತಾನೆ. |
| ವಸೀಯಾನ್ ಭವತಿ | ಆ ಯಜಮಾನನು ಅಧಿಕ ಶ್ರೀಮಂತನಾಗುತ್ತಾನೆ/ ಶ್ರೇಷ್ಠನಾಗುತ್ತಾನೆ. |
| ಅಥೋ ಏಷಾ ಯಜ್ಞಸ್ಯ ಅಭಿಕ್ರಾಂತಿಃ ಏವ | ಮತ್ತು ಈ ಆಹುತಿಯು ಈ ಚಯನವನ್ನೇ ವ್ಯಾಪಿಸಿದಂತೆಯೇ/ವಶಪಡಿಸಿಕೊಂಡಂತೆಯೇ ಆಗುತ್ತದೆ. |

## ಅಷ್ಟಸಂಖ್ಯೆಯ ಪ್ರಶಂಸೆ

| | |
|---|---|
| ಯಃ | ಯಾವ ಯಜಮಾನನು |
| ಅಗ್ನೇಃ ದೇವತಾಯಾಃ ಏತಿ | ಹೋಮವನ್ನು ಮಾಡಿ ಅಗ್ನಿಯನ್ನು ಬಿಟ್ಟು ಉಖಾ ಸಂಭರಣಾದಿಗಳಿಗೆ ತೆರಳುವನೋ, |
| ಏಷಃ ಯಜ್ಞಮುಖಾತ್ ಋದ್ಧ್ಯಾಃ [ದೇವತಾಯಾಃ ಅಗ್ನೇಃ] | ಇವನು ಯಜ್ಞಪ್ರಾರಂಭದಿಂದಲೂ, ಯಜ್ಞಫಲ ಸಮೃದ್ಧಿಯಿಂದಲೂ, (ಯಜ್ಞದೇವತೆಯಾದ ಅಗ್ನಿಯಿಂದಲೂ) |
| ಏತಿ ವೈ | ದೂರನಾಗಿ ಹೋಗುತ್ತಾನೆ. |
| ಏತಾನಿ ಅಷ್ಟೌ | ಈ ಎಂಟು ಮಂತ್ರಗಳೂ |

ಸಾವಿತ್ರಾಣಿ ಭವಂತ್ಯಷ್ಟಾಕ್ಷರಾ ಗಾಯತ್ರೀ ಗಾಯತ್ರೋಽ[ಗಾಯತ್ರಃ(೨)

ಅಗ್ನಿಸ್ತೇ...]ಗ್ನಿಸ್ತೇನೈವ ಯಜ್ಞಮುಖಾದೃಧ್ಯಾ ಅಗ್ನೇರ್ದೇವತಾಯೈ

ನೈತ್ಯಷ್ಟೌ ಸಾವಿತ್ರಾಣಿ ಭವಂತ್ಯಾಹುತಿರ್ನವಮೀ

---

ಸಾವಿತ್ರಾಣಿ । ಭವಂತಿ । ಅಷ್ಟಾಕ್ಷರೇತ್ಯಷ್ಟಾ-ಅಕ್ಷರಾ । ಗಾಯತ್ರೀ । ಗಾಯತ್ರಃ । (೨) । ಅಗ್ನಿಃ । ತೇನ । ಏವ । ಯಜ್ಞಮುಖಾದಿತಿ ಯಜ್ಞ-ಮುಖಾತ್ । ಋದ್ಧ್ಯೈ । ಅಗ್ನೇಃ । ದೇವತಾಯೈ । ನ । ಏತಿ । ಅಷ್ಟೌ । ಸಾವಿತ್ರಾಣಿ । ಭವಂತಿ । ಆಹುತಿರಿತ್ಯಾ-ಹುತಿಃ । ನವಮೀ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಸಾವಿತ್ರಾಣಿ ಭವಂತಿ | ಸವಿತೃದೇವತಾಕವಾಗಿವೆ. |
| ಅಷ್ಟಾಕ್ಷರಾ ಗಾಯತ್ರೀ | ಗಾಯತ್ರೀಛಂದಸ್ಸು ಎಂಟು ಅಕ್ಷರಗಳ ಪಾದವುಳ್ಳದ್ದು. |
| ಅಗ್ನಿಃ ಗಾಯತ್ರಃ | ವಿರಾಟ್ಪುರುಷನ ಮುಖದಿಂದ ಜನಿಸಿದ ಗಾಯತ್ರಿಯೂ, ಅಗ್ನಿಯೂ ಒಂದೇ ಕಡೆಯಲ್ಲಿ ಜನಿಸಿದವರು. |
| ತೇನ ಏವ | ಈ ಅಷ್ಟಸಂಖ್ಯೆಯ ಸಾವಿತ್ರಮಂತ್ರಗಳಿಂದ ಹೋಮ ಮಾಡುವುದರಿಂದಲೇ |
| ಯಜ್ಞಮುಖಾತ್ ಋದ್ಧ್ಯೈ | ಯಜ್ಞಪ್ರಾರಂಭದಿಂದಲೂ, ಯಜ್ಞಫಲಸಮೃದ್ಧಿಯಿಂದಲೂ |
| ದೇವತಾಯೈ ಅಗ್ನೇಃ ನ ಏತಿ | ಯಜ್ಞದೇವತೆಯಾದ ಅಗ್ನಿಯಿಂದಲೂ ಯಜಮಾನನು ದೂರನಾಗುವುದಿಲ್ಲ. |

**ಮಂತ್ರ ಮತ್ತು ಆಹುತಿಗಳ ಒಟ್ಟು ಸಂಖ್ಯೆಯ ಪ್ರಶಂಸೆ**

| | |
|---|---|
| ಸಾವಿತ್ರಾಣಿ ಅಷ್ಟೌ ಭವಂತಿ | ಎಂಟು ಸವಿತೃದೇವತಾಕವಾಗಿರುವ ಮಂತ್ರಗಳು. |
| ಆಹುತಿಃ ನವಮೀ | ಇವುಗಳಿಂದ ಮಾಡುವ ಹೋಮವು ಒಂಬತ್ತನೆಯದು. |

ತ್ರಿವೃತಮೇವ ಯಜ್ಞಮುಖೇ ವಿ ಯಾತಯತಿ ಯದಿ ಕಾಮಯೇತ

ಛಂದಾಗ್ಂಸಿ ಯಜ್ಞಯಶಸೇನಾರ್ಪಯೇಯಮಿತ್ಯೃಚಮಂತಮಾಂ

ಕುರ್ಯಾಚ್ಛಂದಾಗ್ಂಸ್ಯೇವ ಯಜ್ಞಯಶಸೇನಾರ್ಪಯತಿ

---

ತ್ರಿವೃತಮಿತಿ ತ್ರಿ-ವೃತಮ್ । ಏವ । ಯಜ್ಞಮುಖ ಇತಿ ಯಜ್ಞ-ಮುಖೇ । ವೀತಿ । ಯಾತಯತಿ । ಯದಿ । ಕಾಮಯೇತ । ಛಂದಾಗ್ಂಸಿ । ಯಜ್ಞಯಶಸೇನೇತಿ ಯಜ್ಞ-ಯಶಸೇನ । ಅರ್ಪಯೇಯಮ್ । ಇತಿ । ಋಚಮ್ । ಅಂತಮಾಮ್ । ಕುರ್ಯಾತ್ । ಛಂದಾಗ್ಂಸಿ । ಏವ । ಯಜ್ಞಯಶಸೇನೇತಿ ಯಜ್ಞ-ಯಶಸೇನ । ಅರ್ಪಯತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯಜ್ಞಮುಖೇ** | [ಯಜಮಾನನು] ಯಜ್ಞಾರಂಭದಲ್ಲಿಯೇ |
| **ತ್ರಿವೃತಮ್ ಏವ ವಿಯಾತಯತಿ** | *ತ್ರಿವೃತ್‌ಸ್ತೋತ್ರವನ್ನು ನೆರವೇರಿಸಿದವನಾಗುತ್ತಾನೆ. |

**ಹೇಯ-ಉಪಾದೇಯಪಕ್ಷಗಳ ಸಯುಕ್ತಿಕವಾದ ವಿವರಣೆ.**

| | |
|---|---|
| **ಯದಿ** | [ಅಧ್ವರ್ಯುವು] ಒಂದು ವೇಳೆ |
| **ಛಂದಾಗ್ಂಸಿ** | ಛಂದೋದೇವತೆಗಳಿಗೇ |
| **ಯಜ್ಞಯಶಸೇನ ಅರ್ಪಯೇಯಮ್ ಇತಿ** | ಯಜ್ಞಫಲವನ್ನು ಸೇರುವಂತೆ ಮಾಡುವೆನೆಂದು |
| **ಕಾಮಯೇತ** | ಇಚ್ಛಿಸಿದರೆ |
| **ಋಚಮ್ ಅಂತಮಾಮ್ ಕುರ್ಯಾತ್** | ಎಂಟು ಮಂತ್ರಗಳಲ್ಲಿ ಋಕ್ಕನ್ನೇ ಕೊನೆಯದನ್ನಾಗಿ ಮಾಡಬೇಕು. |
| **ಛಂದಾಗ್ಂಸಿ ಏವ ಯಜ್ಞಯಶಸೇನ ಅರ್ಪಯತಿ** | [ಇದರಿಂದ] ಛಂದಸ್ಸುಗಳನ್ನೇ ಯಜ್ಞದ ಫಲವನ್ನು ಪಡೆದವುಗಳನ್ನಾಗಿಸುತ್ತಾನೆ. |

---

ಅಧ್ವರ್ಯುವು ಯಜಮಾನನನ್ನು ದರಿದ್ರನಾಗಲಿ ಎಂದು ಬಯಸುವುದಿಲ್ಲ. ಪ್ರತ್ಯೇಕ ಹೋಮದಿಂದ ಆ ರೀತಿ ಆಗುತ್ತದೆ ಎಂಬುದರ ತಾತ್ಪರ್ಯ-ಯಜಮಾನನಿಗಾಗಿ ಕೆಲಸ ಮಾಡಬೇಕಾದ ಋತ್ವಿಜರು ಅವನಿಗೆ ಕೇಡನ್ನು ಬಯಸಬಾರದು. ಹೀಗಾಗಿ ಪ್ರತ್ಯೇಕ ಹೋಮವನ್ನು ಅನುಷ್ಠಿಸಬಾರದು-ಎಂಬುದಾಗಿರುತ್ತದೆ.

---

* ತ್ರಿವೃತ್‌ಸ್ತೋತ್ರನಿರ್ವಾಹಕಗಳಾದ ಋಕ್‌ಗಳು ಒಂಬತ್ತು.

# ಯದಿ ಕಾಮಯೇತ ಯಜಮಾನಂ ಯಜ್ಞಯಶಸೇನಾರ್ಪಯೇಯಮಿತಿ ಯಜುರಂತಮಂ ಕುರ್ಯಾದ್ಯಜಮಾನಮೇವ ಯಜ್ಞಯಶಸೇನಾರ್ಪಯತ್ಯೃಚಾ ಸ್ತೋಮಗ್ಂ ಸಮರ್ಧಯೇತ್ಯಾ[...ರ್ಧಯೇತಿ(ಖ)ಆಹ]ಹ ಸಮೃಧ್ಯೈ

---

ಯದಿ । ಕಾಮಯೇತ । ಯಜಮಾನಮ್ । ಯಜ್ಞಯಶಸೇನೇತಿ ಯಜ್ಞ-ಯಶಸೇನ । ಅರ್ಪಯೇಯಮ್ । ಇತಿ । ಯಜುಃ । ಅಂತಮಮ್ । ಕುರ್ಯಾತ್ । ಯಜಮಾನಮ್ । ಏವ । ಯಜ್ಞಯಶಸೇನೇತಿ ಯಜ್ಞ-ಯಶಸೇನ । ಅರ್ಪಯತಿ । ಋಚಾ । ಸ್ತೋಮಮ್ । ಸಮಿತಿ । ಅರ್ಧಯ । ಇತಿ । ಆಹ । ಸಮೃಧ್ಯಾ ಇತಿ ಸಮ್-ಋಧ್ಯೈ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಯದಿ ಯಜಮಾನಮ್ ಯಜ್ಞಯಶಸೇನ ಅರ್ಪಯೇಯಮ್ ಇತಿ ಕಾಮಯೇತ | [ಅಧ್ವರ್ಯುವು] ಒಂದು ವೇಳೆ ಯಜಮಾನನಿಗೆ ಯಜ್ಞಫಲವು ಸೇರುವಂತೆ ಮಾಡುವೆನೆಂದು ಬಯಸಿದರೆ |
| ಯಜುಃ ಅಂತಮಮ್ ಕುರ್ಯಾತ್ | 'ಇಮಂ ನೋ ದೇವ...' ಎಂಬ ಯಜುರ್ಮಂತ್ರವನ್ನು ಕೊನೆಯ ಮಂತ್ರವನ್ನಾಗಿಸಬೇಕು. |
| ಯಜಮಾನಮ್ ಏವ ಯಜ್ಞಯಶಸೇನ ಅರ್ಪಯತಿ | [ಇದರಿಂದ] ಯಜಮಾನನನ್ನೇ ಯಜ್ಞಫಲವನ್ನು ಹೊಂದಿದವನನ್ನಾಗಿ ಮಾಡುತ್ತಾನೆ. |

**'ಋಚಾ...ವರ್ತನಿ' ಮಂತ್ರದ ಪ್ರಥಮಭಾಗದ ವಿವರಣೆ**

| | |
|---|---|
| ಋಚಾ ಸ್ತೋಮಮ್ ಸಮರ್ಧಯ ಇತಿ ಆಹ ಸಮೃಧ್ಯೈ | [ಶ್ರುತಿಯು] 'ಋಚಾ ಸ್ತೋಮಂ ಸಮರ್ಧಯ' ಎಂದು ಹೇಳುತ್ತಿದೆ. ಇದು ಸಮೃದ್ಧಿಗಾಗಿ ಹೇಳಲ್ಪಟ್ಟಿದೆ. |

---

ಅಧ್ವರ್ಯುವು ಎಲ್ಲ ಮಂತ್ರಗಳನ್ನೂ ಉಚ್ಚರಿಸಿ ಹೋಮವನ್ನು ನೆರವೇರಿಸಿದರೆ, ಮಂತ್ರಗಳು ಒಂದನ್ನೊಂದು ಸೇರಿಕೊಂಡಿರುವುದರಿಂದ ಯಜಮಾನನನ್ನು ವ್ಯಾಪ್ತನನ್ನಾಗಿ ಮಾಡಿ ಧನಿಕನನ್ನಾಗಿ ಮಾಡುತ್ತಾನೆ. ಬಿಡಿ ಬಿಡಿಯಾದ ಹವನದಿಂದ ಸಂಪತ್ತು ಬಿಟ್ಟುಹೋಗುವುದು. ಒಗ್ಗೂಡಿದ ಹವನದಿಂದ ಸಂಪತ್ತು ಸೇರುವುದು.

ಯಜಮಾನನು ಹೋಮವನ್ನು ಮಾಡಿ ಉಖಾಸಂಭರಣಾದಿಗಳಿಗೆ ಹೋದರೆ, ಯಜ್ಞಫಲದಿಂದಲೂ, ಅಗ್ನಿ ದೇವತೆಯಿಂದಲೂ ದೂರನಾಗುತ್ತಾನೆ. ಎಂಟು ಸಂಖ್ಯೆಯ ಮಂತ್ರಗಳಿಂದ ಸಾವಿತ್ರಹೋಮವನ್ನು ಅನುಷ್ಠಿಸಿದರೆ,

ಚತುರ್ಭಿರಭ್ರಿಮಾ ದತ್ತೇ ಚತ್ವಾರಿ ಛಂದಾಗ್ಂಸಿ ಛಂದೋಭಿರೇವ ದೇವಸ್ಯ ತ್ವಾ ಸವಿತುಃ ಪ್ರಸವ ಇತ್ಯಾಹ ಪ್ರಸೂತ್ಯಾ ಅಗ್ನಿರ್ದೇವೇಭ್ಯೋ ನಿಲಾಯತ

ಚತುರ್ಭಿರಿತಿ ಚತುಃ-ಭಿಃ । ಅಭ್ರಿಮ್ । ಏತಿ । ದತ್ತೇ । ಚತ್ವಾರಿ । ಛಂದಾಗ್ಂಸಿ । ಛಂದೋಭಿರಿತಿ ಛಂದಃ-ಭಿಃ । ಏವ । ದೇವಸ್ಯ । ತ್ವಾ । ಸವಿತುಃ । ಪ್ರಸವ ಇತಿ ಪ್ರ-ಸವೇ । ಇತಿ । ಆಹ । ಪ್ರಸೂತ್ಯಾ ಇತಿ ಪ್ರ-ಸೂತ್ಯೈ । ಅಗ್ನಿಃ । ದೇವೇಭ್ಯಃ । ನಿಲಾಯತ ।

| ಬ್ರಾಹ್ಮಣಭಾಗ | ವಿವರಣೆ |
|---|---|

### ಅಭ್ರಿ [ಅಗೆಯುವ ಸಾಧನ] ಗ್ರಹಣವಿಧಿ

| | |
|---|---|
| **ಚತುರ್ಭಿಃ ಅಭ್ರಿಮ್ ಆ ದತ್ತೇ** | **'ದೇವಸ್ಯ ತ್ವಾ...'** ಎಂದು ಆರಂಭವಾಗುವ ನಾಲ್ಕು ಮಂತ್ರಗಳಿಂದ ಅಭ್ರಿ [ಅಗೆಯುವ ಸಾಧನವನ್ನು] ತೆಗೆದುಕೊಳ್ಳಬೇಕು. |
| **ಛಂದಾಗ್ಂಸಿ ಚತ್ವಾರಿ** | ಗಾಯತ್ರೀ, ತ್ರಿಷ್ಟುಪ್, ಜಗತೀ, ಅನುಷ್ಟುಪ್-ಎಂದು ನಾಲ್ಕು ಛಂದಸ್ಸುಗಳು. |
| **ಛಂದೋಭಿಃ ಏವ** | (ಈ ಮಂತ್ರಗಳನ್ನು ಹೇಳುವುದರಿಂದ) ಛಂದಸ್ಸುಗಳಿಂದಲೇ (ಅಭ್ರಿಯನ್ನು ಗ್ರಹಣ ಮಾಡಿದಂತಾಗುತ್ತದೆ.) |
| **ದೇವಸ್ಯ ತ್ವಾ ಸವಿತುಃ ಪ್ರಸವೇ ಇತಿ ಆಹ ಪ್ರಸೂತ್ಯೈ** | ಪ್ರೇರಕನಾದ ಸವಿತೃದೇವನ/ಪರಮಾತ್ಮನ ಅನುಜ್ಞೆಯಾಗಲಾಗಿ ಎಂದು ಮಂತ್ರವು ಹೇಳಿರುವುದು ದೇವನ ಅನುಮತಿಯನ್ನು ಪಡೆಯಲು ಕಾರಣವಾಗುತ್ತದೆ. |

### ವೇಣುವಿಧಿಯ ಇತಿಹಾಸ

| | |
|---|---|
| **ಅಗ್ನಿಃ ದೇವೇಭ್ಯಃ ನಿಲಾಯತ** | ಒಂದು ಕಾಲದಲ್ಲಿ ಬೇಸರ ಹೊಂದಿದ ಅಗ್ನಿಯು ದೇವತೆಗಳಿಂದ ದೂರವಾಗಿ ಹೊರಟುಹೋದನು. |

---

ಗಾಯತ್ರಿಯ ಪಾದವು ಎಂಟು ಅಕ್ಷರಗಳುಳ್ಳದಾದುದರಿಂದ, ಗಾಯತ್ರಿಯೂ *ಅಗ್ನಿಯೂ ಒಮ್ಮೆಲೇ ಜನಿಸಿರುವುದರಿಂದ ಅಗ್ನಿಯಿಂದಲೂ, ಯಜ್ಞಫಲದಿಂದಲೂ ವಂಚಿತನಾಗುವುದಿಲ್ಲ.

---

* ತೈ. ಸಂ. 7.1.1

**ಸ ವೇಣುಂ ಪ್ರಾವಿಶತ್ಸ ಏತಾಮೂತಿಮನು ಸಮಚರದ್ಯದ್ವೇಣೋಃ ಸುಷಿರಗ್ಂ**

**ಸುಷಿರಾಽಭ್ರಿರ್ಭವತಿ ಸಯೋನಿತ್ವಾಯ**

---

ಸಃ । ವೇಣುಮ್ । ಪ್ರೇತಿ । ಅವಿಶತ್ । ಸಃ । ಏತಾಮ್ । ಊತಿಮ್ । ಅನು । ಸಮಿತಿ । ಅಚರತ್ । ಯತ್ । ವೇಣೋಃ । ಸುಷಿರಮ್ । ಸುಷಿರಾ । ಅಭ್ರಿಃ । ಭವತಿ । ಸಯೋನಿತ್ವಾಯೇತಿ ಸಯೋನಿ-ತ್ವಾಯ ।

---

**ಬ್ರಾಹ್ಮಣಭಾಗ**

**ಸಃ ವೇಣುಮ್ ಪ್ರಾವಿಶತ್** — ಅವನು ಬಿದಿರನ್ನು ಪ್ರವೇಶಿಸಿದನು.

### ಅಭ್ರಿಯ ರಂಧ್ರಕರಣದ ವಿಧಿ

**ಯತ್ ವೇಣೋಃ ಸುಷಿರಮ್** — ಯಾವ ಬಿದಿರಿನ ರಂಧ್ರವುಂಟೋ

**ಸಃ ಏತಾಮ್ ಊತಿಮ್ ಅನು ಸಮಚರತ್** — ಆ ಅಗ್ನಿಯು ಬಿದಿರಿನ ರಂಧ್ರವನ್ನು ರಕ್ಷಣವಾಗಿ ಆಶ್ರಯಿಸಿ ಸಂಚರಿಸಿದನು.

**ಸುಷಿರಾ ಅಭ್ರಿಃ ಭವತಿ** — ಅಭ್ರಿಯು ರಂಧ್ರಯುಕ್ತವಾಗಿರಬೇಕು. [ವಿಧಿ] ಇದು

**ಸಯೋನಿತ್ವಾಯ** — ಅಗ್ನಿಯೊಡನೆ ಸಮಾನಸ್ಥಾನವನ್ನು ಹೊಂದುವುದಕ್ಕೆ ಕಾರಣವಾಗುತ್ತದೆ.

---

ಆಹುತಿಯೊಡನೆ ಸೇರಿದ ಎಂಟು ಮಂತ್ರಗಳಿಂದ ಒಂಬತ್ತು ಸಂಖ್ಯೆಯಾಗುವುದರಿಂದ ಯಜ್ಞಾರಂಭದಲ್ಲಿಯೇ ತ್ರಿವೃತ್ಸ್ತೋಮವನ್ನು ನೆರವೇರಿಸಿದಂತಾಗುತ್ತದೆ.

ಸಾವಿತ್ರಹೋಮದ ಕಡೆಯ ಮಂತ್ರವು ಋಗ್ರೂಪವಾಗಿರಬೇಕೆ? ಯಜುಸ್ಸಿನ ರೂಪವಿರಬೇಕೆ? ಎಂದು ಎರಡು ಪಕ್ಷಗಳನ್ನು ಪ್ರಸ್ತಾವಿಸಲಾಗಿದೆ. ಇಲ್ಲಿಯ ತಾತ್ಪರ್ಯವು ಹೀಗಿದೆ. ಋತ್ವಿಜರು ದಕ್ಷಿಣೆಯನ್ನು ಪಡೆದು ಯಜಮಾನನ ಕಾರ್ಯವನ್ನು ನಿರ್ವಹಿಸತಕ್ಕವರು. ಅವರಿಗೆ ಯಜಮಾನನ ಹಿತವೇ ಮುಖ್ಯವಾದುದು. ಆದುದರಿಂದ [illegible] ಮಾಡಬೇಕು. ಇದೇ ಅವರು ಅನುಸರಿಸಬೇಕಾದ [illegible] ಈ ಅರ್ಥವಾದಭಾಗದ ಒಟ್ಟು ಅಭಿಪ್ರಾಯವಾಗಿದೆ. ಹೀಗೆಯೇ ಹಲವು ಕಡೆಗಳಲ್ಲಿ **'ಯದಿ ಕಾಮಯೇತ' 'ಯಂ ಕಾಮಯೇತ'** ಮೊದಲಾದ ಉಕ್ತಿಗಳಿವೆ.

**'ಋಚಾ...ವರ್ತನಿ'** ಎಂಬ ಮಂತ್ರದಿಂದ ಮತ್ತೊಂದು ಚತುರ್ಗೃಹೀತಹೋಮವನ್ನು ಮಾಡಬೇಕು. ಇದು ಸಮೃದ್ಧಿಗೆ ಕಾರಣವಾಗುತ್ತದೆ. ಭಟ್ಟಭಾಸ್ಕರರು ಇದು ಉಪಸ್ಥಾನಮಂತ್ರವೆಂದು ಹೇಳಿರುತ್ತಾರೆ.

ಅಭ್ರಿಗ್ರಹಣದ ವಿಷಯದಲ್ಲಿ ಆಪಸ್ತಂಬರು ಹೀಗೆ ವಿನಿಯೋಗವನ್ನು ಹೇಳಿರುತ್ತಾರೆ. **'ದೇವಸ್ಯ ತ್ವಾ ಸವಿತುಃ ಪ್ರಸವ ಇತಿ ಚತುರ್ಭಿರಭ್ರಿಮಾದತ್ತೇ** [illegible]

---

* ಈ ಶಬ್ದಗಳ ಅರ್ಥವು ಬ್ರಾಹ್ಮಣಭಾಗದಲ್ಲಿದೆ.

ಸ ಯತ್ರಯತ್ರಾವಸತ್ತತ್ಕೃಷ್ಣಮಭವತ್ಕಲ್ಮಾಷೀ ಭವತಿ ರೂಪಸಮೃಧ್ಯಾ

ಉಭಯತಃಕ್ಷ್ಣೂರ್ಭವತೀತಶ್ಚಾಮುತಶ್ಚಾರ್ಕಸ್ಯಾವರುದ್ಧ್ಯೈ ೪೮

---

ಸಃ । ಯತ್ರಯತ್ರೇತಿ ಯತ್ರ-ಯತ್ರ । ಅವಸತ್ । ತತ್ । ಕೃಷ್ಣಮ್ । ಅಭವತ್ । ಕಲ್ಮಾಷೀ । ಭವತಿ । ರೂಪಸಮೃಧ್ಯಾ ಇತಿ ರೂಪ-ಸಮೃಧ್ಯೈ ೪೮ । ಉಭಯತಃಕ್ಷ್ಣೂರಿತ್ಯುಭಯತಃ-ಕ್ಷ್ಣೂಃ । ಭವತಿ । ಇತಃ । ಚ । ಅಮುತಃ । ಚ । ಅರ್ಕಸ್ಯ । ಅವರುಧ್ಯಾ ಇತ್ಯವ-ರುದ್ಧ್ಯೈ ೪೮ ।

---

| ಬ್ರಾಹ್ಮಣಭಾಗ | ವಿವರಣೆ |
|---|---|

**ಅಭ್ರಿಯ ಕೃಷ್ಣರಂಧ್ರಯುಕ್ತದ ವಿಧಿ**

| | |
|---|---|
| ಸಃ ಯತ್ರಯತ್ರ ಅವಸತ್ | ಆ ಅಗ್ನಿಯು ವೇಣುವಿನ ರಂಧ್ರದಲ್ಲಿ ಎಲ್ಲೆಲ್ಲಿ ವಾಸಿಸಿದನೋ/ಸಂಚರಿಸಿದನೋ |
| ತತ್ ಕೃಷ್ಣಮ್ ಅಭವತ್ ಕಲ್ಮಾಷೀ ಭವತಿ | ಆ ಸ್ಥಳವು ಕಾಡುಗಿಚ್ಚಿನಿಂದ ಕಪ್ಪಾಯಿತು. ಅಭ್ರಿಯು ಕಪ್ಪಾದ ಬಿಂದುವಿನ ಚಿಹ್ನೆಯಿಂದ ಕೂಡಿರಬೇಕು. [ವಿಧಿ] |
| ರೂಪಸಮೃಧ್ಯೈ ೪೮ | ಇದು ಯಜಮಾನನ ರೂಪಸಮೃದ್ಧಿಗೆ ಕಾರಣವಾಗುತ್ತದೆ. |

**ಅಭ್ರಿಯ ನಿಶಿತತ್ವ[ತೀಕ್ಷ್ಣತೆ] ವಿಧಿ**

| | |
|---|---|
| ಉಭಯತಃಕ್ಷ್ಣೂಃ ಭವತಿ | ಮೊದಲು-ತುದಿಭಾಗಗಳಲ್ಲಿ ಅಭ್ರಿಯು ತೀಕ್ಷ್ಣವಾಗಿರಬೇಕು. |
| ಇತಃ ಚ ಅಮುತಃ ಚ ಅರ್ಕಸ್ಯ ಅವರುದ್ಧ್ಯೈ ೪೮ | ಇದು ಈ ಲೋಕ-ಪರಲೋಕಗಳೆರಡರಲ್ಲಿಯೂ ಪೂಜೆಗೆ/ಗೌರವಕ್ಕೆ ಸಾಧನವಾಗುತ್ತದೆ. |

---

ಕ್ಷ್ಣೂಂ ವಾ, ಪ್ರಾದೇಶಮಾತ್ರೀಮರತ್ನಿಮಾತ್ರೀಂ ವ್ಯಾಮಮಾತ್ರೀಮಪರಿಮಿತಾಂ ವಾ...'[ಆಪ. ಶ್ರೌ. ಸೂ. 16. 1. 7] ಈ ಕಲ್ಪ ಸೂತ್ರದಲ್ಲಿ ಶಾಖಾಂತರೀಯದ ಪಕ್ಷಗಳನ್ನೂ ಅವಲಂಬಿಸಿ ತಿಳಿಸಿರುತ್ತಾರೆ.

ವ್ಯಾಮಮಾತ್ರೀ ಭವತ್ಯೇತಾವದ್ವೈ ಪುರುಷೇ ವೀರ್ಯಂ ವೀರ್ಯಸಂಮಿತಾऽಪರಿ ಮಿತಾ ಭವತ್ಯಪರಿಮಿತಸ್ಯಾವರುದ್ಧ್ಯೈ ಯೋ ವನಸ್ಪತೀನಾಂ ಫಲಗ್ರಹಿಃ

---

ವ್ಯಾಮಮಾತ್ರೀತಿ ವ್ಯಾಮ–ಮಾತ್ರೀ । ಭವತಿ । ಏತಾವತ್ । ವೈ । ಪುರುಷೇ । ವೀರ್ಯಮ್ । ವೀರ್ಯಸಂಮಿತೇತಿ ವೀರ್ಯ–ಸಂಮಿತಾ । ಅಪರಿಮಿತೇತ್ಯಪರಿ–ಮಿತಾ । ಭವತಿ । ಅಪರಿಮಿತಸ್ಯೇತ್ಯಪರಿ–ಮಿತಸ್ಯ । ಅವರುಧ್ಯಾ ಇತ್ಯವ–ರುಧ್ಯೈ । ಯಃ । ವನಸ್ಪತೀನಾಮ್ । ಫಲಗ್ರಹಿರಿತಿ ಫಲ–ಗ್ರಹಿಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|

**ಅಭ್ರಿಯ ಪ್ರಮಾಣ**

| | |
|---|---|
| **ವ್ಯಾಮಮಾತ್ರೀ ಭವತಿ** | ಅಭ್ರಿಯು ಐದು ಅಥವಾ ನಾಲ್ಕು ಅರತ್ನಿ [ಗುದ್ದು ಮೊಳ]ಗಳ ಪರಿಮಾಣವನ್ನು ಹೊಂದಿರಬೇಕು. |
| **ಪುರುಷೇ ವೀರ್ಯಮ್ ಏತಾವತ್ ವೈ** | ಇಷ್ಟೇ ಪುರುಷನ ಶಕ್ತಿಸೂಚಕವಾದುದರಿಂದ |
| **ವೀರ್ಯಸಂಮಿತಾ** | ಅಭ್ರಿಯು ಪುರುಷನ ಶಕ್ತಿಗೆ ಕಾರಣವಾಗುತ್ತದೆ/ ಶಕ್ತಿಯಷ್ಟಿರುತ್ತದೆ. |
| **ಅಪರಿಮಿತಾ ಭವತಿ** | ಪರಿಮಾಣವು ಇಷ್ಟೇ ಎಂದು ಗೊತ್ತಿಲ್ಲದೆ ಅಪರಿಮಿತಪರಿಮಾಣವಾಗಿರಬೇಕು. [ಪಕ್ಷಾಂತರ ವಿಧಿ] |
| **ಅಪರಿಮಿತಸ್ಯ ಅವರುಧ್ಯೈ** | ಇದು ಅಪರಿಮಿತವಾದ ಫಲಪ್ರಾಪ್ತಿಗೆ ಕಾರಣವಾಗಿರುತ್ತದೆ. |

**ವೇಣುವಿಧಿ**

| | |
|---|---|
| **ವನಸ್ಪತೀನಾಮ್ ಯಃ ಫಲಗ್ರಹಿಃ** | ವೃಕ್ಷಗಳಲ್ಲಿ ಯಾವುದು ಹೆಚ್ಚು ಫಲಗಳನ್ನು ಕೊಡುವ ವೃಕ್ಷವಿದೆಯೋ |

---

'ದೇವಸ್ಯ ತ್ವಾ' ಎಂದು ಆರಂಭವಾಗುವ ನಾಲ್ಕು ಮಂತ್ರಗಳಿಂದ ಅಭ್ರಿಯನ್ನು ತೆಗೆದುಕೊಳ್ಳಬೇಕು. ನಾಲ್ಕು ಮಂತ್ರಗಳಿಂದ ಪರಿಗ್ರಹವೆಂಬುದು ನಾಲ್ಕು ಛಂದಸ್ಸುಗಳಿಂದ ಪರಿಗ್ರಹ ಮಾಡಿದಂತಾಗುತ್ತದೆ. ಹಾಗೂ ಸವಿತೃ ದೇವನ ಅನುಮತಿಯನ್ನು ಪಡೆಯಲು ಕಾರಣವಾಗುತ್ತದೆ.

## ॥ ದ್ವಿತೀಯೋಽನುವಾಕಃ ॥

ವ್ಯೃದ್ಧಂ ವಾ ಏತದ್ಯಜ್ಞಸ್ಯ ಯದಯಜುಷ್ಕೇಣ ಕ್ರಿಯತ

ಇಮಾಮಗೃಭ್ಣನ್ರಶನಾಮೃತಸ್ಯೇತ್ಯಶ್ವಾಭಿಧಾನೀಮಾ ದತ್ತೇ

ಯಜುಷ್ಕೃತ್ಯೈ ಯಜ್ಞಸ್ಯ ಸಮೃದ್ಧ್ಯೈ

---

ವ್ಯೃದ್ಧಮಿತಿ ವಿ–ಋದ್ಧಮ್ । ವೈ । ಏತತ್ । ಯಜ್ಞಸ್ಯ । ಯತ್ । ಅಯಜುಷ್ಕೇಣೇತ್ಯಯಜುಃ–ಕೇನ । ಕ್ರಿಯತೇ । ಇಮಾಮ್ । ಅಗೃಭ್ಣನ್ನ್ । ರಶನಾಮ್ । ಋತಸ್ಯ । ಇತಿ । ಅಶ್ವಾಭಿಧಾನೀಮಿತ್ಯಶ್ವ–ಅಭಿಧಾನೀಮ್ । ಏತಿ । ದತ್ತೇ । ಯಜುಷ್ಕೃತ್ಯಾ ಇತಿ ಯಜುಃ–ಕೃತ್ಯೈ । ಯಜ್ಞಸ್ಯ । ಸಮೃಧ್ಯಾ ಇತಿ ಸಮ್–ಋದ್ಧ್ಯೈ ।

---

ಪ್ರಥಮಾನುವಾಕದಲ್ಲಿ ಅಭ್ರಿಯನ್ನು ಪರಿಗ್ರಹಿಸುವ ವಿಧಿಯು ಹೇಳಲ್ಪಟ್ಟಿತು. ಈ ಎರಡನೆಯ ಅನುವಾಕದಲ್ಲಿ ಅಶ್ವದಿಂದ–ಮೃತ್ತಿಕೆಯ ಖನನವನ್ನು ಮಾಡುವ ಭೂಮಿಯನ್ನು–ತುಳಿಸುವ ವಿಧಿಯು ಹೇಳಲ್ಪಟ್ಟಿದೆ.

---

| ಬ್ರಾಹ್ಮಣಭಾಗ | ವಿವರಣೆ |
|---|---|

**ಕುದುರೆಯನ್ನು ಕಟ್ಟುವ ಹಗ್ಗವನ್ನು ತೆಗೆದುಕೊಳ್ಳುವ ವಿಧಿ**

| ಬ್ರಾಹ್ಮಣಭಾಗ | ವಿವರಣೆ |
|---|---|
| ಅಯಜುಷ್ಕೇಣ ಯತ್ ಕ್ರಿಯತೇ | ಮಂತ್ರರಹಿತವಾಗಿ [ಯಜ್ಞದ] ಯಾವ ಕ್ರಿಯೆಯು ಮಾಡಲ್ಪಡುತ್ತದೆಯೋ, |
| ಏತತ್ ಯಜ್ಞಸ್ಯ ವ್ಯೃದ್ಧಮ್ ವೈ | ಆ ಯಜ್ಞದ ಅಂಗವು ಸಮೃದ್ಧಿಹೀನವಾಗುತ್ತದೆ. |
| ಇಮಾಮ್ ಅಗೃಭ್ಣನ್ ರಶನಾಮ್ ಋತಸ್ಯ ಇತಿ ಅಶ್ವಾಭಿಧಾನೀಮ್ ಆ ದತ್ತೇ | 'ಇಮಾಮ್...ಋತಸ್ಯ' ಎಂಬ ಮಂತ್ರವನ್ನು ಹೇಳಿ ಕುದುರೆಯನ್ನು ಕಟ್ಟುವ ಹಗ್ಗವನ್ನು ತೆಗೆದುಕೊಳ್ಳಬೇಕು. [ವಿಧಿ] |
| ಯಜುಷ್ಕೃತ್ಯೈ | ಈ ಕಾರ್ಯವನ್ನು ಯಜುರ್ಮಂತ್ರದಿಂದ ಅನುಷ್ಠಿಸುವುದಕ್ಕಾಗಿ ಹೀಗೆ ಮಾಡಬೇಕು. |
| ಯಜ್ಞಸ್ಯ ಸಮೃದ್ಧ್ಯೈ | ಯಜ್ಞದ ಫಲಸಮೃದ್ಧಿಗಾಗಿ ಹೀಗೆ ಅನುಷ್ಠಿಸಬೇಕು. |

ಪ್ರತೂರ್ತಂ ವಾಜಿನ್ನಾ ದ್ರವೇತ್ಯಶ್ವಮಭಿ ದಧಾತಿ
ರೂಪಮೇವಾಸ್ಯೈತನ್ಮಹಿಮಾನಂ ವ್ಯಾಚಷ್ಟೇ ಯುಞ್ಜಾಥಾಗ್ಂ ರಾಸಭಂ
ಯುವಮಿತಿ ಗರ್ದಭಮಸತ್ಯೇವ

---

ಪ್ರತೂರ್ತಮಿತಿ ಪ್ರ-ತೂರ್ತಮ್ । ವಾಜಿನ್ನ್ । ಆ । ದ್ರವ । ಇತಿ । ಅಶ್ವಮ್ । ಅಭೀತಿ । ದಧಾತಿ । ರೂಪಮ್ ।
ಏವ । ಅಸ್ಯ । ಏತತ್ । ಮಹಿಮಾನಮ್ । ವ್ಯಾಚಷ್ಟ ಇತಿ ವಿ-ಆಚಷ್ಟೇ । ಯುಞ್ಜಾಥಾಮ್ । ರಾಸಭಮ್ ।
ಯುವಮ್ । ಇತಿ । ಗರ್ದಭಮ್ । ಅಸತಿ । ಏವ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ಕುದುರೆಯನ್ನು ಕಟ್ಟುವ ವಿಧಿ: ಅರ್ಥವಾದ** |
| **ಪ್ರತೂರ್ತಮ್ ವಾಜಿನ್ನಾದ್ರವ ಇತಿ** | ಶೀಘ್ರವಾಗಿ ಹೋಗು (ನಡೆ) ಎಂದು ಹೇಳುವ **'ಪ್ರತೂರ್ತಂ ವಾಜಿನ್ ಆ ದ್ರವ'** ಎಂಬ ಮಂತ್ರದಿಂದ |
| **ಅಶ್ವಮ್ ಅಭಿದಧಾತಿ** | [ಅಧ್ವರ್ಯುವು] ಕುದುರೆಯನ್ನು ಕಟ್ಟಬೇಕು. **[ವಿಧಿ]** |
| **ಏತತ್ ರೂಪಮ್ ಏವ** | ಈ ಮಂತ್ರದ ಸ್ವರೂಪವು/ಈ ಮಂತ್ರವು |
| **ಅಸ್ಯ ಮಹಿಮಾನಮ್ ವಿ ಆಚಷ್ಟೇ** | ಅಶ್ವದ ಮಹತ್ತ್ವವನ್ನು-/ಅಶ್ವದ ಸ್ವರೂಪವಾದ ಶೀಘ್ರಗಮನವನ್ನು [ಮಹತ್ತ್ವವನ್ನೇ] ಚೆನ್ನಾಗಿ-ಹೇಳುತ್ತದೆ. |
| | **ಗರ್ದಭಬಂಧನವಿಧಿ; ಅರ್ಥವಾದ** |
| **ಯುಞ್ಜಾಥಾಮ್ ರಾಸಭಮ್ ಯುವಮ್ ಇತಿ ಗರ್ದಭಮ್** [ಅಭಿದಧಾತಿ] | **'ಯುಂಜಾಥಾಮ್...ಯುವಮ್'** ಈ ಮಂತ್ರದಿಂದ ಯಜಮಾನದಂಪತಿಗಳು ಕತ್ತೆಯನ್ನು ಕಟ್ಟಬೇಕು. **[ವಿಧಿ]** |
| **ಅಸತಿ ಏವ** | ಹೀನವಾದ ಮಣ್ಣನ್ನು ಹೊರುವ ಕಾರ್ಯದಲ್ಲಿಯೇ |

---

**ತಾತ್ಪರ್ಯ:-**ಅಗ್ನಿಚಯನದ ಅಂಗವಾಗಿ ಮೃತ್ತಿಕಾಖನನವನ್ನು ಮಾಡಲು ಕುದುರೆಯನ್ನು ಆ ಸ್ಥಳಕ್ಕೆ ಕರೆದೊಯ್ಯಬೇಕು. ಕುದುರೆಯನ್ನು ಕಟ್ಟಲು ಮಂತ್ರಪೂರ್ವಕವಾಗಿ ಹಗ್ಗವನ್ನು ಪರಿಗ್ರಹಿಸಬೇಕು. **'ಇಮಾಮ್... ಆರಪಂತೀ'** ಎಂಬುದು ಆ ಮಂತ್ರ. ಅದು ಋಕ್ಕೇ ಆದರೂ ಯಜುರ್ವೇದದಲ್ಲಿ ಪಠಿತವಾಗಿರುವುದರಿಂದ ಯಜುರ್ಮಂತ್ರವೆಂದು ಹೇಳಿದೆ.

ಗರ್ದಭಂ ಪ್ರತಿಷ್ಠಾಪಯತಿ ತಸ್ಮಾದಶ್ವಾದ್ಗರ್ದಭೋಽಸತ್ತರೋ

ಯೋಗೇಯೋಗೇ ತವಸ್ತರಮಿತ್ಯಾಹ [ಇತ್ಯಾಹ(೫)] ಯೋಗೇಯೋಗ

ಏವೈನಂ ಯುಙ್ಕ್ತೇ ವಾಜೇವಾಜೇ ಹವಾಮಹ ಇತ್ಯಾಹಾ–

---

ಗರ್ದಭಮ್ । ಪ್ರತೀತಿ । ಸ್ಥಾಪಯತಿ । ತಸ್ಮಾತ್ । ಅಶ್ವಾತ್ । ಗರ್ದಭಃ । ಅಸತ್ತರ ಇತ್ಯಸತ್–ತರಃ ।

ಯೋಗೇಯೋಗ ಇತಿ ಯೋಗೇ–ಯೋಗೇ । ತವಸ್ತರಮಿತಿ ತವಃ–ತರಮ್ । ಇತಿ । ಆಹ । (೫) ।

ಯೋಗೇಯೋಗ ಇತಿ ಯೋಗೇ–ಯೋಗೇ । ಏವ । ಏನಮ್ । ಯುಙ್ಕ್ತೇ । ವಾಜೇವಾಜ ಇತಿ ವಾಜೇ–ವಾಜೇ ।

ಹವಾಮಹೇ । ಇತಿ । ಆಹ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಗರ್ದಭಮ್ ಪ್ರತಿಷ್ಠಾಪಯತಿ | ಕತ್ತೆಯನ್ನು ನಿಯೋಜಿಸಿದಂತೆ ಆಗುತ್ತದೆ. |
| ತಸ್ಮಾತ್ ಅಶ್ವಾತ್ | (ರಥವನ್ನು ಎಳೆಯುವ ಕಾರ್ಯವನ್ನು ಮಾಡುವ) ಕುದುರೆಗಿಂತಲೂ |
| ಗರ್ದಭಃ ಅಸತ್ತರಃ | ಗರ್ದಭವು ಹೀನವಾಗಿದೆ. |

**'ಯೋಗೇಯೋಗೇ' ಎಂಬ ಮಂತ್ರದ ಮೂರು ಭಾಗಗಳ ತಾತ್ಪರ್ಯ**

| | |
|---|---|
| ಯೋಗೇಯೋಗೇ ತವಸ್ತರಮ್ ಇತಿ ಆಹ | ಆಯಾ ಮುಖ್ಯಕಾರ್ಯವು ಒದಗಿದಾಗ ಬಲಿಷ್ಠವಾದ ಅಶ್ವವನ್ನು ಆಹ್ವಾನಿಸುತ್ತೇವೆ. ಎಂದು ಮಂತ್ರವು ಹೇಳುವುದು. |
| ಏನಮ್ ಯೋಗೇಯೋಗೇ ಏವ ಯುಙ್ಕ್ತೇ | ಇದರಿಂದ ಆಯಾ ಮುಖ್ಯಕಾರ್ಯದಲ್ಲಿಯೇ ಅಶ್ವವನ್ನು ನಿಯೋಜಿಸಿದಂತಾಗುತ್ತದೆ. |
| ವಾಜೇವಾಜೇ ಹವಾಮಹೇ ಇತಿ ಆಹ | ಶ್ರುತಿಯು 'ವಾಜೇವಾಜೇ ಹವಾಮಹೇ' ಎಂದು ಹೇಳುತ್ತದೆ. 'ಆಯಾ ಅನ್ನಪ್ರಾಪ್ತಿನಿಮಿತ್ತವಾಗಿ ಋತ್ವಿಗ್ಯಜಮಾನರಾದ ನಾವು ನಿನ್ನನ್ನು ಆಹ್ವಾನಿಸುವೆವು' ಎಂದು ಈ ಮಂತ್ರಭಾಗವು ತಿಳಿಸುತ್ತಿದೆ. |

–ನ್ನಂ ವೈ ವಾಜೋಽನ್ನಮೇವಾವರುಂಧೇ ಸಖಾಯ ಇಂದ್ರಮೂತಯ

ಇತ್ಯಾಹೇಂದ್ರಿಯಮೇವಾವರುಂಧೇಽಗ್ನಿರ್ದೇವೇಭ್ಯೋ ನಿಲಾಯತ ತಂ

ಪ್ರಜಾಪತಿರನ್ವವಿಂದ–

---

ಅನ್ನಮ್ । ವೈ । ವಾಜಃ । ಅನ್ನಮ್ । ಏವ । ಅವೇತಿ । ರುಂಧೇ । ಸಖಾಯಃ । ಇಂದ್ರಮ್ । ಊತಯೇ । ಇತಿ । ಆಹ । ಇಂದ್ರಿಯಮ್ । ಏವ । ಅವೇತಿ । ರುಂಧೇ । ಅಗ್ನಿಃ । ದೇವೇಭ್ಯಃ । ನಿಲಾಯತ । ತಮ್ । ಪ್ರಜಾಪತಿರಿತಿ ಪ್ರಜಾ–ಪತಿಃ । ಅನ್ವಿತಿ । ಅವಿಂದತ್ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಅನ್ನಮ್ ವೈ ವಾಜಃ** | ವಾಜವೆಂದರೆ ಅನ್ನವಷ್ಟೆ. |
| **ಅನ್ನಮ್ ಏವ ಅವ ರುಂಧೇ** | [ಈ ಮಂತ್ರಭಾಗದಿಂದ] ಯಜಮಾನನು ಅನ್ನವನ್ನು ಪಡೆಯುತ್ತಾನೆ. |
| **ಸಖಾಯಃ ಇಂದ್ರಮ್ ಊತಯೇ ಇತಿ ಆಹ** | ಗೆಳೆಯರಾಗಿರುವ ಋತ್ವಿಗ್ಯಜಮಾನರಾದ ನಾವು ಇಂದ್ರನಂತಿರುವ/ಇಂದ್ರಿಯಪ್ರದವಾದ ಅಶ್ವವನ್ನು ರಕ್ಷಣೆಗಾಗಿ ಆಹ್ವಾನಿಸುತ್ತೇವೆ ಎಂದು ಶ್ರುತಿಯು ಹೇಳುವುದು. |
| **ಇಂದ್ರಿಯಮ್ ಏವ ಅವ ರುಂಧೇ** | ಇದರಿಂದ ಯಜಮಾನನು ಇಂದ್ರಿಯಶಕ್ತಿಯನ್ನು ಹೊಂದುವನು. |

**ಅಶ್ವವನ್ನು ಮುಂದಿಟ್ಟುಕೊಂಡು ಗಮನವಿಧಿ; ಅರ್ಥವಾದ**

| | |
|---|---|
| **ಅಗ್ನಿಃ ದೇವೇಭ್ಯಃ ನಿಲಾಯತ ತಮ್ ಪ್ರಜಾಪತಿಃ ಅನು ಅವಿಂದತ್** | ಒಂದು ಸಮಯದಲ್ಲಿ ಅಗ್ನಿಯು ದೇವತೆಗಳು ಕಾಣದಂತೆ ದೂರಕ್ಕೆ ಹೊರಟುಹೋದನು. ಪ್ರಜಾಪತಿ ದೇವನು ಅಗ್ನಿಯನ್ನು ಹುಡುಕಿ ಪಡೆದನು. |

---

**ತಾತ್ಪರ್ಯ:–'ಪ್ರತೂರ್ತಂ...ಯೋನಿಃ'** ಎಂಬ ಮಂತ್ರದಿಂದ ಕುದುರೆಯನ್ನು ಅಧ್ವರ್ಯುವು ಕಟ್ಟಬೇಕು. ಈ ಮಂತ್ರವು ಅಶ್ವದ ಶೀಘ್ರಗಮನವೆಂಬ ಸ್ವರೂಪವನ್ನೇ ಪ್ರಕಾಶಿಸುತ್ತದೆ. ಅಲ್ಲದೆ ಅಶ್ವದ ದ್ಯುಲೋಕಜನ್ಮ ಮುಂತಾದ ಮಹತ್ತ್ವವನ್ನೂ ತಿಳಿಸುವುದು.

–ತ್ಪ್ರಾಜಾಪತ್ಯೋಽಶ್ವೋಽಶ್ವೇನ ಸಂಭರತ್ಯನುವಿತ್ತ್ಯೈ ಪಾಪವಸ್ಯಸಂ ವಾ ಏತತ್ಕ್ರಿಯತೇ ಯಚ್ಛ್ರೇಯಸಾ ಚ ಪಾಪೀಯಸಾ ಚ ಸಮಾನಂ ಕರ್ಮ ಕುರ್ವಂತಿ

---

ಪ್ರಾಜಾಪತ್ಯ ಇತಿ ಪ್ರಾಜಾ–ಪತ್ಯಃ । ಅಶ್ವಃ । ಅಶ್ವೇನ । ಸಮಿತಿ । ಭರತಿ । ಅನುವಿತ್ತ್ಯಾ ಇತ್ಯನು–ವಿತ್ತ್ಯೈ । ಪಾಪವಸ್ಯಸಮಿತಿ ಪಾಪ–ವಸ್ಯಸಮ್ । ವೈ । ಏತತ್ । ಕ್ರಿಯತೇ । ಯತ್ । ಶ್ರೇಯಸಾ । ಚ । ಪಾಪೀಯಸಾ । ಚ । ಸಮಾನಮ್ । ಕರ್ಮ । ಕುರ್ವಂತಿ ।

---

| ಬ್ರಾಹ್ಮಣಭಾಗ | ವಿವರಣೆ |
| --- | --- |
| **ಅಶ್ವಃ ಪ್ರಾಜಾಪತ್ಯಃ** | ಪ್ರಜಾಪತಿಯಿಂದ ಜನ್ಯವಾದ ಅಶ್ವವು ಪ್ರಾಜಾಪತ್ಯವೆನಿಸಿದೆ. |
| **ಅಶ್ವೇನ ಸಂಭರತಿ** | [ಆದುದರಿಂದ] ಕುದುರೆಯೊಡನೆ [ಅಗ್ನಿಗೆ/ಚಯನಕ್ಕೆ ಸಾಧನವಾದ ಮಣ್ಣನ್ನು] ಸಂಗ್ರಹಿಸಲು ಹೋಗಬೇಕು. [ವಿಧಿ] |
| **ಅನುವಿತ್ತ್ಯೈ** | ಇದು ಅಗ್ನಿಯನ್ನು ತಿಳಿಯುವುದಕ್ಕೆ ಸಾಧನವಾಗುತ್ತದೆ. |

**ಅಶ್ವದ ಪುರೋನಯನವಿಧಿ; ಅರ್ಥವಾದ**

| | |
| --- | --- |
| **ಶ್ರೇಯಸಾ ಚ ಪಾಪೀಯಸಾ ಚ** | ಶ್ರೇಷ್ಠವಾದ ಸಾಧನದಿಂದಲೂ, ಕನಿಷ್ಠವಾದ ಸಾಧನದಿಂದಲೂ |
| **ಸಮಾನಮ್ ಕರ್ಮ ಕುರ್ವಂತಿ(ಇತಿ) ಯತ್** | ಸಮಾನವಾದ ಕರ್ಮವನ್ನು ಮಾಡುತ್ತಾರೆಂಬುದು ಯಾವುದುಂಟೋ |

---

ಯಜಮಾನದಂಪತಿಗಳು ಮಂತ್ರಪೂರ್ವಕವಾಗಿ ಗರ್ದಭಬಂಧನವನ್ನು ಮಾಡುತ್ತಾರೆ. ಅಶ್ವಕ್ಕಿಂತಲೂ ಗರ್ದಭವು ನಿಕೃಷ್ಟಕಾರ್ಯವನ್ನು ಮಾಡುವುದರಿಂದ ಅದನ್ನು ರಾಜ–ಮಂತ್ರಿಗಳು ಆದರಿಸುವುದಿಲ್ಲ.

ಅಶ್ವವು ಯೋಧರನ್ನೂ, ರಥವನ್ನೂ ಒಯ್ಯುತ್ತದೆಯಷ್ಟೆ. ಹೀಗಾಗಿ ಅಶ್ವವನ್ನು ಆಯಾ ಕರ್ಮದಲ್ಲಿ ಯೋಜಿಸಲಾಗುತ್ತದೆ.

ವೇದದಲ್ಲಿ ಮಂತ್ರವಾಕ್ಯದ ವಿವರಣೆಯು ಅಲ್ಲಲ್ಲಿ ಬರುತ್ತದೆ. ಅವೆಲ್ಲವೂ ಸಾಮಾನ್ಯವಾಗಿ ಅರ್ಥವಾದಗಳಾಗಿ ವಿಧಿಯನ್ನು ಪ್ರಶಂಸಿಸುತ್ತವೆ. ಯಜಮಾನನು ವಿವಿಧಶಕ್ತಿಯನ್ನು ಹೊಂದುವುದರಿಂದ ಈ ವಿಧಿಗಳು ಪ್ರಶಸ್ತವಾದವುಗಳು.

ಪಾಪೀಯಾನ್[ಪಾಪೀಯಾನ್(೬)] ಹ್ಯಶ್ವಾದ್ಗರ್ದಭೋಽಶ್ವಂ ಪೂರ್ವಂ
ನಯಂತಿ ಪಾಪವಸ್ಯಸಸ್ಯ ವ್ಯಾವೃತ್ತ್ಯೈ ತಸ್ಮಾಚ್ಛ್ರೇಯಾಗ್ಂಸಂ
ಪಾಪೀಯಾನ್ಪಶ್ಚಾದನ್ವೇತಿ ಬಹುರ್ವೈ ಭವತೋ ಭ್ರಾತೃವ್ಯೋ ಭವತೀ–

---

ಪಾಪೀಯಾನ್ । (೬) । ಹಿ । ಅಶ್ವಾತ್ । ಗರ್ದಭಃ । ಅಶ್ವಮ್ । ಪೂರ್ವಮ್ । ನಯಂತಿ । ಪಾಪವಸ್ಯಸಸ್ಯೇತಿ
ಪಾಪ–ವಸ್ಯಸಸ್ಯ । ವ್ಯಾವೃತ್ತ್ಯಾ ಇತಿ ವಿ–ಆವೃತ್ತ್ಯೈ । ತಸ್ಮಾತ್ । ಶ್ರೇಯಾಗ್ಂಸಮ್ । ಪಾಪೀಯಾನ್ । ಪಶ್ಚಾತ್ ।
ಅನ್ವಿತಿ । ಏತಿ । ಬಹುಃ । ವೈ । ಭವತಃ । ಭ್ರಾತೃವ್ಯಃ । ಭವತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಏತತ್ ಪಾಪವಸ್ಯಸಮ್ ವೈ ಕ್ರಿಯತೇ** | ಇದು ಅತ್ಯಂತ ನಿಕೃಷ್ಟವಾದ ಕಾರ್ಯವು ಮಾಡಲ್ಪಟ್ಟಂತೆ ಆಗುತ್ತದೆ. |
| **ಅಶ್ವಾತ್ ಗರ್ದಭಃ ಪಾಪೀಯಾನ್ ಹಿ** | ಕತ್ತೆಯು ಕುದುರೆಗಿಂತಲೂ ಹೀನವೆಂಬುದು ಲೋಕಪ್ರಸಿದ್ಧವಾಗಿದೆ. |
| **ಅಶ್ವಮ್ ಪೂರ್ವಮ್ ನಯಂತಿ** | ಕುದುರೆಯನ್ನು ಮುಂದೆ ಒಯ್ಯಬೇಕು. |
| **ಪಾಪವಸ್ಯಸಸ್ಯ ವ್ಯಾವೃತ್ತ್ಯೈ** | ಇದು ನಿಕೃಷ್ಟಕಾರ್ಯವನ್ನು ನಿವಾರಿಸಿದಂತೆ ಆಗುತ್ತದೆ. |
| **ತಸ್ಮಾತ್ ಶ್ರೇಯಾಗ್ಂಸಮ್ ಪಾಪೀಯಾನ್ ಪಶ್ಚಾತ್ ಅನ್ವೇತಿ** | ಆದುದರಿಂದಲೇ ಲೋಕದಲ್ಲಿ ಉತ್ತಮನನ್ನು ಕನಿಷ್ಠನು ಅನುಸರಿಸಿ ಹೋಗುತ್ತಾನೆ. |

'ಪ್ರತೂರ್ವನ್...' ಮಂತ್ರದಲ್ಲಿ 'ಅಶಸ್ತೀರವಕ್ರಾಮನ್' ಎಂಬ ಭಾಗದ ತಾತ್ಪರ್ಯ

| | |
|---|---|
| **ಬಹುಃ ವೈ ಭವತಃ ಭ್ರಾತೃವ್ಯಃ ಭವತಿ** | [ಲೋಕದಲ್ಲಿ] ಐಶ್ವರ್ಯವನ್ನು/ಶ್ರೇಯಸ್ಸನ್ನು ಹೊಂದಲು ಅಪೇಕ್ಷಿಸುವವನಿಗೆ ಅನೇಕರು ಹಗೆಗಳಾಗುತ್ತಾರೆ. |

---

'ಯೋಗೇಯೋಗೇ' ಮೊದಲಾದ ಮೂರು ಮಂತ್ರಗಳಿಂದ ಅಧ್ವರ್ಯುವೇ ಮೊದಲಾದವರು ಕುದುರೆಯನ್ನು ಮುಂದಿಟ್ಟುಕೊಂಡು ಮಣ್ಣನ್ನು ಅಗೆಯುವ ಪ್ರದೇಶಕ್ಕೆ ಹೋಗಬೇಕು. ಇದು ವಿಧಿ.

–ವ ಖಲು ವಾ ಏಷ ಯೋಽಗ್ನಿಂ ಚಿನುತೇ ವಜ್ರ್ಯಶ್ವಃ ಪ್ರತೂರ್ವನ್ನೇಹ್ಯವಕ್ರಮ

ನ್ನಶಸ್ತೀರಿತ್ಯಾಹ ವಜ್ರೇಣೈವ ಪಾಪ್ಮಾನಂ ಭ್ರಾತೃವ್ಯಮವಕ್ರಾಮತಿ ರುದ್ರಸ್ಯ

ಗಾಣಪತ್ಯಾದಿತ್ಯಾಹ ರೌದ್ರಾ ವೈ ಪಶವೋ

---

ಇವ । ಖಲು । ವೈ । ಏಷಃ । ಯಃ । ಅಗ್ನಿಮ್ । ಚಿನುತೇ । ವಜ್ರೀ । ಅಶ್ವಃ । ಪ್ರತೂರ್ವನ್ನಿತಿ ಪ್ರ–ತೂರ್ವನ್ನ್ । ಏತಿ । ಇಹಿ । ಅವಕ್ರಾಮನ್ನಿತ್ಯವ–ಕ್ರಾಮನ್ನ್ । ಅಶಸ್ತೀಃ । ಇತಿ । ಆಹ । ವಜ್ರೇಣ । ಏವ । ಪಾಪ್ಮಾನಮ್ । ಭ್ರಾತೃವ್ಯಮ್ । ಅವೇತಿ । ಕ್ರಾಮತಿ । ರುದ್ರಸ್ಯ । ಗಾಣಪತ್ಯಾದಿತಿ ಗಾಣ–ಪತ್ಯಾತ್ । ಇತಿ । ಆಹ । ರೌದ್ರಾಃ । ವೈ । ಪಶವಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯಃ ಅಗ್ನಿಮ್ ಚಿನುತೇ** | ಯಾವನು ಚಯನಯಾಗವನ್ನು ಅನುಷ್ಠಿಸುವನೋ |
| **ಏಷಃ ಭವತಿ ಇವ ಖಲು ವೈ** | ಈತನು ಶ್ರೇಯಸ್ಸನ್ನು ಬಯಸುವವನಷ್ಟೆ. (ಅವನಿಗೂ ಹಲವರು ವಿರೋಧಿಗಳು ಇರುತ್ತಾರೆ.) |
| **ಅಶ್ವಃ ವಜ್ರೀ** | ಅಶ್ವವು ವಜ್ರಧರನಾದ ಇಂದ್ರನಿಗೆ ಸಮಾನವಾಗಿದೆ. |
| **ಪ್ರತೂರ್ವನ್ ಏಹಿ ಅವಕ್ರಾಮನ್ ಅಶಸ್ತೀಃ ಇತಿ ಆಹ** | ಈ ಮಂತ್ರವು ಅಶ್ವವನ್ನು ಉದ್ದೇಶಿಸಿ 'ಶತ್ರುರೂಪವಾದ ಪಾಪಗಳನ್ನು ಹೋಗಲಾಡಿಸುತ್ತಾ ನೀನು ಮುನ್ನಡೆ' ಎಂದು ಹೇಳುತ್ತದೆ. |
| **ವಜ್ರೇಣ ಏವ ಪಾಪ್ಮಾನಮ್ ಭ್ರಾತೃವ್ಯಮ್ ಅವಕ್ರಾಮತಿ** | (ಇದರಿಂದ) ಪಾಪರೂಪಶತ್ರುವನ್ನು ವಜ್ರಾಯುಧದಿಂದ ಹೋಗಲಾಡಿಸಿದವನಾಗುತ್ತಾನೆ. |

'ರುದ್ರಸ್ಯ ಗಾಣಪತ್ಯಾತ್' ಎಂಬ ಮಂತ್ರಭಾಗದ ವಿವರಣೆ/ಅರ್ಥವಾದ

| | |
|---|---|
| **ರುದ್ರಸ್ಯ ಗಾಣಪತ್ಯಾತ್ ಇತಿ ಆಹ** | 'ರುದ್ರಸ್ಯ ಗಾಣಪತ್ಯಾತ್ ಮಯೋಭೂಃ ಏಹಿ' ಎಂಬ ಭಾಗವು 'ಅಶ್ವವೇ! ನೀನು ರುದ್ರನ ಅನುಗ್ರಹದಿಂದ ಸುಖಕರನಾಗು' ಎಂದು ಹೇಳುತ್ತದೆ. |
| **ಪಶವಃ ರೌದ್ರಾಃ ವೈ** | ಪಶುಗಳು ರುದ್ರದೇವತಾಕವಾದವುಗಳು. |

---

ಕುದುರೆ ಮತ್ತು ಕತ್ತೆಗಳ ಪೈಕಿ ಕುದುರೆಯು ಉತ್ಕೃಷ್ಟವಾದುದೆಂದು ಪ್ರಸಿದ್ಧವಾಗಿದೆ. ಹೀಗಾಗಿ ಕುದುರೆಯನ್ನು ಮುಂದೆ ಮಾಡಿಕೊಂಡೇ ಮೃತ್ತಿಕಾಸಂಗ್ರಹವನ್ನು ಅನುಷ್ಠಿಸಬೇಕು.

ರುದ್ರಾದೇವ [(೭)]ಪಶೂನ್ನಿರ್ಯಾಚ್ಯಾತ್ಮನೇ ಕರ್ಮ ಕುರುತೇ ಪೂಷ್ಣಾ ಸಯುಜಾ ಸಹೇತ್ಯಾಹ ಪೂಷಾ ವಾ ಅಧ್ವನಾಗ್ಂ ಸನ್ನೇತಾ ಸಮಷ್ಟ್ಯೈ ಪುರೀಷಾಯತನೋ ವಾ ಏಷ ಯದಗ್ನಿರಙ್ಗಿರಸೋ ವಾ

---

ರುದ್ರಾತ್ । ಏವ । (೭) । ಪಶೂನ್ । ನಿರ್ಯಾಚ್ಯೇತಿ ನಿಃ–ಯಾಚ್ಯ । ಆತ್ಮನೇ । ಕರ್ಮ । ಕುರುತೇ । ಪೂಷ್ಣಾ । ಸಯುಜೇತಿ ಸ–ಯುಜಾ । ಸಹ । ಇತಿ । ಆಹ । ಪೂಷಾ । ವೈ । ಅಧ್ವನಾಮ್ । ಸನ್ನೇತೇತಿ ಸಮ್–ನೇತಾ । ಸಮಷ್ಟ್ಯಾ ಇತಿ ಸಮ್–ಅಷ್ಟ್ಯೈ । ಪುರೀಷಾಯತನ ಇತಿ ಪುರೀಷ–ಆಯತನಃ । ವೈ । ಏಷಃ । ಯತ್ । ಅಗ್ನಿಃ । ಅಙ್ಗಿರಸಃ । ವೈ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ರುದ್ರಾತ್ ಏವ ಪಶೂನ್ ನಿರ್ಯಾಚ್ಯ | ಪಶುಸ್ವಾಮಿಯಾದ ರುದ್ರನನ್ನು ಸಂಪೂರ್ಣವಾಗಿ ಯಾಚಿಸಿ, ಪಶುಗಳನ್ನು ಪಡೆದು |
| ಆತ್ಮನೇ ಕರ್ಮ ಕುರುತೇ | ತನಗಾಗಿ ಯಜ್ಞರೂಪವಾದ ಕರ್ಮವನ್ನು ಮಾಡುತ್ತಾನೆ. |

**'ಪೂಷ್ಣಾ...ಸಹ' ಎಂಬ ಮಂತ್ರವಾಕ್ಯದ ತಾತ್ಪರ್ಯ–ಅರ್ಥವಾದ**

| | |
|---|---|
| ಪೂಷ್ಣಾ ಸಯುಜಾ ಸಹ ಇತಿ ಆಹ | 'ಪೋಷಕನಾದ ಪೂಷದೇವನೊಡನೆ ಹೋಗು' ಎಂದು ಈ ಮಂತ್ರಭಾಗವು ಹೇಳುತ್ತದೆ. |
| ಪೂಷಾ ವೈ ಅಧ್ವನಾಮ್ ಸನ್ನೇತಾ | ಪೋಷಕನಾದ ಪೂಷದೇವನು ಒಳ್ಳೆಯ ಮಾರ್ಗದಲ್ಲಿ ಚೆನ್ನಾಗಿ ಒಯ್ಯಬಲ್ಲನು. |
| ಸಮಷ್ಟ್ಯೈ | ಈ ಮಂತ್ರವನ್ನು ಹೇಳುವುದರಿಂದ ಪೂಷನೊಡನೆ ಸೇರಿ ಹೋಗುವುದಕ್ಕೆ ನಿಮಿತ್ತವಾಗುತ್ತದೆ. |

**'ಪುರೀಷ್ಯಮ್' 'ಅಂಗಿರಸ್ವತ್' ಎಂಬುದರ ವಿವರಣೆ/ಅರ್ಥವಾದ**

| | |
|---|---|
| ಯತ್ ಅಗ್ನಿಃ ಏಷಃ ಪುರೀಷಾಯತನಃ ವೈ | ಯಾವ ಚಯನಾಗ್ನಿಯುಂಟೋ, ಈತನು ಮಣ್ಣನ್ನೇ/ಧೂಳಿಯನ್ನೇ ಆಶ್ರಯವನ್ನಾಗಿ ಉಳ್ಳವನಷ್ಟೆ. |
| ಅಙ್ಗಿರಸಃ ವೈ ಏತಮ್ | ಅಂಗಿರಸರೇ ಈ ಅಗ್ನಿಯನ್ನು |

ಏತಮಗ್ರೇ ದೇವತಾನಾಗ್ಂ ಸಮಭರನ್ಪೃಥಿವ್ಯಾಸ್ಸಧಸ್ಥಾದಗ್ನಿಂ ಪುರೀಷ್ಯಮಙ್ಗಿರಸ್ವದಚ್ಛೇಹೀತ್ಯಾಹ ಸಾಯತನಮೇವೈನಂ ದೇವತಾಭಿಸ್ಸಂ ಭರತ್ಯಗ್ನಿಂ ಪುರೀಷ್ಯಮಙ್ಗಿರಸ್ವದಚ್ಛೇಮ ಇತ್ಯಾಹ ಯೇನ [(೮)] ಸಂಗಚ್ಛತೇ ವಾಜಮೇವಾಸ್ಯ ವೃಙ್ಕ್ತೇ

ಏತಮ್ । ಅಗ್ರೇ । ದೇವತಾನಾಮ್ । ಸಮಿತಿ । ಅಭರನ್ನ್ । ಪೃಥಿವ್ಯಾಃ । ಸಧಸ್ಥಾದಿತಿ ಸಧ-ಸ್ಥಾತ್ । ಅಗ್ನಿಮ್ । ಪುರೀಷ್ಯಮ್ । ಅಙ್ಗಿರಸ್ವತ್ । ಅಚ್ಛ । ಇಹಿ । ಇತಿ । ಆಹ । ಸಾಯತನಮಿತಿ ಸ-ಆಯತನಮ್ । ಏವ । ಏನಮ್ । ದೇವತಾಭಿಃ । ಸಮಿತಿ । ಭರತಿ । ಅಗ್ನಿಮ್ । ಪುರೀಷ್ಯಮ್ । ಅಙ್ಗಿರಸ್ವತ್ । ಅಚ್ಛ । ಇಮಃ । ಇತಿ । ಆಹ । ಯೇನ । (೮) । ಸಂಗಚ್ಛತ ಇತಿ ಸಮ್-ಗಚ್ಛತೇ । ವಾಜಮ್ । ಏವ । ಅಸ್ಯ । ವೃಙ್ಕ್ತೇ ।

| ಬ್ರಾಹ್ಮಣಭಾಗ | ವಿವರಣೆ |
|---|---|
| **ದೇವತಾನಾಮ್ ಅಗ್ರೇ ಸಮಭರನ್** | ದೇವತೆಗಳಿಗೆ ಮೊದಲೇ ಸಂಪಾದಿಸಿದರು. |
| **ಪೃಥಿವ್ಯಾಃ ಸಧಸ್ಥಾತ್ ಅಙ್ಗಿರಸ್ವತ್** | ಭೂಮಿಯ ಪ್ರದೇಶವಿಶೇಷದಿಂದ ಅಂಗಿರೋ ಮುನಿಗಳಂತೆ |
| **ಪುರೀಷ್ಯಮ್ ಅಗ್ನಿಮ್ ಅಚ್ಛ ಇಹಿ ಇತಿ ಆಹ** | 'ಪುರೀಷ್ಯನಾದ ಅಗ್ನಿಯನ್ನು ಹೊಂದುವುದಕ್ಕೆ ಹೋಗು' ಹೀಗೆ ಈ ಮಂತ್ರವು ಹೇಳುತ್ತದೆ. |
| **ಸಾಯತನಮ್ ಏವ ಏನಮ್ ದೇವತಾಭಿಃ ಸಂಭರತಿ** | ಇದರಿಂದ ಆಶ್ರಯದಿಂದ ಕೂಡಿದ ಅಗ್ನಿಯನ್ನೇ ದೇವತೆಗಳೊಡನೆ ಯಜಮಾನನು ಸಂಪಾದಿಸಿದವನಾಗುತ್ತಾನೆ. |

ದಾರಿಯಲ್ಲಿ ದ್ವೇಷ್ಯನೊಡನೆ ಸಂಧಿಸಿದರೆ ಯಜಮಾನನ ಕರ್ತವ್ಯವಿಧಿ; ಫಲ

| | |
|---|---|
| **ಅಗ್ನಿಮ್ ಪುರೀಷ್ಯಮ್ ಅಙ್ಗಿರಸ್ವತ್ ಅಚ್ಛೇಮಃ ಇತಿ ಆಹ** | 'ಪುರೀಷವೇ ಆಶ್ರಯವಾಗಿರುವ ಅಗ್ನಿಯನ್ನು ಹೊಂದಲು ಹೋಗುತ್ತೇವೆ.' ಎಂದು ಈ ಮಂತ್ರವು ಹೇಳುತ್ತದೆ. |
| **ಯೇನ ಸಂಗಚ್ಛತೇ** | ಯಜಮಾನನು ಯಾವ ದ್ವೇಷ್ಯನೊಡನೆ ಸೇರುತ್ತಾನೆಯೋ |
| **ಅಸ್ಯ ವಾಜಮ್ ಏವ ವೃಙ್ಕ್ತೇ** | ಅವನ ಅನ್ನವನ್ನು ಈ ಮಂತ್ರದಿಂದ ನಾಶಪಡಿಸುತ್ತಾನೆ. |

ಪ್ರಜಾಪತಯೇ ಪ್ರತಿಪ್ರೋಚ್ಯಾಗ್ನಿಸ್ಸಮ್ಭೃತ್ಯ ಇತ್ಯಾಹುರಿಯಂ ವೈ
ಪ್ರಜಾಪತಿಸ್ತಸ್ಯಾ ಏತಚ್ಛ್ರೋತ್ರಂ ಯದ್ವಲ್ಮೀಕೋಽಗ್ನಿಂ
ಪುರೀಷ್ಯಮಙ್ಗಿರಸ್ವದ್ಭರಿಷ್ಯಾಮ ಇತಿ ವಲ್ಮೀಕವಪಾಮುಪತಿಷ್ಠತೇ

---

ಪ್ರಜಾಪತಯ ಇತಿ ಪ್ರಜಾ–ಪತಯೇ । ಪ್ರತಿಪ್ರೋಚ್ಯೇತಿ ಪ್ರತಿ–ಪ್ರೋಚ್ಯ । ಅಗ್ನಿಃ । ಸಮ್ಭೃತ್ಯ ಇತಿ ಸಮ್–ಭೃತ್ಯಃ । ಇತಿ । ಆಹುಃ । ಇಯಂ । ವೈ । ಪ್ರಜಾಪತಿರಿತಿ ಪ್ರಜಾ–ಪತಿಃ । ತಸ್ಯಾಃ । ಏತತ್ । ಶ್ರೋತ್ರಮ್ । ಯತ್ । ವಲ್ಮೀಕಃ । ಅಗ್ನಿಮ್ । ಪುರೀಷ್ಯಮ್ । ಅಙ್ಗಿರಸ್ವತ್ । ಭರಿಷ್ಯಾಮಃ । ಇತಿ । ವಲ್ಮೀಕವಪಾಮಿತಿ ವಲ್ಮೀಕ–ವಪಾಮ್ । ಉಪೇತಿ । ತಿಷ್ಠತೇ ।

---

ಬ್ರಾಹ್ಮಣಭಾಗ ವಿವರಣೆ

ವಲ್ಮೀಕವಪೋಪಸ್ಥಾನವಿಧಿ; ಅರ್ಥವಾದ

| | |
|---|---|
| **ಪ್ರಜಾಪತಯೇ ಪ್ರತಿಪ್ರೋಚ್ಯ ಅಗ್ನಿಃ** | ಪ್ರಜಾಪತಿಗೆ ತಿಳಿಸಿ ಅಗ್ನಿಯು ಸಂಪಾದಿಸಲ್ಪಡಬೇಕು |
| **ಸಮ್ಭೃತ್ಯಃ ಇತಿ ಆಹುಃ** | ಎಂದು ತಿಳಿದವರು ಹೇಳುತ್ತಾರೆ. |
| **ಇಯಂ ವೈ ಪ್ರಜಾಪತಿಃ** | ಈ ಭೂಮಿಯೇ ಪ್ರಜಾಪತಿಯು. |
| **ಯತ್ ವಲ್ಮೀಕಃ** | ಹುತ್ತವೆಂಬುದು ಯಾವುದಿದೆಯೋ |
| **ತಸ್ಯಾಃ ಏತತ್ ಶ್ರೋತ್ರಮ್** | ಇದು ಈ ಭೂಮಿಯ ಶ್ರೋತ್ರ[ಕಿವಿ] ರೂಪವಾಗಿದೆ. |
| **ಪುರೀಷ್ಯಮ್ ಅಗ್ನಿಮ್ ಅಙ್ಗಿರಸ್ವತ್** | ಪುರೀಷ್ಯಾಗ್ನಿಯನ್ನು ಅಂಗಿರಸರಂತೆ ಸಂಪಾದಿಸುವೆವು. |
| **ಭರಿಷ್ಯಾಮಃ ಇತಿ** | (ಹೀಗೆ) ಈ ಮಂತ್ರದಿಂದ |
| **ವಲ್ಮೀಕವಪಾಮ್ ಉಪತಿಷ್ಠತೇ** | ವಲ್ಮೀಕ(ಹುತ್ತ)ದ ವಪೆ (ತೆಳುವಾದ ಮೇಲ್ಭಾಗ) ಯನ್ನು ಉಪಸ್ಥಾನ ಮಾಡಬೇಕು. [ವಿಧಿ] |

---

ಶ್ರೇಯಸ್ಸನ್ನು ಬಯಸುವವನು ಚಯನಯಾಗವನ್ನು ಅನುಷ್ಠಿಸುವುದರಿಂದ ಇಂದ್ರನಂತಿರುವ ಅಶ್ವವನ್ನು ಮುಂದಿಟ್ಟು ಕೊಳ್ಳುವುದರಿಂದ ಪಾಪರೂಪವಾದ ಶತ್ರುವನ್ನು ದೂರಮಾಡುತ್ತಾನೆ.

**'ಸೋಽಬ್ರವೀದ್ವರಂ ವೃಣಾ ಅಹಮೇವ ಪಶೂನಾಮಧಿಪತಿರಸಾನೀತಿ ತಸ್ಮಾದ್ರುದ್ರಃ ಪಶೂನಾಮಧಿಪತಿಃ'** ಎಂಬ ಶ್ರುತಿಯಂತೆ ರುದ್ರನು ಪಶುಗಳ ಸ್ವಾಮಿಯೆಂದು ತಿಳಿಯುತ್ತದೆ. ಹೀಗೆ **'ರೌದ್ರಾ ವೈ ಪಶವಃ'** ಎಂಬ ಶ್ರುತಿ.

ಸಾಕ್ಷಾದೇವ ಪ್ರಜಾಪತಯೇ ಪ್ರತಿಪ್ರೋಚ್ಯಾಗ್ನಿಗ್‌ಂ ಸಂಭರತ್ಯಗ್ನಿಂ ಪುರೀಷ್ಯ ಮಙ್ಗಿರಸ್ವದ್ಭರಾಮ ಇತ್ಯಾಹ ಯೇನ ಸಂಗಚ್ಛತೇ ವಾಜಮೇವಾಸ್ಯ ವೃಙ್ಕ್ತೇಽನ್ವ ಗ್ನಿರುಷಸಾಮಗ್ರಮ[..ಸಾಮಗ್ರಮ್(೯)ಅಖ್ಯದಿತ್ಯಾ]ಖ್ಯದಿತ್ಯಾಹಾನುಖ್ಯಾತ್ಯಾ

---

ಸಾಕ್ಷಾದಿತಿ ಸ-ಅಕ್ಷಾತ್ । ಏವ । ಪ್ರಜಾಪತಯ ಇತಿ ಪ್ರಜಾ-ಪತಯೇ । ಪ್ರತಿಪ್ರೋಚ್ಯೇತಿ ಪ್ರತಿ-ಪ್ರೋಚ್ಯ । ಅಗ್ನಿಮ್ । ಸಮಿತಿ । ಭರತಿ । ಅಗ್ನಿಮ್ । ಪುರೀಷ್ಯಮ್ । ಅಙ್ಗಿರಸ್ವತ್ । ಭರಾಮಃ । ಇತಿ । ಆಹ । ಯೇನ । ಸಂಗಚ್ಛತ ಇತಿ ಸಮ್-ಗಚ್ಛತೇ । ವಾಜಮ್ । ಏವ । ಅಸ್ಯ । ವೃಙ್ಕ್ತೇ । ಅನ್ವಿತಿ । ಅಗ್ನಿಃ । ಉಷಸಾಮ್ । ಅಗ್ರಮ್ । (೯) । ಅಖ್ಯತ್ । ಇತಿ । ಆಹ । ಅನುಖ್ಯಾತ್ಯಾ ಇತ್ಯನು-ಖ್ಯಾತ್ಯೈ ॥

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಸಾಕ್ಷಾತ್ ಪ್ರಜಾಪತಯೇ ಏವ ಪ್ರತಿಪ್ರೋಚ್ಯ** | ಸಾಕ್ಷಾತ್ ಪ್ರಜಾಪತಿದೇವನಿಗೇ ತಿಳಿಸಿ, |
| **ಅಗ್ನಿಮ್ ಸಂಭರತಿ** | (ಯಜಮಾನನು) ಅಗ್ನಿಯನ್ನು ಸಂಪಾದಿಸುತ್ತಾನೆ. |

**ಹಿಂದಿರುಗಿ ಬರುವಾಗ ಮಾಡಬೇಕಾದ ಕರ್ತವ್ಯವಿಧಿ; ಅರ್ಥವಾದ**

| | |
|---|---|
| **ಪುರೀಷ್ಯಮ್ ಅಗ್ನಿಮ್** | ಮೃತ್ತಿಕೆಯ ಆಶ್ರಯವಾಗಿರುವ ಅಗ್ನಿಯನ್ನು |
| **ಅಙ್ಗಿರಸ್ವತ್ ಭರಾಮಃ** | ಅಂಗಿರಸರಂತೆ ಸಂಪಾದಿಸುತ್ತೇವೆ |
| **ಇತಿ ಆಹ** | ಎಂದು ಈ ಮಂತ್ರವು ಹೇಳುತ್ತದೆ. |
| **ಯೇನ ಸಂಗಚ್ಛತೇ** | ಯಾವ ಹಗೆಯನ್ನು ಸಂಧಿಸುತ್ತಾನೆಯೋ |
| **ಅಸ್ಯ ವಾಜಮ್ ಏವ ವೃಙ್ಕ್ತೇ** | ಈತನ ಅನ್ನವನ್ನು ನಾಶಪಡಿಸುತ್ತಾನೆ. |

**ವಲ್ಮೀಕವಪೆಯ ಪ್ರದೇಶದಿಂದ ಮುಂದೆ ಹೋಗುವ ವಿಧಿ**

| | |
|---|---|
| **ಅನು ಅಗ್ನಿಃ ಉಷಸಾಮ್ ಅಗ್ರಮ್ ಅಖ್ಯತ್ ಇತಿ ಆಹ** | ಈ ಅಗ್ನಿಯು ಕ್ರಮವಾಗಿ ಉಷಃಕಾಲಾದಿಗಳಲ್ಲಿ ಎಲ್ಲ ಲೋಕಗಳನ್ನೂ ಪ್ರಕಾಶಗೊಳಿಸುತ್ತದೆ ಎಂದು ಈ ಮಂತ್ರವು ಹೇಳುತ್ತದೆ. |
| **ಅನುಖ್ಯಾತ್ಯೈ** | ಇದು ಅನುಕ್ರಮವಾಗಿ ಪ್ರಕಾಶಕ್ಕೆ ಕಾರಣವಾಗುತ್ತದೆ. |

ಆಗತ್ಯ ವಾಜ್ಯಧ್ವನ ಆಕ್ರಮ್ಯ ವಾಜಿನ್ಪೃಥಿವೀಮಿತ್ಯಾಹೇಚ್ಛತ್ಯೇವೈನಂ ಪೂರ್ವಯಾ ವಿನ್ದತ್ಯುತ್ತರಯಾ ದ್ವಾಭ್ಯಾಮಾಕ್ರಮಯತಿ ಪ್ರತಿಷ್ಠಿತ್ಯಾ ಅನುರೂಪಾಭ್ಯಾಂ ತಸ್ಮಾದನುರೂಪಾಃ ಪಶವಃ ಪ್ರಜಾಯಂತೇ

---

ಆಗತ್ಯೇತ್ಯಾ-ಗತ್ಯ । ವಾಜೀ । ಅಧ್ವನಃ । ಆಕ್ರಮ್ಯೇತ್ಯಾ-ಕ್ರಮ್ಯ । ವಾಜಿನ್ನ್ । ಪೃಥಿವೀಮ್ । ಇತಿ । ಆಹ । ಇಚ್ಛತಿ । ಏವ । ಏನಮ್ । ಪೂರ್ವಯಾ । ವಿಂದತಿ । ಉತ್ತರಯೇತ್ಯುತ್-ತರಯಾ । ದ್ವಾಭ್ಯಾಮ್ । ಏತಿ । ಕ್ರಮಯತಿ । ಪ್ರತಿಷ್ಠಿತ್ಯಾ ಇತಿ ಪ್ರತಿ-ಸ್ಥಿತ್ಯೈ । ಅನುರೂಪಾಭ್ಯಾಮಿತ್ಯನು-ರೂಪಾಭ್ಯಾಮ್ । ತಸ್ಮಾತ್ । ಅನುರೂಪಾ ಇತ್ಯನು-ರೂಪಾಃ । ಪಶವಃ । ಪ್ರೇತಿ । ಜಾಯಂತೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|

### ಅಶ್ವದ ಪಾದಗಳನ್ನು ಮೃತ್ಖನನಪ್ರದೇಶದಲ್ಲಿ ಇಡುವ ವಿಧಿ

| | |
|---|---|
| ಆಗತ್ಯ ವಾಜ್ಯಧ್ವನಃ | ಈ ಅಶ್ವವು ಮಣ್ಣನ್ನು ಅಗೆಯಲು ತಕ್ಕುದಾದ ಪ್ರದೇಶಕ್ಕೆ ಬಂದು ಮಾರ್ಗಮಧ್ಯದ ಬಾಧಕಗಳನ್ನು ನಿವಾರಿಸುತ್ತದೆ. |
| ಆಕ್ರಮ್ಯ ವಾಜಿನ್ಪೃಥಿವೀಮ್ ಇತಿ ಆಹ | 'ಅಶ್ವವೇ! ನೀನು ಮಾನಸಜ್ಞಾನದಿಂದ ಯೋಗ್ಯವಾದ ಮಣ್ಣನ್ನು ನಿಶ್ಚಯಿಸಿ, ಕಾಲಿನಿಂದ ಆಕ್ರಮಿಸು' ಎಂದು ಈ ಎರಡು ಮಂತ್ರಗಳು ಹೇಳುತ್ತವೆ. |
| ಪೂರ್ವಯಾ ಏನಮ್ ಇಚ್ಛತಿ ಏವ | ಮೊದಲನೆಯ ಮಂತ್ರದಿಂದ ಯೋಗ್ಯಪ್ರದೇಶವನ್ನು ನಿಶ್ಚಯಿಸುತ್ತದೆ. |
| ಉತ್ತರಯಾ ವಿಂದತಿ | ಉತ್ತರಮಂತ್ರದಿಂದ ಆ ಪ್ರದೇಶವನ್ನು ಆಕ್ರಮಿಸಿ ಹೊಂದುತ್ತದೆ. |
| ಅನುರೂಪಾಭ್ಯಾಮ್ ದ್ವಾಭ್ಯಾಮ್ ಆ ಕ್ರಮಯತಿ ಪ್ರತಿಷ್ಠಿತ್ಯೈ | ಹೀಗೆ ಅನುರೂಪವಾದ ಎರಡು ಮಂತ್ರಗಳಿಂದ ಮೃತ್ಖನನಪ್ರದೇಶವನ್ನು ಕುದುರೆಯಿಂದ ತುಳಿಸುತ್ತಾನೆ. ಇದು ಸರಿಯಾದ ಸ್ಥಿತಿಗೆ ಕಾರಣವಾಗುತ್ತದೆ. |
| ತಸ್ಮಾತ್ ಅನುರೂಪಾಃ ಪಶವಃ ಪ್ರ ಜಾಯಂತೇ | ಆದುದರಿಂದ ಯಜಮಾನನ ಅಗ್ನಿಹೋತ್ರಾದಿಕರ್ಮಗಳಿಗೆ ಅನುರೂಪವಾದ ಗವಾದಿಪಶುಗಳು ಜನಿಸುತ್ತವೆ /ವೃದ್ಧಿ ಹೊಂದುತ್ತವೆ. |

# ದ್ಯೌಸ್ತೇ ಪೃಷ್ಠಂ ಪೃಥಿವೀ ಸಧಸ್ಥಮಿತ್ಯಾಹೈಭ್ಯೋ ವಾ ಏತಲ್ಲೋಕೇಭ್ಯಃ ಪ್ರಜಾಪತಿಸ್ಸಮೈರಯದ್ರೂಪಮೇವಾಸ್ಯೈತನ್ಮಹಿಮಾನಂ ವ್ಯಾಚಷ್ಟೇ ವಜ್ರೀ ವಾ ಏಷ ಯದಶ್ವೋ

---

ದ್ಯೌಃ । ತೇ । ಪೃಷ್ಠಮ್ । ಪೃಥಿವೀ । ಸಧಸ್ಥಮಿತಿ ಸಧ–ಸ್ಥಮ್ । ಇತಿ । ಆಹ । ಏಭ್ಯಃ । ವೈ । ಏತಮ್ । ಲೋಕೇಭ್ಯಃ । ಪ್ರಜಾಪತಿರಿತಿ ಪ್ರಜಾ–ಪತಿಃ । ಸಮಿತಿ । ಐರಯತ್ । ರೂಪಮ್ । ಏವ । ಅಸ್ಯ । ಏತತ್ । ಮಹಿಮಾನಮ್ । ವ್ಯಾಚಷ್ಟ ಇತಿ ವಿ–ಆಚಷ್ಟೇ । ವಜ್ರೀ । ವೈ । ಏಷಃ । ಯತ್ । ಅಶ್ವಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|

**ಅಶ್ವದ ಬೆನ್ನನ್ನು ಚೆನ್ನಾಗಿ ಉಜ್ಜುವ ವಿಧಿ; ಅರ್ಥವಾದ**

| | |
|---|---|
| **ದ್ಯೌಃ ತೇ ಪೃಷ್ಠಮ್ ಪೃಥಿವೀ ಸಧಸ್ಥಮ್ ಇತಿ ಆಹ** | 'ಅಶ್ವವೇ! ಈ ಮಂತ್ರವು ದ್ಯುಲೋಕವೇ ನಿನ್ನ ಬೆನ್ನು' ಮೊದಲಾಗಿ ಹೇಳುತ್ತದೆ. |
| **ಏಭ್ಯಃ ಲೋಕೇಭ್ಯಃ ವೈ ಏತಮ್ ಪ್ರಜಾಪತಿಃ ಸಮೈರಯತ್** | ಪ್ರಜಾಪತಿದೇವನು ಮೊದಲು ಈ ದ್ಯುಲೋಕಾದಿಗಳಿಂದ ಅಶ್ವವನ್ನು ಹುಡುಕಿಕೊಂಡು ಬಂದನು. |
| **ಅಸ್ಯ ರೂಪಮ್ ಏವ ಏತತ್ ಮಹಿಮಾನಮ್ ವ್ಯಾಚಷ್ಟೇ** | ಆದುದರಿಂದ ಈ ಮಂತ್ರವೇ ಅಶ್ವಕ್ಕೆ ಇರುವ ದ್ಯುಲೋಕಾದಿರೂಪಸಂಬಂಧವನ್ನು ಹೇಳುತ್ತದೆ. (ಬೇರೆಯವರು ಆ ವಿಷಯದಲ್ಲಿ ಹೇಳುವುದೇನಿದೆ?) |

**ದ್ವೇಷ್ಯನನ್ನು ಕುದುರೆಯ ಕಾಲಿನ ಕೆಳಗೆ ಹಾಕಿದಂತೆ ಭಾವಿಸುವ ವಿಧಿ**

| | |
|---|---|
| **ಯತ್ ಅಶ್ವಃ ಏಷಃ ವಜ್ರೀ ವೈ** | ಈ ಕುದುರೆಯು ವಜ್ರದಂತೆ ಗಟ್ಟಿಯಾದ ಹಲ್ಲುಗಳುಳ್ಳದುದು. |

---

ಈ ಚಯನಪ್ರಕರಣದಲ್ಲಿ ಅಗ್ನಿಶಬ್ದವು ಸಂದರ್ಭಾನುಸಾರವಾಗಿ ಇಟ್ಟಿಗೆಗಳ ಕಟ್ಟಡವನ್ನೂ, ಆದರ ಅಗ್ನಿಯನ್ನೂ, ಆ ಇಟ್ಟಿಗೆಗಳ ಮೂಲವಾದ ಮೃತ್ತಿಕೆಯನ್ನೂ ತಿಳಿಸುತ್ತದೆ.

ಯಜಮಾನನಿಗೆ ದಾರಿಯಲ್ಲಿ ಹಗೆಯು ಸಂಧಿಸದಿದ್ದರೆ ಮಾನಸಿಕವಾಗಿ ಸ್ಮರಿಸಿ ಮಂತ್ರವನ್ನು ಹೇಳಬೇಕು.

ವಲ್ಮೀಕವಪೆಯ ಉಪಸ್ಥಾನದಿಂದ ಪ್ರಜಾಪತಿದೇವನಿಗೆ ತಿಳಿಸಿ ಅಗ್ನಿಯನ್ನು ಯಜಮಾನನು ಸಂಪಾದಿಸುತ್ತಾನೆ.

**'ಅಗ್ನಿಂ...ಅಚ್ಛೇಹಿ'** ಎಂಬಲ್ಲಿ ಪ್ರಶ್ನೋತ್ತರರೂಪವಾಗಿ ಭಟ್ಟಭಾಸ್ಕರಮಿಶ್ರರು ವಿವರಿಸುತ್ತಾರೆ.

ದದ್ಭಿರನ್ಯತೋದದ್ಭ್ಯೋ ಭೂಯಾಲ್ಲೋಮಭಿರುಭಯಾದದ್ಭ್ಯೋ ಯಂ ದ್ವಿಷ್ಯಾತ್ತಮಧಸ್ಪದಂ ಧ್ಯಾಯೇದ್ವಜ್ರೇಣೈವೈನಗ್ಂ ಸ್ತೃಣುತೇ ॥ ೧೦–2 ॥

[ಆಹ ಪಾಪೀಯಾನ್ರುದ್ರಾದೇವ ಯೇನಾಗ್ರಂ ವಜ್ರೀ ವೈ ಸಪ್ತದಶ ಚ ॥]

---

ದದ್ಭಿರಿತಿ ದತ್–ಭಿಃ । ಅನ್ಯತೋದದ್ಭ್ಯ ಇತ್ಯನ್ಯತೋದತ್–ಭ್ಯಃ । ಭೂಯಾನ್ । ಲೋಮಭಿರಿತಿ ಲೋಮ–ಭಿಃ । ಉಭಯಾದದ್ಭ್ಯ ಇತ್ಯುಭಯಾದತ್–ಭ್ಯಃ । ಯಮ್ । ದ್ವಿಷ್ಯಾತ್ । ತಮ್ । ಅಧಸ್ಪದಮಿತ್ಯಧಃ–ಪದಮ್ । ಧ್ಯಾಯೇತ್ । ವಜ್ರೇಣ । ಏವ । ಏನಮ್ । ಸ್ತೃಣುತೇ ॥ ೧೦ ॥

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಅನ್ಯತೋದದ್ಭ್ಯಃ** | ಒಂದೇ ಸಾಲಿನಲ್ಲಿ ಹಲ್ಲುಗಳುಳ್ಳ ಗವಾದಿಗಳಿಗಿಂತ |
| **ದದ್ಭಿಃ ಭೂಯಾನ್** | ಎರಡು ಕಡೆಗಳಲ್ಲಿಯೂ ಹಲ್ಲುಗಳನ್ನು ಹೊಂದಿರುವುದರಿಂದ ಶ್ರೇಷ್ಠವಾದುದ್ದಾಗಿದೆ. |
| **ಉಭಯಾದದ್ಭ್ಯಃ** | ಎರಡು ಸಾಲಿನಲ್ಲಿಯೂ ದಂತಗಳನ್ನು ಹೊಂದಿರುವ ಕತ್ತೆ ಮೊದಲಾದವುಗಳಿಗಿಂತಲೂ |
| **ಲೋಮಭಿಃ** ಭೂಯಾನ್ | ವಿಶೇಷವಾಗಿ ಲೋಮಗಳನ್ನೂ ಕೇಸರಗಳನ್ನೂ ಅಧಿಕವಾಗಿ ಹೊಂದಿರುವುದರಿಂದ ಶ್ರೇಷ್ಠವಾಗಿದೆ. |
| **ಯಮ್ ದ್ವಿಷ್ಯಾತ್ ತಮ್ ಅಧಸ್ಪದಮ್ ಧ್ಯಾಯೇತ್** | ಹಗೆಯನ್ನು ಅಶ್ವದ ಕಾಲುಗಳ ಕೆಳಗೆ ಹಾಕಿದಂತೆ ಧ್ಯಾನಿಸಬೇಕು. |
| **ಏನಮ್ ವಜ್ರೇಣ ಏವ ಸ್ತೃಣುತೇ** | ಈ ಶತ್ರುವನ್ನು ವಜ್ರದಂತೆ ಕಠಿಣವಾದ ಗೊರಸುಗಳಿಂದಲೇ ಹಿಂಸಿಸಿದವನಾಗುತ್ತಾನೆ. |

---

**'ಕಿಮ್ ಅಚ್ಛೇಹಿ?'** ಎಂಬ ಪ್ರಶ್ನೆಗೆ **'ಅಗ್ನಿಂ ಪುರೀಷ್ಯಮ್ ಅಂಗಿರಸ್ವತ್ ಅಚ್ಛೇಮಃ'** ಎಂಬುದು ಉತ್ತರ. ಇಲ್ಲಿ ವಿನಿಯೋಗದಲ್ಲಿಯೂ ಭೇದವಿದೆ.

ಹಿಂದಿರುಗುವಾಗ ಹೇಳಬೇಕಾದುದನ್ನು ಇಲ್ಲಿ ಪ್ರಾಸಂಗಿಕವಾಗಿ ಹೇಳಲಾಗಿದೆಯೆಂದು ಸಾಯಣರು ಹೇಳಿರುತ್ತಾರೆ.

ಈ ಬ್ರಾಹ್ಮಣಭಾಗದಲ್ಲಿ ವಲ್ಮೀಕವಪೆಯ ಪ್ರದೇಶದಿಂದ ಮುಂದೆ ಹೋಗುವ ವಿಧಿ, ಅಶ್ವದ ಪಾದಾಕ್ರಮಣ, ಅಶ್ವದ ಬೆನ್ನನ್ನು ತಿಕ್ಕುವ ವಿಧಿ, ಅಶ್ವದ ಪಾದದ ಕೆಳಗೆ ಶತ್ರುವನ್ನು ಹಾಕಿದಂತೆ ಭಾವಿಸುವ ವಿಧಿ, ಅದರ ಅರ್ಥವಾದಗಳು ಇವೆ.

## ॥ ತೃತೀಯೋಽನುವಾಕಃ ॥

ಉತ್ಕ್ರಾಮೋದಕ್ರಮೀದಿತಿ ದ್ವಾಭ್ಯಾಮುತ್ಕ್ರಮಯತಿ ಪ್ರತಿಷ್ಠಿತ್ಯಾ

---

ಉದಿತಿ । ಕ್ರಾಮ । ಉದಿತಿ । ಅಕ್ರಮೀತ್ । ಇತಿ । ದ್ವಾಭ್ಯಾಮ್ । ಉದಿತಿ । ಕ್ರಮಯತಿ । ಪ್ರತಿಷ್ಠಿತ್ಯಾ ಇತಿ ಪ್ರತಿ-ಸ್ಥಿತ್ಯೈ ।

---

ಎರಡನೆಯ ಅನುವಾಕದಲ್ಲಿ ಅಶ್ವಾಕ್ರಮಣವು ಹೇಳಲ್ಪಟ್ಟಿತು. ಈ ಮೂರನೆಯ ಅನುವಾಕದಲ್ಲಿ ಅಶ್ವವು ಮೆಟ್ಟಿದ ಪ್ರದೇಶಕ್ಕೆ ಸಂಬಂಧಿಸಿದ ಸಂಸ್ಕಾರಗಳು ಹೇಳಲ್ಪಡುತ್ತವೆ.

---

| ಬ್ರಾಹ್ಮಣಭಾಗ | ವಿವರಣೆ |
|---|---|
| | ಅಶ್ವದ ಉದಙ್ಮುಖ/ಪ್ರಾಙ್ಮುಖಉತ್ಕ್ರಮಣವಿಧಿ; ಅರ್ಥವಾದ |
| **ಉತ್ಕ್ರಾಮ** | ['ಹೇ! ಅಶ್ವವೇ! ಯಜಮಾನನಾದ ನನ್ನ ಮಹಾ ಸೌಭಾಗ್ಯಕ್ಕಾಗಿ ಮಣ್ಣನ್ನು ಅಗೆಯುವ ಪ್ರದೇಶದಿಂದ] ಮೇಲೆ ಬಾ' ಎಂದು ಹೇಳುವ ಮತ್ತು |
| **ಉದಕ್ರಮೀತ್** | [ಧನಪ್ರದವಾದ ಮತ್ತು ಗಮನಶೀಲವಾದ ಅಶ್ವವು ಖನನಪ್ರದೇಶದಿಂದ] ಮೇಲೆ ಬಂದಿತು/ಬರಲಿ ಎಂದು ಹೇಳುವ |
| **ಇತಿ ಅನುರೂಪಾಭ್ಯಾಮ್** | 'ಮೇಲೆ ಬಾ' 'ಮೇಲೆ ಬಂದಿತು' ಎಂದು ಪರಸ್ಪರಾನುರೂಪಗಳಾಗಿರುವ |
| **ದ್ವಾಭ್ಯಾಮ್ ಉತ್ಕ್ರಮಯತಿ** | ಎರಡು ಮಂತ್ರಗಳಿಂದ ಅಶ್ವವನ್ನು ಉತ್ತರಮುಖವಾಗಿ ಮೇಲಕ್ಕೆ ತರಬೇಕು [ವಿಧಿ] |
| **ಪ್ರತಿಷ್ಠಿತ್ಯೈ** | ಇದು ದೃಢಸ್ಥಿತಿಗೆ ಕಾರಣವಾಗುತ್ತದೆ. |

---

ತಾತ್ಪರ್ಯ:– **'ಉತ್ಕ್ರಾಮ'** ಮತ್ತು **'ಉದಕ್ರಮೀತ್'** ಎಂದು ಆರಂಭಗೊಳ್ಳುವ ಮಂತ್ರಗಳ ಆದಿಯಲ್ಲಿ ಉತ್ಕ್ರಮಣ ಎಂದು ಹೇಳಿರುವುದರಿಂದ ಅನುಷ್ಠಿಸಬೇಕಾದ ಕರ್ಮದ ದೃಷ್ಟಿಯಿಂದ ಅನುರೂಪತೆಯು ಇದೆ.

ಅನುರೂಪಾಭ್ಯಾಂ ತಸ್ಮಾದನುರೂಪಾಃ ಪಶವಃ ಪ್ರಜಾಯಂತೇಽಪ ಉಪಸೃಜತಿ

ಯತ್ರ ವಾ ಆಪ ಉಪಗಚ್ಛಂತಿ ತದೋಷಧಯಃ ಪ್ರತಿತಿಷ್ಠಂತ್ಯೋಷಧೀಃ

ಪ್ರತಿತಿಷ್ಠಂತೀಃ ಪಶವೋಽನು ಪ್ರತಿತಿಷ್ಠಂತಿ ಪಶೂನ್ ಯಜ್ಞೋ ಯಜ್ಞಂ

ಯಜಮಾನೋ

---

ಅನುರೂಪಾಭ್ಯಾಮಿತ್ಯನು-ರೂಪಾಭ್ಯಾಮ್ । ತಸ್ಮಾತ್ । ಅನುರೂಪಾ ಇತ್ಯನು-ರೂಪಾಃ । ಪಶವಃ । ಪ್ರೇತಿ । ಜಾಯಂತೇ । ಅಪಃ । ಉಪೇತಿ । ಸೃಜತಿ । ಯತ್ರ । ವೈ । ಆಪಃ । ಉಪಗಚ್ಛಂತೀತ್ಯುಪ-ಗಚ್ಛಂತಿ । ತತ್ । ಓಷಧಯಃ । ಪ್ರತೀತಿ । ತಿಷ್ಠಂತಿ । ಓಷಧೀಃ । ಪ್ರತಿತಿಷ್ಠಂತೀರಿತಿ ಪ್ರತಿ-ತಿಷ್ಠಂತೀಃ । ಪಶವಃ । ಅನು । ಪ್ರತೀತಿ । ತಿಷ್ಠಂತಿ । ಪಶೂನ್ । ಯಜ್ಞಃ । ಯಜ್ಞಮ್ । ಯಜಮಾನಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ತಸ್ಮಾತ್ ಅನುರೂಪಾಃ ಪಶವಃ ಪ್ರಜಾಯಂತೇ** | ಆದುದರಿಂದ ಲೋಕದಲ್ಲಿ ಪಶುಗಳೂ ಪರಸ್ಪರಾನುರೂಪವಾಗಿಯೇ ಜನಿಸುತ್ತವೆ. |

**ಕುದುರೆಯ ಹೆಜ್ಜೆಯ ಪ್ರದೇಶದಲ್ಲಿ/ಮೃತ್ಖನನಪ್ರದೇಶದಲ್ಲಿ ನೀರನ್ನು ಹಾಕುವ ವಿಧಿ; ಅರ್ಥವಾದ**

| | |
|---|---|
| **ಅಪಃ ಉಪಸೃಜತಿ** | ಅಶ್ವಪದದಲ್ಲಿ (ಹೆಜ್ಜೆ) ನೀರನ್ನು ಹಾಕಬೇಕು. [ವಿಧಿ] |
| **ಯತ್ರ ವೈ ಆಪಃ ಉಪಗಚ್ಛಂತಿ** | ಎಲ್ಲಿ ನೀರು ಇರುತ್ತದೆಯೋ |
| **ತತ್ ಓಷಧಯಃ ಪ್ರತಿತಿಷ್ಠಂತಿ** | ಅಲ್ಲಿ ಸಸ್ಯಗಳು ಚೆನ್ನಾಗಿ ಬೆಳೆಯುತ್ತವೆ. |
| **ಪ್ರತಿತಿಷ್ಠಂತೀಃ ಓಷಧೀಃ ಪಶವಃ ಅನು ಪ್ರತಿ ತಿಷ್ಠಂತಿ** | ಚೆನ್ನಾಗಿ ಬೆಳೆದ ಓಷಧಿಗಳನ್ನು ಅನುಸರಿಸಿ ಪಶುಗಳು ಚೆನ್ನಾಗಿ ಬಾಳುತ್ತವೆ. |
| **ಪಶೂನ್ ಯಜ್ಞಃ** | ಗವಾದಿಪಶುಗಳನ್ನು ಅನುಸರಿಸಿ ಯಜ್ಞವು [ಚೆನ್ನಾಗಿ ನಡೆಯುತ್ತದೆ.] |
| **ಯಜ್ಞಮ್ ಯಜಮಾನಃ** | ಯಜ್ಞಫಲವನ್ನು ಹೊಂದಿ ಯಜಮಾನನು [ಚೆನ್ನಾಗಿ ಬಾಳುತ್ತಾನೆ.] |

ಯಜಮಾನಂ ಪ್ರಜಾಸ್ತಸ್ಮಾದಪ ಉಪಸ್ಸೃಜತಿ ಪ್ರತಿಷ್ಠಿತ್ಯೈ
ಯದಧ್ವರ್ಯುರನಗ್ನಾವಾಹುತಿಂ ಜುಹುಯಾದಂಧೋಽಧ್ವರ್ಯುರ್[ಅಧ್ವರ್ಯುಃ
(೧೧)ಸ್ಯಾದ್ರಕ್ಷಾಗ್ಂಸಿ] ಸ್ಯಾದ್ರಕ್ಷಾಗ್ಂಸಿ ಯಜ್ಞಗ್ಂ ಹನ್ಯುರ್
ಹಿರಣ್ಯಮುಪಾಸ್ಯ ಜುಹೋತ್ಯ-

---

ಯಜಮಾನಮ್ । ಪ್ರಜಾ ಇತಿ ಪ್ರ-ಜಾಃ । ತಸ್ಮಾತ್ । ಅಪಃ । ಉಪೇತಿ । ಸೃಜತಿ । ಪ್ರತಿಷ್ಠಿತ್ಯಾ ಇತಿ ಪ್ರತಿ-ಸ್ಥಿತ್ಯೈ ।
ಯತ್ । ಅಧ್ವರ್ಯುಃ । ಅನಗ್ನೌ । ಆಹುತಿಮಿತ್ಯಾ-ಹುತಿಮ್ । ಜುಹುಯಾತ್ । ಅಂಧಃ । ಅಧ್ವರ್ಯುಃ । (೧೧) ।
ಸ್ಯಾತ್ । ರಕ್ಷಾಗ್ಂಸಿ । ಯಜ್ಞಮ್ । ಹನ್ಯುಃ । ಹಿರಣ್ಯಮ್ । ಉಪಾಸ್ಯೇತ್ಯುಪ-ಅಸ್ಯ । ಜುಹೋತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯಜಮಾನಮ್ ಪ್ರಜಾಃ** | ಯಜಮಾನನನ್ನು ಅನುಸರಿಸಿ ಪ್ರಜೆಗಳು ಚೆನ್ನಾಗಿ ಬದುಕುತ್ತಾರೆ. |
| **ತಸ್ಮಾತ್ ಅಪಃ ಉಪಸ್ಸೃಜತಿ ಪ್ರತಿಷ್ಠಿತ್ಯೈ** | ಆದುದರಿಂದ ಉತ್ತರೋತ್ತರವಾಗಿ ಎಲ್ಲರ ಉತ್ತಮ ಸ್ಥಿತಿಗಾಗಿ ನೀರನ್ನು ಹಾಕಬೇಕು. |

**ಹಿರಣ್ಯದಲ್ಲಿ ಮನಸ್ವತೀಮಂತ್ರಗಳಿಂದ ಹೋಮವಿಧಿ; ಅರ್ಥವಾದ**

| | |
|---|---|
| **ಅಧ್ವರ್ಯುಃ ಯತ್ ಅನಗ್ನೌ ಆಹುತಿಮ್ ಜುಹುಯಾತ್** | ಅಧ್ವರ್ಯುವು ಅಗ್ನಿರಹಿತಪ್ರದೇಶದಲ್ಲಿ ಯಾವಾಗ ಹೋಮವನ್ನು ಮಾಡುವನೋ(ಆಗ) |
| **ಅಧ್ವರ್ಯುಃ ಅಂಧಃ ಸ್ಯಾತ್** | ಅಧ್ವರ್ಯುವು ಕುರುಡನಾಗುತ್ತಾನೆ. |
| **ರಕ್ಷಾಗ್ಂಸಿ ಯಜ್ಞಮ್ ಹನ್ಯುಃ** | (ರಕ್ಷಕನಾದ ಅಗ್ನಿಯಿಲ್ಲದುದರಿಂದ)ರಾಕ್ಷಸರು ಯಜ್ಞವನ್ನು ನಾಶಪಡಿಸುವರು. |
| **ಹಿರಣ್ಯಮ್ ಉಪಾಸ್ಯ ಜುಹೋತಿ** | (ಅಗ್ನಿಯಿಲ್ಲದ ಅಶ್ವಪದಪ್ರದೇಶದಲ್ಲಿ ಹೋಮ ಮಾಡುವ ದೋಷದ ಪರಿಹಾರಕ್ಕಾಗಿ) ಅಶ್ವಪಾದ ಪ್ರದೇಶದಲ್ಲಿ ಚಿನ್ನವನ್ನು ಇಟ್ಟು ಮನಸ್ವತೀ ಮಂತ್ರಗಳಿಂದ ಹೋಮವನ್ನು ಮಾಡಬೇಕು.[ವಿಧಿ] |

–ಗ್ನಿವತ್ಯೇವ ಜುಹೋತಿ ನಾಂಧೋಽಧ್ವರ್ಯುರ್ಭವತಿ ನ ಯಜ್ಞಗ್ಂ

ರಕ್ಷಾಗ್ಂಸಿ ಘ್ನಂತಿ ಜಿಘರ್ಮ್ಯಗ್ನಿಂ ಮನಸಾ ಘೃತೇನೇತ್ಯಾಹ ಮನಸಾ ಹಿ

ಪುರುಷೋ ಯಜ್ಞಮಭಿಗಚ್ಛತಿ ಪ್ರತಿಕ್ಷ್ಯಂತಂ ಭುವನಾನಿ ವಿಶ್ವೇತ್ಯಾಹ

---

ಅಗ್ನಿವತೀತ್ಯಗ್ನಿ–ವತಿ । ಏವ । ಜುಹೋತಿ । ನ । ಅಂಧಃ । ಅಧ್ವರ್ಯುಃ । ಭವತಿ । ನ । ಯಜ್ಞಮ್ । ರಕ್ಷಾಗ್ಂಸಿ । ಘ್ನಂತಿ । ಜಿಘರ್ಮಿ । ಅಗ್ನಿಮ್ । ಮನಸಾ । ಘೃತೇನ । ಇತಿ । ಆಹ । ಮನಸಾ । ಹಿ । ಪುರುಷಃ । ಯಜ್ಞಮ್ । ಅಭಿಗಚ್ಛತೀತ್ಯಭಿ–ಗಚ್ಛತಿ । ಪ್ರತಿಕ್ಷ್ಯಂತಮಿತಿ ಪ್ರತಿ–ಕ್ಷ್ಯಂತಮ್ । ಭುವನಾನಿ । ವಿಶ್ವಾ । ಇತಿ । ಆಹ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಅಗ್ನಿವತಿ ಏವ ಜುಹೋತಿ** | ಸುವರ್ಣವು ಅಗ್ನಿಯಂತೆ ಪ್ರಕಾಶಮಾನವಾಗಿರುವುದರಿಂದ/ತೈಜಸವಾಗಿರುವುದರಿಂದ ಅಗ್ನಿಯುಕ್ತವಾದ ಪ್ರದೇಶದಲ್ಲಿಯೇ ಹೋಮ ಮಾಡಿದವನಾಗುತ್ತಾನೆ. |
| **ಅಧ್ವರ್ಯುಃ ಅಂಧಃ ನ ಭವತಿ** | ಅಧ್ವರ್ಯುವು ಕುರುಡನಾಗುವುದಿಲ್ಲ. |
| **ಯಜ್ಞಮ್ ರಕ್ಷಾಗ್ಂಸಿ ನ ಘ್ನಂತಿ** | ಯಜ್ಞವನ್ನು ರಾಕ್ಷಸರು ನಾಶಪಡಿಸಲಾರರು. (ಹೀಗೆ ಯಾವ ದೋಷವೂ ಉಂಟಾಗುವುದಿಲ್ಲ) |

### ಮನಸ್ವತೀಮಂತ್ರದ ಮೊದಲ ಪಾದದ ವಿವರಣೆ.

| | |
|---|---|
| **ಜಿಘರ್ಮಿ ಅಗ್ನಿಮ್ ಮನಸಾ ಘೃತೇನ ಇತಿ ಆಹ** | 'ಅಗ್ನಿಯನ್ನು ಮನಸ್ಸಿನಿಂದ ಧ್ಯಾನಿಸುತ್ತಾ ತುಪ್ಪವನ್ನು ಹೋಮ ಮಾಡುತ್ತೇನೆ' ಎಂದು ಈ ಮಂತ್ರಭಾಗವು ಹೇಳುತ್ತದೆ. |
| **ಮನಸಾ ಹಿ ಪುರುಷಃ ಯಜ್ಞಮ್ ಅಭಿಗಚ್ಛತಿ** | ಯಜಮಾನನು ಮನಸ್ಸಿನಿಂದಲೇ ತಾನೇ ಯಜ್ಞವನ್ನು ಮಾಡುವೆನೆಂದು ಸಂಕಲ್ಪಿಸುವನಷ್ಟೆ. |

### ಎರಡನೆಯ ಪಾದದ ವಿವರಣೆ

| | |
|---|---|
| **ಪ್ರತಿಕ್ಷ್ಯಂತಮ್ ಭುವನಾನಿ ವಿಶ್ವಾ ಇತಿ ಆಹ** | 'ಎಲ್ಲ ಲೋಕಗಳಲ್ಲಿಯೂ ಪ್ರತ್ಯೇಕವಾಗಿ ವಾಸಿಸುವ ಅಗ್ನಿಯನ್ನು ಧ್ಯಾನ ಮಾಡುತ್ತಾ ಹೋಮ ಮಾಡುತ್ತೇನೆ.' ಎಂದು ಈ ಮಂತ್ರಭಾಗವು ಹೇಳುತ್ತದೆ. |

ಸರ್ವಗ್ಗ್ಂ ಹ್ಯೇಷ ಪ್ರತ್ಯಙ್ಕ್ಷೇತಿ ಪೃಥುಂ ತಿರಶ್ಚಾ ವಯಸಾ ಬೃಹಂತ

ಮಿತ್ಯಾಹಾಲ್ಪೋ ಹ್ಯೇಷ ಜಾತೋ ಮಹಾ[ಮಹಾನ್(೧೨)ಭವತಿ]ನ್ಭವತಿ

ವ್ಯಚಿಷ್ಠಮನ್ನಗ್ಂ ರಭಸಂ ವಿದಾನಮಿತ್ಯಾಹಾನ್ನಮೇವಾಸ್ಮೈ ಸ್ವದಯತಿ

---

ಸರ್ವಮ್ । ಹಿ । ಏಷಃ । ಪ್ರತ್ಯಙ್ಙ್ । ಕ್ಷೇತಿ । ಪೃಥುಮ್ । ತಿರಶ್ಚಾ । ವಯಸಾ । ಬೃಹಂತಮ್ । ಇತಿ । ಆಹ ।

ಅಲ್ಪಃ । ಹಿ । ಏಷಃ । ಜಾತಃ । ಮಹಾನ್ । (೧೨) । ಭವತಿ । ವ್ಯಚಿಷ್ಠಮ್ । ಅನ್ನಮ್ । ರಭಸಮ್ । ವಿದಾನಮ್ ।

ಇತಿ । ಆಹ । ಅನ್ನಮ್ । ಏವ । ಅಸ್ಮೈ । ಸ್ವದಯತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಏಷಃ ಸರ್ವಮ್ ಪ್ರತ್ಯಙ್ ಹಿ ಕ್ಷೇತಿ** | ಈ ಅಗ್ನಿಯು ಯಜಮಾನರೆಲ್ಲರಿಗೂ ಅಭಿಮುಖನಾಗಿ/ಪ್ರತ್ಯಙ್ಮುಖನಾಗಿ ವಾಸಿಸುವನಷ್ಟೆ. |

ತೃತೀಯಭಾಗದ ವಿವರಣೆ–ಅರ್ಥವಾದ

| | |
|---|---|
| **ಪೃಥುಮ್ ತಿರಶ್ಚಾ ವಯಸಾ ಬೃಹಂತಮ್ ಇತಿ ಆಹ** | 'ಗಾತ್ರದಿಂದಲೂ, ವಯಸ್ಸಿನಿಂದಲೂ ಮಹಾಂತನಾಗಿರುವ ಅಗ್ನಿಯನ್ನು ಧ್ಯಾನಿಸುತ್ತಾ ಹೋಮ ಮಾಡುತ್ತೇನೆ' ಎಂದು ಈ ಮಂತ್ರಭಾಗವು ಹೇಳುತ್ತದೆ. |
| **ಏಷಃ ಜಾತಃ ಅಲ್ಪಃ ಮಹಾನ್ ಭವತಿ ಹಿ** | ಈ ಅಗ್ನಿಯು ಹುಟ್ಟುವಾಗ ಅಲ್ಪನಾಗಿ ಕಾಣಿಸಿದರೂ ಬಳಿಕ ಗಾತ್ರದಿಂದಲೂ ಕಾಲದಿಂದಲೂ ಮಹಾಂತನಾಗುವನಷ್ಟೆ. |

ಮಂತ್ರದ ಕೊನೆಯ ಭಾಗದ ವಿವರಣೆ

| | |
|---|---|
| **ವ್ಯಚಿಷ್ಠಮ್ ಅನ್ನಮ್ ರಭಸಮ್ ವಿದಾನಮ್ ಇತಿ ಆಹ** | 'ರುಚಿಕರವಾದ ವಿವಿಧವಾದ ಅನ್ನವನ್ನು ಬೇಗನೆ ಲಭಿಸುವಂತೆ ಮಾಡುವ ಅಗ್ನಿಯಲ್ಲಿ ಹೋಮ ಮಾಡುತ್ತೇನೆ' ಎಂದು ಈ ಮಂತ್ರಭಾಗವು ಹೇಳುತ್ತದೆ. |
| **ಅಸ್ಮೈ ಅನ್ನಮ್ ಏವ ಸ್ವದಯತಿ** | ಇದರಿಂದ ಈ ಯಜಮಾನನಿಗೆ ರುಚಿಕರವಾದ ಅನ್ನವು ಲಭಿಸುತ್ತದೆ. |

ಸರ್ವಮಸ್ಮೈ ಸ್ವದತೇ ಯ ಏವಂ ವೇದಾऽऽತ್ವಾ ಜಿಘರ್ಮಿ ವಚಸಾ ಘೃತೇನೇತ್ಯಾಹ ತಸ್ಮಾದ್ಯತ್ಪುರುಷೋ ಮನಸಾऽಭಿ ಗಚ್ಛತಿ ತದ್ವಾಚಾ ವದತ್ಯರಕ್ಷಸೇತ್ಯಾಹ ರಕ್ಷಸಾಮಪಹತ್ಯೈ

---

ಸರ್ವಮ್ । ಅಸ್ಮೈ । ಸ್ವದತೇ । ಯಃ । ಏವಮ್ । ವೇದ । ಏತಿ । ತ್ವಾ । ಜಿಘರ್ಮಿ । ವಚಸಾ । ಘೃತೇನ । ಇತಿ । ಆಹ । ತಸ್ಮಾತ್ । ಯತ್ । ಪುರುಷಃ । ಮನಸಾ । ಅಭಿಗಚ್ಛತೀತ್ಯಭಿ–ಗಚ್ಛತಿ । ತತ್ । ವಾಚಾ । ವದತಿ । ಅರಕ್ಷಸಾ । ಇತಿ । ಆಹ । ರಕ್ಷಸಾಮ್ । ಅಪಹತ್ಯಾ ಇತ್ಯಪ–ಹತ್ಯೈ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ವೇದನಪ್ರಶಂಸೆ** |
| **ಅಸ್ಮೈ ಸರ್ವಮ್ ಸ್ವದತೇ ಯಃ ಏವಮ್ ವೇದ** | ಇದನ್ನು ತಿಳಿದ ಯಜಮಾನನ ಅನ್ನವೆಲ್ಲವೂ ರುಚಿಕರವಾಗಿರುತ್ತದೆ. |
| | **ದ್ವಿತೀಯಮಂತ್ರದ ಪ್ರಥಮಭಾಗದ ವಿವರಣೆ/ಅರ್ಥವಾದ** |
| **ಆ ತ್ವಾ ಜಿಘರ್ಮಿ ವಚಸಾ ಘೃತೇನ ಇತಿ ಆಹ** | 'ಎಲೈ! ಅಗ್ನಿಯೇ! ವಾಗ್ರೂಪವಾದ ಮಂತ್ರದಿಂದ ನಿನಗೆ ತುಪ್ಪವನ್ನು ಅರ್ಪಿಸುತ್ತೇನೆ' ಎಂದು ಎರಡನೆಯ ಮಂತ್ರದ ಪ್ರಥಮಭಾಗವು ಹೇಳುತ್ತದೆ. |
| **ತಸ್ಮಾತ್ ಯತ್ ಪುರುಷಃ ಮನಸಾ ಅಭಿಗಚ್ಛತಿ ತತ್ ವಾಚಾ ವದತಿ** | ಆದುದರಿಂದಲೇ (ಪ್ರಥಮಮಂತ್ರದಲ್ಲಿ **'ಮನಸಾ'** ಎಂಬುದಾಗಿಯೂ ದ್ವಿತೀಯಮಂತ್ರದಲ್ಲಿ **'ವಚಸಾ'** ಎಂದು ಹೇಳಿರುವುದರಿಂದ) ಲೋಕದಲ್ಲಿ ಜನರು ಮೊದಲು ಮನಸ್ಸಿನಲ್ಲಿ ಸಂಕಲ್ಪಿಸಿದುದನ್ನು ಬಳಿಕ ಮಾತಿನಿಂದ ಹೇಳುತ್ತಾರೆ. |
| | **'ಅರಕ್ಷಸಾ' ಎಂಬ ಪದದ ವಿವರಣೆ** |
| **ಅರಕ್ಷಸಾ ಇತಿ ಆಹ ರಕ್ಷಸಾಮ್ ಅಪಹತ್ಯೈ** | (ಅರಕ್ಷಸಾ ಮನಸಾ ತತ್ ಜುಷಸ್ವ) 'ಎಲೈ! ಅಗ್ನಿಯೇ! ಕ್ರೂರವಲ್ಲದ/ಶಾಂತವಾದ ಮನಸ್ಸಿನಿಂದ ಆ ಆಜ್ಯಾಹುತಿಯನ್ನು ಸ್ವೀಕರಿಸು' ಎಂದು ಈ ಮಂತ್ರಭಾಗವು ಹೇಳುತ್ತದೆ. ಇದು ರಾಕ್ಷಸರ ನಾಶಕ್ಕೆ ಕಾರಣವಾಗುತ್ತದೆ. |

ಮರ್ಯಶ್ರೀಃಸ್ಪೃಹಯದ್ವರ್ಣೋ

ಅಗ್ನಿರಿತ್ಯಾಹಾಪಚಿತಿಮೇವಾಸ್ಮಿನ್ದಧಾತ್ಯಪಚಿತಿಮಾನ್ಭವತಿ ಯ ಏವ

[ಏವಂ(೧೩)ವೇದ] ವೇದ ಮನಸಾ ತ್ವೈ ತಾಮಾಪ್ತುಮರ್ಹತಿ

ಯಾಮಧ್ವರ್ಯುರನಗ್ನಾವಾಹುತಿಂ ಜುಹೋತಿ

---

ಮರ್ಯಶ್ರೀರಿತಿ ಮರ್ಯ–ಶ್ರೀಃ । ಸ್ಪೃಹಯದ್ವರ್ಣ ಇತಿ ಸ್ಪೃಹಯತ್–ವರ್ಣಃ । ಅಗ್ನಿಃ । ಇತಿ । ಆಹ । ಅಪಚಿತಿಮಿತ್ಯಪ–ಚಿತಿಮ್ । ಏವ । ಅಸ್ಮಿನ್ನ್ । ದಧಾತಿ । ಅಪಚಿತಿಮಾನಿತ್ಯಪಚಿತಿ–ಮಾನ್ । ಭವತಿ । ಯಃ । ಏವಮ್ । (೧೩) । ವೇದ । ಮನಸಾ । ತು । ವೈ । ತಾಮ್ । ಆಪ್ತುಮ್ । ಅರ್ಹತಿ । ಯಾಮ್ । ಅಧ್ವರ್ಯುಃ । ಅನಗ್ನೌ । ಆಹುತಿಮಿತ್ಯಾ–ಹುತಿಮ್ । ಜುಹೋತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ದ್ವಿತೀಯಮಂತ್ರದ ತೃತೀಯಪಾದದ ವಿವರಣೆ** |
| **ಮರ್ಯಶ್ರೀಃ ಸ್ಪೃಹಯದ್ವರ್ಣಃ ಅಗ್ನಿಃ ಇತಿ ಆಹ** | ಈ ಅಗ್ನಿಯು ಮನುಷ್ಯರಿಂದ ಆಶ್ರಯಿಸಲ್ಪಡುವವನೂ ಯಜಮಾನರು ಅಪೇಕ್ಷಿಸುವ ರೂಪವುಳ್ಳವನೂ ಆಗಿರುತ್ತಾನೆಂದು ಈ ಮಂತ್ರಭಾಗವು ಹೇಳುತ್ತದೆ. |
| **ಅಸ್ಮಿನ್ ಅಪಚಿತಿಮ್ ಏವ ದಧಾತಿ** | ಇದರಿಂದ ಯಜಮಾನನು ಅಗ್ನಿಯಲ್ಲಿ ಪೂಜೆಯನ್ನು ಸಲ್ಲಿಸಿದಂತೆ ಆಗುತ್ತದೆ. |
| **ಅಪಚಿತಿಮಾನ್ ಭವತಿ ಯಃ ಏವಮ್ ವೇದ** | ಹೀಗೆ ತಿಳಿದವನು ಲೋಕದಲ್ಲಿ ಗೌರವವನ್ನು ಗಳಿಸುತ್ತಾನೆ. [ಈ ಮಂತ್ರದ ಅರ್ಥಜ್ಞಾನದ ಪ್ರಶಂಸೆ] |
| | **ಮನಸ್ವತೀಮಂತ್ರಗಳ ವಿಧಿ; ಪ್ರಶಂಸೆ; ಮಂತ್ರದ್ವಿತ್ವದ ಪ್ರಶಂಸೆ** |
| **ಅಧ್ವರ್ಯುಃ ಯಾಮ್ ಆಹುತಿಮ್ ಅನಗ್ನೌ ಜುಹೋತಿ** | ಅಧ್ವರ್ಯುವು ಯಾವ ಆಹುತಿಯನ್ನು ಅಗ್ನಿಗಿಂತಲೂ ಬೇರೆಡೆಯಲ್ಲಿ ಮಾಡುತ್ತಾನೆಯೋ, |
| **ತಾಮ್ ಮನಸಾ ತು ವೈ ಆಪ್ತುಮ್ ಅರ್ಹತಿ** | ಆ ಆಹುತಿಯನ್ನು (ನಾನು ಅಗ್ನಿಯಲ್ಲಿಯೇ ಹೋಮ ಮಾಡಿದೆನೆಂದು)ಮನಸ್ಸಿನಿಂದ ಕಲ್ಪಿಸಬಲ್ಲವನಾಗಿರುತ್ತಾನೆ. |

ಮನಸ್ವತೀಭ್ಯಾಂ ಜುಹೋತ್ಯಾಹುತ್ಯೋರಾಪ್ತ್ಯೈ ದ್ವಾಭ್ಯಾಂ ಪ್ರತಿಷ್ಠಿತ್ಯೈ ಯಜ್ಞಮುಖೇಯಜ್ಞಮುಖೇ ವೈ ಕ್ರಿಯಮಾಣೇ ಯಜ್ಞಗ್ಂ ರಕ್ಷಾಗ್ಂಸಿ ಜಿಘಾಗ್ಂ-ಸಂತ್ಯೇತರ್ಹಿ ಖಲು ವಾ ಏತದ್ಯಜ್ಞಮುಖಂ ಯರ್ಹ್ಯೇನದಾಹುತಿರಶ್ನುತೇ

---

ಮನಸ್ವತೀಭ್ಯಾಮ್ । ಜುಹೋತಿ । ಆಹುತ್ಯೋರಿತ್ಯಾ-ಹುತ್ಯೋಃ । ಆಪ್ತ್ಯೈ । ದ್ವಾಭ್ಯಾಮ್ । ಪ್ರತಿಷ್ಠಿತ್ಯಾ ಇತಿ ಪ್ರತಿ-ಸ್ಥಿತ್ಯೈ । ಯಜ್ಞಮುಖೇಯಜ್ಞಮುಖ ಇತಿ ಯಜ್ಞಮುಖೇ-ಯಜ್ಞಮುಖೇ । ವೈ । ಕ್ರಿಯಮಾಣೇ । ಯಜ್ಞಮ್ । ರಕ್ಷಾಗ್ಂಸಿ । ಜಿಘಾಗ್ಂಸಂತಿ । ಏತರ್ಹಿ । ಖಲು । ವೈ । ಏತತ್ । ಯಜ್ಞಮುಖಮಿತಿ ಯಜ್ಞ-ಮುಖಮ್ । ಯರ್ಹಿ । ಏನತ್ । ಆಹುತಿರಿತ್ಯಾ-ಹುತಿಃ । ಅಶ್ನುತೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಮನಸ್ವತೀಭ್ಯಾಮ್ ಜುಹೋತಿ** | 'ಜಿಘರ್ಮ್ಯಗ್ನಿಂ ಮನಸಾ' 'ಅರಕ್ಷಸಾ' ಎಂದು ಮನ ಶ್ಶಬ್ದಯುಕ್ತವಾದ ಋಕ್ಕುಗಳಿಂದ ಹಿರಣ್ಯದಲ್ಲಿ ಹೋಮವನ್ನು ಮಾಡಬೇಕು. |
| **ಆಹುತ್ಯೋಃ ಆಪ್ತ್ಯೈ** | ಇದು ಆಹುತಿಗಳ ಪ್ರಾಪ್ತಿಗೆ ಸಾಧನವಾಗುತ್ತದೆ. |
| **ದ್ವಾಭ್ಯಾಮ್ (ಜುಹೋತಿ) ಪ್ರತಿಷ್ಠಿತ್ಯೈ** | ಎರಡು ಮಂತ್ರಗಳಿಂದ ಹೋಮ ಮಾಡಬೇಕು. ಇದು ಪ್ರಕೃಷ್ಟಸ್ಥಿತಿಗೆ ಕಾರಣವಾಗುತ್ತದೆ. |

ಪರಿಲೇಖನವಿಧಿ; ಅರ್ಥವಾದ

| | |
|---|---|
| **ಯಜ್ಞಮುಖೇಯಜ್ಞಮುಖೇ ವೈ ಕ್ರಿಯಮಾಣೇ** (ಸತಿ) | ಯಜ್ಞಾರಂಭವನ್ನು ಮಾಡುತ್ತಿರಲಾಗಿ |
| **ರಕ್ಷಾಗ್ಂಸಿ ಯಜ್ಞಮ್ ಜಿಘಾಗ್ಂಸಂತಿ** | ರಾಕ್ಷಸರು ಆ ಯಜ್ಞವನ್ನು ನಾಶಪಡಿಸಲು ಇಚ್ಛಿಸುತ್ತಾರೆ. |
| **ಯರ್ಹಿ ಆಹುತಿಃ ಏನತ್ ಅಶ್ನುತೇ** | ಯಾವಾಗ ಆಹುತಿಯು ಅಶ್ವದ ಪದಸ್ಥಾನವನ್ನು ವ್ಯಾಪಿಸುತ್ತದೆಯೋ |
| **ಏತರ್ಹಿ ಖಲು ವೈ ಏತತ್ ಯಜ್ಞಮುಖಮ್** | ಆಗ ಈ ಅಶ್ವಪದಸ್ಥಾನವು ಯಜ್ಞಾರಂಭದ ಸ್ಥಾನವೇ ಆಗುತ್ತದೆಯಷ್ಟೆ. |

ಪರಿ ಲಿಖತಿ ರಕ್ಷಸಾಮಪಹತ್ಯೈ ತಿಸೃಭಿಃ ಪರಿ ಲಿಖತಿ ತ್ರಿವೃದ್ವಾ

ಅಗ್ನಿರ್ಯಾವಾನೇವಾಗ್ನಿಸ್ತಸ್ಮಾದ್ರಕ್ಷಾಗ್ಂಸ್ಯಪಹಂತಿ

---

ಪರೀತಿ । ಲಿಖತಿ । ರಕ್ಷಸಾಮ್ । ಅಪಹತ್ಯಾ ಇತ್ಯಪ–ಹತ್ಯೈ । ತಿಸೃಭಿರಿತಿ ತಿಸೃ–ಭಿಃ । ಪರೀತಿ । ಲಿಖತಿ । ತ್ರಿವೃದಿತಿ ತ್ರಿ–ವೃತ್ । ವೈ । ಅಗ್ನಿಃ । ಯಾವಾನ್ । ಏವ । ಅಗ್ನಿಃ । ತಸ್ಮಾತ್ । ರಕ್ಷಾಗ್ಂಸಿ । ಅಪೇತಿ । ಹಂತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಪರಿ ಲಿಖತಿ** | ಮೃತ್ಖನನದ ಪ್ರದೇಶದ ಸುತ್ತಲೂ ರೇಖೆಗಳನ್ನು ಹಾಕಬೇಕು. [ವಿಧಿ] |
| **ರಕ್ಷಸಾಮ್ ಅಪಹತ್ಯೈ** | ಇದು ರಕ್ಷೋನಾಶಕ್ಕೆ ಕಾರಣವಾಗುತ್ತದೆ. |

**ಹೊರಗಿನ ರೇಖೆಯು ದೊಡ್ಡದಾಗಿರುವಂತೆ ರೇಖಾತ್ರಯವಿಧಿ; ಅರ್ಥವಾದ**

| | |
|---|---|
| **ತಿಸೃಭಿಃ ಪರಿಲಿಖತಿ** | ಮಣ್ಣನ್ನು ಅಗೆಯುವ ಪ್ರದೇಶದ ಸುತ್ತಲೂ 'ಪರಿ ವಾಜಪತಿಃ' 'ಪರಿ ತ್ವಾಗ್ನೇ' 'ತ್ವಮಗ್ನೇ ದ್ಯುಭಿಃ' ಎಂಬ ಮೂರು ಋಕ್ಕುಗಳಿಂದ ಮೂರು ರೇಖೆಗಳನ್ನು ಮಾಡಬೇಕು. |
| **ಅಗ್ನಿಃ ತ್ರಿವೃತ್ ವೈ** | ಅಗ್ನಿಯು 'ಆಹವನೀಯ' 'ಗಾರ್ಹಪತ್ಯ' 'ದಕ್ಷಿಣಾಗ್ನಿ' ಎಂದು ತ್ರಿಗುಣನಾಗಿ ಇರುತ್ತಾನೆ. |
| **ಯಾವಾನ್ ಏವ ಅಗ್ನಿಃ** | ಅಗ್ನಿಯು ಯಾವ ಪರಿಮಾಣವುಳ್ಳವನಾಗಿರುತ್ತಾನೆಯೋ (ಈ ಎಲ್ಲ ಅಗ್ನಿಗಳಿಂದಲೂ) |
| **ತಸ್ಮಾತ್ ರಕ್ಷಾಗ್ಂಸಿ ಅಪಹಂತಿ** | (ಮಂತ್ರಗಳು ಮೂರು ಇರುವುದರಿಂದ) ಆ ಎಲ್ಲ ಅಗ್ನಿ ಪ್ರದೇಶದಿಂದಲೂ ಅಧ್ವರ್ಯುವು ರಕ್ಷೋಗಣಗಳನ್ನು ನಾಶಪಡಿಸುತ್ತಾನೆ. |

---

ಕುದುರೆಯ ಹೆಜ್ಜೆಯ ಪ್ರದೇಶದಲ್ಲಿ ಉಪಸೃಜನವಿಧಿಯೂ, ಮನಸ್ವತೀಮಂತ್ರಗಳಿಂದ ಹಿರಣ್ಯದಲ್ಲಿ ಹೋಮ ವಿಧಿಯೂ, ಅದರ ಅರ್ಥವಾದವೂ, ಮಂತ್ರದ ಪಾದಶಃ ಅರ್ಥವಿವರಣೆಯೂ ಇದೆ.

**'ಯಃ ಏವಂ ವೇದ'** ಎಂದು ಶ್ರುತಿಯಲ್ಲಿ ಅನೇಕ ಕಡೆಗಳಲ್ಲಿ ಇದೆ. ಈ ವಿವರಣೆಯನ್ನು **'ವೇದನಪ್ರಶಂಸೆ'** ಎನ್ನುತ್ತಾರೆ. ಮಂತ್ರಾರ್ಥವನ್ನು ತಿಳಿಯಬೇಕು ಎಂದು ಆ ರೀತಿಯ ವಿವರಣೆಯ ತಾತ್ಪರ್ಯ.

ಮನಸ್ಸಿನಲ್ಲಿಯೇ ಅಗ್ನಿಯಲ್ಲಿ ಹೋಮ ಮಾಡಿದೆನೆಂದು ಭಾವಿಸಬಹುದು. ಇದಕ್ಕೆ ಮನಸ್ವತೀಮಂತ್ರಗಳು ಅನುರೂಪವಾಗಿವೆ. ಇವುಗಳ ದ್ವಿತ್ವವು ಪ್ರಕೃಷ್ಟಸ್ಥಿತಿಗೆ ಕಾರಣವಾಗುತ್ತದೆ. ಇದು ಪ್ರಶಂಸೆ.

[(೧೪) ಗಾಯತ್ರಿಯಾ] ಗಾಯತ್ರಿಯಾ ಪರಿ ಲಿಖತಿ ತೇಜೋ ವೈ ಗಾಯತ್ರೀ ತೇಜಸೈವೈನಂ ಪರಿ ಗೃಹ್ಣಾತಿ ತ್ರಿಷ್ಟುಭಾ ಪರಿ ಲಿಖತೀಂದ್ರಿಯಂ ವೈ ತ್ರಿಷ್ಟುಗಿಂದ್ರಿಯೇಣೈವೈನಂ ಪರಿ ಗೃಹ್ಣಾತ್ಯನುಷ್ಟುಭಾ ಪರಿಲಿಖ–

---

(೧೪) । ಗಾಯತ್ರಿಯಾ । ಪರೀತಿ । ಲಿಖತಿ । ತೇಜಃ । ವೈ । ಗಾಯತ್ರೀ । ತೇಜಸಾ । ಏವ । ಏನಮ್ । ಪರೀತಿ । ಗೃಹ್ಣಾತಿ । ತ್ರಿಷ್ಟುಭಾ । ಪರೀತಿ । ಲಿಖತಿ । ಇಂದ್ರಿಯಮ್ । ವೈ । ತ್ರಿಷ್ಟುಕ್ । ಇಂದ್ರಿಯೇಣ । ಏವ । ಏನಮ್ । ಪರೀತಿ । ಗೃಹ್ಣಾತಿ । ಅನುಷ್ಟುಭೇತ್ಯನು–ಸ್ತುಭಾ । ಪರೀತಿ । ಲಿಖತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ಛಂದಸ್ಸುಗಳ ಪ್ರಶಂಸೆ** |
| **ಗಾಯತ್ರಿಯಾ ಪರಿಲಿಖತಿ** | ಗಾಯತ್ರೀಛಂದೋಯುಕ್ತವಾದ **'ಪರಿ ವಾಜಪತಿಃ'** ಎಂಬ ಮಂತ್ರದಿಂದ ಅಧ್ವರ್ಯುವು ಪರಿಲೇಖನ ಮಾಡುತ್ತಾನೆ. |
| **ತೇಜಃ ವೈ ಗಾಯತ್ರೀ** | (ಪ್ರಜಾಪತಿಯ ಮುಖದಿಂದ ತೇಜಸ್ವಿಯಾದ ಅಗ್ನಿಯೊಡನೆ ಹುಟ್ಟಿದ) ಗಾಯತ್ರಿಯೂ ಸಹ ತೇಜಃಸ್ವರೂಪಳೇ. |
| **ಏನಮ್ ತೇಜಸಾ ಏವ ಪರಿಗೃಹ್ಣಾತಿ** | (ಹೀಗಾಗಿ ಈ ಪರಿಲೇಖನದಿಂದ) ಈ ಅಗ್ನಿಪ್ರದೇಶವನ್ನು ತೇಜಸ್ಸಿನಿಂದಲೇ ಸುತ್ತುಗಟ್ಟಿದಂತಾಗುತ್ತದೆ. |
| **ತ್ರಿಷ್ಟುಭಾ ಪರಿಲಿಖತಿ** | ಬಳಿಕ ತ್ರಿಷ್ಟುಪ್ ಛಂದಸ್ಸಿನ **'ತ್ವಮಗ್ನೇ ದ್ಯುಭಿಃ'** ಎಂಬ ಋಕ್ಕಿನಿಂದ ಪರಿಲೇಖನವನ್ನು ಮಾಡಬೇಕು. |
| **ಇಂದ್ರಿಯಮ್ ವೈ ತ್ರಿಷ್ಟುಕ್** | ತ್ರಿಷ್ಟುಪ್ ಛಂದಸ್ಸು ಇಂದ್ರಿಯಶಕ್ತಿಸ್ವರೂಪವಷ್ಟೆ. |
| **ಏನಮ್ ಇಂದ್ರಿಯೇಣ ಏವ ಪರಿಗೃಹ್ಣಾತಿ** | ಇಂದ್ರಿಯಸಾಮರ್ಥ್ಯದಿಂದಲೇ ಈ ಪ್ರದೇಶವನ್ನು ಸುತ್ತುಗಟ್ಟಿದಂತಾಗುತ್ತದೆ. |
| **ಅನುಷ್ಟುಭಾ ಪರಿಲಿಖತಿ** | **'ಪರಿ ತ್ವಾಗ್ನೇ'** ಎಂಬ ಅನುಷ್ಟುಪ್‌ಛಂದಸ್ಸಿನ ಮಂತ್ರದಿಂದ ಪರಿಲೇಖನವನ್ನು ಮಾಡಬೇಕು. |

–ತ್ಯನುಷ್ಟುಪ್ಸರ್ವಾಣಿ ಛಂದಾಗ್‌ಂಸಿ ಪರಿಭೂಃ ಪರ್ಯಾಪ್ತ್ಯೈ॥೪೮

ಮಧ್ಯತೋಽನುಷ್ಟುಭಾ ವಾಗ್ವಾ ಅನುಷ್ಟುಪ್ತಸ್ಮಾನ್ಮಧ್ಯತೋ ವಾಚಾ ವದಾಮೋ

ಗಾಯತ್ರಿಯಾ ಪ್ರಥಮಯಾ ಪರಿ ಲಿಖತ್ಯಥಾನುಷ್ಟುಭಾ–

---

ಅನುಷ್ಟುಬಿತ್ಯನು–ಸ್ತುಪ್ । ಸರ್ವಾಣಿ । ಛಂದಾಗ್‌ಂಸಿ । ಪರಿಭೂರಿತಿ ಪರಿ–ಭೂಃ । ಪರ್ಯಾಪ್ತ್ಯಾ ಇತಿ ಪರಿ–ಆಪ್ತ್ಯೈ॥೪೮ । ಮಧ್ಯತಃ । ಅನುಷ್ಟುಭೇತ್ಯನು–ಸ್ತುಭಾ । ವಾಕ್ । ವೈ । ಅನುಷ್ಟುಬಿತ್ಯನು–ಸ್ತುಪ್ । ತಸ್ಮಾತ್ । ಮಧ್ಯತಃ । ವಾಚಾ । ವದಾಮಃ । ಗಾಯತ್ರಿಯಾ । ಪ್ರಥಮಯಾ । ಪರೀತಿ । ಲಿಖತಿ । ಅಥ । ಅನುಷ್ಟುಭೇತ್ಯನು–ಸ್ತುಭಾ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಅನುಷ್ಟುಪ್ ಸರ್ವಾಣಿ ಛಂದಾಗ್‌ಂಸಿ ಪರಿಭೂಃ** | ಅನುಷ್ಟುಪ್ ಛಂದಸ್ಸು ವಾಗ್ರೂಪವಾಗಿ ಎಲ್ಲ ಛಂದಸ್ಸುಗಳನ್ನೂ ವ್ಯಾಪಿಸಿದೆ. |
| **ಪರ್ಯಾಪ್ತ್ಯೈ॥೪೮** | ಆದುದರಿಂದ ಪರಿಲೇಖನವು ಎಲ್ಲವನ್ನೂ ವ್ಯಾಪಿಸುವುದಕ್ಕೆ ಕಾರಣವಾಗುತ್ತದೆ. |

**ಈ ಛಂದಸ್ಸುಗಳ ಕ್ರಮವಿಧಿ; ಅರ್ಥವಾದ**

| | |
|---|---|
| **ಮಧ್ಯತಃ ಅನುಷ್ಟುಭಾ** ಪರಿಲಿಖತಿ | ಮಧ್ಯದಲ್ಲಿ ಅನುಷ್ಟುಪ್ ಛಂದಸ್ಸಿನಿಂದ (ಪರಿ ತ್ವಾಗ್ನೇ) ಪರಿಲೇಖನವನ್ನು ಮಾಡಬೇಕು. |
| **ಅನುಷ್ಟುಪ್ ವಾಕ್ ವೈ** | ಅನುಷ್ಟುಪ್ ಛಂದಸ್ಸು ವಾಗ್ರೂಪವಾಗಿದೆ. |
| **ತಸ್ಮಾತ್ ಮಧ್ಯತಃ ವಾಚಾ ವದಾಮಃ** | ಆದುದರಿಂದ ನಾವು ಮುಖಮಧ್ಯವರ್ತಿಯಾದ ನಾಲಗೆಯಿಂದ ಮಾತನಾಡುತ್ತೇವೆ. |
| **ಪ್ರಥಮಯಾ ಗಾಯತ್ರಿಯಾ ಪರಿಲಿಖತಿ** | **'ಪರಿ ವಾಜಪತಿಃ'** ಎಂಬುದಾಗಿ ಮೊದಲು ಪಠಿತವಾಗಿರುವ ಗಾಯತ್ರೀಛಂದಸ್ಸಿನ ಋಕ್ಕಿನಿಂದ ಮೊದಲನೆಯದಾಗಿ ಪರಿಲೇಖನ ಮಾಡಬೇಕು. |
| **ಅಥ ಅನುಷ್ಟುಭಾ** ಪರಿಲಿಖತಿ | ಅನಂತರ 'ಪರಿ ತ್ವಾಗ್ನೇ'ಎಂಬ ಅನುಷ್ಟುಪ್ ಛಂದಸ್ಸಿನ ಋಕ್ಕಿನಿಂದ ಪರಿಲೇಖನವನ್ನು ಮಾಡಬೇಕು. |

–ऽಥ ತ್ರಿಷ್ಟುಭಾ ತೇಜೋ ವೈ ಗಾಯತ್ರೀ ಯಜ್ಞೋಽನುಷ್ಟುಗಿಂದ್ರಿಯಂ ತ್ರಿಷ್ಟುಪ್ತೇ

ಜಸಾ ಚೈವೇಂದ್ರಿಯೇಣ ಚೋಭಯತೋ ಯಜ್ಞಂ ಪರಿ ಗೃಹ್ಣಾತಿ ॥ ೧೫–3 ॥

[ಅಂಧೋಽಧ್ವರ್ಯುರ್ಮಹಾನ್ಭವತಿ ಯ ಏವಗ್ಂ ಹಂತಿ ತ್ರಿಷ್ಟುಭಾ ತೇಜೋ ವೈ ಗಾಯತ್ರೀ ತ್ರಯೋದಶ ಚ ॥]

---

ಅಥ । ತ್ರಿಷ್ಟುಭಾ । ತೇಜಃ । ವೈ । ಗಾಯತ್ರೀ । ಯಜ್ಞಃ । ಅನುಷ್ಟುಗಿತ್ಯನು–ಸ್ತುಕ್ । ಇಂದ್ರಿಯಮ್ । ತ್ರಿಷ್ಟುಪ್ ।

ತೇಜಸಾ । ಚ । ಏವ । ಇಂದ್ರಿಯೇಣ । ಚ । ಉಭಯತಃ । ಯಜ್ಞಮ್ । ಪರೀತಿ । ಗೃಹ್ಣಾತಿ ॥ ೧೫–೩ ॥

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಅಥ ತ್ರಿಷ್ಟುಭಾ** ಪರಿಲಿಖತಿ | ಬಳಿಕ **'ತ್ವಮಗ್ನೇ ದ್ಯುಭಿಃ'** ಎಂಬ ತ್ರಿಷ್ಟುಪ್ ಛಂದಸ್ಸಿನ ಮಂತ್ರದಿಂದ ಪರಿಲೇಖನವನ್ನು ಮಾಡಬೇಕು. |
| **ಗಾಯತ್ರೀ ತೇಜಃ ವೈ** | ಗಾಯತ್ರಿಯು ತೇಜಃಸ್ವರೂಪವಾಗಿದೆ. |
| **ಅನುಷ್ಟುಕ್ ಯಜ್ಞಃ** | ಅನುಷ್ಟುಪ್‌ಛಂದಸ್ಸು ಯಜ್ಞಸ್ವರೂಪವಾಗಿದೆ. |
| **ತ್ರಿಷ್ಟುಪ್ ಇಂದ್ರಿಯಮ್** | ತ್ರಿಷ್ಟುಪ್‌ಛಂದಸ್ಸು ಇಂದ್ರಿಯಸಾಮರ್ಥ್ಯರೂಪವಾಗಿದೆ. |
| **ತೇಜಸಾ ಚ ಏವ ಇಂದ್ರಿಯೇಣ ಚ** | (ಅಧ್ವರ್ಯುವು ಹೀಗೆ ಗಾಯತ್ರೀ–ಅನುಷ್ಟುಪ್–ತ್ರಿಷ್ಟುಪ್‌ಗಳಿಂದ ಪರಿಲೇಖನ ಮಾಡುವುದರಿಂದ) ತೇಜಸ್ಸಿನಿಂದಲೂ, ಇಂದ್ರಿಯಶಕ್ತಿಯಿಂದಲೂ |
| **ಉಭಯತಃ ಯಜ್ಞಮ್ ಪರಿಗೃಹ್ಣಾತಿ** | ಆದಿಯಲ್ಲಿಯೂ, ಅಂತ್ಯದಲ್ಲಿಯೂ ಯಜ್ಞವನ್ನು ಪರಿಗ್ರಹಿಸಿದವನಾಗುತ್ತಾನೆ. |

---

ಪರಿಲೇಖನದಲ್ಲಿ ಶ್ರುತಿಯಲ್ಲಿ ಮೊದಲು ಗಾಯತ್ರೀ–ತ್ರಿಷ್ಟುಪ್–ಅನುಷ್ಟುಪ್–ಈ ಕ್ರಮವೂ, ಪುನಃ ಗಾಯತ್ರೀ–ಅನುಷ್ಟುಪ್–ತ್ರಿಷ್ಟುಪ್– ಈ ಕ್ರಮವೂ ಪಾಠದಲ್ಲಿರುವಂತೆ ಹೇಳಿದೆ. ಇವುಗಳ ಪ್ರಶಂಸೆಯೂ ಇದೆ.

## ॥ ಚತುರ್ಥೋಽನುವಾಕಃ ॥

ದೇವಸ್ಯ ತ್ವಾ ಸವಿತುಃ ಪ್ರಸವ ಇತಿ ಖನತಿ ಪ್ರಸೂತ್ಯಾ ಅಥೋ

---

ದೇವಸ್ಯ । ತ್ವಾ । ಸವಿತುಃ । ಪ್ರಸವ ಇತಿ ಪ್ರ-ಸವೇ । ಇತಿ । ಖನತಿ । ಪ್ರಸೂತ್ಯಾ ಇತಿ ಪ್ರ-ಸೂತ್ಯೈ । ಅಥೋ ಇತಿ ।

---

ಮೂರನೆಯ ಅನುವಾಕದಲ್ಲಿ ಅಶ್ವಾಕ್ರಮಣಾದಿಗಳು ಹೇಳಲ್ಪಟ್ಟವು. ಈ ನಾಲ್ಕನೆಯ ಅನುವಾಕದಲ್ಲಿ ಖನನಾದಿಗಳು ಹೇಳಲ್ಪಡುತ್ತವೆ.

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ಖನನವಿಧಿ; ಅರ್ಥವಾದ** |
| ***ಸವಿತುಃ ದೇವಸ್ಯ ಪ್ರಸವೇ** ಸತಿ **ತ್ವಾ** | ಪ್ರೇರಕನಾದ ಪರಮಾತ್ಮನ ಅನುಜ್ಞೆಯಾಗಲಾಗಿ |
| ಅಶ್ವಿನೋಃ ಬಾಹುಭ್ಯಾಮ್ | ಅಶ್ವಿನೀದೇವತೆಗಳ ತೋಳುಗಳಿಂದಲೂ |
| ಪೂಷ್ಣಃ ಹಸ್ತಾಭ್ಯಾಮ್ | ಪೋಷಕನಾದ ಪೂಷದೇವನ ಕೈಗಳಿಂದಲೂ |
| ಪೃಥಿವ್ಯಾಃ ಸಧಸ್ಥೇ ಪುರೀಷ್ಯಂ ಅಗ್ನಿಮ್ | ಭೂಮಿಯ ಮೇಲ್ಭಾಗದಲ್ಲಿ |
| ಅಂಗಿರಸ್ವತ್ ಖನಾಮಿ | ಪಾಂಸುಯೋಗ್ಯನಾದ ಅಗ್ನಿಯಾದ ನಿನ್ನನ್ನು ಅಂಗಿರಸರಂತೆ ಅಗೆಯುತ್ತೇನೆ |
| **ಇತಿ ಖನತಿ** | ಎಂಬ ಮಂತ್ರದಿಂದ ಖನನವನ್ನು ಮಾಡಬೇಕು. |
| **ಪ್ರಸೂತ್ಯೈ** | ಇದು ಸವಿತೃದೇವನ ಅನುಮತಿಗೆ ಕಾರಣವಾಗುತ್ತದೆ. |
| **ಅಥೋ** | ಮತ್ತೆ |

---

* ಶ್ರುತಿಯ ಬ್ರಾಹ್ಮಣಭಾಗದಲ್ಲಿ ಪ್ರತೀಕ(ಮಂತ್ರದ ಒಂದು ಭಾಗ)ವನ್ನು ನಿರ್ದೇಶಿಸಿರುವುದುಂಟು. ಪೂರ್ಣಮಂತ್ರದ ಪಾಠವೂ ಇರುತ್ತದೆ. ಇಲ್ಲಿಯ ಪೂರ್ಣಮಂತ್ರವು ನಾಲ್ಕನೆಯ ಕಾಂಡದಲ್ಲಿದೆ.

ಧೂಮಮೇವೈತೇನ ಜನಯತಿ ಜ್ಯೋತಿಷ್ಮಂತಂ ತ್ವಾಽಗ್ನೇ ಸುಪ್ರತೀಕಮಿತ್ಯಾಹ ಜ್ಯೋತಿರೇವೈತೇನ ಜನಯತಿ ಸೋಽಗ್ನಿರ್ಜಾತಃ ಪ್ರಜಾಶ್ಶುಚಾಽರ್ಪಯತ್ತಂ ದೇವಾ ಅರ್ಧರ್ಚೇನಾಶಮಯಞ್ಛಿವಂ ಪ್ರಜಾಭ್ಯೋಽಹಿಂಸಂತಮಿತ್ಯಾಹ

---

ಧೂಮಮ್। ಏವ। ಏತೇನ। ಜನಯತಿ। ಜ್ಯೋತಿಷ್ಮಂತಮ್। ತ್ವಾ। ಅಗ್ನೇ। ಸುಪ್ರತೀಕಮಿತಿ ಸು–ಪ್ರತೀಕಮ್। ಇತಿ। ಆಹ। ಜ್ಯೋತಿಃ। ಏವ। ಏತೇನ। ಜನಯತಿ। ಸಃ। ಅಗ್ನಿಃ। ಜಾತಃ। ಪ್ರಜಾ ಇತಿ ಪ್ರ–ಜಾಃ। ಶುಚಾ। ಆರ್ಪಯತ್। ತಮ್। ದೇವಾಃ। ಅರ್ಧರ್ಚೇನೇತ್ಯರ್ಧ–ಋಚೇನ। ಅಶಮಯನ್ನ್। ಶಿವಮ್। ಪ್ರಜಾಭ್ಯ ಇತಿ ಪ್ರ–ಜಾಭ್ಯಃ। ಅಹಿಂಸಂತಮ್। ಇತಿ। ಆಹ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಏತೇನ ಧೂಮಮ್ ಏವ ಜನಯತಿ | ಈ ಮಂತ್ರದಿಂದ ಹೊಗೆಯನ್ನೇ ಉತ್ಪತ್ತಿ ಮಾಡಿದವನಾಗುತ್ತಾನೆ. |
| ಜ್ಯೋತಿಷ್ಮಂತಮ್ ತ್ವಾ ಅಗ್ನೇ ಸುಪ್ರತೀಕಮ್ ಇತಿ ಆಹ | 'ಹೇ! ಅಗ್ನಿಯೇ! ಸುಮುಖನೂ ಜ್ಯೋತಿಷ್ಮಂತನೂ ಆಗಿರುವ ನಿನ್ನನ್ನು ಪಡೆಯುವುದಕ್ಕಾಗಿ ಆಗೆಯುತ್ತೇನೆ' –ಹೀಗೆ ಎರಡನೆಯ ಮಂತ್ರವು ಹೇಳುತ್ತದೆ. |
| ಏತೇನ ಜ್ಯೋತಿಃ ಏವ ಜನಯತಿ | ಇದರಿಂದ ಅಧ್ವರ್ಯುವು ಜ್ಯೋತಿಯನ್ನೇ ಉತ್ಪತ್ತಿ ಮಾಡಿದವನಾಗುತ್ತಾನೆ. |

ಎರಡನೆಯ ಮಂತ್ರದ 'ಶಿವಂ ಪ್ರಜಾಭ್ಯಃ' ಎಂಬುದರ ವಿವರಣೆ/ಅರ್ಥವಾದ

| | |
|---|---|
| ಜಾತಃ ಸಃ ಅಗ್ನಿಃ ಪ್ರಜಾಃ ಶುಚಾ ಆರ್ಪಯತ್ | ಆ ಅಗ್ನಿಯು ಜನಿಸಿದೊಡನೆಯೇ ಪ್ರಜೆಗಳನ್ನು ತಾಪಕ್ಕೆ ಗುರಿ ಮಾಡಿದನು. |
| ದೇವಾಃ ತಮ್ ಅರ್ಧರ್ಚೇನ ಅಶಮಯನ್ | ದೇವತೆಗಳು ಆ ಅಗ್ನಿಯನ್ನು **'ಶಿವಂ ಪ್ರಜಾಭ್ಯಃ ಅಹಿಂಸಂತಮ್'** ಎಂಬ ಋಕ್ಕಿನ ಅರ್ಧಭಾಗದಿಂದ ಶಾಂತಗೊಳಿಸಿದರು. |
| ಶಿವಮ್ ಪ್ರಜಾಭ್ಯಃ ಅಹಿಂಸಂತಮ್ ಇತಿ ಆಹ | ಈ ಮಂತ್ರಭಾಗವು ಪ್ರಜೆಗಳನ್ನು ಹಿಂಸಿಸದಿರುವ ಅಗ್ನಿಯನ್ನು ಪಡೆಯಲು ಅಗ್ನಿಯನ್ನು ಶಾಂತಗೊಳಿಸುತ್ತದೆ. |

ಪ್ರಜಾಭ್ಯ ಏವೈನಗ್ಂ ಶಮಯತಿ ದ್ವಾಭ್ಯಾಂ ಖನತಿ ಪ್ರತಿಷ್ಠಿತ್ಯಾ ಅಪಾಂ ಪೃಷ್ಠಮಸೀತಿ ಪುಷ್ಕರಪರ್ಣಮಾ[(೧೬)ಹರತ್ಯಪಾಂ]ಹರತ್ಯಪಾಂ ವಾ ಏತತ್ಪೃಷ್ಠಂ ಯತ್ಪುಷ್ಕರಪರ್ಣಗ್ಂ ರೂಪೇಣೈವೈನದಾಹರತಿ ಪುಷ್ಕರಪರ್ಣೇನ ಸಂಭರತಿ

---

ಪ್ರಜಾಭ್ಯ ಇತಿ ಪ್ರ-ಜಾಭ್ಯಃ । ಏವ । ಏನಮ್ । ಶಮಯತಿ । ದ್ವಾಭ್ಯಾಮ್ । ಖನತಿ । ಪ್ರತಿಷ್ಠಿತ್ಯಾ ಇತಿ ಪ್ರತಿ-ಸ್ಥಿತ್ಯೈ । ಅಪಾಮ್ । ಪೃಷ್ಠಮ್ । ಅಸಿ । ಇತಿ । ಪುಷ್ಕರಪರ್ಣಮಿತಿ ಪುಷ್ಕರ-ಪರ್ಣಮ್ । ಏತಿ । (೧೬) । ಹರತಿ । ಅಪಾಮ್ । ವೈ । ಏತತ್ । ಪೃಷ್ಠಮ್ । ಯತ್ । ಪುಷ್ಕರಪರ್ಣಮಿತಿ ಪುಷ್ಕರ-ಪರ್ಣಮ್ । ರೂಪೇಣ । ಏವ । ಏನತ್ । ಏತಿ । ಹರತಿ । ಪುಷ್ಕರಪರ್ಣೇನೇತಿ ಪುಷ್ಕರ-ಪರ್ಣೇನ । ಸಮಿತಿ । ಭರತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಪ್ರಜಾಭ್ಯಃ ಏವ ಏನಮ್ ಶಮಯತಿ** | ಅಧ್ವರ್ಯುವು ಇದರಿಂದ ಅಗ್ನಿಯು ಪ್ರಜೆಗಳನ್ನು ಹಿಂಸಿಸದಿರುವಂತೆ ಶಾಂತಗೊಳಿಸುತ್ತಾನೆ. |
| **ದ್ವಾಭ್ಯಾಮ್ ಖನತಿ ಪ್ರತಿಷ್ಠಿತ್ಯೈ** | ಹೀಗೆ ಎರಡು ಮಂತ್ರಗಳಿಂಡ ಖನನ ಮಾಡುವುದು ಯಜಮಾನನ ಪ್ರತಿಷ್ಠೆಗೆ ಕಾರಣವಾಗುತ್ತದೆ. |

### ತಾವರೆ ಎಲೆಯ ಆಹರಣ-ಅರ್ಥವಾದ

| | |
|---|---|
| **ಅಪಾಮ್ ಪೃಷ್ಠಮ್ ಅಸಿ ಇತಿ ಪುಷ್ಕರಪರ್ಣಮ್ ಆಹರತಿ** | 'ಎಲೈ! ಪದ್ಮಪತ್ರವೇ! ನೀರಿನ ಬೆನ್ನಿನಂತೆ ಮೇಲ್ಭಾಗದಲ್ಲಿರುವೆ.' ಎಂಬ ಮಂತ್ರದಿಂದ ಪದ್ಮಪತ್ರವನ್ನು ತರಬೇಕು. |
| **ಯತ್ ಪುಷ್ಕರಪರ್ಣಮ್ ಅಪಾಮ್ ಏತತ್ ಪೃಷ್ಠಮ್ ವೈ** | ಪುಷ್ಕರಪರ್ಣವೆಂಬುದು ನೀರಿನ ಮೇಲುಭಾಗದಲ್ಲಿರುವುದರಿಂದ ನೀರಿನ ಬೆನ್ನಿನಂತೆ ಇದೆಯಷ್ಟೆ. |
| **ರೂಪೇಣ ಏವ ಏನತ್ ಆಹರತಿ** | (ನೀರಿನ ಮೇಲೆ ಇದೆಯೆಂಬ ವಾಸ್ತವವನ್ನು ಮಂತ್ರವು ಹೇಳುವುದರಿಂದ) ಅನುರೂಪವಾದ ಮಂತ್ರದಿಂದಲೇ ಪದ್ಮಪತ್ರವನ್ನು ತಂದವನಾಗುತ್ತಾನೆ. |
| **ಪುಷ್ಕರಪರ್ಣೇನ ಸಂ ಭರತಿ** | ಪುಷ್ಕರಪರ್ಣದಿಂದ ದೊನ್ನೆಯನ್ನು ಮಾಡಿ ಮಣ್ಣನ್ನು ಸಂಗ್ರಹಿಸಬೇಕು. |

ಯೋನಿರ್ವಾ ಅಗ್ನೇಃ ಪುಷ್ಕರಪರ್ಣಗ್ಂ ಸಯೋನಿಮೇವಾಗ್ನಿಗ್ಂ ಸಂಭರತಿ

ಕೃಷ್ಣಾಜಿನೇನ ಸಂಭರತಿ ಯಜ್ಞೋ ವೈ ಕೃಷ್ಣಾಜಿನಂ ಯಜ್ಞೇನೈವ ಯಜ್ಞಗ್ಂ

ಸಂಭರತಿ ಯದ್ಗ್ರಾಮ್ಯಾಣಾಂ ಪಶೂನಾಂ ಚರ್ಮಣಾ ಸಂಭರೇ-

---

ಯೋನಿಃ । ವೈ । ಅಗ್ನೇಃ । ಪುಷ್ಕರಪರ್ಣಮಿತಿ ಪುಷ್ಕರ-ಪರ್ಣಮ್ । ಸಯೋನಿಮಿತಿ ಸ-ಯೋನಿಮ್ । ಏವ । ಅಗ್ನಿಮ್ । ಸಮಿತಿ । ಭರತಿ । ಕೃಷ್ಣಾಜಿನೇನೇತಿ ಕೃಷ್ಣ-ಅಜಿನೇನ । ಸಮಿತಿ । ಭರತಿ । ಯಜ್ಞಃ । ವೈ । ಕೃಷ್ಣಾಜಿನಮಿತಿ ಕೃಷ್ಣ-ಅಜಿನಮ್ । ಯಜ್ಞೇನ । ಏವ । ಯಜ್ಞಮ್ । ಸಮಿತಿ । ಭರತಿ । ಯತ್ । ಗ್ರಾಮ್ಯಾಣಾಮ್ । ಪಶೂನಾಮ್ । ಚರ್ಮಣಾ । ಸಂಭರೇದಿತಿ ಸಮ್-ಭರೇತ್ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಪುಷ್ಕರಪರ್ಣಮ್ ಅಗ್ನೇಃ ಯೋನಿಃ ವೈ<br>ಸಯೋನಿಮ್ ಏವ ಅಗ್ನಿಮ್ ಸಂ ಭರತಿ | ಪುಷ್ಕರಪರ್ಣವು ಅಗ್ನಿಯ *ಸ್ಥಾನವಾಗಿದೆ. ಸ್ವಸ್ಥಾನದಿಂದಲೇ ಅಗ್ನಿಯನ್ನು ಸಂಗ್ರಹಿಸಿದಂತೆ ಆಗುತ್ತದೆ. |

**ಕೃಷ್ಣಾಜಿನದಿಂದ ಮೃತ್ತಿಕಾಸಂಗ್ರಹಣವಿಧಿ; ಅರ್ಥವಾದ**

| | |
|---|---|
| ಕೃಷ್ಣಾಜಿನೇನ ಸಂಭರತಿ | ಜಿಂಕೆಯ ಚರ್ಮದಿಂದ ಮಣ್ಣನ್ನು ಸಂಗ್ರಹಿಸಬೇಕು. |
| ಯಜ್ಞಃ ವೈ ಕೃಷ್ಣಾಜಿನಮ್ | ಕೃಷ್ಣಾಜಿನವು ಯಜ್ಞಸ್ವರೂಪವಾಗಿದೆ.*1 |
| ಯಜ್ಞೇನ ಏವ ಯಜ್ಞಮ್ ಸಂ ಭರತಿ | ಯಜ್ಞದಿಂದಲೇ ಯಜ್ಞರೂಪವಾದ ಮಣ್ಣನ್ನು ಸಂಗ್ರಹಿಸಿದಂತೆ ಆಗುತ್ತದೆ. |
| ಗ್ರಾಮ್ಯಾಣಾಮ್ ಪಶೂನಾಮ್<br>ಚರ್ಮಣಾ ಯತ್ ಸಂಭರೇತ್ | ಅಧ್ವರ್ಯುವು ಗ್ರಾಮ್ಯಗಳಾದ ಗವಾದಿಪಶುಗಳ ಚರ್ಮದಿಂದ ಮೃತ್ತಿಕೆಯನ್ನು ಸಂಗ್ರಹಿಸಿದರೆ |

---

* ಈ ವಿಷಯವು ಆರುಣಕೇತುಕಚಯನದಲ್ಲಿ 'ಜಾನುದಘ್ನೀಮುತ್ತರವೇದೀಂ ಖಾತ್ವಾ । ಅಪಾಂ ಪೂರಯಿತ್ವಾ ಗುಲ್ಫದಘ್ನಮ್ । ಪುಷ್ಕರಪರ್ಣೈಃ ಪುಷ್ಕರದಂಡೈಃ ಪುಷ್ಕರೈಶ್ಚ ಸಗ್ಗ್‌ಂಸ್ತೀರ್ಯ । ತಸ್ಮಿನ್ವಿಹಾಯಸೇ । ಅಗ್ನಿಂ ಪ್ರಣೀಯೋಪಸಮಾಧಾಯ' ಎಂಬುದಾಗಿ ಶ್ರುತಿಯಲ್ಲಿ ತಿಳಿಸಲ್ಪಟ್ಟಿದೆ.

*1 ದರ್ಶಪೂರ್ಣಮಾಸಪ್ರಕರಣದಲ್ಲಿ 'ಯಜ್ಞೋ ದೇವೇಭ್ಯೋ ನಿಲಾಯತ । ಕೃಷ್ಣೋ ರೂಪಂ ಕೃತ್ವಾ' ಎಂದಿದೆ.

-ದ್ಗ್ರಾಮ್ಯಾನ್ಪಶೂಞ್ಛುಚಾऽರ್ಪಯೇತ್ಕೃಷ್ಣಾಜಿನೇನ ಸಂಭರತ್ಯಾರಣ್ಯಾನೇವ

ಪಶೂ[ಪಶೂನ್(೧೭)ಶುಚಾऽರ್ಪಯತಿ]ಞ್ಛುಚಾऽರ್ಪಯತಿ

ತಸ್ಮಾತ್ಸಮಾವತ್ಪಶೂನಾಂ ಪ್ರಜಾಯಮಾನಾನಾಮಾರಣ್ಯಾಃ ಪಶವಃ

ಕನೀಯಾಗ್ಂಸಶ್ಶುಚಾ ಹ್ಯೃತಾ ಲೋಮತಸ್ಸಂಭರತ್ಯ-

---

ಗ್ರಾಮ್ಯಾನ್ । ಪಶೂನ್ । ಶುಚಾ । ಅರ್ಪಯೇತ್ । ಕೃಷ್ಣಾಜಿನೇನೇತಿ ಕೃಷ್ಣ-ಅಜಿನೇನ । ಸಮಿತಿ । ಭರತಿ । ಆರಣ್ಯಾನ್ । ಏವ । ಪಶೂನ್ । (೧೭) । ಶುಚಾ । ಅರ್ಪಯತಿ । ತಸ್ಮಾತ್ । ಸಮಾವತ್ । ಪಶೂನಾಮ್ । ಪ್ರಜಾಯಮಾನಾನಾಮಿತಿ ಪ್ರ-ಜಾಯಮಾನಾನಾಮ್ । ಆರಣ್ಯಾಃ । ಪಶವಃ । ಕನೀಯಾಗ್ಂಸಃ । ಶುಚಾ । ಹಿ । ಋತಾಃ । ಲೋಮತಃ । ಸಮಿತಿ । ಭರತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಗ್ರಾಮ್ಯಾನ್ ಪಶೂನ್ ಶುಚಾ ಅರ್ಪಯೇತ್** | ಗ್ರಾಮ್ಯಪಶುಗಳನ್ನು ದುಃಖದಿಂದ ಪೀಡಿತವಾದವುಗಳನ್ನಾಗಿ ಮಾಡುವನು. |
| **ಕೃಷ್ಣಾಜಿನೇನ ಸಂಭರತಿ** | (ಆದುದರಿಂದ) ಕೃಷ್ಣಾಜಿನದಲ್ಲಿ ಸಂಗ್ರಹಿಸಬೇಕು. |
| **ಆರಣ್ಯಾನ್ ಪಶೂನ್ ಏವ ಶುಚಾ ಅರ್ಪಯತಿ** | ಆರಣ್ಯದ ಪ್ರಾಣಿಗಳನ್ನೇ ದುಃಖಪೀಡಿತಗಳನ್ನಾಗಿ ಮಾಡುತ್ತಾನೆ. |
| **ತಸ್ಮಾತ್ ಸಮಾವತ್ ಪ್ರಜಾಯಮಾನಾನಾಮ್ ಪಶೂನಾಮ್** | ಆದುದರಿಂದ ಸಮಾನವಾಗಿ ಜನಿಸುವ ಪಶುಗಳ ಪೈಕಿ |
| **ಆರಣ್ಯಾಃ ಪಶವಃ** | ಆರಣ್ಯಪಶುಗಳು ಕನಿಷ್ಠವಾದವುಗಳು. |
| **ಕನೀಯಾಗ್ಂಸಃ ಶುಚಾ ಹಿ ಋತಾಃ** | (ಗ್ರಾಮ್ಯಪಶುಗಳಂತೆ) ಪೋಷಣಾದಿಗಳು ಇಲ್ಲದಿರುವುದರಿಂದ ಕಷ್ಟಕ್ಕೆ ಒಳಗಾಗುತ್ತವೆ. |

**ಪುಷ್ಕರಪರ್ಣದ ದೊನ್ನೆಯಿಂದ ಕೃಷ್ಣಾಜಿನದ ಲೋಮಭಾಗದಲ್ಲಿ ಮೃತ್ತಿಕಾಸಂಗ್ರಹಣವಿಧಿ; ಅರ್ಥವಾದ**

| | |
|---|---|
| **ಲೋಮತಃ ಸಂಭರತಿ** | ಅಗೆದ ಮಣ್ಣನ್ನು ಕೃಷ್ಣಾಜಿನದ ಕೂದಲುಳ್ಳ ಭಾಗದಲ್ಲಿ ಸಂಗ್ರಹಿಸಬೇಕು. |

–ತೋ ಹ್ಯಸ್ಯ ಮೇಧ್ಯಂ ಕೃಷ್ಣಾಜಿನಂ ಚ ಪುಷ್ಕರಪರ್ಣಂ ಚ ಸಗ್ಂಸ್ತೃಣಾತೀಯಂ

ವೈ ಕೃಷ್ಣಾಜಿನಮಸೌ ಪುಷ್ಕರಪರ್ಣಮಾಭ್ಯಾಮೇವೈನಮುಭಯತಃ

ಪರಿಗೃಹ್ಣಾತ್ಯಗ್ನಿರ್ದೇವೇಭ್ಯೋ ನಿಲಾಯತ ತಮಥರ್ವಾಽನ್ವಪಶ್ಯ–

---

ಅತಃ । ಹಿ । ಅಸ್ಯ । ಮೇಧ್ಯಮ್ । ಕೃಷ್ಣಾಜಿನಮಿತಿ ಕೃಷ್ಣ–ಅಜಿನಮ್ । ಚ । ಪುಷ್ಕರಪರ್ಣಮಿತಿ ಪುಷ್ಕರ–ಪರ್ಣಮ್ । ಚ । ಸಮಿತಿ । ಸ್ತೃಣಾತಿ । ಇಯಮ್ । ವೈ । ಕೃಷ್ಣಾಜಿನಮಿತಿ ಕೃಷ್ಣ–ಅಜಿನಮ್ । ಅಸೌ । ಪುಷ್ಕರಪರ್ಣಮಿತಿ ಪುಷ್ಕರ–ಪರ್ಣಮ್ । ಆಭ್ಯಾಮ್ । ಏವ । ಏನಮ್ । ಉಭಯತಃ । ಪರೀತಿ । ಗೃಹ್ಣಾತಿ । ಅಗ್ನಿಃ । ದೇವೇಭ್ಯಃ । ನಿಲಾಯತ । ತಮ್ । ಅಥರ್ವಾ । ಅನ್ವಿತಿ । ಅಪಶ್ಯತ್ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಅಸ್ಯ ಅತಃ ಮೇಧ್ಯಮ್ ಹಿ | ಏಕೆಂದರೆ ಈ ಕೃಷ್ಣಾಜಿನದ ಈ ಸ್ಥಾನವು ಪವಿತ್ರವಾದುದಷ್ಟೆ. |
| ಕೃಷ್ಣಾಜಿನಮ್ ಚ ಪುಷ್ಕರಪರ್ಣಮ್ ಚ ಸಗ್ಂಸ್ತೃಣಾತಿ | ಕೃಷ್ಣಾಜಿನವನ್ನೂ ಅದರ ಮೇಲೆ ತಾವರೆ ಎಲೆಯನ್ನೂ ಚೆನ್ನಾಗಿ ಹಾಸಬೇಕು. |
| ಇಯಮ್ ವೈ ಕೃಷ್ಣಾಜಿನಮ್ | ಈ ಭೂಮಿಯೇ ಕೃಷ್ಣಾಜಿನವು. |
| ಅಸೌ ಪುಷ್ಕರಪರ್ಣಮ್ | ಈ ದ್ಯುಲೋಕವು ತಾವರೆ ಎಲೆಯಾಗಿದೆ. |
| ಏನಮ್ ಆಭ್ಯಾಮ್ ಉಭಯತಃ ಏವ ಪರಿ ಗೃಹ್ಣಾತಿ | ಈ ಯಜ್ಞವನ್ನು ಈ ಎರಡು ಲೋಕಗಳಿಂದ ಊರ್ಧ್ವ–ಅಧೋಭಾಗಗಳಲ್ಲಿ ಸಂಗ್ರಹಿಸಿದಂತೆ ಆಗುತ್ತದೆ. |

'ಅಥರ್ವಾ ತ್ವಾ...' ಎಂಬ ಮಂತ್ರದ ಅರ್ಥವಿವರಣೆ– ಅರ್ಥವಾದ

| | |
|---|---|
| ಅಗ್ನಿಃ ದೇವೇಭ್ಯಃ ನಿಲಾಯತ | ಒಂದು ಸಮಯದಲ್ಲಿ ಅಗ್ನಿಯು ದೇವತೆಗಳಿಂದ ದೂರವಾದನು. |
| ಅಥರ್ವಾ ತಮ್ ಅನು ಅಪಶ್ಯತ್ | ಅಥರ್ವಮುನಿಯು ಆ ಅಗ್ನಿಯನ್ನು ಹುಡುಕಿ ಪಡೆದುಕೊಂಡನು. |

–ದಥರ್ವಾ ತ್ವಾ ಪ್ರಥಮೋ ನಿರಮಂಥದಗ್ನ ಇತ್ಯಾ[ಇತಿ(೧೮)ಆಹ]ಹ ಯ ಏವೈನಮನ್ವಪಶ್ಯತ್ತೇನೈವೈನಗ್‌ಂ ಸಂಭರತಿ ತ್ವಾಮಗ್ನೇ ಪುಷ್ಕರಾದಧೀತ್ಯಾಹ ಪುಷ್ಕರಪರ್ಣೇ ಹ್ಯೇನಮುಪಶ್ರಿತಮವಿಂದ–

---

ಅಥರ್ವಾ । ತ್ವಾ । ಪ್ರಥಮಃ । ನಿರಿತಿ । ಅಮಂಥತ್ । ಅಗ್ನೇ । ಇತಿ । (೧೮) । ಆಹ । ಯಃ । ಏವ । ಏನಮ್ । ಅನ್ವಪಶ್ಯದಿತ್ಯನು–ಅಪಶ್ಯತ್ । ತೇನ । ಏವ । ಏನಮ್ । ಸಮಿತಿ । ಭರತಿ । ತ್ವಾಮ್ । ಅಗ್ನೇ । ಪುಷ್ಕರಾತ್ । ಅಧೀತಿ । ಇತಿ । ಆಹ । ಪುಷ್ಕರಪರ್ಣ ಇತಿ ಪುಷ್ಕರ–ಪರ್ಣೇ । ಹಿ । ಏನಮ್ । ಉಪಶ್ರಿತಮಿತ್ಯುಪ–ಶ್ರಿತಮ್ । ಅವಿಂದತ್ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **'ಅಥರ್ವಾ...' ಎಂಬ ಮಂತ್ರಭಾಗದ ವಿವರಣೆ** | |
| **ಅಥರ್ವಾ ತ್ವಾ ಪ್ರಥಮಃ ನಿರಮಂಥತ್ ಅಗ್ನೇ ಇತಿ ಆಹ** | 'ಹೇ! ಅಗ್ನಿಯೇ! ಅಥರ್ವಮುನಿಯು ನಿನ್ನನ್ನು ಮೊದಲು ಮಥನ ಮಾಡಿ ಪಡೆದನು' ಎಂದು ಈ ಮಂತ್ರಭಾಗವು ಹೇಳುತ್ತದೆ. (ಈ ಮಂತ್ರವು 'ಪುರೀಷ್ಯೋಽಸಿ' ಎಂದು ಆರಂಭಗೊಳ್ಳುತ್ತದೆ. ಮೃತ್ಖನನಪ್ರದೇಶದ ಅಭಿಮಂತ್ರಣದಲ್ಲಿ ವಿನಿಯುಕ್ತ.) |
| **ಯಃ ಏವ ಏನಮ್ ಅನ್ವಪಶ್ಯತ್** | ಯಾವ ಅಥರ್ವಮುನಿಯು ಈ ಪುರೀಷ್ಯಾಗ್ನಿಯನ್ನು ಪಡೆದನೋ |
| **ತೇನ ಏವ ಏನಮ್ ಸಂ ಭರತಿ** | ಅವನಿಂದಲೇ ಪುರೀಷ್ಯಾಗ್ನಿಯನ್ನು ಅಧ್ವರ್ಯುವು ಕೃಷ್ಣಾಜಿನದಲ್ಲಿ ಹಾಸಿರುವ ತಾವರೆ ಎಲೆಯಲ್ಲಿ ಸಂಗ್ರಹಿಸಿದವನಾಗುತ್ತಾನೆ. |
| **'ತ್ವಾಮಗ್ನೇ...' ಎಂಬುದರ ವಿವರಣೆ** | |
| **ಅಗ್ನೇ ತ್ವಾಮ್ ಪುಷ್ಕರಾತ್ ಅಧಿ ಇತಿ ಆಹ** | 'ಅಗ್ನಿಯೇ! ಪುಷ್ಕರಪತ್ರದ ಮೇಲಿರುವ ನಿನ್ನನ್ನು ಅಥರ್ವಮುನಿಯು ಮಂಥನದಿಂದ ಪಡೆದನು' ಮೊದಲಾಗಿ ಈ ಮಂತ್ರವು ಹೇಳುತ್ತದೆ. |
| **ಪುಷ್ಕರಪರ್ಣೇ ಉಪಶ್ರಿತಮ್ ಏನಮ್ ಅವಿಂದತ್ ಹಿ** | ಪುಷ್ಕರಪರ್ಣದಲ್ಲಿ ಆಶ್ರಿತನಾದ ಈ ಅಗ್ನಿಯನ್ನು ಅಥರ್ವಮುನಿಯು ಪಡೆದನಷ್ಟೆ. |

–ತ್ತಮು ತ್ವಾ ದಧ್ಯಙ್ಙೃಷಿರಿತ್ಯಾಹ ದಧ್ಯಙ್, ವಾ

ಆಥರ್ವಣಸ್ತೇಜಸ್ವ್ಯಾಸೀತ್ತೇಜ ಏವಾಸ್ಮಿನ್ದಧಾತಿ ತಮು ತ್ವಾ ಪಾಥ್ಯೋ

ವೃಷೇತ್ಯಾಹ ಪೂರ್ವಮೇವೋದಿತಮುತ್ತರೇಣಾಭಿ ಗೃಣಾತಿ

---

ತಮ್ । ಉ । ತ್ವಾ । ದಧ್ಯಙ್ । ಋಷಿಃ । ಇತಿ । ಆಹ । ದಧ್ಯಙ್ । ವೈ । ಆಥರ್ವಣಃ । ತೇಜಸ್ವೀ । ಆಸೀತ್ । ತೇಜಃ । ಏವ । ಅಸ್ಮಿನ್ । ದಧಾತಿ । ತಮ್ । ಉ । ತ್ವಾ । ಪಾಥ್ಯಃ । ವೃಷಾ । ಇತಿ । ಆಹ । ಪೂರ್ವಮ್ । ಏವ । ಉದಿತಮ್ । ಉತ್ತರೇಣೇತ್ಯುತ್–ತರೇಣ । ಅಭೀತಿ । ಗೃಣಾತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|

**'ತಮು ತ್ವಾ ದಧ್ಯಙ್...ಎಂಬ ಮಂತ್ರಭಾಗದ ವಿವರಣೆ**

| | |
|---|---|
| **'ತಮು ತ್ವಾ ದಧ್ಯಙ್ ಋಷಿಃ ಇತಿ ಆಹ** [ಪುತ್ರಃ ಈಧೇ ಅಥರ್ವಣಃ] | 'ಅಗ್ನಿಯೇ! ನಿನ್ನನ್ನು ಅಥರ್ವಮಹರ್ಷಿಯ ಮಗನಾದ ದಧ್ಯಂಚನು ಪ್ರಜ್ವಲಿಸುವಂತೆ ಮಾಡಿದನು' ಎಂದು ಈ ಮಂತ್ರಭಾಗವು ಹೇಳುತ್ತದೆ. |
| **ಆಥರ್ವಣಃ ದಧ್ಯಙ್ ವೈ ತೇಜಸ್ವೀ ಆಸೀತ್** | ಅಥರ್ವಪುತ್ರನಾದ ದಧ್ಯಂಚನು ತೇಜಸ್ವಿಯಾಗಿದ್ದನಷ್ಟೆ. |
| **ಅಸ್ಮಿನ್ ತೇಜಃ ಏವ ದಧಾತಿ** | ಅಧ್ವರ್ಯುವು ಈ ಮಂತ್ರಪಾಠದಿಂದ ಯಜಮಾನನಲ್ಲಿ ತೇಜಸ್ಸು ಇರುವಂತೆ ಮಾಡುತ್ತಾನೆ. |

**'ತಮು ತ್ವಾ ಪಾಥ್ಯಃ'...ಎಂಬ ಮಂತ್ರದ ವಿವರಣೆ**

| | |
|---|---|
| **ತಮ್ ಉ ತ್ವಾ ಪಾಥ್ಯಃ ವೃಷಾ ಇತಿ ಆಹ** | 'ಸನ್ಮಾರ್ಗಪ್ರವೃತ್ತನಾದ, ಶ್ರೇಷ್ಠನಾದ ಪಾಥ್ಯನು ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡಿದನು' ಎಂದು ಈ ಮಂತ್ರವು ಹೇಳುತ್ತದೆ. |
| **ಪೂರ್ವಮ್ ಉದಿತಮ್ ಏವ ಉತ್ತರೇಣ ಅಭಿಗೃಣಾತಿ** | ('ಪಾಥ್ಯ'–'ದಧ್ಯಂಚ' ಎಂಬ ಶಬ್ದಗಳು ಸಮಾನಾರ್ಥಕಗಳು. ಹೀಗಾಗಿ) ಪೂರ್ವಮಂತ್ರದಿಂದ ಉಕ್ತವಾದುದನ್ನೇ ಮುಂದಿನ ಮಂತ್ರದಿಂದಲೂ ಹೇಳಿದಂತಾಗುತ್ತದೆ. |

[(೧೯)ಚತಸೃಭಿಃ]ಚತಸೃಭಿಸ್ಸಂಭರತಿ ಚತ್ವಾರಿ ಛಂದಾಗ್ಂಸಿ ಛಂದೋಭಿರೇವ ಗಾಯತ್ರೀಭಿರ್ಬ್ರಾಹ್ಮಣಸ್ಯ ಗಾಯತ್ರೋ ಹಿ ಬ್ರಾಹ್ಮಣಸ್ತ್ರಿಷ್ಟುಗ್ಭೀ ರಾಜನ್ಯಸ್ಯ

---

(೧೯) । ಚತಸೃಭಿರಿತಿ ಚತಸೃ–ಭಿಃ । ಸಮಿತಿ । ಭರತಿ । ಚತ್ವಾರಿ । ಛಂದಾಗ್ಂಸಿ । ಛಂದೋಭಿರಿತಿ ಛಂದಃ–ಭಿಃ । ಏವ । ಗಾಯತ್ರೀಭಿಃ । ಬ್ರಾಹ್ಮಣಸ್ಯ । ಗಾಯತ್ರಃ । ಹಿ । ಬ್ರಾಹ್ಮಣಃ । ತ್ರಿಷ್ಟುಗ್ಭಿರಿತಿ ತ್ರಿಷ್ಟುಕ್–ಭಿಃ । ರಾಜನ್ಯಸ್ಯ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ಛಂದಸ್ಸುಗಳಿಂದ ಮೃತ್ಸಂಭರಣವಿಧಿ; ಅರ್ಥವಾದ** |
| **ಚತಸೃಭಿಃ ಸಂಭರತಿ** | ನಾಲ್ಕು ಛಂದೋಮಂತ್ರಗಳಿಂದ ಕೃಷ್ಣಾಜಿನದಲ್ಲಿ ಮೃತ್ತನ್ನು ಸಂಗ್ರಹಿಸಬೇಕು.* |
| **ಚತ್ವಾರಿ ಛಂದಾಗ್ಂಸಿ** | ಗಾಯತ್ರೀ, ತ್ರಿಷ್ಟುಪ್, ಜಗತೀ ಮತ್ತು ಅನುಷ್ಟುಪ್– ಎಂದು ಮುಖ್ಯ ಛಂದಸ್ಸುಗಳು ನಾಲ್ಕು. |
| **ಛಂದೋಭಿಃ ಏವ** (ಸಂಭರತಿ) | ಛಂದಸ್ಸುಗಳಿಂದಲೇ ಮೃತ್ತನ್ನು ಸಂಗ್ರಹಿಸಿದಂತಾಗುತ್ತದೆ. |
| | **ಛಂದೋವಿಧಿ; ಕಾಮ್ಯವಿಧಿ; ಪಕ್ಷಾಂತರವಿಧಿ; ಅರ್ಥವಾದ** |
| **ಗಾಯತ್ರೀಭಿಃ ಬ್ರಾಹ್ಮಣಸ್ಯ** | ಯಜಮಾನನು ಬ್ರಾಹ್ಮಣನಾದರೆ ಗಾಯತ್ರೀಛಂದಸ್ಸಿನ ಮಂತ್ರಗಳಿಂದ ಮೃತ್ತಿಕೆಯನ್ನು ಸಂಗ್ರಹಿಸಬೇಕು. |
| **ಬ್ರಾಹ್ಮಣಃ ಗಾಯತ್ರಃ ಹಿ** | ಪ್ರಜಾಪತಿದೇವನ ಮುಖದಿಂದ ಗಾಯತ್ರಿಯೂ, ಬ್ರಾಹ್ಮಣನೂ ಜನಿಸಿರುವುದರಿಂದ ಬ್ರಾಹ್ಮಣನು ಗಾಯತ್ರೀಸಂಬಂಧಿಯಷ್ಟೆ. |
| **ತ್ರಿಷ್ಟುಗ್ಭಿಃ ರಾಜನ್ಯಸ್ಯ** | ಯಜಮಾನನು ಕ್ಷತ್ರಿಯನಾದರೆ ತ್ರಿಷ್ಟುಪ್‌ಛಂದಸ್ಸಿನ ಮಂತ್ರಗಳಿಂದ ಮೃತ್ತನ್ನು ಸಂಗ್ರಹಿಸಬೇಕು. |

---

* ಗಾಯತ್ರೀಛಂದಸ್ಸಿನ ನಾಲ್ಕು ಮಂತ್ರಗಳನ್ನು ಪರಿಗಣಿಸುವಾಗ ಮೃತ್ಖನಪ್ರದೇಶದ ಅಭಿಮಂತ್ರಣದಲ್ಲಿ ವಿನಿಯುಕ್ತವಾಗಿರುವ **'ಪುರೀಷ್ಯೋಽಸಿ'** ಎಂಬ ಮಂತ್ರವನ್ನೂ ಪರಿಗಣಿಸಿ, ಸಂಖ್ಯಾಸಂಪತ್ತಿಯನ್ನು ಪಡೆಯಬೇಕು.

ತ್ರೈಷ್ಟುಭೋ ಹಿ ರಾಜನ್ಯೋ ಯಂ ಕಾಮಯೇತ
ವಸೀಯಾನ್ಥ್ಸ್ಯಾದಿತ್ಯುಭಯೀಭಿಸ್ತಸ್ಯ ಸಂಭರೇತ್ತೇಜಶ್ಚೈವಾಸ್ಮಾ ಇಂದ್ರಿಯಂ
ಚ ಸಮೀಚೀ ದಧಾತ್ಯಷ್ಟಾಭಿಸ್ಸಂ ಭರತ್ಯಷ್ಟಾಕ್ಷರಾ ಗಾಯತ್ರೀ

ತ್ರೈಷ್ಟುಭಃ । ಹಿ । ರಾಜನ್ಯಃ । ಯಮ್ । ಕಾಮಯೇತ । ವಸೀಯಾನ್ । ಸ್ಯಾತ್ । ಇತಿ । ಉಭಯೀಭಿಃ । ತಸ್ಯ । ಸಮಿತಿ । ಭರೇತ್ । ತೇಜಃ । ಚ । ಏವ । ಅಸ್ಮೈ । ಇಂದ್ರಿಯಮ್ । ಚ । ಸಮೀಚೀ ಇತಿ । ದಧಾತಿ । ಅಷ್ಟಾಭಿಃ । ಸಮಿತಿ । ಭರತಿ । ಅಷ್ಟಾಕ್ಷರೇತ್ಯಷ್ಟಾ-ಅಕ್ಷರಾ । ಗಾಯತ್ರೀ ।

| ಬ್ರಾಹ್ಮಣಭಾಗ | ವಿವರಣೆ |
|---|---|
| **ರಾಜನ್ಯಃ ತ್ರೈಷ್ಟುಭಃ ಹಿ** | ಸಮಾನಸ್ಥಾನದಲ್ಲಿ ಹುಟ್ಟಿರುವುದರಿಂದ ರಾಜನ್ಯನೂ ತ್ರಿಷ್ಟುಪ್‌ಸಂಬಂಧಿಯಾಗಿರುತ್ತಾನೆಯಷ್ಟೆ. |
| | **ಕಾಮ್ಯವಿಧಿ** |
| **ವಸೀಯಾನ್ ಸ್ಯಾತ್ ಇತಿ ಯಮ್ ಕಾಮಯೇತ** | ಅಧ್ವರ್ಯುವು ಯಾವ ಯಜಮಾನನನ್ನು ಧನವಂತನಾಗಬೇಕೆಂದು ಬಯಸುವನೋ |
| **ತಸ್ಯ ಉಭಯೀಭಿಃ ಸಂಭರೇತ್** | (ಆ ಯಜಮಾನನ ಚಯನದಲ್ಲಿ) ಗಾಯತ್ರೀ-ತ್ರಿಷ್ಟುಪ್ ಛಂದಸ್ಸುಗಳೆರಡರಿಂದಲೂ ಮೃತ್ತನ್ನು ಸಂಗ್ರಹಿಸಬೇಕು. |
| **ಅಸ್ಮೈ ತೇಜಃ ಚ ಇಂದ್ರಿಯಮ್ ಚ ಏವ** | (ಇದರಿಂದ) ಈ ಯಜಮಾನನಿಗೆ ತೇಜಸ್ಸನ್ನೂ, ಇಂದ್ರಿಯಶಕ್ತಿಯನ್ನೂ |
| **ಸಮೀಚೀ ದಧಾತಿ** | ಸೇರಿಕೊಂಡಂತೆ ಮಾಡುತ್ತಾನೆ. |
| | **ಪಕ್ಷಾಂತರವಿಧಿ** |
| **ಅಷ್ಟಾಭಿಃ ಸಂಭರತಿ** | ಎಂಟು ಛಂದಸ್ಸುಗಳಿಂದ ಮೃತ್ಸಂಗ್ರಹವನ್ನು ಮಾಡಬೇಕು. |
| **ಅಷ್ಟಾಕ್ಷರಾ ಗಾಯತ್ರೀ** | ಗಾಯತ್ರೀಛಂದಸ್ಸು ಒಂದೊಂದು ಪಾದದಲ್ಲಿ ಎಂಟು ಅಕ್ಷರಗಳಿಂದ ಕೂಡಿರುತ್ತದೆ. |

ಗಾಯತ್ರೋಽಗ್ನಿರ್ಯಾವಾನೇವಾಗ್ನಿಸ್ತಗ್ಂ ಸಂ ಭರತಿ ಸೀದ ಹೋತರಿತ್ಯಾಹ ದೇವತಾ ಏವಾಸ್ಮೈ ಸಗ್ಂ ಸಾದಯತಿ ನಿ ಹೋತೇತಿ ಮನುಷ್ಯಾನ್ಥ್ಸಗ್ಂ ಸೀದಸ್ವೇತಿ ವಯಾಗ್ಂಸಿ

---

ಗಾಯತ್ರಃ । ಅಗ್ನಿಃ । ಯಾವಾನ್ । ಏವ । ಅಗ್ನಿಃ । ತಮ್ । ಸಮಿತಿ । ಭರತಿ । ಸೀದ । ಹೋತಃ । ಇತಿ । ಆಹ । ದೇವತಾಃ । ಏವ । ಅಸ್ಮೈ । ಸಮಿತಿ । ಸಾದಯತಿ । ನೀತಿ । ಹೋತಾ । ಇತಿ । ಮನುಷ್ಯಾನ್ । ಸಮಿತಿ । ಸೀದಸ್ವ । ಇತಿ । ವಯಾಗ್ಂಸಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಅಗ್ನಿಃ ಗಾಯತ್ರಃ** | ಅಗ್ನಿಯೂ ಮುಖದಲ್ಲಿ ಜನಿಸಿರುವುದರಿಂದ ಗಾಯತ್ರನು. |
| **ಯಾವಾನ್ ಏವ ಅಗ್ನಿಃ** | ಅಗ್ನಿಯು ಸಂಖ್ಯಾಸಾಮ್ಯದಿಂದ ಯಾವ ಸಂಖ್ಯೆಯುಳ್ಳವನೋ |
| **ತಮ್ ಸಂಭರತಿ** | ಅಂತಹ ಅಗ್ನಿಯನ್ನು/ಅಗ್ನಿಸಾಧಕವಾದ ಮೃತ್ತನ್ನು ಸಂಗ್ರಹಿಸಿದವನಾಗುತ್ತಾನೆ.* |

**ನಾಲ್ಕು ಮಂತ್ರವಾಕ್ಯಗಳ ವಿವರಣೆ**

| | |
|---|---|
| **ಸೀದ ಹೋತಃ ಇತಿ ಆಹ** | 'ದೇವತೆಗಳನ್ನು ಆಹ್ವಾನಿಸುವ ಯಜ್ಞನಿರ್ವಾಹಕನಾದ ಅಗ್ನಿಯೇ! ನಿನ್ನ ಸ್ಥಾನದಲ್ಲಿ ಕುಳಿತುಕೋ' ಎಂದು ಈ ಮಂತ್ರವು ಹೇಳುತ್ತದೆ. |
| **ಅಸ್ಮೈ ದೇವತಾಃ ಏವ ಸಗ್ಂ ಸಾದಯತಿ** | (ಈ ಮಂತ್ರದಲ್ಲಿ ದೇವಾವೀಃ=ದೇವತೆಗಳನ್ನು ರಕ್ಷಿಸುವವನು ಎಂಬ ಪದವು) ಯಜಮಾನನಿಗಾಗಿ ದೇವತೆಗಳು ಯಜ್ಞದಲ್ಲಿ ಕುಳಿತಿರುವಂತೆ ಮಾಡುತ್ತದೆ. |
| **ನಿ ಹೋತಾ ಇತಿ ಮನುಷ್ಯಾನ್** ಸಗ್ಂ ಸಾದಯತಿ | **'ನಿ ಹೋತಾ ಹೋತೃಷದನೇ ವಿದಾನಃ'** ಎಂಬ ಮಂತ್ರವು ಮನುಷ್ಯರೂಪರಾದ ಋತ್ವಿಜರನ್ನು ಯಜ್ಞಶಾಲೆಯಲ್ಲಿ ಕುಳ್ಳಿರುವಂತೆ ಮಾಡುತ್ತದೆ. |
| **ಸಗ್ಂಸೀದಸ್ವ ಇತಿ ವಯಾಗ್ಂಸಿ** ಸಗ್ಂ ಸಾದಯತಿ | ಈ ಮಂತ್ರವು ಪಕ್ಷಿಗಳು ಅನುಕೂಲವಾಗಿರುವಂತೆ ಮಾಡುತ್ತದೆ. |

---

* ಗಾಯತ್ರೀಛಂದಸ್ಸು ಎಂಟು ಅಕ್ಷರಗಳ ಪಾದಗಳನ್ನು ಹೊಂದಿದೆ. ಎಂಟು ಛಂದಸ್ಸುಗಳಿಂದ ಮೃತ್ಸಂಗ್ರಹವು ಪಕ್ಷಾಂತರವಿಧಿಯಾಗಿದೆ. ಇಲ್ಲಿ ಎಂಟು ಎಂಬ ಸಂಖ್ಯೆಯ ಸಾಮ್ಯವಿದೆ. ಅಗ್ನಿಯು ಗಾಯತ್ರನಾದುದರಿಂದ ಸಂಖ್ಯಾಸಾಮ್ಯದಿಂದ ಈ ಪಕ್ಷದಂತೆ ಅನುಷ್ಠಾನದಿಂದ ಅಗ್ನಿಯನ್ನೇ ಸಂಗ್ರಹಿಸಿದಂತಾಗುತ್ತದೆ.

ಜನಿಷ್ವಾ ಹಿ ಜೇನ್ಯೋ ಅಗ್ರೇ ಅಹ್ನಾಮಿತ್ಯಾಹ ದೇವಮನುಷ್ಯಾನೇವಾಸ್ಮೈ

ಸಗ್‌ಂ ಸನ್ನಾನ್ಪ್ರಜನಯತಿ ॥ ೨೦–4 ॥

ಐವ ಪಶೂನಿತಿ ಗೃಣಾತಿ ಹೋತರಿತಿ ಸಪ್ತವಿಗ್‌ಂಶತಿಶ್ಚ ॥

---

ಜನಿಷ್ವ । ಹಿ । ಜೇನ್ಯಃ । ಅಗ್ರೇ । ಅಹ್ನಾಮ್ । ಇತಿ । ಆಹ । ದೇವಮನುಷ್ಯಾನಿತಿ ದೇವ–ಮನುಷ್ಯಾನ್ । ಏವ ।

ಅಸ್ಮೈ । ಸಗ್‌ಂಸನ್ನಾನಿತಿ ಸಮ್–ಸನ್ನಾನ್ । ಪ್ರೇತಿ । ಜನಯತಿ ॥ ೨೦ ॥

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಜನಿಷ್ವಾ ಹಿ ಜೇನ್ಯಃ ಅಗ್ರೇ ಅಹ್ನಾಮ್<br>ಇತಿ ಆಹ<br>ಅಸ್ಮೈ ದೇವಮನುಷ್ಯಾನ್ ಏವ<br>ಸಗ್‌ಂಸನ್ನಾನ್ ಪ್ರ ಜನಯತಿ | 'ನೀನು ಉದಯಕಾಲದಲ್ಲಿ ಹುಟ್ಟು, ಪ್ರಕಾಶಮಾನನಾಗು' ಎಂದು ಈ ಮಂತ್ರವು ಹೇಳುತ್ತದೆ.<br>ಈ ಮಂತ್ರವು ದೇವ–ಮನುಷ್ಯ–ಪಕ್ಷಿಗಳು ಯಜ್ಞದಲ್ಲಿ ಚೆನ್ನಾಗಿ ಭಾಗವಹಿಸುವಂತೆ ಮಾಡುತ್ತದೆ. ಅಧ್ವರ್ಯುವು ಯಜಮಾನನಿಗಾಗಿ ದೇವ–ಮನುಷ್ಯ–ಪಕ್ಷ್ಯಾದಿಗಳನ್ನು ಅನುಕೂಲವಾಗಿರುವಂತೆ ಮಾಡುತ್ತಾನೆ. |

## ॥ ಪಂಚಮೋಽನುವಾಕಃ ॥

ಕ್ರೂರಮಿವ ವಾ ಅಸ್ಯಾ ಏತತ್ಕರೋತಿ ಯತ್ಖನತ್ಯಪ ಉಪಸೃಜತ್ಯಾಪೋ ವೈ

ಶಾಂತಾಶ್ಶಾಂತಾಭಿರೇವಾಸ್ಯೈ ಶುಚಗ್‌ಂ ಶಮಯತಿ

---

ಕ್ರೂರಮ್ । ಇವ । ವೈ । ಅಸ್ಯಾಃ । ಏತತ್ । ಕರೋತಿ । ಯತ್ । ಖನತಿ । ಅಪಃ । ಉಪೇತಿ । ಸೃಜತಿ । ಆಪಃ । ವೈ ।

ಶಾಂತಾಃ । ಶಾಂತಾಭಿಃ । ಏವ । ಅಸ್ಯೈ । ಶುಚಮ್ । ಶಮಯತಿ ।

---

ನಾಲ್ಕನೆಯ ಅನುವಾಕದಲ್ಲಿ ಮೃತ್ಖನನವೂ, ಆ ಮೃತ್ತನ್ನು ಕೃಷ್ಣಾಜಿನ-ಪುಷ್ಕರಪರ್ಣಗಳಲ್ಲಿ ಸಂಗ್ರಹಿಸುವುದೂ ಉಕ್ತವಾಗಿದೆ. ಈ ಐದನೆಯ ಅನುವಾಕದಲ್ಲಿ ಆ ಮೃತ್ತನ್ನು ಯಜ್ಞಭೂಮಿಗೆ ತರುವುದು ಹೇಳಲ್ಪಡುತ್ತದೆ.

---

| ಬ್ರಾಹ್ಮಣಭಾಗ | ವಿವರಣೆ |
|---|---|
| | |

**ಅಗೆದ ಪ್ರದೇಶವನ್ನು ನೀರಿನಿಂದಲೂ ಅಶ್ವಲೋಮತೃಣಾದಿಗಳಿಂದಲೂ ಮುಚ್ಚುವ ವಿಧಿ-ಅರ್ಥವಾದ**

| | |
|---|---|
| **ಯತ್ ಖನತಿ** | ಅಗೆಯುವುದು ಯಾವುದುಂಟೋ |
| **ಅಸ್ಯಾಃ ಕ್ರೂರಮ್ ಇವ ವೈ ಏತತ್ ಕರೋತಿ** | ಇದು ಭೂಮಿಗೆ ಹಿಂಸೆಯನ್ನೇ ಮಾಡಿದಂತೆಯೇ ಆಗುತ್ತದೆ. |
| **ಅಪಃ ಉಪ ಸೃಜತಿ** | ಆ ಭಾಗದಲ್ಲಿ ತೃಣಾದಿಸಹಿತವಾದ ನೀರನ್ನು ಹಾಕಬೇಕು. |
| **ಆಪಃ ವೈ ಶಾಂತಾಃ** | ತಣ್ಣಗಿರುವ ನೀರುಗಳು ಶಾಂತವಷ್ಟೇ. |
| **ಶಾಂತಾಭಿಃ ಏವ ಅಸ್ಯೈ ಶುಚಮ್ ಶಮಯತಿ** | ಶಾಂತವಾಗಿರುವ ನೀರುಗಳಿಂದಲೇ ಪೃಥಿವಿಯ ವ್ಯಥೆಯನ್ನೂ ಅಧ್ವರ್ಯುವು ಹೋಗಲಾಡಿಸುತ್ತಾನೆ. |

---

**ತಾತ್ಪರ್ಯ:-** ಅಗೆಯುವುದೆಂದರೆ ಭೂದೇವಿಗೆ ಹಿಂಸೆ ಮಾಡಿದಂತೆ. ಆ ಭಾಗವನ್ನು ತುಂಬಿಸಿ ನೀರು ಹಾಕುವುದರಿಂದ ಆ ನೋವನ್ನು ಪರಿಹರಿಸಿದಂತಾಗುತ್ತದೆ.

ಸಂ ತೇ ವಾಯುರ್ಮಾತರಿಶ್ವಾ ದಧಾತ್ವಿತ್ಯಾಹ ಪ್ರಾಣೋ ವೈ ವಾಯುಃ
ಪ್ರಾಣೇನೈವಾಸ್ಯೈ ಪ್ರಾಣಗ್ಂ ಸಂ ದಧಾತಿ ಸಂ ತೇ ವಾಯುರಿತ್ಯಾಹ
ತಸ್ಮಾದ್ವಾಯುಪ್ರಚ್ಯುತಾ ದಿವೋ ವೃಷ್ಟಿರೀರ್ತೇ

---

ಸಮಿತಿ । ತೇ । ವಾಯುಃ । ಮಾತರಿಶ್ವಾ । ದಧಾತು । ಇತಿ । ಆಹ । ಪ್ರಾಣ ಇತಿ ಪ್ರ–ಅನಃ । ವೈ । ವಾಯುಃ । ಪ್ರಾಣೇನೇತಿ ಪ್ರ–ಅನೇನ । ಏವ । ಅಸ್ಯೈ । ಪ್ರಾಣಮಿತಿ ಪ್ರ–ಅನಮ್ । ಸಮಿತಿ । ದಧಾತಿ । ಸಮಿತಿ । ತೇ । ವಾಯುಃ । ಇತಿ । ಆಹ । ತಸ್ಮಾತ್ । ವಾಯುಪ್ರಚ್ಯುತೇತಿ ವಾಯು–ಪ್ರಚ್ಯುತಾ । ದಿವಃ । ವೃಷ್ಟಿಃ । ಈರ್ತೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಸಂ ತೇ ವಾಯುಃ ಮಾತರಿಶ್ವಾ ದಧಾತು ಇತಿ ಆಹ** | 'ಹೇ ಭೂಮಿಯೇ! ನಿನ್ನ ಹೃದಯದಂತಿರುವ ಭೂಪ್ರದೇಶದಲ್ಲಿ ಆಕಾಶದಲ್ಲಿ ವೃದ್ಧಿ ಹೊಂದುವ, ದೇವತೆಗಳ ಪ್ರಾಣದಂತಿರುವ ವಾಯುವು ಪೂರ್ಣವಾಗಿ ಸೇರಿಸಲಿ' ಎಂದು ಈ ಮಂತ್ರಭಾಗವು ಹೇಳುತ್ತದೆ. |
| **ವಾಯುಃ ಪ್ರಾಣಃ ವೈ** | ವಾಯುವು ಪ್ರಾಣಸ್ವರೂಪನಷ್ಟೆ. |
| **ಪ್ರಾಣೇನ ಏವ ಅಸ್ಯೈ ಪ್ರಾಣಮ್ ಸಂ ದಧಾತಿ** | (ಈ ಮಂತ್ರದಿಂದ ಅಧ್ವರ್ಯುವು) ಪ್ರಾಣಸ್ವರೂಪ ವಾಯುವಿನಿಂದಲೇ ಪೃಥಿವಿಯ ಪ್ರಾಣದಂತಿರುವ ಅಗೆದಿರುವ ಭೂಭಾಗವನ್ನು ಸೇರಿಸಿದವನಾಗುತ್ತಾನೆ. |
| **ಸಂ ತೇ ವಾಯುಃ ಇತಿ ಆಹ** | 'ಹೇ! ಭೂಮಿಯೇ! ಖನನಪ್ರದೇಶವು ನಿನ್ನ ಹೃದಯದಂತಿದೆ. ಆಕಾಶದಲ್ಲಿ ಸಂಚರಿಸುವ ವಾಯುವು ಅದನ್ನು ತುಂಬುತ್ತದೆ' ಎಂದು ಈ ಮಂತ್ರವು ಹೇಳುತ್ತದೆ. |
| **ತಸ್ಮಾತ್ ವಾಯುಪ್ರಚ್ಯುತಾ ವೃಷ್ಟಿಃ ದಿವಃ ಈರ್ತೇ** | (ವಾಯುಶಬ್ದದ ಪ್ರಯೋಗವಿರುವುದರಿಂದ) ವಾಯುಪ್ರೇರಿತವಾದ ವೃಷ್ಟಿಯು ಅಂತರಿಕ್ಷದಿಂದ ಬೀಳುತ್ತದೆ. (ಈ ಮಳೆಯು ಭೂಪ್ರದೇಶಗಳನ್ನು ಒಗ್ಗೂಡಿಸುತ್ತದೆ) |

---

'ಸಂ ತೇ...' ಎಂಬ ಮಂತ್ರದಲ್ಲಿ ವಾಯುದೇವತೆಯನ್ನು ಶ್ರುತಿಯು ಹೇಳುತ್ತಿರುವುದರ ಪ್ರಯೋಜನವನ್ನು ಬ್ರಾಹ್ಮಣವು ತಿಳಿಸುತ್ತಿದೆ.

ತಸ್ಮೈ ಚ ದೇವಿ ವಷಡಸ್ತು [ವಷಡಸ್ತು(೨೧)] ತುಭ್ಯಮಿತ್ಯಾಹ ಷಡ್ವಾ ಋತವ ಋತುಷ್ವೇವ ವೃಷ್ಟಿಂ ದಧಾತಿ ತಸ್ಮಾತ್ಸರ್ವಾನ್ನೃತೂನ್ ವರ್ಷತಿ ಯದ್ವಷಟ್ಕುರ್ಯಾದ್ಯಾತಯಾಮಾಽಸ್ಯ ವಷಟ್ಕಾರಸ್ಸ್ಯಾ–

ತಸ್ಮೈ । ಚ । ದೇವಿ । ವಷಟ್ । ಅಸ್ತು । (೨೧) । ತುಭ್ಯಮ್ । ಇತಿ । ಆಹ । ಷಟ್ । ವೈ । ಋತವಃ । ಋತುಷು । ಏವ । ವೃಷ್ಟಿಮ್ । ದಧಾತಿ । ತಸ್ಮಾತ್ । ಸರ್ವಾನ್ । ಋತೂನ್ । ವರ್ಷತಿ । ಯತ್ । ವಷಟ್ಕುರ್ಯಾದಿತಿ ವಷಟ್–ಕುರ್ಯಾತ್ । ಯಾತಯಾಮೇತಿ ಯಾತ–ಯಾಮಾ । ಅಸ್ಯ । ವಷಟ್ಕಾರ ಇತಿ ವಷಟ್–ಕಾರಃ । ಸ್ಯಾತ್ ।

| ಬ್ರಾಹ್ಮಣಭಾಗ | ವಿವರಣೆ |
|---|---|
| ಹಿಂದಿನ ಮಂತ್ರದ 'ತಸ್ಮೈ' ಮುಂತಾದ ಭಾಗದ ವಿವರಣೆ | |
| **ತಸ್ಮೈ ಚ ದೇವಿ ವಷಟ್ ಅಸ್ತು ತುಭ್ಯಮ್ ಇತಿ ಆಹ** | 'ಪೃಥಿವಿಯೇ! ಆ ವಾಯುವಿಗೂ, ನಿನಗೂ ತೃಣ ಸಹಿತವಾದ ಜಲವು ಹುತವಾಗಲಿ' ಎಂದು ಈ ಮಂತ್ರವು ಹೇಳುತ್ತದೆ. |
| **ಋತವಃ ಷಟ್ ವೈ** | * ಋತುಗಳು ಆರಷ್ಟೆ. |
| **ಋತುಷು ಏವ ವೃಷ್ಟಿಮ್ ದಧಾತಿ** | ಋತುಗಳಲ್ಲಿ (ವಾಯುವು) ವೃಷ್ಟಿಯನ್ನುಂಟು ಮಾಡುತ್ತದೆ. |
| **ತಸ್ಮಾತ್ ಸರ್ವಾನ್ ಋತೂನ್ ವರ್ಷತಿ** | ಆದುದರಿಂದ ವಾಯುವು ಎಲ್ಲ ಋತುಗಳಲ್ಲಿಯೂ ಮಳೆಯನ್ನು ಸುರಿಸುತ್ತದೆ. |
| ಶಾಖಾಂತರೀಯವಾದ **'ಷಟ್'** ಶಬ್ದದ ವ್ಯಾಖ್ಯಾನ | |
| **ಯತ್ ವಷಟ್ ಕುರ್ಯಾತ್** | 'ಸಂ ತೇ...'ಎಂಬ ಈ ಮಂತ್ರದಲ್ಲಿ ವಷಟ್ಕಾರವನ್ನು ಮಾಡಿದರೆ |
| **ಅಸ್ಯ ವಷಟ್ಕಾರಃ ಯಾತಯಾಮಾ ಸ್ಯಾತ್** | ಈ ಮಂತ್ರದ ವಷಟ್ಕಾರವು ಸಾರಹೀನವಾಗುತ್ತದೆ. |

**'ಸಂ ತೇ ವಾಯುಃ...'** ಎಂಬ ಮಂತ್ರದ ಬ್ರಾಹ್ಮಣಭಾಗದಲ್ಲಿ ಶ್ರುತಿಯ ವಿಚಾರವು ಒಂದಿದೆ. ಈ ಮಂತ್ರದಲ್ಲಿ **'ವಷಟ್'** ಎಂಬುದನ್ನು ಹೇಳಬೇಕೇ? ಬೇಡವೇ? ಒಮ್ಮೆ ಹೇಳಿದರೆ ಮಂತ್ರಾಂಶವು ಗತಸಾರವಾಗುವುದರಿಂದ ಮುಂದೆ ವಾಯವ್ಯಪಶುವನ್ನು ಹೇಳಿರುವುದರಿಂದ ಸಾರಹೀನವಾದ ಆ ಶಬ್ದವನ್ನು ಹೇಳುವಂತಿಲ್ಲ. ಒಮ್ಮೆ

* 'ವಷಟ್' ಎಂಬ ಮಂತ್ರಭಾಗದಲ್ಲಿ 'ವ' ಕಾರವನ್ನು ಬಿಟ್ಟರೆ 'ಷಟ್' ಎಂದಾಗುತ್ತದೆ. ಇದು ಸಂಖ್ಯೆಯನ್ನು ಸೂಚಿಸುತ್ತದೆ.

–ದ್ಯನ್ನ ವಷಟ್ಕುರ್ಯಾದ್ರಕ್ಷಾಗ್ಂಸಿ ಯಜ್ಞಗ್ಂ ಹನ್ಯುರ್ವಡಿತ್ಯಾಹ

ಪರೋಕ್ಷಮೇವ ವಷಟ್ಕರೋತಿ ನಾಸ್ಯ ಯಾತಯಾಮಾ ವಷಟ್ಕಾರೋ ಭವತಿ

ನ ಯಜ್ಞಗ್ಂ ರಕ್ಷಾಗ್ಂಸಿ ಘ್ನಂತಿ

---

ಯತ್ । ನ । ವಷಟ್ಕುರ್ಯಾದಿತಿ ವಷಟ್–ಕುರ್ಯಾತ್ । ರಕ್ಷಾಗ್ಂಸಿ । ಯಜ್ಞಮ್ । ಹನ್ಯುಃ । ವಟ್ । ಇತಿ । ಆಹ । ಪರೋಕ್ಷಮಿತಿ ಪರಃ–ಅಕ್ಷಮ್ । ಏವ । ವಷಟ್ । ಕರೋತಿ । ನ । ಅಸ್ಯ । ಯಾತಯಾಮೇತಿ ಯಾತ–ಯಾಮಾ । ವಷಟ್ಕಾರ ಇತಿ ವಷಟ್–ಕಾರಃ । ಭವತಿ । ನ । ಯಜ್ಞಮ್ । ರಕ್ಷಾಗ್ಂಸಿ । ಘ್ನಂತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯತ್ ನ ವಷಟ್ಕುರ್ಯಾತ್ ರಕ್ಷಾಗ್ಂಸಿ ಯಜ್ಞಮ್ ಹನ್ಯುಃ** | ಒಮ್ಮೆ ವಷಟ್ಕಾರವನ್ನು ಮಾಡದಿದ್ದರೆ (ವಜ್ರರೂಪವಾದ ವಷಟ್ಕಾರವಿಲ್ಲದುದರಿಂದ) ರಕ್ಷೋಗಣಗಳು ಯಜ್ಞವನ್ನು ನಾಶಪಡಿಸುತ್ತವೆ. |
| **'ವಟ್' ಇತಿ ಆಹ** | ಆದುದರಿಂದ ವಷಟ್ಕಾರಾರ್ಥವಾಗಿ 'ವಟ್' ಎಂದು ಹೇಳಬೇಕು. |
| **ಪರೋಕ್ಷಮ್ ಏವ ವಷಟ್ ಕರೋತಿ** | ಇದರಿಂದ ಪರೋಕ್ಷವಾಗಿ ವಷಟ್ಕಾರವನ್ನು ಮಾಡಿದಂತಾಗುತ್ತದೆ. |
| **ಅಸ್ಯ ವಷಟ್ಕಾರಃ ಯಾತಯಾಮಾ ನ ಭವತಿ** | ಇದರಿಂದ ಈ ಯಜಮಾನನ/ಮಂತ್ರದ/ಯಜ್ಞದ ವಷಟ್ಕಾರವು ಗತಸಾರವಾಗುವುದಿಲ್ಲ. |
| **ಯಜ್ಞಮ್ ರಕ್ಷಾಗ್ಂಸಿ ನ ಘ್ನಂತಿ** | ರಕ್ಷೋಗಣಗಳು ಯಜ್ಞವನ್ನು ನಾಶಪಡಿಸಲಾರವು. |

---

ಹೇಳದಿದ್ದರೆ ವಜ್ರದಂತಿರುವ ವಷಟ್ಕಾರವಿಲ್ಲದುದರಿಂದ ರಾಕ್ಷಸರು ಯಜ್ಞವಿಘ್ನವನ್ನುಂಟುಮಾಡಿಯಾರು. ಹೀಗಾಗಿ **'ವಷಟ್'** ಎಂಬಲ್ಲಿ **'ಷ'** ಕಾರವನ್ನು ಬಿಟ್ಟು **'ವಟ್'** ಎಂದು ಹೇಳಿದರೆ ವಷಟ್ಕಾರವನ್ನು ಪೂರ್ಣ ಹೇಳಿಲ್ಲವಾದುದರಿಂದ ಅದು ಸಾರಹೀನವಾಗುವುದಿಲ್ಲ. ಆಂಶಿಕವಾಗಿ ಹೇಳಲ್ಪಟ್ಟಿರುವುದರಿಂದ ಯಜ್ಞಕ್ಕೆ ಅಡ್ಡಿಯೂ ಆಗುವುದಿಲ್ಲ.

ಈ ಶಾಖೆಯಲ್ಲಿ **'ವಷಟ್'** ಎಂಬ ಪಾಠವು ಇದೆ. ಶಾಖಾಂತರದಲ್ಲಿ **'ವಟ್'** ಎಂಬ ಪಾಠವಿದೆಯೆಂದು ಬ್ರಾಹ್ಮಣದಿಂದ ತಿಳಿಯುತ್ತದೆ.

ಈ ಎರಡು ಪಕ್ಷಗಳೂ ಬ್ರಾಹ್ಮಣೋಕ್ತವಾಗಿರುವುದರಿಂದ ನಿತ್ಯ–ಕಾಮ್ಯ ಎಂಬ ಭೇದದಿಂದ ಪ್ರಯೋಗವಿಕಲ್ಪ. ಅಥವಾ ಎರಡೂ ರೀತಿಗೂ ಅವಕಾಶವಿದೆ ಎಂದು ತಾತ್ಪರ್ಯ.

ಸುಜಾತೋ ಜ್ಯೋತಿಷಾ ಸಹೇತ್ಯನುಷ್ಟುಭೋಪನಹ್ಯತ್ಯನುಷ್ಟು[ತ್ಯನುಷ್ಟುಪ್ (೨೨)ಸರ್ವಾಣಿ]ಷ್ಸ್ವರ್ವಾಣಿ ಛಂದಾಗ್ಂಸಿ ಛಂದಾಗ್ಂಸಿ ಖಲು ವಾ ಅಗ್ನೇಃ ಪ್ರಿಯಾ ತನೂಃ ಪ್ರಿಯಯೈವೈನಂ ತನುವಾ ಪರಿ ದಧಾತಿ

---

ಸುಜಾತ ಇತಿ ಸು-ಜಾತಃ । ಜ್ಯೋತಿಷಾ । ಸಹ । ಇತಿ । ಅನುಷ್ಟುಭೇತ್ಯನು-ಸ್ತುಭಾ । ಉಪೇತಿ । ನಹ್ಯತಿ । ಅನುಷ್ಟುಬಿತ್ಯನು-ಸ್ತುಪ್ । (೨೨) । ಸರ್ವಾಣಿ । ಛಂದಾಗ್ಂಸಿ । ಛಂದಾಗ್ಂಸಿ । ಖಲು । ವೈ । ಅಗ್ನೇಃ । ಪ್ರಿಯಾ । ತನೂಃ । ಪ್ರಿಯಯಾ । ಏವ । ಏನಮ್ । ತನುವಾ । ಪರೀತಿ । ದಧಾತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|

**ಕೃಷ್ಣಾಜಿನದಲ್ಲಿ ಮೃತ್ತನ್ನು ಕಟ್ಟುವ ವಿಧಿ; ಅರ್ಥವಾದ**

| | |
|---|---|
| **ಸುಜಾತಃ ಜ್ಯೋತಿಷಾ ಸಹ ಇತಿ** | 'ಅಗ್ನಿಯೇ! ಚೆನ್ನಾಗಿ ಜನಿಸಿದ ನೀನು ತೇಜಸ್ಸಿನೊಡನೆ ಸುಖವಾಗಿ ಸ್ವರ್ಗಸದೃಶವಾದ ಕೃಷ್ಣಾಜಿನದಲ್ಲಿ ಇರು' ಎಂದು |
| **ಅನುಷ್ಟುಭಾ ಉಪ ನಹ್ಯತಿ** | ಅನುಷ್ಟುಪ್ ಛಂದಸ್ಸಿನ ಮಂತ್ರದಿಂದ ಕೃಷ್ಣಾಜಿನದ ಕೊನೆಗಳನ್ನು ಸೇರಿಸಿ ಕಟ್ಟಬೇಕು. |
| **ಅನುಷ್ಟುಪ್ ಸರ್ವಾಣಿ ಛಂದಾಗ್ಂಸಿ** | ವಾಕ್ಸ್ವರೂಪವಾದ ಅನುಷ್ಟುಪ್‌ಛಂದಸ್ಸು ಶಬ್ದ ರೂಪವಾದ ಸರ್ವಛಂದೋರೂಪವಾಗಿದೆ. |
| **ಛಂದಾಗ್ಂಸಿ ಖಲು ವೈ ಅಗ್ನೇಃ ಪ್ರಿಯಾ ತನೂಃ** | ಗಾಯತ್ರೀ ಮುಂತಾದ ಛಂದಸ್ಸುಗಳು ಅಗ್ನಿಯ ಪ್ರಿಯ ಶರೀರರೂಪವಾಗಿವೆ. |
| **ಏನಮ್ ಪ್ರಿಯಯಾ ತನುವಾ ಏವ ಪರಿದಧಾತಿ** | (ಅನುಷ್ಟುಪ್‌ಛಂದಸ್ಸಿನ ಮಂತ್ರದಿಂದ ಕಟ್ಟುವುದರಿಂದ) ಮೃತ್ತನ್ನು ಪ್ರಿಯವಾದ ಶರೀರದಿಂದ/ವಸ್ತ್ರದಿಂದ ಕಟ್ಟಿದಂತಾಗುವುದು. |

---

**'ವಾಗ್ವಾ ಅನುಷ್ಟುಕ್'** ಎಂದು ಮಂತ್ರಾಂತರದಲ್ಲಿದೆ. ಹೀಗಾಗಿ ಅನುಷ್ಟುಪ್ ವಾಗ್ರೂಪವಾಗಿದೆ. **'ಯಾ ತೇ ಅಗ್ನೇ ಪಶುಷು ಪವಮಾನಾ ಪ್ರಿಯಾ ತನೂಃ' 'ಯಾ ಗಾಯತ್ರೇ...'**[ಆಪ. ಶ್ರೌ. ಸೂ. 5. 16. 4] ಎಂದು ಆಧಾನಪ್ರಕರಣದಲ್ಲಿ ಹೇಳಿರುವುದರಿಂದಲೂ ಅಗ್ನಿಯು ಛಂದಸ್ಸುಗಳಲ್ಲಿ ತನ್ನ ಪ್ರಿಯವಾದ ಶರೀರವನ್ನು ಇಟ್ಟಿರುವ ಬಗ್ಗೆ ಹೇಳಿರುವುದರಿಂದಲೂ ಛಂದಸ್ಸುಗಳು ಅಗ್ನಿಯ ಪ್ರಿಯಶರೀರರೂಪಗಳು.

ವೇದುಕೋ ವಾಸೋ ಭವತಿ ಯ ಏವಂ ವೇದ ವಾರುಣೋ ವಾ

ಅಗ್ನಿರುಪನದ್ಧ ಉದು ತಿಷ್ಠ ಸ್ವಧ್ವರೋರ್ಧ್ವ ಊ ಷು ಣ ಊತಯ ಇತಿ

ಸಾವಿತ್ರೀಭ್ಯಾಮುತ್ತಿಷ್ಠತಿ ಸವಿತೃಪ್ರಸೂತ ಏವಾಸ್ಯೋರ್ಧ್ವಾಂ

---

ವೇದುಕಃ । ವಾಸಃ । ಭವತಿ । ಯಃ । ಏವಮ್ । ವೇದ । ವಾರುಣಃ । ವೈ । ಅಗ್ನಿಃ । ಉಪನದ್ಧ ಇತ್ಯುಪ-ನದ್ಧಃ ।

ಉದಿತಿ । ಉ । ತಿಷ್ಠ । ಸ್ವಧ್ವರೇತಿ ಸು-ಅಧ್ವರ । ಊರ್ಧ್ವಃ । ಉ । ಸ್ವಿತಿ । ನಃ । ಊತಯೇ । ಇತಿ ।

ಸಾವಿತ್ರೀಭ್ಯಾಮ್ । ಉದಿತಿ । ತಿಷ್ಠತಿ । ಸವಿತೃಪ್ರಸೂತ ಇತಿ ಸವಿತೃ-ಪ್ರಸೂತಃ । ಏವ । ಅಸ್ಯ । ಊರ್ಧ್ವಾಮ್ ।

---

| ಬ್ರಾಹ್ಮಣಭಾಗ | ವಿವರಣೆ |
|---|---|

**ಈ ಜ್ಞಾನದ ಪ್ರಶಂಸೆ**

| | |
|---|---|
| **ಯಃ ಏವಮ್ ವೇದ** | ಯಾರು ಈ ರೀತಿ ತಿಳಿಯುತ್ತಾನೆಯೋ |
| **ವಾಸಃ ವೇದುಕಃ ಭವತಿ** | ಒಳ್ಳೆಯ ವಸ್ತ್ರವನ್ನು ಪಡೆದವನಾಗುತ್ತಾನೆ. |

**ಯಜ್ಞದ ಮೃತ್ತಿಕೆಯ ಗಂಟನ್ನು ತೆಗೆದುಕೊಂಡು ಏಳುವ ವಿಧಿ; ಅರ್ಥವಾದ**

| | |
|---|---|
| **ಉಪನದ್ಧಃ ಅಗ್ನಿಃ** | ವಸ್ತ್ರದಲ್ಲಿ ಕಟ್ಟಿರುವ ಅಗ್ನಿಯು(ಚಯನಾರ್ಥವಾದ ಮೃತ್ತಿಕೆಯು) |
| **ವಾರುಣಃ ವೈ** | ವರುಣದೇವನ ಅಧೀನವಷ್ಟೆ. |
| **'ಉದು ತಿಷ್ಠ ಸ್ವಧ್ವರ' 'ಊರ್ಧ್ವ ಊ ಷು ಣ ಊತಯೇ' ಇತಿ ಸಾವಿತ್ರೀಭ್ಯಾಮ್ ಉತ್ ತಿಷ್ಠತಿ** | ವರುಣಬಾಧಾಪರಿಹಾರಕ್ಕಾಗಿ 'ಉದು ತಿಷ್ಠ' 'ಊರ್ಧ್ವ ಊ ಷು ಣ' ಎಂಬ ಎರಡು ಸವಿತೃದೇವತಾಕವಾದ ಮಂತ್ರಗಳಿಂದ (ಕೃಷ್ಣಾಜಿನದ ಗಂಟನ್ನು ತೆಗೆದು ಕೊಂಡು) ಏಳುತ್ತಾನೆ. |
| **ಸವಿತೃಪ್ರಸೂತಃ ಏವ** | ಸವಿತೃದೇವನಿಂದ ಅನುಮತಿಯನ್ನು ಹೊಂದಿದವ ನಾಗಿಯೇ |
| **ಅಸ್ಯ ಊರ್ಧ್ವಾಮ್** | ಅಗ್ನಿಯ ಮೇಲೆ ಉಂಟಾಗಿರುವ |

---

ಎರಡನೆಯ ಮಂತ್ರದಲ್ಲಿ **'ಸವಿತಾ'** ಎಂಬ ಪದವು ಇದೆಯಾದರೂ ಎರಡು ಮಂತ್ರಗಳೂ ಒಂದೇ ಕಾರ್ಯಕ್ಕಾಗಿ ಇವೆಯಾದುದರಿಂದ ಎರಡೂ 'ಸಾವಿತ್ರೀ' ಎನ್ನಿಸುತ್ತವೆ. ಅಥವಾ ಮೊದಲನೆಯ ಮಂತ್ರದಲ್ಲಿ **'ದೇವ್ಯಾ ಕೃಪಾ'** ಎಂಬುದಕ್ಕೆ 'ಸವಿತೃದೇವನ ಕೃಪೆಯಿಂದ' ಎಂಬ ಅರ್ಥ ಮಾಡಿ ಸಾವಿತ್ರಿಗಳೆನ್ನಬಹುದು.

ವರುಣಮೇನಿಮುಥ್ಸೃಜತಿ ದ್ವಾಭ್ಯಾಂ ಪ್ರತಿಷ್ಠಿತ್ಯೈ ಸ ಜಾತೋ ಗರ್ಭೋ

ಅಸಿ[ಅಸಿ(೨೩)]ರೋದಸ್ಯೋರಿತ್ಯಾಹೇಮೇ ವೈ ರೋದಸೀ ತಯೋರೇಷ

ಗರ್ಭೋ ಯದಗ್ನಿಸ್ತಸ್ಮಾದೇವಮಾಹಾ–

---

ವರುಣಮೇನಿಮಿತಿ ವರುಣ–ಮೇನಿಮ್ । ಉದಿತಿ । ಸೃಜತಿ । ದ್ವಾಭ್ಯಾಮ್ । ಪ್ರತಿಷ್ಠಿತ್ಯಾ ಇತಿ ಪ್ರತಿ–ಸ್ಥಿತ್ಯೈ । ಸಃ । ಜಾತಃ । ಗರ್ಭಃ । ಅಸಿ । (೨೩) । ರೋದಸ್ಯೋಃ । ಇತಿ । ಆಹ । ಇಮೇ ಇತಿ । ವೈ । ರೋದಸೀ ಇತಿ । ತಯೋಃ । ಏಷಃ । ಗರ್ಭಃ । ಯತ್ । ಅಗ್ನಿಃ । ತಸ್ಮಾತ್ । ಏವಮ್ । ಆಹ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ವರುಣಮೇನಿಮ್ ಉತ್ ಸೃಜತಿ** | ವರುಣಬಾಧೆಯನ್ನು ಅಧ್ವರ್ಯುವು ಪರಿಹರಿಸಿ ಕೊಳ್ಳುತ್ತಾನೆ. |
| **ದ್ವಾಭ್ಯಾಮ್ ಪ್ರತಿಷ್ಠಿತ್ಯೈ** | ಎರಡು ಮಂತ್ರಗಳಿಂದ ಹೀಗೆ ಮಾಡುವುದು ಶ್ರೇಷ್ಠ ಸ್ಥಿತಿಗೆ ಕಾರಣವಾಗುತ್ತದೆ. |

**ಅಗ್ನಿಯ ಮೃತ್ತಿಕೆಯನ್ನು ಒಯ್ಯುವುದು**
**ಪ್ರಥಮಮಂತ್ರದ 'ಸ ಜಾತೋ...ರೋದಸ್ಯೋಃ' ಎಂಬ ಅಂಶದ ವಿವರಣೆ**

| | |
|---|---|
| **ಸಃ ಜಾತಃ ಗರ್ಭಃ ಅಸಿ ರೋದಸ್ಯೋಃ ಇತಿ ಆಹ** | 'ಎಲೈ! ಅಗ್ನಿಯೇ! ನೀನು ದ್ಯಾವಾಪೃಥಿವಿಗಳ ಮಧ್ಯ ದಲ್ಲಿ ಹುಟ್ಟುವುದರಿಂದ ದ್ಯಾವಾಪೃಥಿವಿಗಳ ಗರ್ಭ ವಾಗಿರುವೆ' ಎಂದು ಈ ಮಂತ್ರಭಾಗವು ಹೇಳುತ್ತದೆ. |
| **ಇಮೇ ವೈ ರೋದಸೀ** | ಈ ದ್ಯಾವಾಪೃಥಿವಿಗಳು 'ರೋದಸೀ' ಎಂದು ಹೇಳಲ್ಪ ಡುತ್ತವೆ. |
| **ಯತ್ ಅಗ್ನಿಃ ತಯೋಃ ಏಷಃ ಗರ್ಭಃ** | ಈ ಅಗ್ನಿಯೆಂಬುದು ದ್ಯಾವಾಪೃಥಿವಿಗಳ ಮಧ್ಯದಲ್ಲಿ ಜನಿಸಿರುವುದರಿಂದ ಅವುಗಳ ಗರ್ಭವಾಗಿದೆ/ ಜಠರಾಗ್ನಿರೂಪದಿಂದ ಗರ್ಭವಾಗಿದೆ. |
| **ತಸ್ಮಾತ್ ಏವಮ್ ಆಹ** | ಆದುದರಿಂದ ಮಂತ್ರವು ಹೀಗೆ ಹೇಳುತ್ತದೆ. ಅದು ಯುಕ್ತವಾಗಿದೆ. |

-ಗ್ನೇ ಚಾರುರ್ವಿಭೃತ ಓಷಧೀಷ್ವಿತ್ಯಾಹ ಯದಾ ಹ್ಯೇತಂ ವಿಭರಂತ್ಯಥ ಚಾರುತರೋ ಭವತಿ ಪ್ರಮಾತೃಭ್ಯೋ ಅಧಿ ಕನಿಕ್ರದದ್ಗಾ ಇತ್ಯಾಹೌಷಧಯೋ ವಾ ಅಸ್ಯ ಮಾತರಸ್ತಾಭ್ಯ ಏವೈನಂ ಪ್ರಚ್ಯಾವಯತಿ

---

ಅಗ್ನೇ । ಚಾರುಃ । ವಿಭೃತ ಇತಿ ವಿ-ಭೃತಃ । ಓಷಧೀಷು । ಇತಿ । ಆಹ । ಯದಾ । ಹಿ । ಏತಮ್ । ವಿಭರಂತೀತಿ ವಿ-ಭರಂತಿ । ಅಥ । ಚಾರುತರ ಇತಿ ಚಾರು-ತರಃ । ಭವತಿ । ಪ್ರೇತಿ । ಮಾತೃಭ್ಯ ಇತಿ ಮಾತೃ-ಭ್ಯಃ । ಅಧೀತಿ । ಕನಿಕ್ರದತ್ । ಗಾಃ । ಇತಿ । ಆಹ । ಓಷಧಯಃ । ವೈ । ಅಸ್ಯ । ಮಾತರಃ । ತಾಭ್ಯಃ । ಏವ । ಏನಮ್ । ಪ್ರೇತಿ । ಚ್ಯಾವಯತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|

**'ಅಗ್ನೇ ಚಾರುಃ...'ಎಂಬುದರ ವಿವರಣೆ**

| | |
|---|---|
| ಅಗ್ನೇ ಚಾರುಃ ವಿಭೃತಃ ಓಷಧೀಷು ಇತಿ ಆಹ | 'ಹೇ! ಅಗ್ನಿಯೇ! ಓಷಧಿಗಳಿಂದ ಪೋಷಿಸಲ್ಪಟ್ಟು ಜಠರಾಗ್ನಿರೂಪನಾದ ನೀನು ಹೆಚ್ಚಾಗಿ ದರ್ಶನೀಯನಾಗುವೆ' ಎಂದು ಈ ಮಂತ್ರಭಾಗವು ಹೇಳುತ್ತದೆ. |
| ಯದಾ ಹಿ ಏತಮ್ ವಿಭರಂತಿ ಅಥ ಚಾರುತರಃ ಭವತಿ | ಜಠರಾಗ್ನಿಯು ಯಾವಾಗ ಓಷಧಿಗಳಿಂದ ಚೆನ್ನಾಗಿ ಪೋಷಿಸಲ್ಪಡುವನೋ ಆಗ ಅಧಿಕವಾಗಿ ಪ್ರಕಾಶಿಸುತ್ತಾನೆ. |

**'ಪ್ರಮಾತೃಭ್ಯಃ...'ಎಂಬುದರ ವಿವರಣೆ**

| | |
|---|---|
| ಪ್ರಮಾತೃಭ್ಯಃ ಅಧಿ ಕನಿಕ್ರದತ್ ಗಾಃ ಇತಿ ಆಹ | 'ಕರುವು ತಾಯಿಗಾಗಿ ಕೂಗಿಕೊಳ್ಳುತ್ತಾ ಬರುವಂತೆ ಅಗ್ನಿಯು ತನ್ನ ತಾಯಿಯಂತಿರುವ ಓಷಧಿಗಳಿಗಾಗಿ ಬರಲಿ/ಅಗ್ನಿಯೇ! ನೀನು ಬಾ' ಎಂದು ಈ ಮಂತ್ರವು ಹೇಳುತ್ತದೆ. |
| ಅಸ್ಯ ಮಾತರಃ ಓಷಧಯಃ ವೈ | ಓಷಧಿಗಳು ಜಠರಾಗ್ನಿಜನಕಗಳಾಗಿ ತಾಯಂದಿರಂತೆ ಇರುತ್ತವೆಯಷ್ಟೆ. |
| ಏನಮ್ ತಾಭ್ಯಃ ಏವ ಪ್ರ ಚ್ಯಾವಯತಿ | ಅವುಗಳಿಗಾಗಿ ಈ ಅಗ್ನಿಯನ್ನು ಅಧ್ವರ್ಯುವು ಅವುಗಳ ಸಮೀಪಕ್ಕೆ ಹೋಗುವಂತೆ ಮಾಡುತ್ತಾನೆ. |

ಸ್ಥಿರೋ ಭವ ವೀಡ್ವಂಗ ಇತಿ ಗರ್ದಭ ಆ ಸಾದಯತಿ [ಸಾದಯತಿ(೨೪)]
ಸಂ ನಹ್ಯತ್ಯೇವೈನಮೇತಯಾ ಸ್ಥೇಮ್ನೇ ಗರ್ದಭೇನ ಸಂಭರತಿ ತಸ್ಮಾದ್ಗರ್ದಭಃ
ಪಶೂನಾಂ ಭಾರಭಾರಿತಮೋ ಗರ್ದಭೇನ ಸಂ ಭರತಿ

---

ಸ್ಥಿರಃ । ಭವ । ವೀಡ್ವಂಗ ಇತಿ ವೀಡು–ಅಂಗಃ । ಇತಿ । ಗರ್ದಭೇ । ಏತಿ । ಸಾದಯತಿ । (೨೪) । ಸಮಿತಿ । ನಹ್ಯತಿ । ಏವ । ಏನಮ್ । ಏತಯಾ । ಸ್ಥೇಮ್ನೇ । ಗರ್ದಭೇನ । ಸಮಿತಿ । ಭರತಿ । ತಸ್ಮಾತ್ । ಗರ್ದಭಃ । ಪಶೂನಾಮ್ । ಭಾರಭಾರಿತಮ ಇತಿ ಭಾರಭಾರಿ–ತಮಃ । ಗರ್ದಭೇನ । ಸಮಿತಿ । ಭರತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|

**ಕತ್ತೆಯ ಮೇಲೆ ಮೃತ್ತಿಕೆಯ ಗಂಟನ್ನು ಇಡುವ ವಿಧಿ; ಅರ್ಥವಾದ**

| | |
|---|---|
| ಸ್ಥಿರಃ ಭವ ವೀಡ್ವಂಗಃ ಇತಿ ಗರ್ದಭೇ ಆ ಸಾದಯತಿ | 'ಎಲೈ! ಮೃತ್ತನ್ನು ಹೊರುವ ಗರ್ದಭವೇ! ನೀನು ಮಣ್ಣು ಕೆಳಕ್ಕೆ ಬೀಳದಂತೆ ಸ್ಥಿರನಾಗಿಯೂ, ದೃಢಶರೀರವುಳ್ಳವನಾಗಿಯೂ ಇರು'. ಎಂಬ ಮಂತ್ರದಿಂದ ಕತ್ತೆಯ ಮೇಲೆ ಕೃಷ್ಣಾಜಿನದ ಗಂಟನ್ನು ಇಡಬೇಕು. |
| ಏತಯಾ ಏನಮ್ ಸ್ಥೇಮ್ನೇ ಸಂ ನಹ್ಯತಿ ಏವ | ಈ ಮಂತ್ರದಿಂದ ಅಧ್ವರ್ಯುವು ಈ ಮೃತ್ತಿನ ಗಂಟು ಕೆಳಗೆ ಬೀಳದೆ ಸ್ಥಿರವಾಗಿರುವುದಕ್ಕಾಗಿ ಚೆನ್ನಾಗಿ ಕಟ್ಟುತ್ತಾನೆ. |

**ಕತ್ತೆಯ ಮೇಲೆ ಇಡುವುದರ ಸಮರ್ಥನೆ**

| | |
|---|---|
| ಗರ್ದಭೇನ ಸಂಭರತಿ | ಅಧ್ವರ್ಯುವು ಕತ್ತೆಯ ಮೇಲೆ ಹೊರಿಸಿ ಯಜ್ಞಮೃತ್ತಿಕೆಯನ್ನು ಒಯ್ಯುತ್ತಾನೆ. |
| ತಸ್ಮಾತ್ ಪಶೂನಾಮ್ ಗರ್ದಭಃ ಭಾರಭಾರಿತಮಃ | ಆದುದರಿಂದ ಗರ್ದಭವು ಇತರ ಗವಾದಿಪ್ರಾಣಿಗಳ ಪೈಕಿ ಚೆನ್ನಾಗಿ ಹೊರೆಯನ್ನು ಹೊರಲು ಸಮರ್ಥವಾಗಿದೆ. |

**ಇನ್ನೊಂದು ರೀತಿಯಲ್ಲಿ ಪ್ರಶಂಸೆ**

| | |
|---|---|
| ಗರ್ದಭೇನ ಸಂ ಭರತಿ | ಅಧ್ವರ್ಯುವು ಕತ್ತೆಯ ಮೇಲೆ ಹೊರಿಸಿ ಯಜ್ಞಮೃತ್ತಿಕೆಯನ್ನು ಒಯ್ಯುತ್ತಾನೆ. |

ತಸ್ಮಾದ್ಗರ್ದಭೋಽಪ್ಯನಾಲೇಶೇಽತ್ಯನ್ಯಾನ್ಪಶೂನ್ಮೇದ್ಯತ್ಯನ್ನಗ್ಂ
ಹ್ಯೇನೇನಾರ್ಕಗ್ಂ ಸಂಭರಂತಿ ಗರ್ದಭೇನ ಸಂ ಭರತಿ ತಸ್ಮಾದ್ಗರ್ದಭೋ
ದ್ವಿರೇತಾಸ್ಸನ್ಕನಿಷ್ಠಂ ಪಶೂನಾಂ ಪ್ರ ಜಾಯತೇಽಗ್ನಿರ್ಹ್ಯಸ್ಯ ಯೋನಿಂ ನಿರ್ದಹತಿ

---

ತಸ್ಮಾತ್ । ಗರ್ದಭಃ । ಅಪೀತಿ । ಅನಾಲೇಶ ಇತ್ಯನಾ-ಲೇಶೇ । ಅತೀತಿ । ಅನ್ಯಾನ್ । ಪಶೂನ್ । ಮೇದ್ಯತಿ । ಅನ್ನಮ್ । ಹಿ । ಏನೇನ । ಅರ್ಕಮ್ । ಸಂಭರಂತೀತಿ ಸಮ್-ಭರಂತಿ । ಗರ್ದಭೇನ । ಸಮಿತಿ । ಭರತಿ । ತಸ್ಮಾತ್ । ಗರ್ದಭಃ । ದ್ವಿರೇತಾ ಇತಿ ದ್ವಿ-ರೇತಾಃ । ಸನ್ । ಕನಿಷ್ಠಮ್ । ಪಶೂನಾಮ್ । ಪ್ರೇತಿ । ಜಾಯತೇ । ಅಗ್ನಿಃ । ಹಿ । ಅಸ್ಯ । ಯೋನಿಮ್ । ನಿರ್ದಹತೀತಿ ನಿಃ-ದಹತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಏನೇನ ಅರ್ಕಮ್ ಅನ್ನಮ್ ಸಂಭರಂತಿ** | ಈ ಗರ್ದಭದಿಂದ ಯಜ್ಞದ ಮೂಲಕವಾಗಿ ಅನ್ನಹೇತುವಾದ ಅರ್ಚನೀಯವಾದ ಮೃತ್ತನ್ನು ಒಯ್ಯುವರಷ್ಟೆ. |
| **ತಸ್ಮಾತ್ ಅನಾಲೇಶೇ ಅಪಿ ಗರ್ದಭಃ ಅನ್ಯಾನ್ ಪಶೂನ್ ಅತಿ ಮೇ ದ್ಯತಿ** | ಆದರಿಂದ ಅಲ್ಪವಾದ ಒಣಹುಲ್ಲು ಮುಂತಾದವನ್ನು ತಿಂದರೂ, ಬೇರೆಯ ಉತ್ತಮವಾದ ಆಹಾರವನ್ನು ತಿನ್ನುವ ಪ್ರಾಣಿಗಳಿಗಿಂತಲೂ ಕತ್ತೆಯು ಬಲಿಷ್ಠವಾಗಿರುತ್ತದೆ. |

**ಇನ್ನೊಂದು ರೀತಿಯ ಪ್ರಶಂಸೆ**

| | |
|---|---|
| **ಗರ್ದಭೇನ ಸಂ ಭರತಿ** | ಅಧ್ವರ್ಯುವು ಕತ್ತೆಯ ಮೇಲೆ ಹೊರಿಸಿ ಯಜ್ಞ ಮೃತ್ತಿಕೆಯನ್ನು ಒಯ್ಯುತ್ತಾನೆ. |
| **ತಸ್ಮಾತ್ ಗರ್ದಭಃ ದ್ವಿರೇತಾಃ ಸನ್ ಪಶೂನಾಮ್ ಕನಿಷ್ಠಮ್ ಪ್ರಜಾಯತೇ** | (ಅಗ್ನಿಯು ಪ್ರಜೋತ್ಪಾದನಸಾಮರ್ಥ್ಯವನ್ನು ಕುಗ್ಗಿಸುವುದರಿಂದ) ಗರ್ದಭವು* ದ್ವಿರೇತಸ್ಸಾದರೂ ಪಶುಜಾತಿಗಳಲ್ಲಿ ಕನಿಷ್ಠವಾದ/ಅಲ್ಪಮೂಲ್ಯವಾದ ಗರ್ದಭವನ್ನು ಉತ್ಪಾದಿಸುತ್ತದೆ. |

**ಉಪಸ್ಥಾನವಿಧಿ; 'ಶಿವೋ ಭವ' ಎಂಬುದರ ವಿವರಣೆ**

| | |
|---|---|
| **ಅಸ್ಯ ಯೋನಿಮ್ ಅಗ್ನಿಃ ನಿರ್ದಹತಿ ಹಿ** | ಅಗ್ನಿರೂಪವಾದ ಈ ಮೃತ್ತು ಗರ್ದಭದ ಪ್ರಜೋತ್ಪಾದನಶಕ್ತಿಯನ್ನು ಸುಟ್ಟುಬಿಡುತ್ತದೆ. |

---

* ಕತ್ತೆಯು ತನ್ನ ಗರ್ದಭಜಾತಿಗೂ, ಹೇಸರುಕತ್ತೆಯ ಜಾತಿಗೂ ಕಾರಣವಾದ ಎರಡು ರೇತಸ್ಸಿನ ಶಕ್ತಿಯನ್ನು ಹೊಂದಿದೆ [ತೈ.ಸಂ.7.1.1]

ಪ್ರಜಾಸು ವಾ ಏಷ ಏತರ್ಹ್ಯಾರೂಢ[ಆರೂಢಃ(೨೫)ಸ ಈಶ್ವರಃ]ಸ್ಸ ಈಶ್ವರಃ ಪ್ರಜಾಶ್ಶುಚಾ ಪ್ರದಹಶ್ಶಿವೋ ಭವ ಪ್ರಜಾಭ್ಯ ಇತ್ಯಾಹ ಪ್ರಜಾಭ್ಯ ಏವೈನಗ್ಂ ಶಮಯತಿ ಮಾನುಷೀಭ್ಯಸ್ತ್ವಮಂಗಿರ ಇತ್ಯಾಹ ಮಾನವ್ಯೋ ಹಿ ಪ್ರಜಾ

---

ಪ್ರಜಾಸ್ವಿತಿ ಪ್ರ–ಜಾಸು । ವೈ । ಏಷಃ । ಏತರ್‌ಹಿ । ಆರೂಢ ಇತ್ಯಾ–ರೂಢಃ । (೨೫) । ಸಃ । ಈಶ್ವರಃ । ಪ್ರಜಾ ಇತಿ ಪ್ರ–ಜಾಃ । ಶುಚಾ । ಪ್ರದಹ ಇತಿ ಪ್ರ–ದಹಃ । ಶಿವಃ । ಭವ । ಪ್ರಜಾಭ್ಯ ಇತಿ ಪ್ರ–ಜಾಭ್ಯಃ । ಇತಿ । ಆಹ । ಪ್ರಜಾಭ್ಯ ಇತಿ ಪ್ರ–ಜಾಭ್ಯಃ । ಏವ । ಏನಮ್ । ಶಮಯತಿ । ಮಾನುಷೀಭ್ಯಃ । ತ್ವಮ್ । ಅಂಗಿರಃ । ಇತಿ । ಆಹ । ಮಾನವ್ಯಃ । ಹಿ । ಪ್ರಜಾ ಇತಿ ಪ್ರ–ಜಾಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಏಷಃ ಏತರ್ಹಿ ಪ್ರಜಾಸು ಆರೂಢಃ ವೈ** | (ಗರ್ದಭವೂ ಪ್ರಜೆಗಳಲ್ಲಿ ಸೇರಿರುವುದರಿಂದ, ಚೇತನದಿಂದ ಕೂಡಿರುವುದರಿಂದ, ಪ್ರಜಾಪತಿಯಿಂದಲೇ ಜನಿಸಿರುವುದರಿಂದ) ಅಗ್ನಿಯು ಈಗ ಪ್ರಜೆಗಳಲ್ಲಿ ಆರೂಢನಾಗಿರುವನಷ್ಟೆ. |
| **ಸಃ ಪ್ರಜಾಃ ಶುಚಾ ಪ್ರದಹಃ ಈಶ್ವರಃ** | ಆತನು ಗರ್ದಭಾದಿಗಳನ್ನು/ಪ್ರಜೆಗಳನ್ನು ತಾಪದಿಂದ ಸುಡಲು ಸಮರ್ಥನಾಗಿರುತ್ತಾನೆ. |
| **ಪ್ರಜಾಭ್ಯಃ ಶಿವಃ ಭವ ಇತಿ ಆಹ** | ಈ ಮಂತ್ರಭಾಗವು 'ಅಗ್ನಿಯೇ! ನೀನು ಪ್ರಜೆಗಳ ವಿಷಯದಲ್ಲಿ ಶಾಂತನಾಗಿರು' ಎಂದು ಹೇಳುತ್ತದೆ. |
| **ಏನಮ್ ಪ್ರಜಾಭ್ಯಃ ಶಮಯತಿ ಏವ** | ಪ್ರಜೆಗಳಿಗಾಗಿ ಈ ಅಗ್ನಿಯನ್ನು ಅಧ್ವರ್ಯುವು ಶಾಂತನನ್ನಾಗಿಸುತ್ತಾನೆ. |

'ಮಾನುಷೀಭ್ಯಃ...' ಎಂಬುದರ ವಿವರಣೆ

| | |
|---|---|
| **ಅಂಗಿರಃ ಮಾನುಷೀಭ್ಯಃ ತ್ವಮ್ ಇತಿ ಆಹ** | 'ಅಂಗಸೌಷ್ಠವವುಳ್ಳ ಅಗ್ನಿಯೇ! ನೀನು ಮನುವಿನಿಂದ ಸೃಷ್ಟಿಸಲ್ಪಟ್ಟಿರುವ ಪ್ರಜೆಗಳ/ಪ್ರಾಣಿಗಳ ವಿಷಯದಲ್ಲಿ ಶಾಂತನಾಗು' ಎಂದು ಈ ಮಂತ್ರಭಾಗವು ಹೇಳುತ್ತದೆ. |
| **ಪ್ರಜಾಃ ಮಾನವ್ಯಃ ಹಿ** | ಪ್ರಾಣಿಗಳೆಲ್ಲವೂ/ಪ್ರಜೆಗಳೆಲ್ಲರೂ ಮನುಪ್ರಜಾಪತಿಯಿಂದ ಉತ್ಪನ್ನವಾದವುಗಳಷ್ಟೆ. |

ಮಾ ದ್ಯಾವಾಪೃಥಿವೀ ಅಭಿ ಶೂಶುಚೋ ಮಾಽಂತರಿಕ್ಷಂ ಮಾ
ವನಸ್ಪತೀನಿತ್ಯಾಹೈಭ್ಯ ಏವೈನಂ ಲೋಕೇಭ್ಯಶ್ಶಮಯತಿ ಪ್ರೈತು ವಾಜೀ
ಕನಿಕ್ರದದಿತ್ಯಾಹ ವಾಜೀ ಹ್ಯೇಷ

---

ಮಾ । ದ್ಯಾವಾಪೃಥಿವೀ ಇತಿ ದ್ಯಾವಾ–ಪೃಥಿವೀ । ಅಭೀತಿ । ಶೂಶುಚಃ । ಮಾ । ಅಂತರಿಕ್ಷಮ್ । ಮಾ ।
ವನಸ್ಪತೀನ್ । ಇತಿ । ಆಹ । ಏಭ್ಯಃ । ಏವ । ಏನಮ್ । ಲೋಕೇಭ್ಯಃ । ಶಮಯತಿ । ಪ್ರೇತಿ । ಏತು । ವಾಜೀ ।
ಕನಿಕ್ರದತ್ । ಇತಿ । ಆಹ । ವಾಜೀ । ಹಿ । ಏಷಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|

**'ಮಾ ದ್ಯಾವಾಪೃಥಿವೀ..'ಎಂಬುದರ ವಿವರಣೆ**

| | |
|---|---|
| **ಮಾ ದ್ಯಾವಾಪೃಥಿವೀ ಅಭಿ ಶೂಶುಚಃ ಮಾ ಅಂತರಿಕ್ಷಮ್ ಮಾ ವನಸ್ಪತೀನ್ ಇತಿ ಆಹ** | 'ಎಲೈ! ಅಗ್ನಿಯೇ! ದ್ಯಾವಾಪೃಥಿವಿಗಳನ್ನೂ, ಅಂತರಿಕ್ಷದಲ್ಲಿರುವ ಚೇತನಾಚೇತನಗಳನ್ನೂ, ವೃಕ್ಷಾದಿಗಳನ್ನೂ ದಹಿಸಬೇಡ' ಎಂದು ಈ ಮಂತ್ರಭಾಗವು ಹೇಳುತ್ತದೆ. |
| **ಏನಮ್ ಏಭ್ಯಃ ಲೋಕೇಭ್ಯಃ ಶಮಯತಿ ಏವ** | ಅಧ್ವರ್ಯುವು ಈ ಮಂತ್ರಭಾಗದಿಂದ ಅಗ್ನಿಯನ್ನು ಈ ಲೋಕಗಳ ವಿಷಯದಲ್ಲಿ ಶಾಂತನನ್ನಾಗಿಸುತ್ತಾನೆ. |

**ಕುದುರೆಯನ್ನು ಮುಂದಿಟ್ಟುಕೊಂಡು ನಿಧಾನವಾಗಿ ಹಿಂದಿರುಗುವ ವಿಧಿ; ಆ ವಿನಿಯೋಗದ ಮೂರು ಮಂತ್ರಗಳಲ್ಲಿ ಪ್ರಥಮಮಂತ್ರದ ಪ್ರಥಮಭಾಗದ ವಿವರಣೆ**

| | |
|---|---|
| **ಪ್ರೈತು ವಾಜೀ ಕನಿಕ್ರದತ್ ಇತಿ ಆಹ** | 'ಈ ಕುದುರೆಯು ಹೇಷಾಧ್ವನಿಯನ್ನು ಮಾಡುತ್ತಾ ಮುಂದೆ ಹೋಗಲಿ' ಎಂದು ಈ ಮಂತ್ರಭಾಗವು ಹೇಳುತ್ತದೆ. |
| **ಏಷಃ ವಾಜೀ ಹಿ** | ಈ ಕುದುರೆಯು ವಾಜಿಯೆಂದು ಪ್ರಸಿದ್ಧವಾಗಿದೆಯಷ್ಟೆ. |

---

ಗರ್ದಭದ ಮೇಲಿಟ್ಟು ಯಜ್ಞಮೃತ್ತಿಕೆಯನ್ನು ಒಯ್ಯುವುದನ್ನು ಮೂರು ರೀತಿಯಲ್ಲಿ ಪ್ರಶಂಸಿಸಲಾಗಿದೆ.

ನಾನದದ್ರಾಸಭಃ ಪತ್ವೇತ್ಯಾ[ಪತ್ವೇತಿ(೨೬)ಆಹ]ಹ ರಾಸಭ ಇತಿ ಹ್ಯೇತಮೃಷಯೋಽವದನ್ಭರನ್ನಗ್ನಿಂ ಪುರೀಷ್ಯಮಿತ್ಯಾಹಾಗ್ನಿಗ್ಗ್ಂ ಹ್ಯೇಷ ಭರತಿ ಮಾ ಪಾದ್ಯಾಯುಷಃ ಪುರೇತ್ಯಾಹಾಯುರೇವಾಸ್ಮಿನ್ದಧಾತಿ

---

ನಾನದತ್ । ರಾಸಭಃ । ಪತ್ವಾ । ಇತಿ । (೨೬) । ಆಹ । ರಾಸಭಃ । ಇತಿ । ಹಿ । ಏತಮ್ । ಋಷಯಃ । ಅವದನ್ । ಭರನ್ । ಅಗ್ನಿಮ್ । ಪುರೀಷ್ಯಮ್ । ಇತಿ । ಆಹ । ಅಗ್ನಿಮ್ । ಹಿ । ಏಷಃ । ಭರತಿ । ಮಾ । ಪಾದಿ । ಆಯುಷಃ । ಪುರಾ । ಇತಿ । ಆಹ । ಆಯುಃ । ಏವ । ಅಸ್ಮಿನ್ । ದಧಾತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ದ್ವಿತೀಯಭಾಗದ ವಿವರಣೆ** |
| **ನಾನದತ್ ರಾಸಭಃ ಪತ್ವಾ ಇತಿ ಆಹ** | 'ರಾಸಭವು ಗಮನಶೀಲವಾಗಿ ಸಂತೋಷದಿಂದ ಧ್ವನಿ ಮಾಡುತ್ತದೆ.' ಎಂದು ಈ ಮಂತ್ರಭಾಗವು ಹೇಳುತ್ತದೆ. |
| **ಏತಮ್ ರಾಸಭಃ ಇತಿ ಹಿ ಋಷಯಃ ಅವದನ್** | ಗರ್ದಭವನ್ನು 'ರಾಸಭ' ಎಂದೂ ಋಷಿಗಳು ಹೇಳುತ್ತಾರೆ. |
| | **ತೃತೀಯಭಾಗದ ವಿವರಣೆ** |
| **ಭರನ್ ಅಗ್ನಿಮ್ ಪುರೀಷ್ಯಮ್ ಇತಿ ಆಹ** | 'ಪುರೀಷ್ಯನಾದ ಅಗ್ನಿಯನ್ನು ಈ ರಾಸಭವು ಹೊರುತ್ತದೆ' ಎಂದು ಈ ಮಂತ್ರಭಾಗವು ಹೇಳುತ್ತದೆ. |
| **ಏಷಃ ಅಗ್ನಿಮ್ ಭರತಿ ಹಿ** | ಈ ಗರ್ದಭವು ಅಗ್ನಿಯನ್ನು ಹೊರುತ್ತದೆಯೆಂಬುದು ಪ್ರಸಿದ್ಧವಷ್ಟೆ. |
| | **ಚತುರ್ಥಭಾಗದ ವಿವರಣೆ** |
| **ಮಾ ಪಾದ್ಯಾಯುಷಃ ಪುರಾ ಇತಿ ಆಹ** | 'ಈ ಗರ್ದಭವು ತನ್ನ ಸಂಪೂರ್ಣ ಆಯುಸ್ಸಿನಿಂದ ಮೊದಲೇ ಸಾಯದಿರಲಿ' ಎಂದು ಈ ಮಂತ್ರಭಾಗವು ಹೇಳುತ್ತದೆ. |
| **ಅಸ್ಮಿನ್ ಆಯುಃ ಏವ ದಧಾತಿ** | ಈ ಮಂತ್ರದಿಂದ ಅಧ್ವರ್ಯುವು ಗರ್ದಭದಲ್ಲಿ ಆಯುಸ್ಸನ್ನು ಉಂಟು ಮಾಡುತ್ತಾನೆ. |

ತಸ್ಮಾದ್ಗರ್ದಭಸ್ಸರ್ವಮಾಯುರೇತಿ ತಸ್ಮಾದ್ಗರ್ದಭೇ ಪುರಾಽಽಯುಷಃ
ಪ್ರಮೀತೇ ಬಿಭ್ಯತಿ ವೃಷಾಽಗ್ನಿಂ ವೃಷಣಂ ಭರನ್ನಿತ್ಯಾಹ ವೃಷಾ ಹ್ಯೇಷ
ವೃಷಾಽಗ್ನಿರಪಾಂ ಗರ್ಭಗ್ಂ[ಗರ್ಭಮ್(೨೭)ಸಮುದ್ರಿಯ]

---

ತಸ್ಮಾತ್ । ಗರ್ದಭಃ । ಸರ್ವಮ್ । ಆಯುಃ । ಏತಿ । ತಸ್ಮಾತ್ । ಗರ್ದಭೇ । ಪುರಾ । ಆಯುಷಃ । ಪ್ರಮೀತ ಇತಿ ಪ್ರ-ಮೀತೇ । ಬಿಭ್ಯತಿ । ವೃಷಾ । ಅಗ್ನಿಮ್ । ವೃಷಣಮ್ । ಭರನ್ನ್ । ಇತಿ । ಆಹ । ವೃಷಾ । ಹಿ । ಏಷಃ । ವೃಷಾ । ಅಗ್ನಿಃ । ಅಪಾಮ್ । ಗರ್ಭಮ್ । (೨೭) । ಸಮುದ್ರಿಯಮ್ । ಇತಿ । ಆಹ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ತಸ್ಮಾತ್ ಗರ್ದಭಃ ಸರ್ವಮ್ ಆಯುಃ ಏತಿ** | ಆದುದರಿಂದ ಗರ್ದಭವು ಪೂರ್ಣಾಯುಸ್ಸನ್ನು ಹೊಂದುತ್ತದೆ. |
| **ತಸ್ಮಾತ್ ಆಯುಷಃ ಪುರಾ ಗರ್ದಭೇ ಪ್ರಮೀತೇ ಬಿಭ್ಯತಿ** | ಆದುದರಿಂದ ಪೂರ್ಣಾಯುಸ್ಸಿಗೆ ಮೊದಲೇ ಗರ್ದಭವು ಸತ್ತರೆ ಇದು ದುಃಸ್ವಪ್ನ/ಕೆಟ್ಟುದರ/ಉತ್ಪಾತದ ಸೂಚಕವೆಂದು ಹೆದರುತ್ತಾರೆ. |

ತೃತೀಯಮಂತ್ರದ ಪ್ರಥಮಭಾಗದ ವಿವರಣೆ

| | |
|---|---|
| **ವೃಷಾಗ್ನಿಮ್ ವೃಷಣಮ್ ಭರನ್ ಇತಿ ಆಹ** | 'ವರ್ಷಕವಾದ/ಪ್ರಜೋತ್ಪಾದಕವಾದ ಈ ಗರ್ದಭವು ಫಲಗಳನ್ನು ಸುರಿಸುವ ಅಗ್ನಿಯನ್ನು ಹೊರುತ್ತಾ ಮುಂದೆ ಹೋಗಲಿ' ಎಂದು ಈ ಮಂತ್ರಭಾಗವು ಹೇಳುತ್ತದೆ. |
| **ಏಷಃ ವೃಷಾ ಹಿ** | ಈ ಗರ್ದಭವು ವೃಷವೇ (ಪ್ರಜೋತ್ಪಾದಕವೇ) ಆಗಿದೆ. |
| **ಅಗ್ನಿಃ ವೃಷಾ** | ಅಗ್ನಿಯೂ ಫಲವರ್ಷಕನಾಗಿ ವೃಷನೇ ಆಗಿದ್ದಾನೆ. |

ದ್ವಿತೀಯಭಾಗದ ವಿವರಣೆ

| | |
|---|---|
| **ಅಪಾಮ್ ಗರ್ಭಗ್ಂ ಸಮುದ್ರಿಯಮ್ ಇತಿ ಆಹ** | 'ಮೇಘಗಳ ನೀರಿನಲ್ಲಿ ವಿದ್ಯುದ್ರೂಪವಾಗಿ ಸಮುದ್ರದ ನೀರಿನಲ್ಲಿ ಬಡಬಾಗ್ನಿರೂಪನಾಗಿರುವ ಅಗ್ನಿಯನ್ನು ಹೊತ್ತು ನೀನು ಮುಂದೆ ಹೋಗು' ಎಂದು ಈ ಮಂತ್ರವು ಹೇಳುತ್ತದೆ. |

–ಪಾಗ್ಂ ಹ್ಯೇಷ ಗರ್ಭೋ ಯದಗ್ನಿರಗ್ನ ಆ ಯಾಹಿ ವೀತಯ ಇತಿ ವಾ

ಇಮೌ ಲೋಕೌ ವ್ಯೈತಾಮಗ್ನ ಆ ಯಾಹಿ ವೀತಯ ಇತಿ ಯದಾಹಾನಯೋ

ರ್ಲೋಕಯೋರ್ವೀತ್ಯೈ

---

ಅಪಾಮ್ । ಹಿ । ಏಷಃ । ಗರ್ಭಃ । ಯತ್ । ಅಗ್ನಿಃ । ಅಗ್ನೇ । ಏತಿ । ಯಾಹಿ । ವೀತಯೇ । ಇತಿ । ವೈ । ಇಮೌ ।

ಲೋಕೌ । ವೀತಿ । ಐತಾಮ್ । ಅಗ್ನೇ । ಏತಿ । ಯಾಹಿ । ವೀತಯೇ । ಇತಿ । ಯತ್ । ಆಹ । ಅನಯೋಃ ।

ಲೋಕಯೋಃ । ವೀತ್ಯಾ ಇತಿ ವಿ–ಇತ್ಯೈ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಯತ್ ಅಗ್ನಿಃ ಅಪಾಮ್ ಏಷಃ ಗರ್ಭಃ ಹಿ | ಅಗ್ನಿಯು ನೀರಿನ ಗರ್ಭವೆಂಬುದು ಪ್ರಸಿದ್ಧವಾಗಿದೆ. |

ತೃತೀಯಭಾಗದ ವಿವರಣೆ

| | |
|---|---|
| ಅಗ್ನೇ ಆಯಾಹಿ ವೀತಯೇ ಇತಿ | 'ಹೇ! ಅಗ್ನಿಯೇ! ಪ್ರಜನನಕ್ಕಾಗಿ ನೀನು ಬಾ' ಎಂದು ಮಂತ್ರದ ಅಭಿಪ್ರಾಯ. |
| ಇಮೌ ಲೋಕೌ ವ್ಯೈತಾಮ್ ವೈ | ಈ ದ್ಯಾವಾಪೃಥಿವಿಗಳು ಪ್ರಜನನಕ್ಕಾಗಿ ಬೇರೆಬೇರೆ ಯಾಗಿವೆಯಷ್ಟೆ. |
| ಅಗ್ನೇ ಆ ಯಾಹಿ ವೀತಯೇ ಇತಿ ಯತ್ ಆಹ | 'ಅಗ್ನ ಆ ಯಾಹಿ ವೀತಯೇ' ಎಂದು ಹೇಳುವುದು ಯಾವುದುಂಟೋ ಅದು |
| ಅನಯೋಃ ಲೋಕಯೋಃ ವೀತ್ಯೈ | ದ್ಯಾವಾಪೃಥಿವಿಗಳ ಬೇರ್ಪಡಿಸುವಿಕೆಗೆ ಕಾರಣವಾಗಿ ಅಗ್ನಿಯ ಉತ್ಪತ್ತಿಗೆ ಕಾರಣವಾಗುತ್ತದೆ. |

---

ಕುದುರೆಯನ್ನು ಮುಂದು ಮಾಡಿಕೊಂಡು ಯಜ್ಞಮೃತ್ತಿಕೆಯನ್ನು ಧರಿಸಿರುವ ಕತ್ತೆಯೊಡನೆ ಯಜ್ಞಶಾಲೆಗೆ ಹಿಂದಿರುಗುವ ವಿಧಿಯಿದೆ. ರಾಸಭದ ವಿಶೇಷವು 'ಸ್ಥಿರೋ ಭವ' ಎಂದು ಆರಂಭಿಸಿ ಉಕ್ತವಾಗಿದೆ.

**'ದ್ಯಾವಾಪೃಥಿವೀ ಸಹಾಸ್ತಾಮ್ । ತೇ...ಮಹಃ'** ಎಂಬ ಶ್ರುತಿಯಂತೆ [ತೈ. ಬ್ರಾ. 3. 2. 6] ದ್ಯಾವಾಪೃಥಿವಿಗಳು ಕೂಡಿಯೇ ಇದ್ದವು. ಬಳಿಕ ಅಗ್ನ್ಯಾದಿಜನನಕ್ಕಾಗಿ ಅವಕಾಶವನ್ನು ಕಲ್ಪಿಸಲು ಬೇರೆ ಬೇರೆಯಾದವು.

ಪ್ರಚ್ಯುತೋ ವಾ ಏಷ ಆಯತನಾದಗತಃ ಪ್ರತಿಷ್ಠಾಗ್ಂ ಸ ಏತರ್ಹ್ಯಧ್ವರ್ಯುಂ ಚ ಯಜಮಾನಂ ಚ ಧ್ಯಾಯತ್ಯೃತಗ್ಂ ಸತ್ಯಮಿತ್ಯಾಹೇಯಂ ವಾ ಋತಮಸೌ [(೨೮)] ಸತ್ಯಮನಯೋರೇವೈನಂ ಪ್ರತಿಷ್ಠಾಪಯತಿ

---

ಪ್ರಚ್ಯುತ ಇತಿ ಪ್ರ–ಚ್ಯುತಃ। ವೈ। ಏಷಃ। ಆಯತನಾದಿತ್ಯಾ–ಯತನಾತ್। ಅಗತಃ। ಪ್ರತಿಷ್ಠಾಮಿತಿ ಪ್ರತಿ–ಸ್ಥಾಮ್। ಸಃ। ಏತರ್ಹಿ। ಅಧ್ವರ್ಯುಮ್। ಚ। ಯಜಮಾನಮ್। ಚ। ಧ್ಯಾಯತಿ। ಋತಮ್। ಸತ್ಯಮ್। ಇತಿ। ಆಹ। ಇಯಮ್। ವೈ। ಋತಮ್। ಅಸೌ। (೨೮)। ಸತ್ಯಮ್। ಅನಯೋಃ। ಏವ। ಏನಮ್। ಪ್ರತೀತಿ। ಸ್ಥಾಪಯತಿ।

---

| ಬ್ರಾಹ್ಮಣಭಾಗ | ವಿವರಣೆ |
|---|---|

**ಚತುರ್ಥಭಾಗದ ವಿವರಣೆ; ಅರ್ಥವಾದ**

| | |
|---|---|
| **ಏಷಃ ಆಯತನಾತ್ ಪ್ರಚ್ಯುತಃ ವೈ** | ಈ ಮೃದ್ರೂಪವಾದ ಅಗ್ನಿಯು ಖನನದಿಂದ ಸ್ವಸ್ಥಾನದಿಂದ ಹೊರಬಂದವನಾಗಿರುತ್ತಾನೆ. |
| **ಪ್ರತಿಷ್ಠಾಮ್ ಅಗತಃ** | ಬೇರೆಯ ಕಡೆಯಲ್ಲಿ ಸುಸ್ಥಿತಿಯನ್ನೂ ಹೊಂದಿಲ್ಲ. |
| **ಏತರ್ಹಿ ಸಃ ಅಧ್ವರ್ಯುಮ್ ಚ ಯಜಮಾನಮ್ ಚ ಧ್ಯಾಯತಿ** | ಈ ಸಮಯದಲ್ಲಿ ಆ ಅಗ್ನಿಯು ಅಧ್ವರ್ಯು–ಯಜಮಾನರ ವಿಷಯದಲ್ಲಿ ಕೋಪಗೊಳ್ಳುತ್ತಾನೆ/ ಅವರನ್ನು ಭಕ್ಷಿಸಲು ಬಯಸುತ್ತಾನೆ. |
| **ಋತಮ್ ಸತ್ಯಮ್ ಇತಿ ಆಹ** | ಈ ಮಂತ್ರಭಾಗವು ಅಗ್ನಿಯನ್ನು ಶಾಂತಗೊಳಿಸಲು 'ಋತ–ಸತ್ಯಗಳಲ್ಲಿ ಪ್ರತಿಷ್ಠಾಪಿಸುತ್ತೇನೆ' ಎಂದು ಹೇಳುತ್ತದೆ. |
| **ಇಯಮ್ ಋತಮ್ ವೈ** | ಈ ಭೂಮಿಯು ಋತವಾಗಿದೆ. |
| **ಅಸೌ ಸತ್ಯಮ್** | ಈ ದ್ಯುಲೋಕವು ಸತ್ಯವೆನಿಸುತ್ತದೆ. |
| **ಅನಯೋಃ ಏವ** | ಈ ದ್ಯಾವಾಪೃಥಿವಿಗಳಲ್ಲಿ |
| **ಏನಮ್ ಪ್ರತಿಷ್ಠಾಪಯತಿ** | ಈ ಅಗ್ನಿಯನ್ನು ಅಧ್ವರ್ಯುವು ಚೆನ್ನಾಗಿ ಇಡುತ್ತಾನೆ/ ಸ್ಥಾಪಿಸುತ್ತಾನೆ. ಇದರಿಂದ ಅಗ್ನಿಯನ್ನು ಶಾಂತಗೊಳಿಸುತ್ತಾನೆ. |

ನಾರ್ತಿಮಾರ್ಛತ್ಯಧ್ವರ್ಯುರ್ನ ಯಜಮಾನೋ ವರುಣೋ ವಾ ಏಷ ಯಜಮಾನ
–ಮಭ್ಯೈತಿ ಯದಗ್ನಿರುಪನದ್ಧ ಓಷಧಯಃ ಪ್ರತಿಗೃಹ್ಣೀತಾಗ್ನಿಮೇತಮಿತ್ಯಾಹ
ಶಾಂತ್ಯೈ ವ್ಯಸ್ಯನ್ವಿಶ್ವಾ ಅಮತೀರರಾತೀರಿತ್ಯಾಹ ರಕ್ಷಸಾಮಪಹತ್ಯೈ

---

ನ । ಆರ್ತಿಮ್ । ಏತಿ । ಋಚ್ಛತಿ । ಅಧ್ವರ್ಯುಃ । ನ । ಯಜಮಾನಃ । ವರುಣಃ । ವೈ । ಏಷಃ । ಯಜಮಾನಮ್ ।
ಅಭಿ । ಏತಿ । ಏತಿ । ಯತ್ । ಅಗ್ನಿಃ । ಉಪನದ್ಧ ಇತ್ಯುಪ–ನದ್ಧಃ । ಓಷಧಯಃ । ಪ್ರತೀತಿ । ಗೃಹ್ಣೀತ । ಅಗ್ನಿಮ್ ।
ಏತಮ್ । ಇತಿ । ಆಹ । ಶಾಂತ್ಯೈ । ವ್ಯಸ್ಯನ್ನಿತಿ ವಿ–ಅಸ್ಯನ್ । ವಿಶ್ವಾಃ । ಅಮತೀಃ । ಅರಾತೀಃ । ಇತಿ । ಆಹ ।
ರಕ್ಷಸಾಮ್ । ಅಪಹತ್ಯಾ ಇತ್ಯಪ–ಹತ್ಯೈ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಅಧ್ವರ್ಯುಃ ಆರ್ತಿಮ್ ನ ಆರ್ಛತಿ ಯಜಮಾನಃ ನ (ಆರ್ಛತಿ)** | ಹೀಗೆ ಮಾಡುವುದರಿಂದ ಅಧ್ವರ್ಯುವೂ, ಯಜಮಾನನೂ ಪೀಡೆಯನ್ನು ಹೊಂದುವುದಿಲ್ಲ. |

**ಅಗ್ನ್ಯುಪಾವಹರಣವಿಧಿ; ಮಂತ್ರದ ವಿವರಣೆ**

| | |
|---|---|
| **ಯತ್ ಅಗ್ನಿಃ ಉಪನದ್ಧಃ ಏಷಃ ವರುಣಃ ಯಜಮಾನಮ್ ವೈ ಅಭಿ ಏತಿ** | ಕೃಷ್ಣಾಜಿನದಲ್ಲಿ ಬದ್ಧನಾದ ಅಗ್ನಿಯು ವರುಣಪಾಶದಿಂದ ಬದ್ಧನಾಗಿ ಯಜಮಾನನನ್ನು ಬಾಧಿಸಲು ಬರುತ್ತಾನೆ. |
| **ಓಷಧಯಃ ಏತಮ್ ಅಗ್ನಿಮ್ ಪ್ರತಿಗೃಹ್ಣೀತ ಇತಿ ಆಹ ಶಾಂತ್ಯೈ** | (ಯಜ್ಞವಿಹಾರದ ಉತ್ತರಭಾಗದಲ್ಲಿ ಅಗ್ನಿಯ ಪ್ರತಿಗ್ರಹಕ್ಕಾಗಿ ಸ್ಥಾಪಿತವಾದ) 'ಓಷಧಿಗಳೇ! ಶಾಂತನಾದ ಈ ಅಗ್ನಿಯನ್ನು ಪ್ರತಿಗ್ರಹಿಸಿರಿ' ಎಂದು ಈ ಮಂತ್ರಭಾಗವು ಹೇಳುತ್ತದೆ. ಇದು ಅಗ್ನಿಯನ್ನು ಶಾಂತಗೊಳಿಸುವುದಕ್ಕೆ ನಿಮಿತ್ತವಾಗುತ್ತದೆ. |

**ಮಂತ್ರದ ಇನ್ನೊಂದು ಭಾಗದ ವಿವರಣೆ**

| | |
|---|---|
| **ವ್ಯಸ್ಯನ್ ವಿಶ್ವಾಃ ಅಮತೀಃ ಅರಾತೀಃ ಇತಿ ಆಹ ರಕ್ಷಸಾಮ್ ಅಪಹತ್ಯೈ** | 'ಈ ಅಗ್ನಿಯು ನಿಮ್ಮಲ್ಲಿ ಕುಳಿತವನಾಗಿ ಶತ್ರುಸಮಾನವಾದ ಸಮಸ್ತಬಾಧೆಗಳನ್ನೂ ಹೋಗಲಾಡಿಸುತ್ತಿರಲಿ' ಎಂದು ಈ ಮಂತ್ರವು ಹೇಳುತ್ತದೆ. ಇದು ರಕ್ಷೋಬಾಧೆಯ ಪರಿಹಾರಕ್ಕೆ ಕಾರಣವಾಗುತ್ತದೆ. |

ನಿಷೀದನ್ನೋ ಅಪ ದುರ್ಮತಿಗ್ಂ ಹನದಿತ್ಯಾಹ ಪ್ರತಿಷ್ಠಿತ್ಯಾ ಓಷಧಯಃ

ಪ್ರತಿಮೋದಧ್ವಮೇ[..ಮೋದಧ್ವಮ್(೨೯)ಏನಮಿತ್ಯಾಹ]ನಮಿತ್ಯಾಹೌಷಧಯೋ

ವಾ ಅಗ್ನೇರ್ಭಾಗಧೇಯಂ ತಾಭಿರೇವೈನಗ್ಂ ಸಮರ್ಧಯತಿ

---

ನಿಷೀದನ್ನಿತಿ ನಿ–ಸೀದನ್ನ್ । ನಃ । ಅಪೇತಿ । ದುರ್ಮತಿಮಿತಿ ದುಃ–ಮತಿಮ್ । ಹನತ್ । ಇತಿ । ಆಹ । ಪ್ರತಿಷ್ಠಿತ್ಯಾ ಇತಿ ಪ್ರತಿ–ಸ್ಥಿತ್ಯೈ । ಓಷಧಯಃ । ಪ್ರತೀತಿ । ಮೋದಧ್ವಮ್ । (೨೯) । ಏನಮ್ । ಇತಿ । ಆಹ । ಓಷಧಯಃ । ವೈ । ಅಗ್ನೇಃ । ಭಾಗಧೇಯಮಿತಿ ಭಾಗ–ಧೇಯಮ್ । ತಾಭಿಃ । ಏವ । ಏನಮ್ । ಸಮಿತಿ । ಅರ್ಧಯತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಇನ್ನೊಂದು ಭಾಗದ ವಿವರಣೆ** | |
| ನಿಷೀದನ್ನೋ ಅಪ ದುರ್ಮತಿಮ್ ಹನತ್ ಇತಿ ಆಹ ಪ್ರತಿಷ್ಠಿತ್ಯೈ | (ಯಜ್ಞವಿಹಾರದ ಉತ್ತರಭಾಗದಲ್ಲಿ ಸ್ಥಾಪಿತವಾಗಿರುವ ಓಷಧಿಗಳೇ!) 'ನಿಮ್ಮಲ್ಲಿ ಸ್ಥಾಪಿತನಾಗಿರುವ ಈ ಅಗ್ನಿಯು ಪ್ರಮಾದ–ಆಲಸ್ಯಾದಿಯುಕ್ತವಾದ ನಮ್ಮ ದುರ್ಮತಿಯನ್ನು ಹೋಗಲಾಡಿಸಲಿ' ಎಂದು ಈ ಮಂತ್ರಭಾಗವು ಹೇಳುತ್ತದೆ. ಇದು ಯಜಮಾನನ ಒಳ್ಳೆಯ ಸ್ಥಿತಿಗೆ ಕಾರಣವಾಗುತ್ತದೆ. |
| **ಎರಡನೆಯ ಮಂತ್ರದ ವಿವರಣೆ** | |
| ಓಷಧಯಃ ಏನಮ್ ಪ್ರತಿ ಮೋದಧ್ವಮ್ ಇತಿ ಆಹ | 'ಓಷಧಿಗಳೇ! ಈ ಅಗ್ನಿಯನ್ನು ಹೊಂದಿ ಸಂತೋಷಪಡಿರಿ' ಎಂದು ಈ ಮಂತ್ರಭಾಗವು ಹೇಳುತ್ತದೆ. |
| ಓಷಧಯಃ ಅಗ್ನೇಃ ಭಾಗಧೇಯಮ್ ವೈ | ಓಷಧಿಗಳು ಅಗ್ನಿಯ ಭಾಗ್ಯರೂಪವಾಗಿವೆ. ಅವು ಅನ್ನರೂಪದಿಂದ ಜಾಠರಾಗ್ನಿಯ, ಪುರೋಡಾಶರೂಪದಿಂದ ಅಗ್ನಿದೇವತೆಯ ಭಾಗವಾಗಿವೆ. |
| ತಾಭಿಃ ಏವ ಏನಮ್ ಸಮರ್ಧಯತಿ | ಆ ಓಷಧಿಗಳಿಂದ ಈ ಜಾಠರಾಗ್ನಿಯನ್ನು/ಅಗ್ನಿಯನ್ನು ಸಮೃದ್ಧವಾಗುವಂತೆ ಅಧ್ವರ್ಯುವು ಮಾಡುತ್ತಾನೆ. |

ಪುಷ್ಪಾವತೀಸ್ಸುಪಿಪ್ಪಲಾ ಇತ್ಯಾಹ ತಸ್ಮಾದೋಷಧಯಃ ಫಲಂ ಗೃಹ್ಣಂತ್ಯಯಂ ವೋ ಗರ್ಭ ಋತ್ವಿಯಃ ಪ್ರತ್ನಗ್‌ಂ ಸಧಸ್ಥಮಾಽಸದದಿತ್ಯಾಹ ಯಾಭ್ಯ ಏವೈನಂ ಪ್ರಚ್ಯಾವಯತಿ ತಾಸ್ವೇವೈನಂ ಪ್ರತಿಷ್ಠಾಪಯತಿ

---

ಪುಷ್ಪಾವತೀರಿತಿ ಪುಷ್ಪ-ವತೀಃ । ಸುಪಿಪ್ಪಲಾ ಇತಿ ಸು-ಪಿಪ್ಪಲಾಃ । ಇತಿ । ಆಹ । ತಸ್ಮಾತ್ । ಓಷಧಯಃ । ಫಲಮ್ । ಗೃಹ್ಣಂತಿ । ಅಯಮ್ । ವಃ । ಗರ್ಭಃ । ಋತ್ವಿಯಃ । ಪ್ರತ್ನಮ್ । ಸಧಸ್ಥಮಿತಿ ಸಧ-ಸ್ಥಮ್ । ಏತಿ । ಅಸದತ್ । ಇತಿ । ಆಹ । ಯಾಭ್ಯಃ । ಏವ । ಏನಮ್ । ಪ್ರಚ್ಯಾವಯತೀತಿ ಪ್ರ-ಚ್ಯಾವಯತಿ । ತಾಸು । ಏವ । ಏನಮ್ । ಪ್ರತೀತಿ । ಸ್ಥಾಪಯತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|

ಅದರಲ್ಲಿ ಇನ್ನೊಂದು ಅಂಶದ ವಿವರಣೆ; ಅರ್ಥವಾದ

| | |
|---|---|
| **ಪುಷ್ಪಾವತೀಃ ಸುಪಿಪ್ಪಲಾಃ ಇತಿ ಆಹ** | 'ಒಳ್ಳೆಯ ಪುಷ್ಪಗಳುಳ್ಳ ಒಳ್ಳೆಯ ಫಲಗಳುಳ್ಳ ಓಷಧಿಗಳೇ! ಎಂದು ಈ ಮಂತ್ರಭಾಗವು ಹೇಳುತ್ತದೆ. |
| **ತಸ್ಮಾತ್ ಓಷಧಯಃ ಫಲಮ್ ಗೃಹ್ಣಂತಿ** | ಆದುದರಿಂದ ಓಷಧಿಗಳು ಕಾಲದಲ್ಲಿ ಫಲ-ಪುಷ್ಪಗಳನ್ನು ಬಿಡುತ್ತವೆ. |

ಮತ್ತೊಂದು ಅಂಶದ ವಿವರಣೆ; ಅರ್ಥವಾದ

| | |
|---|---|
| **ಅಯಮ್ ವಃ ಋತ್ವಿಯಃ ಗರ್ಭಃ ಪ್ರತ್ನಮ್ ಸಧಸ್ಥಮ್ ಆಸದತ್ ಇತಿ ಆಹ** | 'ಓಷಧಿಗಳೇ! ಈ ಅಗ್ನಿಯು ನಿಮ್ಮ ಋತುಕಾಲೀನ ಗರ್ಭವಾಗಿ ಪುರಾತನವಾದ ಸ್ಥಾನವನ್ನು ಹೊಂದಲಿ' ಎಂದು ಈ ಮಂತ್ರಭಾಗವು ಹೇಳುತ್ತದೆ. |
| **ಏನಮ್ ಯಾಭ್ಯಃ ಏವ ಪ್ರಚ್ಯಾವಯತಿ** | ಈ ಅಗ್ನಿಯು ಮೃತ್ಖನನಸ್ಥಾನದಲ್ಲಿ ಯಾವ ಓಷಧಿಗಳಿಂದ ಪ್ರಚ್ಯುತವಾಗಿದೆಯೋ |
| **ಏನಮ್ ತಾಸು ಏವ ಪ್ರತಿಷ್ಠಾಪಯತಿ** | ಈ ಯಜ್ಞಭೂಮಿಯ ಓಷಧಿಗಳಲ್ಲಿಯೇ ಈ ಅಗ್ನಿಯನ್ನು ಅಧ್ವರ್ಯುವು ಪ್ರತಿಷ್ಠೆ ಮಾಡುತ್ತಾನೆ. |

ದ್ವಾಭ್ಯಾಮುಪಾವಹರತಿ ಪ್ರತಿಷ್ಠಿತ್ಯೈ [ ॥ ೩೦-5 ॥ ]

[ಅಸ್ತ್ವನುಷ್ಟುಬಸಿ ಸಾದಯತ್ಯಾರೂಢಃ ಪತ್ವೇತಿ ಗರ್ಭಮಸೌ ಮೋದಧ್ವಂ ದ್ವಿಚತ್ವಾರಿಗ್ಂಶಚ್ಚ ॥]

ದ್ವಾಭ್ಯಾಮ್ । ಉಪಾವಹರತೀತ್ಯುಪ-ಅವಹರತಿ । ಪ್ರತಿಷ್ಠಿತ್ಯಾ ಇತಿ ಪ್ರತಿ-ಸ್ಥಿತ್ಯೈ ॥ ೩೦ ॥

ದ್ವಾಭ್ಯಾಮ್ ಉಪಾವಹರತಿ ಪ್ರತಿಷ್ಠಿತ್ಯೈ

**'ಓಷಧಯಃ ಪ್ರತಿಗೃಹ್ಣೀತ' 'ಓಷಧಯಃ ಪ್ರತಿಮೋದಧ್ವಮ್'** ಎಂಬ ಎರಡು ಮಂತ್ರಗಳಿಂದ ಅಗ್ನಿಯನ್ನು/ಯಜ್ಞಮೃತ್ತಿಕೆಯನ್ನು ಓಷಧಿಗಳಲ್ಲಿ ಇಡಬೇಕು. ಇದರಿಂದ ಯಜಮಾನನು ಪ್ರತಿಷ್ಠಿತನಾಗುತ್ತಾನೆ.



## ॥ ಷಷ್ಠೋಽನುವಾಕಃ ॥

ವಾರುಣೋ ವಾ ಅಗ್ನಿರುಪನದ್ಧೋ ವಿ ಪಾಜಸೇತಿ ವಿಸ್ರಗ್ಂಸಯತಿ

ಸವಿತೃಪ್ರಸೂತ ಏವಾಸ್ಯ ವಿಷೂಚೀಂ ವರುಣಮೇನಿಂ ವಿಸ್ಸೃಜ–

---

ವಾರುಣಃ । ವೈ । ಅಗ್ನಿಃ । ಉಪನದ್ಧ ಇತ್ಯುಪ–ನದ್ಧಃ । ವೀತಿ । ಪಾಜಸಾ । ಇತಿ । ವೀತಿ । ಸ್ರಗ್ಂಸಯತಿ ।

ಸವಿತೃಪ್ರಸೂತ ಇತಿ ಸವಿತೃ–ಪ್ರಸೂತಃ । ಏವ । ಅಸ್ಯ । ವಿಷೂಚೀಮ್ । ವರುಣಮೇನಿಮಿತಿ ವರುಣ–

ಮೇನಿಮ್ । ವೀತಿ । ಸೃಜತಿ ।

---

ಹಿಂದಿನ ಐದನೆಯ ಅನುವಾಕದಲ್ಲಿ ಉಖೆಗಾಗಿ ಮೃತ್ತನ್ನು ಅಗೆದು ತರುವುದು ಹೇಳಲ್ಪಟ್ಟಿತು. ಈ ಆರನೆಯ ಅನುವಾಕದಲ್ಲಿ ಉಖಾನಿರ್ಮಾಣವು ಹೇಳಲ್ಪಟ್ಟಿದೆ.

---

| ಬ್ರಾಹ್ಮಣಭಾಗ | ವಿವರಣೆ |
|---|---|

**ಕೃಷ್ಣಾಜಿನದ ಕಟ್ಟನ್ನು ಬಿಡಿಸುವ ವಿಧಿ; ಅರ್ಥವಾದ**

| | |
|---|---|
| **ಉಪನದ್ಧಃ ಅಗ್ನಿಃ ವಾರುಣಃ ವೈ** | ಕೃಷ್ಣಾಜಿನದಲ್ಲಿ ಕಟ್ಟಿರುವ ಅಗ್ನಿಯು (ಉಖೆಯ ಮೃತ್ತಿಕೆಯು) ವರುಣಪಾಶಗೃಹೀತವೇ ಆಗಿದೆ. |
| **ವಿಪಾಜಸಾ ಇತಿ ವಿಸ್ರಗ್ಂಸಯತಿ** | **'ವಿಪಾಜಸಾ'** ಎಂಬ ಮಂತ್ರದಿಂದ ಕೃಷ್ಣಾಜಿನದ ಕಟ್ಟನ್ನು ಬಿಚ್ಚಬೇಕು. [ವಿಧಿ] |
| **ಸವಿತೃಪ್ರಸೂತಃ ಏವ** | ಸವಿತೃದೇವನ/ಪರಮೇಶ್ವರನಿಂದ ಪ್ರೇರಿತನಾದವನಾಗಿಯೇ |
| **ಅಸ್ಯ ವಿಷೂಚೀಮ್ ವರುಣಮೇನಿಮ್ ವಿಸ್ಸೃಜತಿ** | ಈ ಅಗ್ನಿಗೆ/ಮೃತ್ತಿಕೆಗೆ ಸುತ್ತಲೂ ವ್ಯಾಪಕವಾದ ವರುಣನ ಬಾಧೆಯನ್ನು/ವರುಣಪಾಶಬಂಧನದ ನೋವನ್ನು ಹೋಗಲಾಡಿಸುತ್ತಾನೆ. |

---

ತಾತ್ಪರ್ಯ:– ಅಮಂತ್ರಕವಾದ ಬಂಧನವು ಅಮಂತ್ರಕವಾದ ಬಿಡಿಸುವಿಕೆಯಿಂದಲೇ ದೂರಾಗುತ್ತದೆ. ಆದರೂ ಸವಿತೃದೇವನ ಪ್ರೇರಣೆಯಿಲ್ಲದೆ ಬಿಡಿಸಿದರೆ ವರುಣಪಾಶವು ದೂರವಾಗುವುದಿಲ್ಲ. ಬಂಧವಿಮೋಚನೆಗಾಗಿಯೇ

–ತ್ಯಪ ಉಪಸೃಜತ್ಯಾಪೋ ವೈ ಶಾಂತಾಶ್ಶಾಂತಾಭಿರೇವಾಸ್ಯ ಶುಚಗ್ಂ

ಶಮಯತಿ ತಿಸೃಭಿರುಪ ಸೃಜತಿ ತ್ರಿವೃದ್ವಾ ಅಗ್ನಿರ್ಯಾವಾನೇವಾಗ್ನಿಸ್ತಸ್ಯ

ಶುಚಗ್ಂ ಶಮಯತಿ

---

ಅಪಃ । ಉಪೇತಿ । ಸೃಜತಿ । ಆಪಃ । ವೈ । ಶಾಂತಾಃ । ಶಾಂತಾಭಿಃ । ಏವ । ಅಸ್ಯ । ಶುಚಮ್ । ಶಮಯತಿ । ತಿಸೃಭಿರಿತಿ ತಿಸೃ–ಭಿಃ । ಉಪೇತಿ । ಸೃಜತಿ । ತ್ರಿವೃದಿತಿ ತ್ರಿ–ವೃತ್ । ವೈ । ಅಗ್ನಿಃ । ಯಾವಾನ್ । ಏವ । ಅಗ್ನಿಃ । ತಸ್ಯ । ಶುಚಮ್ । ಶಮಯತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|

### ಜಲಸೇಚನವಿಧಿ; ಅರ್ಥವಾದ

| | |
|---|---|
| **ಅಪಃ ಉಪಸೃಜತಿ** | ಮೃತ್ತಿನ ಮೇಲೆ ನೀರನ್ನು ಹಾಕಬೇಕು. [ವಿಧಿ] |
| **ಆಪಃ ಶಾಂತಾಃ ವೈ** | ನೀರುಗಳು ಶಾಂತವಾಗಿರುತ್ತವೆ/ಶಾಂತಗೊಳಿಸುತ್ತವೆ. |
| **ಶಾಂತಾಭಿಃ ಏವ ಅಸ್ಯ ಶುಚಮ್ ಶಮಯತಿ** | ಶಾಂತವಾದ ನೀರುಗಳಿಂದಲೇ ಅಗ್ನಿಯ/ಉಖೆಯ ಮೃತ್ತಿನ ತಾಪವನ್ನು ಅಧ್ವರ್ಯುವು ಹೋಗಲಾಡಿಸುತ್ತಾನೆ. |

### ಮಂತ್ರಸಂಖ್ಯಾವಿಧಿ; ಅರ್ಥವಾದ

| | |
|---|---|
| **ತಿಸೃಭಿಃ ಉಪಸೃಜತಿ** | 'ಆಪೋ ಹಿ ಷ್ಠಾ' ಎಂಬುದಾಗಿ ಪ್ರಾರಂಭವಾಗುವ ಮೂರು ಮಂತ್ರಗಳಿಂದ ನೀರನ್ನು ಸೇಚಿಸಬೇಕು. |
| **ಅಗ್ನಿಃ ತ್ರಿವೃತ್ ವೈ** | ಅಗ್ನಿಯು(ಗಾರ್ಹಪತ್ಯ, ಆಹವನೀಯ ಮತ್ತು ದಕ್ಷಿಣಾಗ್ನಿ) ಎಂದು ಮೂರು ಪ್ರಕಾರವಾಗಿರುತ್ತಾನೆ. |
| **ಅಗ್ನಿಃ ಯಾವಾನ್ ಏವ** | ಅಗ್ನಿಯು ಎಷ್ಟು ರೀತಿಯಲ್ಲಿ ಇರುವನೋ |
| **ತಸ್ಯ ಶುಚಮ್ ಶಮಯತಿ** | ಆ ಎಲ್ಲಾ ಪ್ರಕಾರಗಳಿಂದ ಕೂಡಿರುವ ಅಗ್ನಿಯ ತಾಪವನ್ನು ಅಧ್ವರ್ಯುವು ಈ ಮಂತ್ರದಿಂದ ಜಲಸೇಚನ ಮಾಡುವುದರಿಂದ ಹೋಗಲಾಡಿಸುತ್ತಾನೆ. |

---

ಈ ಮಂತ್ರವು ಸವಿತೃದೇವನಿಂದ ಅಂದರೆ ಪರಮೇಶ್ವರನಿಂದ ನಿರ್ಮಿತವಾಗಿದೆ. ಈ ಮಂತ್ರಪಾಠವನ್ನು ಮಾಡುವುದರಿಂದ ಸವಿತೃಪ್ರೇರಿತವಾಗುತ್ತದೆ.

ಮಿತ್ರಸ್ಸಗ್ಂಸೃಜ್ಯ ಪೃಥಿವೀಮಿತ್ಯಾಹ ಮಿತ್ರೋ ವೈ ಶಿವೋ ದೇವಾನಾಂ ತೇನೈವೈ

[ತೇನೈವ(೩೧)ಏನಗ್ಂ]ನಗ್ಂ ಸಗ್ಂಸೃಜತಿ ಶಾಂತ್ಯೈ ಯದ್ಗ್ರಾಮ್ಯಾಣಾಂ

ಪಾತ್ರಾಣಾಂ ಕಪಾಲೈಸ್ಸಗ್ಂಸೃಜೇದ್ಗ್ರಾಮ್ಯಾಣಿ ಪಾತ್ರಾಣಿ ಶುಚಾಽರ್ಪಯೇ–

---

ಮಿತ್ರಃ । ಸಗ್ಂಸೃಜ್ಯೇತಿ ಸಮ್–ಸೃಜ್ಯ । ಪೃಥಿವೀಮ್ । ಇತಿ । ಆಹ । ಮಿತ್ರಃ । ವೈ । ಶಿವಃ । ದೇವಾನಾಮ್ । ತೇನ ।

ಏವ । (೩೧) । ಏನಮ್ । ಸಮಿತಿ । ಸೃಜತಿ । ಶಾಂತ್ಯೈ । ಯತ್ । ಗ್ರಾಮ್ಯಾಣಾಮ್ । ಪಾತ್ರಾಣಾಮ್ । ಕಪಾಲೈಃ ।

ಸಗ್ಂಸೃಜೇದಿತಿ ಸಮ್–ಸೃಜೇತ್ । ಗ್ರಾಮ್ಯಾಣಿ । ಪಾತ್ರಾಣಿ । ಶುಚಾ । ಅರ್ಪಯೇತ್ ।

---

**ಬ್ರಾಹ್ಮಣಭಾಗ** | **ವಿವರಣೆ**

**ಮಣ್ಣಿನೊಡನೆ ಇತರ ವಸ್ತುಗಳನ್ನು ಸೇರಿಸುವ ವಿಧಿ; ಅರ್ಥವಾದ; ಪ್ರಥಮಮಂತ್ರದ ವಿವರಣೆ**

**ಮಿತ್ರಃ ಸಗ್ಂಸೃಜ್ಯ ಪೃಥಿವೀಮ್ ಇತಿ ಆಹ** — 'ಮಿತ್ರದೇವನು ಪೃಥಿವೀರೂಪವಾದ ವಸ್ತುಗಳಿಂದ ಜ್ಯೋತೀರೂಪವಾದ ಮಣ್ಣನ್ನು ಸೇರಿಸಿ ಉಖೆಯನ್ನು ನಿರ್ಮಿಸಿದನು' ಎಂದು ಈ ಮಂತ್ರವು ಹೇಳುತ್ತದೆ.

**ದೇವಾನಾಮ್ ಮಿತ್ರಃ ಶಿವಃ ವೈ** — ದೇವತೆಗಳಲ್ಲಿ ಮಿತ್ರದೇವನು ಶಾಂತನಾದ ದೇವನಾಗಿರುತ್ತಾನೆ.

**ತೇನ ಏವ ಏನಮ್ ಸಂಸೃಜತಿ ಶಾಂತ್ಯೈ** — ಆದುದರಿಂದ ಆ ಮಿತ್ರದೇವನ ಸಹಕಾರದಿಂದಲೇ ಅರ್ಮಕಪಾಲಾದಿ ಉಕ್ತವಸ್ತುಗಳನ್ನು ಸೇರಿಸಿದವನಾಗುತ್ತಾನೆ. ಇದು ಶಾಂತಿಗೆ ಕಾರಣವಾಗುತ್ತದೆ.

**ಅರ್ಮಕಪಾಲವಿಧಿ; ಅರ್ಥವಾದ**

**ಯತ್ ಗ್ರಾಮ್ಯಾಣಾಮ್ ಪಾತ್ರಾಣಾಮ್ ಕಪಾಲೈಃ ಸಗ್ಂಸೃಜೇತ್** — ಗ್ರಾಮ್ಯಗಳಾದ (ಮನೆಯಲ್ಲಿ ಉಪಯೋಗಿಸುವ) ಪಾತ್ರಗಳಿಂದ ಮೃತ್ತನ್ನು ಕಲಸುವುದಾದರೆ

**ಗ್ರಾಮ್ಯಾಣಿ ಪಾತ್ರಾಣಿ ಶುಚಾ ಅರ್ಪಯೇತ್** — ಗ್ರಾಮ್ಯಪಾತ್ರಗಳನ್ನು ಅಗ್ನಿದಾಹದಿಂದ ಕೂಡಿಸುತ್ತಾನೆ.

ದರ್ಮಕಪಾಲ್ಯೈಸ್ಸಗ್ಂ ಸೃಜತ್ಯೇತಾನಿ ವಾ ಅನುಪಜೀವನೀಯಾನಿ ತಾನ್ಯೇವ

ಶುಚಾಽರ್ಪಯತಿ ಶರ್ಕರಾಭಿಸ್ಸಗ್ಂ ಸೃಜತಿ ಧೃತ್ಯಾ ಅಥೋ

ಶಂತ್ವಾಯಾಜಲೋಮ್ಯೈಸ್ಸಗ್ಂ ಸೃಜತ್ಯೇಷಾ ವಾ ಅಗ್ನೇಃ ಪ್ರಿಯಾ ತನೂ–

---

ಅರ್ಮಕಪಾಲ್ಯೈರಿತ್ಯರ್ಮ–ಕಪಾಲ್ಯೈಃ । ಸಮಿತಿ । ಸೃಜತಿ । ಏತಾನಿ । ವೈ । ಅನುಪಜೀವನೀಯಾನೀತ್ಯನುಪ–ಜೀವನೀಯಾನಿ । ತಾನಿ । ಏವ । ಶುಚಾ । ಅರ್ಪಯತಿ । ಶರ್ಕರಾಭಿಃ । ಸಮಿತಿ । ಸೃಜತಿ । ಧೃತ್ಯೈ । ಅಥೋ ಇತಿ । ಶಂತ್ವಾಯೇತಿ ಶಮ್–ತ್ವಾಯ । ಅಜಲೋಮ್ಯೈರಿತ್ಯಜ–ಲೋಮ್ಯೈಃ । ಸಮಿತಿ । ಸೃಜತಿ । ಏಷಾ । ವೈ । ಅಗ್ನೇಃ । ಪ್ರಿಯಾ । ತನೂಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಅರ್ಮಕಪಾಲ್ಯೈಃ ಸಂಸೃಜತಿ** | ಶೂನ್ಯಪ್ರದೇಶದಲ್ಲಿ ತ್ಯಜಿಸಿರುವ ಪಾತ್ರಗಳಿಂದ ಮೃತ್ತನ್ನು ಕೂಡಿಸಬೇಕು. [ವಿಧಿ] |
| **ಏತಾನಿ ವೈ ಅನುಪಜೀವನೀಯಾನಿ** | ಈ ಅರ್ಮಕಪಾಲಗಳು ಈಗ ಉಪಯೋಗಿಸಲ್ಪಡುತ್ತಿಲ್ಲವಷ್ಟೆ. |
| **ತಾನಿ ಏವ ಶುಚಾ ಅರ್ಪಯತಿ** | ಅವುಗಳನ್ನೇ ಅಗ್ನಿದಾಹದಿಂದ ಕೂಡಿಸಿದಂತಾಗುತ್ತದೆ. |

ಸಣ್ಣ ಕಲ್ಲುಗಳನ್ನು ಮಣ್ಣಿಗೆ ಬೆರೆಸುವ ವಿಧಿ; ಅರ್ಥವಾದ

| | |
|---|---|
| **ಶರ್ಕರಾಭಿಃ ಸಂಸೃಜತಿ ಧೃತ್ಯೈ** | ಕಲ್ಲುಚೂರುಗಳಿಂದ ಮಣ್ಣನ್ನು ಕೂಡಿಸಬೇಕು. ಇದರಿಂದ ಉಖೆಯು ಗಟ್ಟಿಯಾಗಿ ಇರುವಂತೆ ಆಗುತ್ತದೆ. |
| **ಅಥೋ ಶಂತ್ವಾಯ** | ಮತ್ತು ಒಡೆಯದೆ ಸುಖವಾಗಿ ಇರುವಂತೆ ಮಾಡುತ್ತದೆ. |

ಆಡಿನ ಕೂದಲುಗಳನ್ನು (ಅಜಲೋಮ) ಮಿಶ್ರ ಮಾಡುವ ವಿಧಿ; ಅರ್ಥವಾದ

| | |
|---|---|
| **ಅಜಲೋಮ್ಯೈಃ ಸಂಸೃಜತಿ**<br>**ಯತ್ ಅಜಾ ಏಷಾ ವೈ ಅಗ್ನೇಃ ಪ್ರಿಯಾ ತನೂಃ** | ಮೇಕೆಯ ಲೋಮಗಳಿಂದ ಮೃತ್ತನ್ನು ಕೂಡಿಸಬೇಕು. (ಅಜವೂ ಅಗ್ನಿಯೂ ಪ್ರಜಾಪತಿಯ ಮುಖದಿಂದ ಉತ್ಪನ್ನವಾದುದರಿಂದ] ಅಜೆಯು ಅಗ್ನಿಗೆ ಪ್ರಿಯವಾದುದಾಗಿದೆ. ಅಲ್ಲದೆ ಅಗ್ನಿಸಂಬಂಧಿಯಾಗಿ ತೇಜಸ್ವಿಯೂ ಆಗಿದೆ. |

ಯದಜಾ ಪ್ರಿಯಯೈವೈನಂ ತನುವಾ ಸಗ್ಂ ಸೃಜತ್ಯಥೋ ತೇಜಸಾ ಕೃಷ್ಣಾಜಿನಸ್ಯ ಲೋಮಭಿಸ್ಸಗ್ಂ[ಸಮ್(೩೨)ಸೃಜತಿ]ಸೃಜತಿ ಯಜ್ಞೋ ವೈ ಕೃಷ್ಣಾಜಿನಂ ಯಜ್ಞೇನೈವ ಯಜ್ಞಗ್ಂ ಸಗ್ಂ ಸೃಜತಿ ರುದ್ರಾಸ್ಸಂಭೃತ್ಯ ಪೃಥಿವೀಮಿತ್ಯಾ–

---

ಯತ್ । ಅಜಾ । ಪ್ರಿಯಯಾ । ಏವ । ಏನಮ್ । ತನುವಾ । ಸಮಿತಿ । ಸೃಜತಿ । ಅಥೋ ಇತಿ । ತೇಜಸಾ । ಕೃಷ್ಣಾಜಿನಸ್ಯೇತಿ ಕೃಷ್ಣ–ಅಜಿನಸ್ಯ । ಲೋಮಭಿರಿತಿ ಲೋಮ–ಭಿಃ । ಸಮಿತಿ । (೩೨) । ಸೃಜತಿ । ಯಜ್ಞಃ । ವೈ । ಕೃಷ್ಣಾಜಿನಮಿತಿ ಕೃಷ್ಣ–ಅಜಿನಮ್ । ಯಜ್ಞೇನ । ಏವ । ಯಜ್ಞಮ್ । ಸಮಿತಿ । ಸೃಜತಿ । ರುದ್ರಾಃ । ಸಂಭೃತ್ಯೇತಿ ಸಮ್–ಭೃತ್ಯ । ಪೃಥಿವೀಮ್ । ಇತಿ । ಆಹ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಏನಮ್ ಪ್ರಿಯಯಾ ಏವ ತನುವಾ ಸಂಸೃಜತಿ | ಪ್ರಿಯವಾದ ಶರೀರದಿಂದಲೇ ಅಗ್ನಿರೂಪವಾದ ಮೃತ್ತನ್ನು ಅಧ್ವರ್ಯುವು ಸೇರಿಸುತ್ತಾನೆ. |
| ಅಥೋ ತೇಜಸಾ | ಮತ್ತು ತೇಜಸ್ಸಿನಿಂದಲೂ ಕೂಡಿಸುತ್ತಾನೆ. |

**ಕೃಷ್ಣಾಜಿನದ ಲೋಮಗಳಿಂದ ಮೃತ್ತನ್ನು ಸೇರಿಸುವ ವಿಧಿ; ಅರ್ಥವಾದ**

| | |
|---|---|
| ಕೃಷ್ಣಾಜಿನಸ್ಯ ಲೋಮಭಿಃ ಸಂಸೃಜತಿ | ಕೃಷ್ಣಾಜಿನದ/ಜಿಂಕೆಯ ಚರ್ಮದ ಕೂದಲುಗಳಿಂದ ಉಖೆಯ ಮಣ್ಣನ್ನು ಬೆರೆಸಬೇಕು. [ವಿಧಿ] |
| ಯಜ್ಞಃ ಕೃಷ್ಣಾಜಿನಮ್ ವೈ | *ಯಜ್ಞವು ಕೃಷ್ಣಾಜಿನದ ರೂಪವಾಗಿದೆ. |
| ಯಜ್ಞೇನ ಏವ ಯಜ್ಞಮ್ ಸಂಸೃಜತಿ | ಅಧ್ವರ್ಯುವು ಯಜ್ಞದಿಂದಲೇ ಯಜ್ಞವನ್ನು ಕೂಡಿಸಿದವನಾಗುತ್ತಾನೆ. |
| ರುದ್ರಾಃ ಸಂಭೃತ್ಯ ಪೃಥಿವೀಮ್ ಇತಿ ಆಹ | (ರುದ್ರ, ವಸು, ಸಿನೀವಾಲೀ, ಅದಿತಿ) ರುದ್ರ ಮೊದಲಾದ ದೇವತೆಗಳು ಉಖೆಯ ಮಣ್ಣನ್ನು ಚೆನ್ನಾಗಿ ಮರ್ದಿಸಿ ಭೂಮಿರೂಪವಾದ ಮಣ್ಣಿನಿಂದ ಜ್ಯೋತಿಯನ್ನು ಪ್ರಕಾಶಗೊಳಿಸಿದರು ಎಂದು ಈ ಮಂತ್ರಭಾಗವು ಹೇಳುತ್ತದೆ. |

---

ತಾತ್ಪರ್ಯ:–ಉಖಾನಿರ್ಮಾಣದ ಮೃತ್ತಿನಲ್ಲಿ ದ್ರವ್ಯಾಂತರಗಳನ್ನು ಸೇರಿಸಬೇಕು.

---

* ಯಜ್ಞೋ ದೇವೇಭ್ಯಃ ನಿಲಾಯತ । ಕೃಷ್ಣೋ ರೂಪಂ ಕೃತ್ವಾ । [ತೈ. ಬ್ರಾ. 3. 2. 6] ಯಜ್ಞವು ಜಿಂಕೆಯ ರೂಪವನ್ನು ಧರಿಸಿ ದೇವತೆಗಳಿಂದ ದೂರವಾಯಿತು. ಎಂದು ಶ್ರುತಿಯು ಇದೆ.

ಹ್ಯೈತಾ ವಾ ಏತಂ ದೇವತಾ ಅಗ್ರೇ ಸಮಭರನ್ತಾಭಿರೇವೈನಗ್ಂ ಸಂ ಭರತಿ ಮಖಸ್ಯ ಶಿರೋಽಸೀತ್ಯಾಹ ಯಜ್ಞೋ ವೈ ಮಖಸ್ತಸ್ಯೈತಚ್ಛಿರೋ ಯದುಖಾ ತಸ್ಮಾದೇವಮಾಹ

---

ಏತಾಃ । ವೈ । ಏತಮ್ । ದೇವತಾಃ । ಅಗ್ರೇ । ಸಮಿತಿ । ಅಭರನ್ನ್ । ತಾಭಿಃ । ಏವ । ಏನಮ್ । ಸಮಿತಿ । ಭರತಿ । ಮಖಸ್ಯ । ಶಿರಃ । ಅಸಿ । ಇತಿ । ಆಹ । ಯಜ್ಞಃ । ವೈ । ಮಖಃ । ತಸ್ಯ । ಏತತ್ । ಶಿರಃ । ಯತ್ । ಉಖಾ । ತಸ್ಮಾತ್ । ಏವಮ್ । ಆಹ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ***ಏತಾಃ ದೇವತಾಃ ಅಗ್ರೇ ಏತಮ್ ಸಮಭರನ್ ವೈ** | ಈ ಅಗ್ನಿಯನ್ನು/ಮೃತ್ತನ್ನು ಈ ರುದ್ರ, ಸಿನೀವಾಲಿ, ವಸು, ಅದಿತಿ ದೇವತೆಗಳು ಮೊದಲು ಭರಣ/ಮರ್ದನ ಮಾಡಿದರು. |
| **ತಾಭಿಃ ಏವ ಏನಮ್ ಸಂಭರತಿ** | ಆ ದೇವತೆಗಳಿಂದಲೇ ಅಧ್ವರ್ಯುವು ಈ ಉಖಾ ಸಾಧನವಾದ ಮೃತ್ತನ್ನು ಚೆನ್ನಾಗಿ ಮರ್ದಿಸುತ್ತಾನೆ. |

### ಮಣ್ಣಿನ ಉಂಡೆಗಳನ್ನು ಮಾಡುವಿಕೆ

| | |
|---|---|
| **ಮಖಸ್ಯ ಶಿರಃ ಅಸಿ ಇತಿ ಆಹ** | ಎಲೈ! ಮೃತ್ಪಿಂಡವೇ! ಯಜ್ಞದ ಶಿರಸ್ಸೇ ನೀನಾಗಿದ್ದೀಯೆ ಎಂದು ಈ ಮಂತ್ರಭಾಗವು ಹೇಳುತ್ತದೆ. |
| **ಯಜ್ಞಃ ವೈ ಮಖಃ** | ಯಜ್ಞವು ಮಖವಾಗಿದೆ. |
| **ಯತ್ ಉಖಾ ತಸ್ಯ ಏತತ್ ಶಿರಃ** | ಉಖೆಯು ಯಾವುದಿ ದೆಯೋ ಇದು ಯಜ್ಞದ ಶಿರಸ್ಸೇ ಆಗಿದೆ. |
| **ತಸ್ಮಾತ್ ಏವಮ್ ಆಹ** | ಆದುದರಿಂದ ಈ ಮಂತ್ರಭಾಗವು ಹೀಗೆ ಹೇಳುತ್ತದೆ. |

---

* ೧) ರುದ್ರಾಃ... ೨) ಸಗ್ಂಸೃಷ್ಟಾಂ...೩) ಸಿನೀವಾಲೀ... ೪) ಉಖಾಂ...। ಈ ನಾಲ್ಕು ಮಂತ್ರಗಳಲ್ಲಿ ಹೇಳಿರುವ ದೇವತೆಗಳು.

ಯಜ್ಞಸ್ಯ ಪದೇ ಸ್ಥ ಇತ್ಯಾಹ ಯಜ್ಞಸ್ಯ ಹ್ಯೇತೇ [(೩೩)] ಪದೇ ಅಥೋ ಪ್ರತಿಷ್ಠಿತ್ಯೈ ಪ್ರಾನ್ಯಾಭಿರ್ಯಚ್ಛತ್ಯನ್ವನ್ಯೈರ್ಮಂತ್ರಯತೇ ಮಿಥುನತ್ವಾಯ

---

ಯಜ್ಞಸ್ಯ । ಪದೇ ಇತಿ । ಸ್ಥಃ । ಇತಿ । ಆಹ । ಯಜ್ಞಸ್ಯ । ಹಿ । ಏತೇ ಇತಿ । (೩೩) । ಪದೇ ಇತಿ । ಅಥೋ ಇತಿ । ಪ್ರತಿಷ್ಠಿತ್ಯಾ ಇತಿ ಪ್ರತಿ–ಸ್ಥಿತ್ಯೈ । ಪ್ರೇತಿ । ಅನ್ಯಾಭಿಃ । ಯಚ್ಛತಿ । ಅನ್ವಿತಿ । ಅನ್ಯೈಃ । ಮಂತ್ರಯತೇ । ಮಿಥುನತ್ವಾಯೇತಿ ಮಿಥುನ–ತ್ವಾಯ ।

---

| ಬ್ರಾಹ್ಮಣಭಾಗ | ವಿವರಣೆ |
|---|---|

**ಕೃಷ್ಣಾಜಿನ–ಪುಷ್ಕರಪರ್ಣಗಳ ಸ್ಪರ್ಶ**

| | |
|---|---|
| **ಯಜ್ಞಸ್ಯ ಪದೇ ಸ್ಥಃ ಇತಿ ಆಹ** | 'ಎಲೈ ಕೃಷ್ಣಾಜಿನ–ಪುಷ್ಕರಪರ್ಣಗಳೇ! ನೀವು ಯಜ್ಞದ ಪಾದಗಳಾಗಿದ್ದೀರಿ' ಎಂದು ಈ ಮಂತ್ರವು ಹೇಳುತ್ತದೆ. |
| **ಏತೇ ಯಜ್ಞಸ್ಯ ಪದೇ ಹಿ** | ಇವೆರಡೂ ಯಜ್ಞದ ಪಾದಸ್ಥಾನೀಯಗಳಷ್ಟೆ. |
| **ಅಥೋ ಪ್ರತಿಷ್ಠಿತ್ಯೈ** | ಮತ್ತು ಇದು ಯಜಮಾನನು ಚೆನ್ನಾಗಿ ನಿಲ್ಲುವುದಕ್ಕೂ ಕಾರಣವಾಗುತ್ತದೆ. |

**ಉಖೆಯ ನಿರ್ಮಾಣಕ್ಕಾಗಿ ಮೃತ್ತಿಕೆಯನ್ನು ಕೊಡುವುದು; ಯಜಮಾನನ ಅನುಮಂತ್ರಣ**

| | |
|---|---|
| **ಆನ್ಯಾಭಿಃ ಪ್ರ ಯಚ್ಛತಿ** | ಅಧ್ವರ್ಯುವು ಯಜುರ್ವಿಲಕ್ಷಣವಾದ **'ಸಗ್ಂ ಸೃಷ್ಟಾಮ್'** ಮೊದಲಾದ ಋಕ್ಕುಗಳಿಂದ ಉಖೆಯನ್ನು ಮಾಡಲು ಮಣ್ಣನ್ನು ಕೊಡಬೇಕು. [ವಿಧಿ] |
| **ಅನ್ಯೈಃ ಅನು ಮಂತ್ರಯತೇ** | ಋಗ್ವಿಲಕ್ಷಣವಾದ 'ವಸವಸ್ತ್ವಾ' ಮೊದಲಾದ ಯಜುರ್ಮಂತ್ರಗಳಿಂದ ಅಧ್ವರ್ಯುವು ಯಜಮಾನನ ಅನುಮಂತ್ರಣ ಮಾಡಬೇಕು. |
| **ಮಿಥುನತ್ವಾಯ** | *ಈ ರೀತಿ ಋಗ್ಯಜುರ್ಮಂತ್ರಗಳಿಂದ ಕಾರ್ಯವನ್ನು ಮಾಡುವುದು ಮಿಥುನತ್ವಸಿದ್ಧಿಗೆ ನಿಮಿತ್ತವಾಗುತ್ತದೆ. |

---

* ಇಲ್ಲಿ 'ಋಕ್' ಶಬ್ದವು ಸ್ತ್ರೀಲಿಂಗ. 'ಯಜುಸ್' ಶಬ್ದವು ಸ್ತ್ರೀಲಿಂಗಕ್ಕಿಂತ ಭಿನ್ನಲಿಂಗ. ಆದುದರಿಂದ ಮಿಥುನದಂತೆ. ಶ್ರುತಿಯಲ್ಲಿ ಹಲವೆಡೆ ಹೀಗಿದೆ.

ತ್ರ್ಯುದ್ಧಿಂ ಕರೋತಿ ತ್ರಯ ಇಮೇ ಲೋಕಾ ಏಷಾಂ ಲೋಕಾನಾಮಾಪ್ತ್ಯೈ೬೮

ಛಂದೋಭಿಃ ಕರೋತಿ ವೀರ್ಯಂ ವೈ ಛಂದಾಗ್ಂಸಿ ವೀರ್ಯೇಣೈವೈನಾಂ

ಕರೋತಿ

---

ತ್ರ್ಯುದ್ಧಿಮಿತಿ ತ್ರಿ-ಉದ್ಧಿಮ್ । ಕರೋತಿ । ತ್ರಯಃ । ಇಮೇ । ಲೋಕಾಃ । ಏಷಾಮ್ । ಲೋಕಾನಾಮ್ । ಆಪ್ತ್ಯೈ೬೮ ।

ಛಂದೋಭಿರಿತಿ ಛಂದಃ-ಭಿಃ । ಕರೋತಿ । ವೀರ್ಯಮ್ । ವೈ । ಛಂದಾಗ್ಂಸಿ । ವೀರ್ಯೇಣ । ಏವ । ಏನಾಮ್ ।

ಕರೋತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|

### ತ್ರ್ಯುದ್ಧಿಕರಣ; ವಿಧಿ; ಅರ್ಥವಾದ

| | |
|---|---|
| **ತ್ರ್ಯುದ್ಧಿಮ್ ಕರೋತಿ** | ಉಖೆಯಲ್ಲಿ ಮೂರು ರೇಖೆಗಳನ್ನು ಮಾಡಬೇಕು. |
| **ಇಮೇ ಲೋಕಾಃ ತ್ರಯಃ** | ಭೂಮಿ, ಅಂತರಿಕ್ಷ ಮತ್ತು ದ್ಯುಲೋಕಗಳೆಂಬ ಈ ಮೂರು ಲೋಕಗಳು ಪ್ರಸಿದ್ಧವಾಗಿವೆ. |
| **ಏಷಾಮ್ ಲೋಕಾನಾಮ್ ಆಪ್ತ್ಯೈ೬೮** | ಈ ತ್ರ್ಯುದ್ಧಿಕರಣವು ಈ ಲೋಕತ್ರಯದ ಪ್ರಾಪ್ತಿಗೆ ನಿಮಿತ್ತವಾಗುತ್ತದೆ. (ತ್ರಿತ್ವವು ಲೋಕತ್ರಯಪ್ರಾಪ್ತಿಯ ನಿಮಿತ್ತ) |

### ಉಖಾನಿರ್ಮಾಣವಿಧಿ; ಅರ್ಥವಾದ

| | |
|---|---|
| **ಛಂದೋಭಿಃ ಕರೋತಿ** | ಉಖಾನಿರ್ಮಾಪಕನು 'ವಸವಸ್ತ್ವಾ' ಮುಂತಾದ ಮಂತ್ರಗಳಿಂದ ಉಖೆಯನ್ನು ಮಾಡಬೇಕು. |
| **ಛಂದಾಗ್ಂಸಿ ವೀರ್ಯಮ್ ವೈ** | ಛಂದಸ್ಸುಗಳು ಶಕ್ತಿಯುಕ್ತವಾಗಿವೆ. |
| **ವೀರ್ಯೇಣ ಏವ ಏನಾಮ್ ಕರೋತಿ** | (ಛಂದಸ್ಸಿನಿಂದ ಉಖೆಯನ್ನು ನಿರ್ಮಿಸುವುದೆಂಬುದು) ಶಕ್ತಿಯುಕ್ತವಾಗಿಯೇ ಉಖೆಯನ್ನು ನಿರ್ಮಿಸಿದವನಾಗುತ್ತಾನೆ. |

---

ಒಂದು ಪಾತ್ರೆಯ ಮೇಲೆ ಇನ್ನೊಂದು, ಅದರ ಮೇಲೆ ಇನ್ನೊಂದು-ಹೀಗೆ ಇಡುವಂತೆ, ಒಂದೇ ಉಖೆಯಲ್ಲಿ ಮೂರು ರೇಖೆಗಳನ್ನು ಮಾಡಬೇಕು. ಅವಯವಿಗೆ ಮೇಲಿರುವ ಅವಯವವು 'ಉದ್ಧಿ' ಎನಿಸುವುದು.

ಯಜುಷಾ ಬಿಲಂ ಕರೋತಿ ವ್ಯಾವೃತ್ತ್ಯಾ ಇಯತೀಂ ಕರೋತಿ ಪ್ರಜಾಪತಿನಾ
ಯಜ್ಞಮುಖೇನ ಸಂಮಿತಾಂ ದ್ವಿಸ್ತನಾಂ ಕರೋತಿ
ದ್ಯಾವಾಪೃಥಿವ್ಯೋರ್ದೋಹಾಯ

---

ಯಜುಷಾ । ಬಿಲಮ್ । ಕರೋತಿ । ವ್ಯಾವೃತ್ತ್ಯಾ ಇತಿ ವಿ-ಆವೃತ್ತ್ಯೈ । ಇಯತೀಮ್ । ಕರೋತಿ । ಪ್ರಜಾಪತಿನೇತಿ ಪ್ರಜಾ-ಪತಿನಾ । ಯಜ್ಞಮುಖೇನೇತಿ ಯಜ್ಞ-ಮುಖೇನ । ಸಂಮಿತಾಮಿತಿ ಸಮ್-ಮಿತಾಮ್ । ದ್ವಿಸ್ತನಾಮಿತಿ ದ್ವಿ-ಸ್ತನಾಮ್ । ಕರೋತಿ । ದ್ಯಾವಾಪೃಥಿವ್ಯೋರಿತಿ ದ್ಯಾವಾ-ಪೃಥಿವ್ಯೋಃ । ದೋಹಾಯ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ಉಖೆಯಲ್ಲಿ ರಂಧ್ರಕರಣವಿಧಿ; ಅರ್ಥವಾದ** |
| **ಯಜುಷಾ ಬಿಲಮ್ ಕರೋತಿ** | ಯಜುರ್ಮಂತ್ರವಾದ 'ಅದಿತಿಸ್ತೇ ಬಿಲಂ ಗೃಹ್ಣಾತು' ಎಂಬ ಮಂತ್ರದಿಂದ ರಂಧ್ರವನ್ನು ಮಾಡಬೇಕು. |
| **ವ್ಯಾವೃತ್ತ್ಯೈ** | ಇದು ಲೌಕಿಕ-ವೈದಿಕಕ್ರಿಯೆಗಳ ವ್ಯತ್ಯಾಸಕ್ಕೆ ನಿಮಿತ್ತವಾಗುತ್ತದೆ. |
| | **ಉಖೆಯ ಪರಿಮಾಣವಿಧಿ** |
| **ಇಯತೀಮ್ ಕರೋತಿ** | ಉಖೆಯು ಪ್ರಾದೇಶಪರಿಮಾಣವಿರುವಂತೆ ಮಾಡಬೇಕು. |
| **ಪ್ರಜಾಪತಿನಾ ಯಜ್ಞಮುಖೇನ ಸಂಮಿತಾಮ್** | ಪ್ರಜಾಪತಿರೂಪನಾದ ಯಜ್ಞಪುರುಷನ ಮುಖದಷ್ಟು ಪರಿಮಾಣವುಳ್ಳದ್ದಾಗಿ ಮಾಡಬೇಕು. |
| | **ಉಖೆಯಲ್ಲಿ ಸ್ತನನಿರ್ಮಾಣವಿಧಿ; ಪಕ್ಷಾಂತರಗಳು** |
| **ದ್ವಿಸ್ತನಾಮ್ ಕರೋತಿ** | ಉಖೆಯು ಎರಡು ಸ್ತನಗಳನ್ನು ಹೊಂದಿರುವಂತೆ ಮಾಡಬೇಕು. |
| **ದ್ಯಾವಾಪೃಥಿವ್ಯೋಃ ದೋಹಾಯ** | ದ್ಯಾವಾಪೃಥಿವಿಗಳ ಸಾರವನ್ನು ಕರೆದುಕೊಳ್ಳುವುದಕ್ಕೆ ಇದು ಸಾಧನವಾಗುತ್ತದೆ. |

ಚತುಃಸ್ತನಾಂ ಕರೋತಿ ಪಶೂನಾಂ ದೋಹಾಯಾಷ್ಟಾಸ್ತನಾಂ ಕರೋತಿ

ಛಂದಸಾಂ ದೋಹಾಯ ನವಾಶ್ರಿಮಭಿಚರತಃ ಕುರ್ಯಾ–

---

ಚತುಃಸ್ತನಾಮಿತಿ ಚತುಃ–ಸ್ತನಾಮ್ । ಕರೋತಿ । ಪಶೂನಾಮ್ । ದೋಹಾಯ । ಅಷ್ಟಾಸ್ತನಾಮಿತ್ಯಷ್ಟಾ–ಸ್ತನಾಮ್ । ಕರೋತಿ । ಛಂದಸಾಮ್ । ದೋಹಾಯ । ನವಾಶ್ರಿಮಿತಿ ನವ–ಅಶ್ರಿಮ್ । ಅಭಿಚರತ ಇತ್ಯಭಿ–ಚರತಃ । ಕುರ್ಯಾತ್ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಚತುಃಸ್ತನಾಮ್ ಕರೋತಿ** | ನಾಲ್ಕು ಸ್ತನಗಳನ್ನು ಹೊಂದಿರಬೇಕು. |
| **ಪಶೂನಾಮ್ ದೋಹಾಯ** | ಪಶುಗಳ ಪುಷ್ಟಿಯನ್ನು ಹೊಂದುವುದಕ್ಕೆ ಇದು ಸಾಧನ ವಾಗುತ್ತದೆ. |
| **ಅಷ್ಟಾಸ್ತನಾಮ್ ಕರೋತಿ** | ಎಂಟು ಸ್ತನಗಳನ್ನು ಹೊಂದಿರುವಂತೆ ನಿರ್ಮಿಸಬೇಕು. |
| **ಛಂದಸಾಮ್ ದೋಹಾಯ** | *ಛಂದಸ್ಸುಗಳ ಸಾರವನ್ನು ಹೊಂದಲು ಇದು ಸಾಧನ ವಾಗುತ್ತದೆ. |

**ಅಭಿಚಾರಕಾಮನಿಗಾಗಿ ಪಕ್ಷಾಂತರವಿಧಿ; ಅರ್ಥವಾದ**

| | |
|---|---|
| **ಅಭಿಚರತಃ** | ಶತ್ರುಗಳಿಗೆ ಅಭಿಚಾರ ಮಾಡಬೇಕೆಂಬ ಯಜಮಾನನಿಗಾಗಿ |
| **ನವಾಶ್ರಿಮ್ ಕುರ್ಯಾತ್** | ಉಖೆಯನ್ನು ಒಂಬತ್ತು ಅಂಚುಗಳುಳ್ಳದ್ದನ್ನಾಗಿ ಮಾಡ ಬೇಕು. |

---

ಲೋಕದಲ್ಲಿ ಅಮಂತ್ರಕವಾಗಿ ಉಖೆಯ ಬಿಲವನ್ನು ಮಾಡುತ್ತಾರೆ. ಇಲ್ಲಿ ಉಖೆಯ ರಂಧ್ರವನ್ನು ಮಂತ್ರದಿಂದ ಮಾಡಬೇಕು. ಇದು ಲೌಕಿಕರಂಧ್ರಕರಣ–ವೈದಿಕರಂಧ್ರಕರಣಗಳ ವ್ಯತ್ಯಾಸಕ್ಕೆ ನಿಮಿತ್ತವಾಗುತ್ತದೆ.

**'ಇಯತೀಮ್'** ಎಂದು ಕೈಯಿಂದ ಅಳತೆ ಮಾಡಿ ತೋರಿಸುವಂತೆ **'ಇಯತೀಮ್'** ಎಂದು ಶ್ರುತಿಯು ಹೇಳುತ್ತದೆ.

ಯಜ್ಞಪುರುಷನ ಮುಖವು ತಲೆಯಿಂದ ಗಲ್ಲದವರೆಗಿನಷ್ಟು. ಪ್ರಜಾಪತಿಯಿಂದ ಸೃಷ್ಟಿಸಲ್ಪಟ್ಟಿರುವುದರಿಂದ ಅದೇ ಪ್ರಜಾಪತಿರೂಪ. ಭ. ಭಾ. ಭಾಷ್ಯದಲ್ಲಿ ಮೇಲಿನಿಂದ ಕೆಳಗಿನವರೆಗಿನ ಮುಖದ ಪರಿಮಾಣ ಪ್ರಾದೇಶಮಾತ್ರ. (ಚೋಟು). ಅಡ್ಡಡ್ಡಲಾಗಿ ಅರತ್ನಿಮಾತ್ರ (ಮೊಳ) (ಗುದ್ದುಮೊಳ). ಸುತ್ತಳತೆಯು ವ್ಯಾಯಾಮಮಾತ್ರ (ಮಾರು) ಎಂದು ತಿಳಿಸಿದ್ದಾರೆ.

---

* ಗಾಯತ್ರೀ ತ್ರಿಷ್ಟುಬ್ಜಗತ್ಯನುಷ್ಟುಪ್ಪಙ್ಕ್ತ್ಯಾ ಸಹ । ಬೃಹತ್ಯುಷ್ಣಿಹಾ ಕಕುತ್ [ತೈ. ಸಂ. 5. 2. 11] ಗಾಯತ್ರೀ, ತ್ರಿಷ್ಟುಪ್, ಜಗತೀ, ಅನುಷ್ಟುಪ್, ಪಂಕ್ತಿ, ಬೃಹತೀ, ಉಷ್ಣಿಹಾ, ಕಕುಪ್ ಈ ಎಂಟು ಛಂದಸ್ಸುಗಳು ಶ್ರುತಿಯಲ್ಲಿ ಇನ್ನೊಂದೆಡೆ ಉಕ್ತವಾಗಿವೆ. ಹೀಗೆ ಎಂಟು ಎಂಬ ಸಂಖ್ಯೆಯ ಸಾಮ್ಯ.

-ತ್ರಿವೃತಮೇವ ವಜ್ರಗ್ಂ ಸಂಭೃತ್ಯ ಭ್ರಾತೃವ್ಯಾಯ ಪ್ರಹರತಿ ಸ್ತೃತ್ಯೈ ಕೃತ್ವಾಯ ಸಾ ಮಹೀಮುಖಾಮಿತಿ ನಿ ದಧಾತಿ ದೇವತಾಸ್ವೇವೈನಾಂ ಪ್ರತಿಷ್ಠಾಪಯತಿ ॥ ೩೪–6 ॥

ತೇನೈವ ಲೋಮಭಿಸ್ಸಮೇತೇ ಅಭಿಚರತ ಏಕವಿಗ್ಂಶತಿಶ್ಚ ॥

---

ತ್ರಿವೃತಮಿತಿ ತ್ರಿ–ವೃತಮ್ । ಏವ । ವಜ್ರಮ್ । ಸಂಭೃತ್ಯೇತಿ ಸಮ್–ಭೃತ್ಯ । ಭ್ರಾತೃವ್ಯಾಯ । ಪ್ರೇತಿ । ಹರತಿ । ಸ್ತೃತ್ಯೈ । ಕೃತ್ವಾಯ । ಸಾ । ಮಹೀಮ್ । ಉಖಾಮ್ । ಇತಿ । ನೀತಿ । ದಧಾತಿ । ದೇವತಾಸು । ಏವ । ಏನಾಮ್ । ಪ್ರತೀತಿ । ಸ್ಥಾಪಯತಿ ॥ ೩೪ ॥

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ವಜ್ರಮ್ ತ್ರಿವೃತಮ್ ಏವ ಸಂಭೃತ್ಯ** | ಒಂಬತ್ತು ಮುಕ್ಕುಗಳುಳ್ಳ ವಜ್ರಸ್ವರೂಪವಾದ ತ್ರಿವೃತ್ ಸ್ತೋಮವನ್ನೇ ಚೆನ್ನಾಗಿ ಸಿದ್ಧಪಡಿಸಿ, |
| **ಭ್ರಾತೃವ್ಯಾಯ ಪ್ರಹರತಿ ಸ್ತೃತ್ಯೈ** | ಶತ್ರುನಾಶಕ್ಕಾಗಿ ಅಧ್ವರ್ಯುವು ಪ್ರಯೋಗಿಸಿದವನಾಗುತ್ತಾನೆ. ಇದು ಶತ್ರುನಾಶಕ್ಕಾಗುತ್ತದೆ. |

**ಉಖಾಶ್ರಪಣವಿಧಿ**

| | |
|---|---|
| **ಕೃತ್ವಾಯ ಸಾ ಮಹೀಮುಖಾಮ್ ಇತಿ ನಿದಧಾತಿ** | ನಿರ್ಮಿಸಿದ ಉಖೆಯನ್ನು ಸುಡುವುದಕ್ಕಾಗಿ ಉತ್ತರ ಭಾಗದಲ್ಲಿ ಮರಳಿನಲ್ಲಿ ಇಡಬೇಕು. [ವಿಧಿ] 'ಅಗ್ನಿಸಾಧನವಾದ ಮೃತ್ತಿನಿಂದ ಅದಿತಿದೇವಿಯು ಉಖೆಯನ್ನು ನಿರ್ಮಿಸಿ ಮಕ್ಕಳಾದ ದೇವತೆಗಳಿಗೆ 'ನೀವು ಇದನ್ನು ಶ್ರಪಣ ಮಾಡಿ' ಎಂದು ಮರಳಿನಲ್ಲಿ ಇಡುತ್ತಾಳೆ.' ಎಂದು ಈ ಮಂತ್ರವು ಹೇಳುತ್ತದೆ. |
| **ಏನಾಮ್ ದೇವತಾಸು ಏವ ಪ್ರತಿಷ್ಠಾಪಯತಿ** | ಅಧ್ವರ್ಯುವು ಇದರಿಂದ ಈ ಉಖೆಯನ್ನು ದೇವತೆಗಳಲ್ಲಿಯೇ ಇಟ್ಟವನಾಗುತ್ತಾನೆ. |

---

ದೇವತೆಗಳು ಅದಿತಿಯ ಪುತ್ರರು. ಅವರಿಗೆ ಆದಿತ್ಯರು ಎಂಬ ಹೆಸರು ಪ್ರಸಿದ್ಧವಾಗಿದೆ.

## ॥ ಸಪ್ತಮೋಽನುವಾಕಃ ॥

ಸಪ್ತಭಿರ್ಧೂಪಯತಿ ಸಪ್ತ ವೈ ಶೀರ್‌ಷಣ್ಯಾಃ ಪ್ರಾಣಾಶ್ಶಿರ ಏತದ್ಯಜ್ಞಸ್ಯ
ಯದುಖಾ ಶೀರ್‌ಷನ್ನೇವ ಯಜ್ಞಸ್ಯ ಪ್ರಾಣಾನ್ದಧಾತಿ

---

ಸಪ್ತಭಿರಿತಿ ಸಪ್ತ–ಭಿಃ । ಧೂಪಯತಿ । ಸಪ್ತ । ವೈ । ಶೀರ್‌ಷಣ್ಯಾಃ । ಪ್ರಾಣಾ ಇತಿ ಪ್ರ–ಅನಾಃ । ಶಿರಃ । ಏತತ್ । ಯಜ್ಞಸ್ಯ । ಯತ್ । ಉಖಾ । ಶೀರ್‌ಷನ್ । ಏವ । ಯಜ್ಞಸ್ಯ । ಪ್ರಾಣಾನಿತಿ ಪ್ರ–ಅನಾನ್ । ದಧಾತಿ ।

---

ಆರನೆಯ ಅನುವಾಕದಲ್ಲಿ ಅಗ್ನಿಚಯನಕ್ಕೆ ಸಂಬಂಧಿಸಿದ ಉಖಾನಿರ್ಮಾಣವು ಹೇಳಲ್ಪಟ್ಟಿತು. ಈ ಏಳನೆಯ ಅನುವಾಕದಲ್ಲಿ ಉಖಾಸಂಸ್ಕಾರಕ್ಕೆ ಸಂಬಂಧಿಸಿದ ಮಂತ್ರಗಳ ಬ್ರಾಹ್ಮಣವು ಹೇಳಲ್ಪಡುತ್ತದೆ.

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ಉಖಾಧೂಪನವಿಧಿ; ಮಂತ್ರವಿಧಿ; ಅರ್ಥವಾದ** |
| **ಸಪ್ತಭಿಃ ಧೂಪಯತಿ** | **'ವಸವಸ್ತ್ವಾ ಧೂಪಯಂತು'** ಮೊದಲಾದ ಏಳು ಮಂತ್ರಗಳಿಂದ ಉಖೆಯ ಧೂಪನವನ್ನು ಮಾಡಬೇಕು. |
| **ಶೀರ್‌ಷಣ್ಯಾಃ ಪ್ರಾಣಾಃ ಸಪ್ತ ವೈ** | ಮುಖದಲ್ಲಿರುವ ಪ್ರಾಣಗಳು ಏಳು. (ಎರಡು ಕಣ್ಣುಗಳು, ಎರಡು ಮೂಗುಗಳು, ಎರಡು ಕಿವಿಗಳು ಒಂದು ಬಾಯಿ) |
| **ಯತ್ ಉಖಾ ಏತತ್ ಯಜ್ಞಸ್ಯ ಶಿರಃ** | ಉಖೆಯು ಯಾವುದುಂಟೋ ಅದು ಯಜ್ಞಸ್ಯ ಶಿರಃಸ್ಥಾನೀಯವಾಗಿದೆ. |
| **ಯಜ್ಞಸ್ಯ ಶೀರ್‌ಷನ್ ಏವ ಪ್ರಾಣಾನ್ ದಧಾತಿ** | (ಅಧ್ವರ್ಯುವು ಈ ಧೂಪನದಿಂದ)ಯಜ್ಞದ ಶಿರಸ್ಸಿನಲ್ಲಿಯೇ ಪ್ರಾಣಗಳನ್ನು ಸ್ಥಿರವಾಗಿ ನಿಲ್ಲಿಸಿದವನಾಗುತ್ತಾನೆ. |

ತಸ್ಮಾಥ್ಸಪ್ತ ಶೀರ್ಷನ್ಪ್ರಾಣಾ ಅಶ್ವಶಕೇನ ಧೂಪಯತಿ ಪ್ರಾಜಾಪತ್ಯೋ ವಾ ಅಶ್ವಃ ಸಯೋನಿತ್ವಾಯಾದಿತಿಸ್ತ್ವೇತ್ಯಾಹೇಯಂ ವಾ ಅದಿತಿರದಿತ್ಯೈವಾದಿತ್ಯಾಂ ಖನ–

---

ತಸ್ಮಾತ್ । ಸಪ್ತ । ಶೀರ್ಷನ್ । ಪ್ರಾಣಾ ಇತಿ ಪ್ರ–ಅನಾಃ । ಅಶ್ವಶಕೇನೇತ್ಯಶ್ವ–ಶಕೇನ । ಧೂಪಯತಿ । ಪ್ರಾಜಾಪತ್ಯ ಇತಿ ಪ್ರಾಜಾ–ಪತ್ಯಃ । ವೈ । ಅಶ್ವಃ । ಸಯೋನಿತ್ವಾಯೇತಿ ಸಯೋನಿ–ತ್ವಾಯ । ಅದಿತಿಃ । ತ್ವಾ । ಇತಿ । ಆಹ । ಇಯಮ್ । ವೈ । ಅದಿತಿಃ । ಅದಿತ್ಯಾ । ಏವ । ಅದಿತ್ಯಾಮ್ । ಖನತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ತಸ್ಮಾತ್ ಶೀರ್ಷನ್ ಸಪ್ತ ಪ್ರಾಣಾಃ** | ಆದುದರಿಂದ ಲೋಕದಲ್ಲಿಯೂ ಪ್ರತಿಪುರುಷನ ಮುಖದಲ್ಲಿಯೂ ಏಳು ಪ್ರಾಣಗಳಿವೆ. |

**ಧೂಪನದ್ರವ್ಯವಿಧಿ; ಅರ್ಥವಾದ**

| | |
|---|---|
| **ಅಶ್ವಶಕೇನ ಧೂಪಯತಿ** | ಕುದುರೆಯ ಲದ್ದಿಯಿಂದ ಧೂಪವನ್ನು ಹಾಕಬೇಕು. |
| **ಅಶ್ವಃ ಪ್ರಾಜಾಪತ್ಯಃ ವೈ** | ಅಶ್ವವು ಪ್ರಜಾಪತಿಸಂಬಂಧಿಯಾಗಿದೆ. |
| **ಸಯೋನಿತ್ವಾಯ** | (ಅಶ್ವವೂ, *ಅಗ್ನಿಯೂ ಪ್ರಜಾಪತಿಸಂಬಂಧಿ) ಹೀಗಾಗಿ ಅಶ್ವಶಕದಿಂದ ಧೂಪನ ಮಾಡುವುದು ಸಮಾನವಾದ ಕಾರಣವುಳ್ಳ ವಸ್ತುಗಳನ್ನು ಹೊಂದಿರುವುದಕ್ಕೆ ಅನುಗುಣವಾದುದು. |

**ಗಾರ್ಹಪತ್ಯದ ಮುಂದೆ ಹಳ್ಳವನ್ನು ಅಗೆಯುವ ವಿಧಿ; ಅರ್ಥವಾದ**

| | |
|---|---|
| **ಅದಿತಿಸ್ತ್ವಾ ಇತಿ ಆಹ** | 'ಅದಿತಿದೇವಿಯು ಹಳ್ಳವನ್ನು ತೋಡಲಿ' ಎಂದು ಈ ಮಂತ್ರವು ಹೇಳುತ್ತದೆ. |
| **ಇಯಮ್ ವೈ ಅದಿತಿಃ** | ಈ ಭೂಮಿಯೇ ಅದಿತಿಯಾಗಿದೆ. |
| **ಅದಿತ್ಯಾ ಏವ ಅದಿತ್ಯಾಮ್ ಖನತಿ** | ಇದರಿಂದ ಅದಿತಿಯಿಂದಲೇ/ಭೂಮಿಯಿಂದಲೇ ಅದಿತಿಸಂಬಂಧಿಯಾದುದನ್ನು/ಭೂಮಿಯನ್ನು ಅಗೆದಂತಾಗುತ್ತದೆ. |

---

* 'ಪ್ರಜಾಪತಿರಗ್ನಿಮಚಿನುತ' ಎಂದು ಶ್ರುತಿಯಿದೆ.

-ತ್ಯಸ್ಯಾ ಅಕ್ರೂರಂಕಾರಾಯ ನ ಹಿ ಸ್ವಃ ಸ್ವಗ್ಂ ಹಿನಸ್ತಿ ದೇವಾನಾಂ ತ್ವಾ

ಪತ್ನೀರಿತ್ಯಾಹ ದೇವಾನಾ[ದೇವಾನಾಮ್(೩೫)ವಾ]ವೈ ಏತಾಂ

ಪತ್ನಯೋಽಗ್ರೇಽಕುರ್ವನ್ತಾಭಿರೇವೈನಾಂ ದಧಾತಿ

---

ಅಸ್ಯಾಃ । ಅಕ್ರೂರಂಕಾರಾಯೇತ್ಯಕ್ರೂರಂ-ಕಾರಾಯ । ನ । ಹಿ । ಸ್ವಃ । ಸ್ವಮ್ । ಹಿನಸ್ತಿ । ದೇವಾನಾಮ್ । ತ್ವಾ । ಪತ್ನೀಃ । ಇತಿ । ಆಹ । ದೇವಾನಾಮ್ । (೩೫) । ವೈ । ಏತಾಮ್ । ಪತ್ನಯಃ । ಅಗ್ರೇ । ಅಕುರ್ವನ್ । ತಾಭಿಃ । ಏವ । ಏನಾಮ್ । ದಧಾತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಅಸ್ಯಾಃ ಅಕ್ರೂರಂಕಾರಾಯ** | ಈ ರೀತಿ ಮಾಡುವಿಕೆಯು ಈ ಅದಿತಿಯ ವಿಷಯದಲ್ಲಿ ಕ್ರೂರವಾಗಿ ನಡೆದುಕೊಂಡಂತಾಗದಿರುವುದಕ್ಕೆ ಕಾರಣವಾಗುತ್ತದೆ. |
| **ಸ್ವಃ ಸ್ವಮ್ ನ ಹಿ ಹಿನಸ್ತಿ** | ತಾನು ತನ್ನನ್ನೇ ಹಿಂಸೆ ಮಾಡಿಕೊಳ್ಳುವುದಿಲ್ಲವಷ್ಟೆ. |

**ಕೆಂಪಾಗಿ ಕಾಯಿಸುವ ವಸ್ತುಗಳನ್ನು ಅವಟ(ಗುಂಡಿ)ದಲ್ಲಿಟ್ಟು ಅದರಲ್ಲಿ ಉಖೆಯನ್ನು ಇಡುವ ವಿಧಿ; ಅರ್ಥವಾದ**

| | |
|---|---|
| **ದೇವಾನಾಮ್ ತ್ವಾ ಪತ್ನೀಃ ಇತಿ ಆಹ** | 'ದೇವತೆಗಳ ಪತ್ನಿಯರು ಈ ಉಖೆಯನ್ನು ಅವಟದಲ್ಲಿಡಲಿ' ಎಂದು ಈ ಮಂತ್ರವು ಹೇಳುತ್ತದೆ. |
| **ದೇವಾನಾಮ್ ಪತ್ನಯಃ ಏತಾಮ್ ಅಗ್ರೇ ಅಕುರ್ವನ್ ವೈ** | ಈ ಉಖೆಯನ್ನು ಮೊದಲು *ದೇವಪತ್ನಿಯರು ನಿರ್ಮಿಸಿದರು. |
| **ತಾಭಿಃ ಏವ ಏನಾಮ್ ದಧಾತಿ** | ಆ ದೇವಪತ್ನಿಯರಿಂದಲೇ ಈ ಉಖೆಯನ್ನು ಇಲ್ಲಿ ಅಧ್ವರ್ಯುವು ಸ್ಥಾಪಿಸಿದವನಾಗುತ್ತಾನೆ. |

---

* **'ಸೇನೇಂದ್ರಸ್ಯ' [ತೈ. ಆ. 3.9]** ಎಂದು ಆರಂಭವಾಗುವ ಅನುವಾಕದಲ್ಲಿ ದೇವಪತ್ನಿಯರನ್ನು ಹೇಳಲಾಗಿದೆ.

ಧಿಷಣಾಸ್ತ್ವೇತ್ಯಾಹ ವಿದ್ಯಾ ವೈ ಧಿಷಣಾ ವಿದ್ಯಾಭಿರೇವೈನಾಮಭೀಂಧೇ

ಗ್ನಾಸ್ತ್ವೇತ್ಯಾಹ ಛಂದಾಗ್ಂಸಿ ವೈ ಗ್ನಾಶ್ಛಂದೋಭಿರೇವೈನಾಗ್ಂ ಶ್ರಪಯತಿ

ವರೂತ್ರಯಸ್ತ್ವೇತ್ಯಾಹ ಹೋತ್ರಾ ವೈ ವರೂತ್ರಯೋ

---

ಧಿಷಣಾಃ । ತ್ವಾ । ಇತಿ । ಆಹ । ವಿದ್ಯಾಃ । ವೈ । ಧಿಷಣಾಃ । ವಿದ್ಯಾಭಿಃ । ಏವ । ಏನಾಮ್ । ಅಭೀತಿ । ಇಂಧೇ ।

ಗ್ನಾಃ । ತ್ವಾ । ಇತಿ । ಆಹ । ಛಂದಾಗ್ಂಸಿ । ವೈ । ಗ್ನಾಃ । ಛಂದೋಭಿರಿತಿ ಛಂದಃ-ಭಿಃ । ಏವ । ಏನಾಮ್ ।

ಶ್ರಪಯತಿ । ವರೂತ್ರಯಃ । ತ್ವಾ । ಇತಿ । ಆಹ । ಹೋತ್ರಾಃ । ವೈ । ವರೂತ್ರಯಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|

ಕೆಂಪಾಗಿ ಕಾಯಿಸುವ ವಸ್ತುಗಳಿಂದ ಉಖೆಯನ್ನು ತುಂಬಿಸಿ ಅದರಲ್ಲಿ ಅಗ್ನಿಯನ್ನು ಹಾಕಲು

| | |
|---|---|
| ***ಧಿಷಣಾಃ ತ್ವಾ ಇತಿ ಆಹ** | 'ಧಿಷಣಾದೇವಿಯರು ನಿನ್ನನ್ನು ಪಕ್ವಮಾಡಲಿ' ಎಂದು ಈ ಮಂತ್ರವು ಹೇಳುತ್ತದೆ. |
| **ವಿದ್ಯಾಃ ವೈ ಧಿಷಣಾಃ** | ವಿದ್ಯಾದೇವಿಯರೇ ಧಿಷಣಾಶಬ್ದವಾಚ್ಯೆಯರು. |
| **ವಿದ್ಯಾಭಿಃ ಏವ ಏನಾಮ್ ಅಭಿ ಇಂಧೇ** | ಅಧ್ವರ್ಯುವು ವಿದ್ಯಾಭಿಮಾನಿದೇವತೆಗಳಿಂದ ಉಖೆಯನ್ನು ಸುತ್ತಲೂ ಪಕ್ವ ಮಾಡುತ್ತಾನೆ. |
| **ಗ್ನಾಃ ತ್ವಾ ಇತಿ ಆಹ** | 'ಗ್ನಾದೇವಿಯರು ನಿನ್ನನ್ನು ಕಾಯಿಸಲಿ' ಎಂದು ಈ ಮಂತ್ರವು ಹೇಳುತ್ತದೆ. |
| **ಛಂದಾಗ್ಂಸಿ ವೈ ಗ್ನಾಃ** | ಛಂದೋಭಿಮಾನಿದೇವತೆಯರೇ ಗ್ನಾದೇವಿಯರು. |
| **ಏನಾಮ್ ಛಂದೋಭಿಃ ಏವ ಶ್ರಪಯತಿ** | ಅಧ್ವರ್ಯುವು ಛಂದೋಭಿಮಾನಿದೇವಿಯರಿಂದಲೂ ಈ ಉಖೆಯನ್ನು ಕಾಯಿಸುತ್ತಾನೆ. |
| **ವರೂತ್ರಯಃ ತ್ವಾ ಇತಿ ಆಹ** | 'ವರೂತ್ರಿದೇವಿಯರು ನಿನ್ನನ್ನು ಪಕ್ವ ಮಾಡಲಿ' ಎಂದು ಈ ಮಂತ್ರವು ಹೇಳುತ್ತದೆ. |
| **ಹೋತ್ರಾಃ ವೈ ವರೂತ್ರಯಃ** | ಹೋತೃ, ಪ್ರಶಾಸ್ತೃ ಮುಂತಾದ ಏಳು ಋತ್ವಿಜರ ಅಭಿಮಾನಿದೇವತೆಗಳೇ ವರೂತ್ರಿಗಳು. |

---

* ಧಿಷಣಾಃ 'ಗ್ನಾಃ' ವರೂತ್ರಯಃ, ಜನಯಃ ಎಂದಿರುವ **'ದೇವೀರ್ವಿಶ್ವದೇವ್ಯಾವತೀಃ'** ಎಂಬ ಅನುಷಂಗಸಹಿತವಾದ ನಾಲ್ಕು ಮಂತ್ರಗಳಿಂದ ಕ್ರಮವಾಗಿ **ಉಖೆಯ ಪೂರ್ವ, ದಕ್ಷಿಣ, ಪಶ್ಚಿಮ ಮತ್ತು ಉತ್ತರಭಾಗದಲ್ಲಿ ಅಗ್ನಿಯನ್ನು ಹಾಕಿ ಕಾಯಿಸಬೇಕು.** ಎಂದು ಭ. ಭಾ. ಭಾಷ್ಯದಲ್ಲಿ ತಿಳಿಸಿದ್ದಾರೆ.

ಹೋತ್ರಾಭಿರೇವೈನಾಂ ಪಚತಿ ಜನಯಸ್ತ್ವೇತ್ಯಾಹ ದೇವಾನಾಂ ವೈ ಪತ್ನೀ[ಪತ್ನೀಃ(೩೬)ಜನಯಃ]ರ್ಜನಯಸ್ತಾಭಿರೇವೈನಾಂ ಪಚತಿ ಷಡ್ಭಿಃ ಪಚತಿ ಷಡ್ವಾ ಋತವ ಋತುಭಿರೇವೈನಾಂ ಪಚತಿ

---

ಹೋತ್ರಾಭಿಃ । ಏವ । ಏನಾಮ್ । ಪಚತಿ । ಜನಯಃ । ತ್ವಾ । ಇತಿ । ಆಹ । ದೇವಾನಾಮ್ । ವೈ । ಪತ್ನೀಃ । (೩೬) । ಜನಯಃ । ತಾಭಿಃ । ಏವ । ಏನಾಮ್ । ಪಚತಿ । ಷಡ್ಭಿರಿತಿ ಷಟ್–ಭಿಃ । ಪಚತಿ । ಷಟ್ । ವೈ । ಋತವಃ । ಋತುಭಿರಿತ್ಯೃತು–ಭಿಃ । ಏವ । ಏನಾಮ್ । ಪಚತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಏನಾಮ್ ಹೋತ್ರಾಭಿಃ ಏವ ಪಚತಿ** | ಅಧ್ವರ್ಯುವು ಹೋತ್ರಾಭಿಮಾನಿದೇವತೆಗಳಿಂದಲೇ ಉಖೆಯನ್ನು ಪಕ್ವ ಮಾಡುತ್ತಾನೆ. |
| **ಜನಯಃ ತ್ವಾ ಇತಿ ಆಹ** | 'ದೇವಪತ್ನಿಯರಾದ 'ಜನಿ'ಗಳು ನಿನ್ನನ್ನು ಪಕ್ವ ಮಾಡಲಿ' ಎಂದು ಈ ಮಂತ್ರವು ಹೇಳುತ್ತದೆ. |
| **ದೇವಾನಾಮ್ ಪತ್ನೀಃ ಜನಯಃ ವೈ** | ದೇವಪತ್ನಿಯರು ಜನಿಗಳಷ್ಟೆ. |
| **ತಾಭಿಃ ಏವ ಏನಾಮ್ ಪಚತಿ** | ಅಧ್ವರ್ಯುವು ದೇವಪತ್ನಿಯರಿಂದಲೇ ಉಖೆಯನ್ನು ಪಕ್ವ ಮಾಡಿದವನಾಗುತ್ತಾನೆ. |

**ಪಚನಮಂತ್ರಸಂಖ್ಯಾಪ್ರಶಂಸೆ**

| | |
|---|---|
| **ಷಡ್ಭಿಃ ಪಚತಿ** | ೧) ಅದಿತಿಸ್ತ್ವಾ ೨) ದೇವಾನಾಂ ತ್ವಾ ಪತ್ನೀಃ ೩) ಧಿಷಣಾಸ್ತ್ವಾ ೪) ಗ್ನಾಸ್ತ್ವಾ ದೇವೀಃ ೫) ವರೂತ್ರಯಃ ೬) ಜನಯಸ್ತ್ವಾ ಎಂಬ ಆರು ಮಂತ್ರಗಳಿಂದ ಅಧ್ವರ್ಯುವು ಉಖೆಯನ್ನು ಪಕ್ವ ಮಾಡುತ್ತಾನೆ. |
| **ಋತವಃ ಷಟ್ ವೈ** | ಋತುಗಳೂ ಆರಾಗಿವೆ. |
| **ಏನಾಮ್ ಋತುಭಿಃ ಏವ ಪಚತಿ** | ಆರು ಮಂತ್ರಗಳಿಂದ ಅಧ್ವರ್ಯುವು ಉಖೆಯನ್ನು ಪಾಕ ಮಾಡುವುದರಿಂದ ಋತುಗಳಿಂದಲೇ ಪಾಕ ಮಾಡಿದವನಾಗುತ್ತಾನೆ. |

---

ತಾತ್ಪರ್ಯ:– ಇಲ್ಲಿ **'ಅದಿತಿಸ್ತ್ವಾ ದೇವೀಃ'** ಎಂಬ ಮಂತ್ರವು ಅವಟಖನನದಲ್ಲಿಯೂ, **'ದೇವಾನಾಂ ತ್ವಾ ಪತ್ನೀಃ'** ಎಂಬ ಮಂತ್ರವು ಉಖಾಸ್ಥಾಪನದಲ್ಲಿಯೂ ವಿನಿಯುಕ್ತವಾಗಿವೆ.

ದ್ವಿಃ ಪಚಂತ್ವಿತ್ಯಾಹ ತಸ್ಮಾದ್ದ್ವಿಸ್ಸಂವತ್ಸರಸ್ಯ ಸಸ್ಯಂ ಪಚ್ಯತೇ

ವಾರುಣ್ಯುಖಾಽಭೀದ್ಧಾ ಮೈತ್ರಿಯೋಪೈತಿ ಶಾಂತ್ಯೈ ದೇವಸ್ತ್ವಾ

ಸವಿತೋದ್ವಪತ್ವಿತ್ಯಾಹ

---

ದ್ವಿಃ । ಪಚಂತು । ಇತಿ । ಆಹ । ತಸ್ಮಾತ್ । ದ್ವಿಃ । ಸಂವತ್ಸರಸ್ಯೇತಿ ಸಮ್-ವತ್ಸರಸ್ಯ । ಸಸ್ಯಮ್ । ಪಚ್ಯತೇ ।

ವಾರುಣೀ । ಉಖಾ । ಅಭೀದ್ಧೇತ್ಯಭಿ-ಇದ್ಧಾ । ಮೈತ್ರಿಯಾ । ಉಪೇತಿ । ಏತಿ । ಶಾಂತ್ಯೈ । ದೇವಃ । ತ್ವಾ । ಸವಿತಾ ।

ಉದಿತಿ । ವಪತು । ಇತಿ । ಆಹ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಪಚಂತು ಎಂಬಲ್ಲಿರುವ ದ್ವಿತ್ವದ ಪ್ರಶಂಸೆ** | |
| **ದ್ವಿಃ ಪಚಂತು ಇತಿ ಆಹ** | 'ವರೂತ್ರಯಃ ಪಚಂತು' 'ಜನಯಃ ಪಚಂತು' ಎಂಬುದಾಗಿ ಎರಡು ಸಲ(ಅನುಷಂಗ) 'ಪಚಂತು' ಎಂದು ಮಂತ್ರವು ಹೇಳುತ್ತದೆ. |
| **ತಸ್ಮಾತ್ ಸಂವತ್ಸರಸ್ಯ ಸಸ್ಯಮ್ ದ್ವಿಃ ಪಚ್ಯತೇ** | ಆದುದರಿಂದ ಸಸ್ಯವು ವರ್ಷದಲ್ಲಿ ಎರಡು ಸಲ ಪಕ್ವವಾಗುತ್ತದೆ. |
| **ಉಖೆಯ ಉಪಚಾರ; ಮಿತ್ರದೇವತಾಕವಾದ ಋಕ್ಕಿನ ವಿಧಿ** | |
| **ಅಭೀದ್ಧಾ ಉಖಾ ವಾರುಣೀ** | ಚೆನ್ನಾಗಿ ಕಾಯಿಸಿದ ಉಖೆಯು ಉಗ್ರನಾದ ವರುಣದೇವನ ಅಧೀನವಾಗುತ್ತದೆ. |
| **ಮೈತ್ರಿಯಾ ಉಪೈತಿ ಶಾಂತ್ಯೈ** | ಆದುದರಿಂದ ಮಿತ್ರದೇವತಾಮಂತ್ರದಿಂದ ಉಖೆಯನ್ನು ತಂಪುಗೊಳಿಸಬೇಕು. |
| **ಅವಟದಿಂದ ಉಖೆಯ ಉದ್ಧರಣ** | |
| **ದೇವಃ ಸವಿತಾ ತ್ವಾ ಉದ್ವಪತು ಇತಿ ಆಹ** | 'ಎಲೈ! ಉಖೆಯೇ! ಸರ್ವಪ್ರೇರಕನಾದ ಪರಮಾತ್ಮನು ಶಕ್ತಿಯುಕ್ತನಾಗಿ ನಿನ್ನನ್ನು ಈ ಅವಟದಿಂದ ಮೇಲಕ್ಕೆತ್ತಲಿ' ಎಂದು ಈ ಮಂತ್ರವು ಹೇಳುತ್ತದೆ. |

---

ಆ ಕಾರ್ಯಗಳೂ ಉಖಾಪಚನಕ್ಕೆ ಅಂಗವಾದುದರಿಂದ ಅವುಗಳನ್ನೂ ಸೇರಿಸಿ ಆರು ಮಂತ್ರಗಳೆಂದು ಶ್ರುತಿಯು ಪರಿಗಣಿಸಿದೆ.

ಸವಿತೃಪ್ರಸೂತ ಏವೈನಾಂ ಬ್ರಹ್ಮಣಾ ದೇವತಾಭಿರುದ್ವಪತ್ಯಪದ್ಯಮಾನಾ ಪೃಥಿವ್ಯಾಶಾ ದಿಶ ಆ ಪೃಣೇ [ಪೃಣ(೩೭)ಇತ್ಯಾಹ] ತ್ಯಾಹ ತಸ್ಮಾದಗ್ನಿಸ್ಸರ್ವಾ ದಿಶೋಽನು ವಿ ಭಾತ್ಯುತ್ತಿಷ್ಠ ಬೃಹತೀ ಭವೋರ್ಧ್ವಾ ತಿಷ್ಠ ಧ್ರುವಾ ತ್ವಮಿತ್ಯಾಹ ಪ್ರತಿಷ್ಠಿತ್ಯಾ

---

ಸವಿತೃಪ್ರಸೂತ ಇತಿ ಸವಿತೃ–ಪ್ರಸೂತಃ । ಏವ । ಏನಾಮ್ । ಬ್ರಹ್ಮಣಾ । ದೇವತಾಭಿಃ । ಉದಿತಿ । ವಪತಿ । ಅಪದ್ಯಮಾನಾ । ಪೃಥಿವಿ । ಆಶಾಃ । ದಿಶಃ । ಏತಿ । ಪೃಣ । (೩೭) । ಇತಿ । ಆಹ । ತಸ್ಮಾತ್ । ಅಗ್ನಿಃ । ಸರ್ವಾಃ । ದಿಶಃ । ಅನು । ವೀತಿ । ಭಾತಿ । ಉದಿತಿ । ತಿಷ್ಠ । ಬೃಹತೀ । ಭವ । ಊರ್ಧ್ವಾ । ತಿಷ್ಠ । ಧ್ರುವಾ । ತ್ವಮ್ । ಇತಿ । ಆಹ । ಪ್ರತಿಷ್ಠಿತ್ಯಾ ಇತಿ ಪ್ರತಿ–ಸ್ಥಿತ್ಯೈ ॥

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಸವಿತೃಪ್ರಸೂತಃ ಏವ** | ಅಧ್ವರ್ಯುವು ಪ್ರೇರಕನಾದ ಸವಿತೃದೇವನ/ ಪರಮಾತ್ಮನ ಅನುಗ್ರಹವನ್ನು ಪಡೆದವನಾಗಿ |
| **ಏನಾಮ್ ಬ್ರಹ್ಮಣಾ ದೇವತಾಭಿಃ ಉದ್ವಪತಿ** | ಈ ಉಖೆಯನ್ನು ಮಂತ್ರದಿಂದ ದೇವತಾಸಹಾಯ ದಿಂದ ಅವಟದಿಂದ ಮೇಲಕ್ಕೆ ತೆಗೆಯುತ್ತಾನೆ. |

**ಉತ್ತರಭಾಗದಲ್ಲಿ ಮರಳಿನ ಮೇಲೆ ಉಖೆಯ ಸ್ಥಾಪನ**

| | |
|---|---|
| **ಅಪದ್ಯಮಾನಾ ಪೃಥಿವಿ** | ಹೇ! ಪೃಥಿವಿರೂಪಳಾಗಿರುವ ಉಖೆಯೇ! ನೀನು ಒಡೆಯದವಳಾಗಿ, |
| **ಆಶಾಃ ದಿಶಃ ಆ ಪೃಣ ಇತಿ ಆಹ** | 'ಎಲ್ಲ ದಿಕ್ಕುಗಳನ್ನೂ, ವಿದಿಕ್ಕುಗಳನ್ನೂ ಪ್ರಕಾಶಪಡಿಸುತ್ತಾ ಇರು.' ಎಂದು ಈ ಮಂತ್ರವು ಹೇಳುತ್ತದೆ. |
| **ತಸ್ಮಾತ್ ಅಗ್ನಿಃ ಸರ್ವಾಃ ದಿಶಃ ಅನು ವಿ ಭಾತಿ** | ಆದುದರಿಂದ ಅಗ್ನಿಯು ಎಲ್ಲ ದಿಕ್ಕುಗಳನ್ನೂ ಪ್ರಕಾಶಪಡಿಸುತ್ತಾನೆ. |

**ಉಖಾಪ್ರಾರ್ಥನೆ**

| | |
|---|---|
| **ತ್ವಮ್ ಉತ್ತಿಷ್ಠ, ಬೃಹತೀ ಭವ, ಊರ್ಧ್ವಾ ಧ್ರುವಾ ತಿಷ್ಠ ಇತಿ ಆಹ** | 'ಎಲೈ! ಉಖೆಯೇ! ನೀನು ಅವಟದಿಂದ ಮೇಲೇಳು. ಪ್ರೌಢವಾಗು. ಮೇಲ್ಮುಖವಾಗಿ ದೃಢವಾಗಿ ನಿಲ್ಲು' ಎಂದು ಈ ಮಂತ್ರವು ಹೇಳುತ್ತದೆ. |
| **ಪ್ರತಿಷ್ಠಿತ್ಯೈ** | ಇದು ಸ್ಥಿರವಾಗಿರುವಿಕೆಗೆ ಕಾರಣವಾಗುತ್ತದೆ. |

ಅಸುರ್ಯಂ ಪಾತ್ರಮಾನಾಚ್ಛೃಣ್ಣಮಾ ಚ್ಛೃಣತ್ತಿ
ದೇವತ್ರಾಽಕರಜಕ್ಷೀರೇಣಾಚ್ಛೃಣತ್ತಿ ಪರಮಂ ವಾ ಏತತ್ಪಯೋ ಯದಜಕ್ಷೀರಂ
ಪರಮೇಣೈವೈನಾಂ ಪಯಸಾಽಽಚ್ಛೃಣತ್ತಿ

---

ಅಸುರ್ಯಮ್ । ಪಾತ್ರಮ್ । ಅನಾಚ್ಛೃಣ್ಣಮಿತ್ಯನಾ-ಛೃಣ್ಣಮ್ । ಏತಿ । ಛೃಣತ್ತಿ । ದೇವತ್ರೇತಿ ದೇವ-ತ್ರಾ । ಅಕಃ । ಅಜಕ್ಷೀರೇಣೇತ್ಯಜ-ಕ್ಷೀರೇಣ । ಏತಿ । ಛೃಣತ್ತಿ । ಪರಮಮ್ । ವೈ । ಏತತ್ । ಪಯಃ । ಯತ್ । ಅಜಕ್ಷೀರಮಿತ್ಯಜ-ಕ್ಷೀರಮ್ । ಪರಮೇಣ । ಏವ । ಏನಾಮ್ । ಪಯಸಾ । ಏತಿ । ಛೃಣತ್ತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|

ಕಾದಿರುವ ಉಖೆಯನ್ನು ದ್ರವದ್ರವ್ಯದಿಂದ ತೋಯಿಸುವ ವಿಧಿ; ಅರ್ಥವಾದ

| | |
|---|---|
| **ಅನಾಚ್ಛೃಣ್ಣಮ್ ಪಾತ್ರಮ್ ಅಸುರ್ಯಮ್** | ಕಾಯಿಸಿದ ಉಖೆಯು ದ್ರವದ್ರವ್ಯದಿಂದ ತೋಯಿಸಲ್ಪಡದಿದ್ದರೆ ಅಸುರಯೋಗ್ಯವಾಗುತ್ತದೆ. |
| **ಆಚ್ಛೃಣತ್ತಿ** | ಆದುದರಿಂದ ದ್ರವದ್ರವ್ಯದಿಂದ ಉಖೆಯನ್ನು ತೋಯಿಸಬೇಕು. |
| **ದೇವತ್ರಾ ಅಕಃ** | ಇದರಿಂದ ಅಧ್ವರ್ಯುವು ಉಖೆಯನ್ನು ದೇವಯೋಗ್ಯವನ್ನಾಗಿ ಮಾಡುತ್ತಾನೆ. |

ಸೇಚನದ್ರವ್ಯವಿಧಿ; ಅರ್ಥವಾದ

| | |
|---|---|
| **ಅಜಕ್ಷೀರೇಣ ಆಚ್ಛೃಣತ್ತಿ** | ಮೇಕೆಯ ಹಾಲಿನಿಂದ ಉಖೆಯನ್ನು ತೋಯಿಸಬೇಕು. |
| **ಯತ್ ಅಜಕ್ಷೀರಮ್ ಏತತ್ ಪಯಃ ಪರಮಮ್ ವೈ** | ಮೇಕೆಯ ಹಾಲು ಯಾವುದುಂಟೋ ಅದು ಪವಿತ್ರವಾದ/ಶ್ರೇಷ್ಠವಾದ ಹಾಲಾಗಿದೆ. |
| **ಏನಾಮ್ ಪರಮೇಣ ಪಯಸಾ ಏವ ಆಚ್ಛೃಣತ್ತಿ** | ಈ ಸೇಚನದಿಂದ ಅಧ್ವರ್ಯುವು ಪವಿತ್ರವಾದ ಮೇಕೆಯ ಹಾಲಿನಿಂದಲೇ ಈ ಅಗ್ನಿಪ್ರಿಯವಾದ ಉಖೆಯನ್ನು ಸೇಚನ ಮಾಡಿದವನಾಗುತ್ತಾನೆ. |

---

ಉಖೆಯಿಂದ ಮಿಶ್ರಿತನಾದ ಅಗ್ನಿಯು ತನ್ನ ತೇಜಸ್ಸಿನಿಂದ ಎಲ್ಲ ದಿಕ್ಕುಗಳನ್ನೂ ಪ್ರಕಾಶ ಪಡಿಸುತ್ತಾನೆ.

ಯಜುಷಾ ವ್ಯಾವೃತ್ತ್ಯೈ ಛಂದೋಭಿರಾಚ್ಛೃಣತ್ತಿ ಛಂದೋಭಿರ್ವಾ ಏಷಾ ಕ್ರಿಯತೇ ಛಂದೋಭಿರೇವ ಛಂದಾಗ್ಂಸ್ಯಾಚ್ಛೃಣತ್ತಿ ॥ ೩೮–7 ॥

[ಆಹ ದೇವಾನಾಂ ವೈ ಪತ್ನೀಃ ಪೃಣ್ಯೈಷಾ ಷಟ್ಚ ॥]

---

ಯಜುಷಾ । ವ್ಯಾವೃತ್ತ್ಯಾ ಇತಿ ವಿ–ಆವೃತ್ತ್ಯೈ । ಛಂದೋಭಿರಿತಿ ಛಂದಃ–ಭಿಃ । ಏತಿ । ಛೃಣತ್ತಿ । ಛಂದೋಭಿರಿತಿ ಛಂದಃ–ಭಿಃ । ವೈ । ಏಷಾ । ಕ್ರಿಯತೇ । ಛಂದೋಭಿರಿತಿ ಛಂದಃ–ಭಿಃ । ಏವ । ಛಂದಾಗ್ಂಸಿ । ಏತಿ । ಛೃಣತ್ತಿ ॥ ೩೮ ॥

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಲೌಕಿಕಸೇಚನಕ್ಕಿಂತ ವೈಷಮ್ಯವಿಧಿ** | |
| **ಯಜುಷಾ ವ್ಯಾವೃತ್ತ್ಯೈ** | ಲೌಕಿಕಸೇಚನಕ್ಕಿಂತ ವಿಭಿನ್ನವೆಂದು ವ್ಯಕ್ತಪಡಿಸಲು ಯಜುರ್ಮಂತ್ರದಿಂದ ಉಖೆಯ ಸೇಚನೆಯನ್ನು ಮಾಡಬೇಕು. ಇದರಿಂದ ವ್ಯಾವೃತ್ತಿಯನ್ನು ಮಾಡಿದಂತೆ ಆಗುತ್ತದೆ. |
| **ಮಂತ್ರವಿಶೇಷವಿಧಿ; ಅರ್ಥವಾದ** | |
| **ಛಂದೋಭಿಃ ಆಚ್ಛೃಣತ್ತಿ** | **'ವಸವಸ್ತ್ವಾऽऽಚ್ಛೃಂದಂತು ಗಾಯತ್ರೇಣ ಛಂದಸಾ'** ಮೊದಲಾದ ನಾಲ್ಕು ಯಜುರ್ಮಂತ್ರಗಳಿಂದ ಉಖೆಯನ್ನು ತೋಯಿಸಬೇಕು. |
| **ಏಷಾ ಛಂದೋಭಿಃ ವೈ ಕ್ರಿಯತೇ** | ಈ ಉಖೆಯು **'ವಸವಸ್ತ್ವಾ ಕೃಣ್ವಂತು ಗಾಯತ್ರೇಣ ಛಂದಸಾ'** ಮೊದಲಾದ ಮಂತ್ರಗಳಿಂದಲೇ ಮಾಡಲ್ಪಟ್ಟಿದೆ. |
| **ಛಂದೋಭಿಃ ಏವ ಛಂದಾಗ್ಂಸಿ ಆಚ್ಛೃಣತ್ತಿ** | ಈ ಛಂದೋಮಂತ್ರಗಳಿಂದ ಸೇಚನ ಮಾಡಿದ ಅಧ್ವರ್ಯುವು ಛಂದಸ್ಸುಗಳಿಂದಲೇ ಛಂದಸ್ಸುಗಳನ್ನು ಸೇಚನ ಮಾಡಿದವನಾಗುತ್ತಾನೆ. |

---

**'ಆಗ್ನೇಯೀ ವಾ ಏಷಾ । ಯದಜಾ ।'** ಎಂದು ಶ್ರುತಿವಾಕ್ಯವು ಮೇಕೆಯು ಅಗ್ನಿಸಂಬಂಧಿಯಾಗಿದೆ ಎಂದು ಹೇಳಿದೆ. ಹೀಗಾಗಿ ಇದು ಸೇಚನದ್ರವ್ಯದ ಪ್ರಶಂಸೆಯಾಗಿದೆ. ಮೇಕೆಯ ಹಾಲು ಅಗ್ನಿಸಂಬಂಧದಿಂದ ಪವಿತ್ರವಾಗಿದೆ.

ಉಖೆಯನ್ನು ಛಂದೋಮಂತ್ರಗಳಿಂದ ತೋಯಿಸಬೇಕು. ಉಖೆಯೂ ಸಹ ಛಂದೋಮಂತ್ರಗಳಿಂದಲೇ ನಿರ್ಮಿತವಾಗಿದೆ. ಛಂದೋಮಂತ್ರಗಳಿಂದ ಛಂದೋನಿರ್ಮಿತವಾದ ಉಖೆಯ ಸೇಚನವೆಂಬುದರಿಂದ ಛಂದಸ್ಸುಗಳೇ ಸೇಚನಸಾಧನಗಳು ಛಂದಸ್ಸುಗಳೇ ಸೇಚನಕ್ಕೆ ವಿಷಯವಾದವುಗಳೆನಿಸುವಂತಾಗುತ್ತದೆ.



## ॥ ಅಷ್ಟಮೋಽನುವಾಕಃ ॥

ಏಕವಿಗ್ಂಶತ್ಯಾ ಮಾಷೈಃ ಪುರುಷಶೀರ್ಷಮಚ್ಛೈತ್ಯಮೇಧ್ಯಾ ವೈ ಮಾಷಾ

---

ಏಕವಿಗ್ಂಶತ್ಯೇತ್ಯೇಕ–ವಿಗ್ಂಶತ್ಯಾ । ಮಾಷೈಃ । ಪುರುಷಶೀರ್ಷಮಿತಿ ಪುರುಷ–ಶೀರ್ಷಮ್ । ಅಚ್ಛ । ಏತಿ । ಅಮೇಧ್ಯಾಃ । ವೈ । ಮಾಷಾಃ ।

---

ಈ ಪ್ರಪಾಠಕದ ಏಳನೆಯ ಅನುವಾಕದಲ್ಲಿ ಉಖಾಸಂಸ್ಕಾರವು ಹೇಳಲ್ಪಟ್ಟಿತು. ನಾಲ್ಕನೆಯ ಕಾಂಡದ ಪ್ರಥಮಪ್ರಪಾಠಕದ ಏಳನೆಯ ಅನುವಾಕದಲ್ಲಿ ಸಾಮಿಧೇನೀಮಂತ್ರಗಳು ಪಠಿತವಾಗಿವೆ. ಅವುಗಳ ಬ್ರಾಹ್ಮಣವನ್ನು ಈಗ ಹೇಳಬೇಕಾಗಿದೆ. ಅಲ್ಲಿಯೇ ಎಂಟನೆಯ ಅನುವಾಕದಲ್ಲಿ ಪ್ರಯಾಜ–ಯಾಜ್ಯೆಗಳು ಪಠಿತವಾಗಿವೆ. ಅಲ್ಲದೆ ಆಘಾರಮಂತ್ರಗಳೂ ಅಲ್ಲಿಯೇ ಇವೆ. ಅವುಗಳ ಬ್ರಾಹ್ಮಣವನ್ನೂ, ಯಾಜ್ಯಾನುವಾಕ್ಯೆಗಳನ್ನೂ ವ್ಯಾಖ್ಯಾನಿಸಬೇಕಾಗಿದೆ. ಇವೆಲ್ಲವೂ ಪಶುಪ್ರಯೋಗದಲ್ಲಿ ಸೇರಿವೆ. ಆ ಪಶು ಪ್ರಯೋಗಕ್ಕಿಂತಲೂ ಮೊದಲು ಪುರುಷಶೀರ್ಷೋಪಧಾನವನ್ನು ಮಾಡಬೇಕಾಗಿದೆ. ಹೀಗಾಗಿ ಈ ಅನುವಾಕದಲ್ಲಿ ಪುರುಷಶೀರ್ಷಸಂಪಾದನೆಯನ್ನು ಮೊದಲು ಹೇಳಲಾಗಿದೆ.

ಇದು ಇಲ್ಲಿನ ಏಳನೆಯ ಮತ್ತು ಎಂಟನೆಯ ಅನುವಾಕಗಳ ಸಂಗತಿ.

---

| ಬ್ರಾಹ್ಮಣಭಾಗ | ವಿವರಣೆ |
|---|---|

**ಬಾಣಹತನಾದ ಅಥವಾ ಅಶನಿ (ಸಿಡಿಲು) ಹತನಾದ ಕ್ಷತ್ರಿಯನ ಅಥವಾ ವೈಶ್ಯನ ತಲೆಯನ್ನು ತರುವ ವಿಧಿ; ಅರ್ಥವಾದ**

| | |
|---|---|
| **ಏಕವಿಗ್ಂಶತ್ಯಾ ಮಾಷೈಃ ಪುರುಷಶೀರ್ಷಮ್ ಅಚ್ಛ ಏತಿ** | ಇಪ್ಪತ್ತೊಂದು ಉದ್ದುಗಳನ್ನು ತೆಗೆದುಕೊಂಡು (ಅದರೊಡನೆ) ಅಧ್ವರ್ಯುವು ಪುರುಷಶೀರ್ಷವನ್ನು ತರಲು ಹೋಗಬೇಕು. [ವಿಧಿ] |
| **ಮಾಷಾಃ ಅಮೇಧ್ಯಾಃ ವೈ** | ಮಾಷಗಳು ಯಜ್ಞಾರ್ಹವಲ್ಲ. ಅವು ಅಪವಿತ್ರವಾದವುಗಳು. |

ಅಮೇಧ್ಯಂ ಪುರುಷಶೀರ್ಷಮಮೇಧ್ಯೈ‌ರೇವಾಸ್ಯಾಮೇಧ್ಯಂ ನಿರವದಾಯ ಮೇಧ್ಯಂ ಕೃತ್ವಾಽಽಹರತ್ಯೇಕವಿಗ್ಂಶತಿರ್ಭವಂತ್ಯೇಕವಿಗ್ಂಶೋ ವೈ ಪುರುಷಃ ಪುರುಷಸ್ಯಾಪ್ತ್ಯೈ‌

---

ಅಮೇಧ್ಯಮ್ । ಪುರುಷಶೀರ್ಷಮಿತಿ ಪುರುಷ-ಶೀರ್ಷಮ್ । ಅಮೇಧ್ಯೈಃ । ಏವ । ಅಸ್ಯ । ಅಮೇಧ್ಯಮ್ । ನಿರವದಾಯೇತಿ ನಿಃ-ಅವದಾಯ । ಮೇಧ್ಯಮ್ । ಕೃತ್ವಾ । ಏತಿ । ಹರತಿ । ಏಕವಿಗ್ಂಶತಿರಿತ್ಯೇಕ-ವಿಗ್ಂಶತಿಃ । ಭವಂತಿ । ಏಕವಿಗ್ಂಶ ಇತ್ಯೇಕ-ವಿಗ್ಂಶಃ । ವೈ । ಪುರುಷಃ । ಪುರುಷಸ್ಯ । ಆಪ್ತ್ಯೈ । 

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಪುರುಷಶೀರ್ಷಮ್ ಅಮೇಧ್ಯಮ್** | ಅಸ್ಪೃಶ್ಯವಾದ ಪುರುಷಶಿರಸ್ಸೂ ಸಹ ಅಮೇಧ್ಯವಾಗಿ ಯಜ್ಞಕ್ಕೆ ಅನರ್ಹವಾಗಿದೆ. |
| **ಅಸ್ಯ ಅಮೇಧ್ಯಮ್ ಅಮೇಧ್ಯೈಃ ಏವ ನಿರವದಾಯ** | ಈ ಪುರುಷಶಿರಸ್ಸಿನ ಅಮೇಧ್ಯತ್ವವನ್ನು (ಅಗಸನು ಮಲಿನವಾದ ಚೌಳುಪ್ಪಿನಿಂದ ಬಟ್ಟೆಯ ಕೊಳೆಯನ್ನು ಹೋಗಲಾಡಿಸುವಂತೆ)ಅಮೇಧ್ಯವಾದ ಮಾಷಗಳಿಂದಲೇ ಹೋಗಲಾಡಿಸಿ, |
| **ಮೇಧ್ಯಮ್ ಕೃತ್ವಾ ಆಹರತಿ** | ಯಜ್ಞಾರ್ಹವನ್ನಾಗಿ ಮಾಡಿ ತರುತ್ತಾನೆ. |

ಸಂಖ್ಯಾಪ್ರಶಂಸೆ

| | |
|---|---|
| **ಏಕವಿಗ್ಂಶತಿಃ ಭವಂತಿ** | ಮಾಷಗಳು ಇಪ್ಪತ್ತೊಂದು ಸಂಖ್ಯೆಯಲ್ಲಿವೆ. |
| **ಏಕವಿಗ್ಂಶಃ ವೈ ಪುರುಷಃ** | *ಪುರುಷನೂ ಇಪ್ಪತ್ತೊಂದು ಸಂಖ್ಯೆಯನ್ನು ತುಂಬುವವನೇ. |
| **ಪುರುಷಸ್ಯ ಆಪ್ತ್ಯೈ** | ಈ ಇಪ್ಪತ್ತೊಂದು ಸಂಖ್ಯೆಯು ಪುರುಷನ (ಆತ್ಮನ) ಪ್ರಾಪ್ತಿಗೆ ಸಾಧನವಾಗುತ್ತದೆ. |

**ತಾತ್ಪರ್ಯ:-** ಪುರುಷಶಿರಸ್ಸನ್ನು ಕತ್ತರಿಸುವ ಮೊದಲು ಏಳು ಅಥವಾ ಇಪ್ಪತ್ತೊಂದು ಮಾಷಗಳನ್ನು ಮೇಲೆ ಹಾಕಿ, **'ಅಯಂ ಯೋಽಸಿ ಯಸ್ಯ ತ ಇದಂ ಶಿರಃ'** [ಆಪ. ಶ್ರೌ. ಸೂ. 16.6. 3-4] ಎಂದು ಶಿರಸ್ಸನ್ನು ಕತ್ತರಿಸಿ, **'ಏತೇನ ತ್ವಮತ್ರ ಶೀರ್ಷಣ್ವಾನೇಧಿ'** [ಆಪ.ಶ್ರೌ.ಸೂ.16.6.3-4]ಎಂದು ವಲ್ಮೀಕವಪೆಯನ್ನು(ವಿಹಿತವಾದ ಆಕಾರಯುಕ್ತವಾದ

* ಕಾಲಿನ ಬೆರಳುಗಳು ಹತ್ತು. ಕೈಗಳ ಬೆರಳುಗಳು ಹತ್ತು. ಆತ್ಮನು ಇಪ್ಪತ್ತೊಂದನೆಯವನು. **'ದಶ ಹಸ್ತ್ಯಾ ಅಂಗುಲಯೋ ದಶ ಪದ್ಯಾ ಆತ್ಮೈಕವಿಗ್ಂಶಃ'** [ಐ. ಬ್ರಾ. 1.19.]

ವ್ಯೃದ್ಧಂ ವಾ ಏತತ್ಪ್ರಾಣೈರಮೇಧ್ಯಂ ಯತ್ಪುರುಷಶೀರ್ಷಗ್ಂ ಸಪ್ತಧಾ

ವಿತೃಣ್ಣಾಂ ವಲ್ಮೀಕವಪಾಂ ಪ್ರತಿನಿದಧಾತಿ ಸಪ್ತ ವೈ ಶೀರ್ಷಣ್ಯಾಃ ಪ್ರಾಣಾಃ

ಪ್ರಾಣೈರೇವೈನಥ್ಸಮರ್ಧಯತಿ ಮೇಧ್ಯತ್ವಾಯ

---

ವ್ಯೃದ್ಧಮಿತಿ ವಿ-ಋದ್ಧಮ್ । ವೈ । ಏತತ್ । ಪ್ರಾಣೈರಿತಿ ಪ್ರ-ಅನೈಃ । ಅಮೇಧ್ಯಮ್ । ಯತ್ । ಪುರುಷಶೀರ್ಷಮಿತಿ ಪುರುಷ-ಶೀರ್ಷಮ್ । ಸಪ್ತಧೇತಿ ಸಪ್ತ-ಧಾ । ವಿತೃಣ್ಣಾಮಿತಿ ವಿ-ತೃಣ್ಣಾಮ್ । ವಲ್ಮೀಕವಪಾಮಿತಿ ವಲ್ಮೀಕ-ವಪಾಮ್ । ಪ್ರತಿ । ನೀತಿ । ದಧಾತಿ । ಸಪ್ತ । ವೈ । ಶೀರ್ಷಣ್ಯಾಃ । ಪ್ರಾಣಾ ಇತಿ ಪ್ರ-ಅನಾಃ । ಪ್ರಾಣೈರಿತಿ ಪ್ರ-ಅನೈಃ । ಏವ । ಏನತ್ । ಸಮಿತಿ । ಅರ್ಧಯತಿ । ಮೇಧ್ಯತ್ವಾಯೇತಿ ಮೇಧ್ಯ-ತ್ವಾಯ ।

---

ಬ್ರಾಹ್ಮಣಭಾಗ　　　　ವಿವರಣೆ

ಸಪ್ತಛಿದ್ರಗಳುಳ್ಳ ಹುತ್ತದ ಮಣ್ಣಿನ ಆಕೃತಿಯ ಪ್ರತಿನಿಧಿಯನ್ನಿಡುವ ವಿಧಿ; ಅರ್ಥವಾದ

| | |
|---|---|
| **ಪ್ರಾಣೈಃ ವ್ಯೃದ್ಧಮ್ ಯತ್ ಪುರುಷಶೀರ್ಷಮ್** | ಪ್ರಾಣವಿಹೀನವಾಗಿರುವ ಯಾವ ಪುರುಷಶಿರಸ್ಸಿದೆಯೋ, |
| **ಏತತ್ ಅಮೇಧ್ಯಮ್ ವೈ** | ಇದು ಅಮೇಧ್ಯವಾಗುತ್ತದೆ. |
| **ಸಪ್ತಧಾ ವಿತೃಣ್ಣಾಮ್ ವಲ್ಮೀಕವಪಾಮ್** | ಏಳು ರಂಧ್ರಗಳುಳ್ಳ-ಹುತ್ತದ ಮಣ್ಣಿನಿಂದಾದ-ಆಕೃತಿಯನ್ನು |
| **ಪ್ರತಿ ನಿ ದಧಾತಿ** | ಶಿರಸ್ಸಿನ ಸ್ಥಾನದಲ್ಲಿ ಪ್ರತಿನಿಧಿಯನ್ನಾಗಿ ಇಡಬೇಕು. |
| **ಶೀರ್ಷಣ್ಯಾಃ ಪ್ರಾಣಾಃ ಸಪ್ತ ವೈ** | ಪುರುಷಶಿರಸ್ಸಿನಲ್ಲಿರುವ ಪ್ರಾಣಸ್ಥಾನಗಳು ಏಳಷ್ಟೆ.* |
| **ಪ್ರಾಣೈಃ ಏವ ಏನತ್ ಸಮರ್ಧಯತಿ** | ಇದರಿಂದ ಈ ಶಿರಸ್ಸನ್ನು ಪ್ರಾಣಗಳಿಂದ ತುಂಬಿದಂತೆಯೇ ಆಗುತ್ತದೆ. |
| **ಮೇಧ್ಯತ್ವಾಯ** | ಮತ್ತು ಇದು ಅಮೇಧ್ಯವಾದ ಶಿರಸ್ಸಿನ ಮೇಧ್ಯತೆಗೂ ಕಾರಣವಾಗುತ್ತದೆ. |

---

ಹುತ್ತದ ಮಣ್ಣನ್ನು) ಶಿರಸ್ಸಿನ ಸ್ಥಾನದಲ್ಲಿ ಸ್ಥಾಪಿಸಬೇಕು.

---

* ಎರಡು ಕಣ್ಣುಗಳು, ಎರಡು ಕಿವಿಗಳು, ಎರಡು ಮೂಗುಗಳು ಮತ್ತು ಒಂದು ಬಾಯಿ– ಈ ಏಳು ತಲೆಯಲ್ಲಿರುವ ಪ್ರಾಣಸ್ಥಾನಗಳು.

ಯಾವಂತೋ [ಯಾವಂತಃ(೩೯)]ವೈ ಮೃತ್ಯುಬಂಧವಸ್ತೇಷಾಂ ಯಮ ಆಧಿಪತ್ಯಂ

ಪರೀಯಾಯ ಯಮಗಾಥಾಭಿಃ ಪರಿಗಾಯತಿ ಯಮಾದೇವೈನದ್ವೃಙ್ಕ್ತೇ

ತಿಸೃಭಿಃ ಪರಿಗಾಯತಿ ತ್ರಯ ಇಮೇ ಲೋಕಾ

---

ಯಾವಂತಃ । (೩೯) । ವೈ । ಮೃತ್ಯುಬಂಧವ ಇತಿ ಮೃತ್ಯು-ಬಂಧವಃ । ತೇಷಾಮ್ । ಯಮಃ । ಆಧಿಪತ್ಯಮಿತ್ಯಾಧಿ-ಪತ್ಯಮ್ । ಪರೀತಿ । ಇಯಾಯ । ಯಮಗಾಥಾಭಿರಿತಿ ಯಮ-ಗಾಥಾಭಿಃ । ಪರೀತಿ । ಗಾಯತಿ । ಯಮಾತ್ । ಏವ । ಏನತ್ । ವೃಙ್ಕ್ತೇ । ತಿಸೃಭಿರಿತಿ ತಿಸೃ-ಭಿಃ । ಪರೀತಿ । ಗಾಯತಿ । ತ್ರಯಃ । ಇಮೇ । ಲೋಕಾಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ಯಮಗಾಥಾಗಾನವಿಧಿ; ಅರ್ಥವಾದ** |
| **ಯಾವಂತಃ ವೈ ಮೃತ್ಯುಬಂಧವಃ** | 'ಹಿರಣ್ಯಕಕ್ಷ್ಯಾನ್' ಮೊದಲಾಗಿಯೂ, ಕಾಲಾಂತಕಾದಿ ಶಬ್ದಗಳಿಂದಲೂ ಹೇಳಲ್ಪಡುವ ಮೃತ್ಯುವಿನ ಬಂಧುಗಳು ಎಷ್ಟು ಜನರುಂಟೋ |
| **ತೇಷಾಮ್ ಆಧಿಪತ್ಯಮ್ ಯಮಃ ಪರೀಯಾಯ** | ಅವರೆಲ್ಲರಿಗೂ ಯಮನು ಆಧಿಪತ್ಯವನ್ನು ಪಡೆದಿರುತ್ತಾನೆ. |
| **ಯಮಗಾಥಾಭಿಃ ಪರಿ ಗಾಯತಿ** | ಯಮದೇವತಾಕವಾದ* 'ಯೋಽಸ್ಯ ಕೌಷ್ಠ್ಯ' ಮೊದಲಾದ ಮಂತ್ರಗಳಿಂದ ಅಧ್ವರ್ಯುವು ಗಾನ ಮಾಡುತ್ತಾನೆ. |
| **ಯಮಾತ್ ಏವ ಏನತ್ ವೃಙ್ಕ್ತೇ** | ಇದರಿಂದ ಯಮನ ಬಳಿಯಿಂದ ಪುರುಷಶಿರಸ್ಸನ್ನು ಬಿಡಿಸಿದವನಾಗುತ್ತಾನೆ. |
| | **ತ್ರಿತ್ವಸಂಖ್ಯಾವಿಧಿ; ಅರ್ಥವಾದ** |
| **ತಿಸೃಭಿಃ ಪರಿಗಾಯತಿ** | ಮೂರು ಯಮಗಾಥೆಗಳಿಂದ ಅಧ್ವರ್ಯುವು ಪರಿಗಾನವನ್ನು ಮಾಡಬೇಕು. |
| **ಇಮೇ ಲೋಕಾಃ ತ್ರಯಃ** | ಭೂಮಿ-ಅಂತರಿಕ್ಷ-ದ್ಯುಲೋಕಗಳೆಂದು ಲೋಕಗಳು ಮೂರಾಗಿವೆ. |

---

* ಈ ಮಂತ್ರಗಳು ತೈತ್ತಿರೀಯ ಆರಣ್ಯಕದ ಪಿತೃಮೇಧಪ್ರಪಾಠಕದಲ್ಲಿ ಪಠಿತವಾಗಿವೆ. [ತೈ. ಆ. 6.5.2]

ಏಭ್ಯ ಏವೈನಲ್ಲೋಕೇಭ್ಯೋ ವೃಙ್ಕ್ತೇ ತಸ್ಮಾದ್ಗಾಯತೇ ನ ದೇಯಂ ಗಾಥಾ ಹಿ ತದ್ವೃಙ್ಕ್ತೇಽಗ್ನಿಭ್ಯಃ ಪಶೂನಾಲಭತೇ ಕಾಮಾ ವಾ ಅಗ್ನಯಃ

---

ಏಭ್ಯಃ । ಏವ । ಏನತ್ । ಲೋಕೇಭ್ಯಃ । ವೃಙ್ಕ್ತೇ । ತಸ್ಮಾತ್ । ಗಾಯತೇ । ನ । ದೇಯಮ್ । ಗಾಥಾ । ಹಿ । ತತ್ । ವೃಙ್ಕ್ತೇ । ಅಗ್ನಿಭ್ಯ ಇತ್ಯಗ್ನಿ-ಭ್ಯಃ । ಪಶೂನ್ । ಏತಿ । ಲಭತೇ । ಕಾಮಾಃ । ವೈ । ಅಗ್ನಯಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಏಭ್ಯಃ ಲೋಕೇಭ್ಯಃ ಏವ ಏನತ್ ವೃಙ್ಕ್ತೇ** | ಈ ಶಿರಸ್ಸನ್ನು ಈ ಲೋಕಗಳಿಂದ ಬೇರ್ಪಡಿಸಿ ಅಧ್ವರ್ಯುವು ಸ್ವಾಧೀನಪಡಿಸಿಕೊಳ್ಳುತ್ತಾನೆ. |

**ಗಾಯಕನಿಗೆ ಯಜ್ಞಕರ್ಮಗಳಲ್ಲಿ ದಾನನಿಷೇಧ**

| | |
|---|---|
| **ತಸ್ಮಾತ್ ಗಾಯತೇ ನ ದೇಯಮ್** | ಆದುದರಿಂದ ಯಾಜನ-ಅಧ್ಯಾಪನ-ಪ್ರತಿಗ್ರಹಗಳನ್ನು ಅನುಸರಿಸದೇ ಕೇವಲ ಗಾನದಿಂದಲೇ ಜೀವಿಸುವವನಿಗೆ ದಾನ ಮಾಡಬಾರದು.* |
| **ಗಾಥಾ ಹಿ ತತ್ ವೃಙ್ಕ್ತೇ** | ಆಗ ಗಾಥೆಯು ದಾನದಿಂದ ಬರಬಹುದಾದ ಪುಣ್ಯವನ್ನು ಹೋಗಲಾಡಿಸುತ್ತದೆ. |

**ಪಶ್ವಾಲಂಭನವಿಧಿ**

| | |
|---|---|
| **ಅಗ್ನಿಭ್ಯಃ ಪಶೂನ್ ಆಲಭತೇ** | *1ಅಗ್ನಿಗಳಿಗಾಗಿ ಮತ್ತು ಕಾಮನಿಗಾಗಿ ಪಶುಗಳನ್ನು ಆಲಂಭನ ಮಾಡಬೇಕು. |
| **ಕಾಮಾಃ ವೈ ಅಗ್ನಯಃ** | ಅಗ್ನಿಗಳು ಬಯಕೆಗಳನ್ನು ಪೂರ್ಣಮಾಡಿಕೊಡತಕ್ಕವುಗಳು. |

---

ತಾತ್ಪರ್ಯ:-* ಇದು ಈ ಚಯನಕ್ಕೆ ಸಂಬಂಧಿಸದ ಪ್ರಾಸಂಗಿಕವಾದ ಪುರುಷಾರ್ಥವಾದ ನಿಷೇಧ.

*1 ಶ್ರೌತಸೂತ್ರದಲ್ಲಿ 'ಅಗ್ನಿಭ್ಯಃ ಕಾಮಾಯ ಪಶೂನಾಲಭತೇ ಮುಷ್ಕರಾನ್ ಪ್ರಾಜಾಪತ್ಯಮಜಂ ತೂಪರಮ್ ಉಪಾಕೃತ್ಯ ಅಶ್ವ ಋಷಭ ವೃಷ್ಣಿ ಬಸ್ತಾನ್' [ಆಪ. ಶ್ರೌ. 16.7.1] ಎಂದು ಹೇಳಿದೆ. ಅದನ್ನು ವಿಧಿಸುವ ವಾಕ್ಯವಿದು.
ಕಾಮ್ಯಂತೇ ಇತಿ ಕಾಮಾಃ ಪುತ್ರಪಶ್ವಾದಯಃ ತದ್ಧೇತುತ್ವಾತ್ ಅಗ್ನಯಃ ಅಪಿ ಕಾಮಾಃ । ಪುತ್ರಪಶ್ವಾದಿ ಕಾಮನೆಗಳನ್ನು ಈಡೇರಿಸುವ ಅಗ್ನಿಗಳೂ ಕಾಮಗಳೇ. **'ತತ್ಸಾಧನತ್ವಾತ್ ತಾಚ್ಛಬ್ದ್ಯಮ್'.** ಯಾವ ಸಾಧ್ಯಕ್ಕೆ ಯಾವುದು ಸಾಧನವೋ ಆ ಸಾಧನವನ್ನೂ ಆ ಸಾಧ್ಯಶಬ್ದದಿಂದಲೇ ಹೇಳುವಿಕೆ.

ಕಾಮಾನೇವಾವರುಂಧೇ ಯತ್ಪಶೂನ್ನಾಲಭೇತಾನವರುದ್ಧಾ ಅಸ್ಯ[(೪೦)] ಪಶವಃ ಸ್ಯುರ್ಯತ್ಪರ್ಯಗ್ನಿಕೃತಾನುತ್ಸೃಜೇದ್ಯಜ್ಞವೇಶಸಂ ಕುರ್ಯಾದ್ಯತ್ಸಗ್‌ಂ ಸ್ಥಾಪಯೇ ದ್ಯಾತಯಾಮಾನಿ ಶೀರ್‌ಷಾಣಿ ಸ್ಯುರ್ಯತ್ಪಶೂನಾಲಭತೇ ತೇನೈವ ಪಶೂನವರುಂಧೇ

---

ಕಾಮಾನ್ । ಏವ । ಅವೇತಿ । ರುಂಧೇ । ಯತ್ । ಪಶೂನ್ । ನ । ಆಲಭೇತೇತ್ಯಾ-ಲಭೇತ । ಅನವರುದ್ಧಾ ಇತ್ಯನವ-ರುದ್ಧಾಃ । ಅಸ್ಯ । (೪೦) । ಪಶವಃ । ಸ್ಯುಃ । ಯತ್ । ಪರ್ಯಗ್ನಿಕೃತಾನಿತಿ ಪರ್ಯಗ್ನಿ-ಕೃತಾನ್ । ಉತ್ಸೃಜೇದಿತ್ಯುತ್-ಸೃಜೇತ್ । ಯಜ್ಞವೇಶಸಮಿತಿ ಯಜ್ಞ-ವೇಶಸಮ್ । ಕುರ್ಯಾತ್ । ಯತ್ । ಸಗ್‌ಂ ಸ್ಥಾಪಯೇದಿತಿ ಸಮ್-ಸ್ಥಾಪಯೇತ್ । ಯಾತಯಾಮಾನೀತಿ ಯಾತ-ಯಾಮಾನಿ । ಶೀರ್‌ಷಾಣಿ । ಸ್ಯುಃ । ಯತ್ । ಪಶೂನ್ । ಆಲಭತ ಇತ್ಯಾ-ಲಭತೇ । ತೇನ । ಏವ । ಪಶೂನ್ । ಅವೇತಿ । ರುಂಧೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಕಾಮಾನ್ ಏವ ಅವರುಂಧೇ** | ಈ ಪಶುಗಳ ಆಲಂಭನದಿಂದ ಯಜಮಾನನು ಪುತ್ರ-ಪಶುಗಳು ಮುಂತಾದ ಕಾಮನೆಗಳನ್ನು ಪಡೆಯುವನು. |

**ಆಲಂಭನಾದಿಗಳಲ್ಲಿ ವಿಶೇಷವಿಧಿ; ಅರ್ಥವಾದ**

| | |
|---|---|
| **ಯತ್ ಪಶೂನ್ ನ ಆಲಭೇತ** | ಪಶುಗಳ ಆಲಂಭನವನ್ನು ಮಾಡದಿದ್ದರೆ |
| **ಅಸ್ಯ ಪಶವಃ ಅನವರುದ್ಧಾಃ ಸ್ಯುಃ** | ಈ ಯಜಮಾನನಿಗೆ ಪಶುಗಳು ಪ್ರಾಪ್ತವಾಗುವುದಿಲ್ಲ. |
| **ಯತ್ ಪರ್ಯಗ್ನಿಕೃತಾನ್ ಉತ್ಸೃಜೇತ್** | ಪರ್ಯಗ್ನಿಕರಣದ ಬಳಿಕ ಪಶುಗಳನ್ನು ಬಿಟ್ಟುಬಿಟ್ಟರೆ |
| **ಯಜ್ಞವೇಶಸಮ್ ಕುರ್ಯಾತ್** | ಯಜಮಾನನು ಯಾಗಹಾನಿಯನ್ನು ಮಾಡಿದವನಾಗುತ್ತಾನೆ. |
| **ಯತ್ ಸಂ ಸ್ಥಾಪಯೇತ್** | ಪಶುಯಾಗಗಳನ್ನು ಯಥಾಶಾಸ್ತ್ರವಾಗಿ ಮುಗಿಸಿದರೆ |
| **ಶೀರ್‌ಷಾಣಿ ಯಾತಯಾಮಾನಿ ಸ್ಯುಃ** | ಪಶುಶಿರಸ್ಸುಗಳು ಸಾರಹೀನವಾಗುತ್ತವೆ/ಉಪಧಾನಕ್ಕೆ ಅನರ್ಹವಾಗುತ್ತವೆ. [ಈ ಮೂರು ದೋಷಗಳ ಪರಿಹಾರಕ್ಕಾಗಿ ಪಶುಗಳಿಗೆ ಆಲಂಭನ(ಅಸಿಸ್ಪರ್ಶ)ವನ್ನು ಮಾಡಬೇಕು.] |
| **ಯತ್ ಪಶೂನ್ ಆಲಭತೇ ತೇನ** | ಪಶುಗಳ ಆಲಂಭನ (ಅಸಿಸ್ಪರ್ಶ)ದಿಂದ ಯಜಮಾನನು |
| **ಪಶೂನ್ ಅವರುಂಧೇ ಏವ** | ಪಶುಗಳನ್ನು ಪಡೆಯುತ್ತಾನೆ. |

ಯತ್ಪರ್ಯಗ್ನಿಕೃತಾನುತ್ಸೃಜತಿ ಶೀರ್ಷ್ಣಾಮಯಾತಯಾಮತ್ವಾಯ
ಪ್ರಾಜಾಪತ್ಯೇನ ಸಗ್ಂಸ್ಥಾಪಯತಿ ಯಜ್ಞೋ ವೈ ಪ್ರಜಾಪತಿರ್ಯಜ್ಞ ಏವ
ಯಜ್ಞಂ ಪ್ರತಿಷ್ಠಾಪಯತಿ ಪ್ರಜಾಪತಿಃ ಪ್ರಜಾ ಅಸೃಜತ

---

ಯತ್ । ಪರ್ಯಗ್ನಿಕೃತಾನಿತಿ ಪರ್ಯಗ್ನಿ-ಕೃತಾನ್ । ಉತ್ಸೃಜತೀತ್ಯುತ್-ಸೃಜತಿ । ಶೀರ್ಷ್ಣಾಮ್ । ಅಯಾತಯಾಮತ್ವಾಯೇತ್ಯಯಾತಯಾಮ-ತ್ವಾಯ । ಪ್ರಾಜಾಪತ್ಯೇನೇತಿ ಪ್ರಾಜಾ-ಪತ್ಯೇನ । ಸಮಿತಿ । ಸ್ಥಾಪಯತಿ । ಯಜ್ಞಃ । ವೈ । ಪ್ರಜಾಪತಿರಿತಿ ಪ್ರಜಾ-ಪತಿಃ । ಯಜ್ಞೇ । ಏವ । ಯಜ್ಞಮ್ । ಪ್ರತೀತಿ । ಸ್ಥಾಪಯತಿ । ಪ್ರಜಾಪತಿರಿತಿ ಪ್ರಜಾ-ಪತಿಃ । ಪ್ರಜಾ ಇತಿ ಪ್ರ-ಜಾಃ । ಅಸೃಜತ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯತ್ ಪರ್ಯಗ್ನಿಕೃತಾನ್ ಉತ್ಸೃಜತಿ** | ಪರ್ಯಗ್ನಿಕರಣದ ಅನಂತರ ಬಿಟ್ಟು ಬಿಡಬೇಕು. |
| **ಶೀರ್ಷ್ಣಾಮ್ ಅಯಾತಯಾಮತ್ವಾಯ** | ಇದರಿಂದ ಪಶುಶಿರಸ್ಸುಗಳು ಗತಸಾರವಾಗುವುದಿಲ್ಲ. |
| **ಪ್ರಾಜಾಪತ್ಯೇನ ಸಂಸ್ಥಾಪಯತಿ** | ಪ್ರಜಾಪತಿದೇವತಾಕವಾದ ಅಜಪಶುವಿನಿಂದ ಯಾಗವನ್ನು ಮುಗಿಸಬೇಕು. |
| **ಯಜ್ಞಃ ಪ್ರಜಾಪತಿಃ ವೈ** | ಯಜ್ಞವು ಪ್ರಜಾಪತಿಸ್ವರೂಪವಾಗಿದೆ. |
| **ಯಜ್ಞೇ ಏವ ಯಜ್ಞಮ್ ಪ್ರತಿಷ್ಠಾಪಯತಿ** | ಈ ಪಶುಯಾಗದಿಂದ ಅಧ್ವರ್ಯುವು ಯಜ್ಞದಲ್ಲಿಯೇ ಯಜ್ಞವನ್ನು ಪ್ರತಿಷ್ಠೆ ಮಾಡಿದವನಾಗುತ್ತಾನೆ. |

---

**ಹೀಗೆ ಉಪೋದ್ಘಾತರೂಪವಾಗಿ ಪಶುಗಳು ಹೇಳಲ್ಪಟ್ಟವು. ಇನ್ನು ನಾಲ್ಕನೆಯ ಕಾಂಡದ ಪ್ರಥಮಪ್ರಪಾಠಕದಲ್ಲಿ ಏಳನೆಯ ಅನುವಾಕದಲ್ಲಿ ಹೇಳಿರುವ ಸಾಮಿಧೇನೀಮಂತ್ರಗಳನ್ನೂ, ಎಂಟನೆಯ ಅನುವಾಕದಲ್ಲಿರುವ ಪ್ರಯಾಜಮಂತ್ರಗಳ ಯಾಜ್ಯೆಗಳಾಗಿರುವ ಆಪ್ರೀಮಂತ್ರಗಳನ್ನೂ ವ್ಯಾಖ್ಯಾನಿಸಬೇಕಿದೆ. ಸಾಮಿಧೇನೀಮಂತ್ರಗಳ ಪಾಠವೂ ಮೊದಲು ಇದೆ. ಅನುಷ್ಠಾನದಲ್ಲಿಯೂ ಅವೇ ಮೊದಲು ವಿನಿಯುಕ್ತವಾಗುತ್ತವೆ. ಆದರೂ ಕಡಿಮೆ ಗಾತ್ರವಾದುದರಿಂದ ಸೂಚೀಕಟಾಹನ್ಯಾಯದಂತೆ ಸುಪ್ರೀತಿಗೆ ಕಾರಣವಾದುದರಿಂದ ಪ್ರಶಸ್ತವಾಗಿ 'ಅಭ್ಯರ್ಹಿತಂ ಪೂರ್ವಮ್'** ಎಂಬಂತೆ ಆಪ್ರೀಮಂತ್ರಗಳ ವ್ಯಾಖ್ಯಾನವು ಮೊದಲು ಇದೆ.

---

ಆಪ್ರೀಮಂತ್ರಗಳ ವಿಧಿ; ಅರ್ಥವಾದ

| | |
|---|---|
| **ಪ್ರಜಾಪತಿಃ ಪ್ರಜಾಃ ಅಸೃಜತ** | ಪ್ರಜಾಪತಿಬ್ರಹ್ಮನು ಪ್ರಜೆಗಳನ್ನು ಸೃಷ್ಟಿಸಿದನು. |

ಸ ರಿರಿಚಾನೋಽಮನ್ಯತ ಸ ಏತಾ ಆಪ್ರೀರಪಶ್ಯತ್ತಾಭಿರ್ವೈ ಸ ಮುಖತ [ಮುಖತಃ(೪೧)]ಆತ್ಮಾನಮಾಽಪ್ರೀಣೀತ ಯದೇತಾ ಆಪ್ರಿಯೋ ಭವಂತಿ ಯಜ್ಞೋ ವೈ ಪ್ರಜಾಪತಿ–

ಸಃ । ರಿರಿಚಾನಃ । ಅಮನ್ಯತ । ಸಃ । ಏತಾಃ । ಆಪ್ರೀರಿತ್ಯಾ–ಪ್ರೀಃ । ಅಪಶ್ಯತ್ । ತಾಭಿಃ । ವೈ । ಸಃ । ಮುಖತಃ । (೪೧) । ಆತ್ಮಾನಮ್ । ಏತಿ । ಅಪ್ರೀಣೀತ । ಯತ್ । ಏತಾಃ । ಆಪ್ರಿಯ ಇತ್ಯಾ–ಪ್ರಿಯಃ । ಭವಂತಿ । ಯಜ್ಞಃ । ವೈ । ಪ್ರಜಾಪತಿರಿತಿ ಪ್ರಜಾ–ಪತಿಃ ।

| ಬ್ರಾಹ್ಮಣಭಾಗ | ವಿವರಣೆ |
| --- | --- |
| **ಸಃ ರಿರಿಚಾನಃ ಅಮನ್ಯತ** | ಸೃಷ್ಟಿಯನ್ನು ಮಾಡಿದುದರಿಂದ ತನ್ನ ಶಕ್ತಿಯು ಕಡಿಮೆಯಾಯಿತೆಂದು ಭಾವಿಸಿದನು. |
| **ಸಃ ಏತಾಃ ಆಪ್ರೀಃ ಅಪಶ್ಯತ್** | ಆ ಪ್ರಜಾಪತಿಯು ಈ ಆಪ್ರೀಮಂತ್ರಗಳನ್ನು ಚಿಂತಿಸಿ ತಿಳಿದನು. |
| **ತಾಭಿಃ ವೈ ಸಃ ಮುಖತಃ ಆತ್ಮಾನಮ್ ಆ ಅಪ್ರೀಣೀತ** | ಆಪ್ರೀಮಂತ್ರಗಳಿಂದಲೇ ಯಜ್ಞಪ್ರಾರಂಭದಲ್ಲಿಯೇ ಆ ಪ್ರಜಾಪತಿಯು ಸುಪ್ರೀತನಾದನು. |
| **ಯತ್ ಏತಾಃ ಆಪ್ರಿಯಃ ಭವಂತಿ** | ಈ ಆಪ್ರೀಮಂತ್ರಗಳು ಆರಂಭದಲ್ಲಿ ಇರುವುದರಿಂದ ಹೀಗಾಗುತ್ತದೆ. |
| **ಯಜ್ಞಃ ವೈ ಪ್ರಜಾಪತಿಃ** | ಯಜ್ಞವು ಪ್ರಜಾಪತಿಸ್ವರೂಪವಾಗಿದೆ. |

ತಾತ್ಪರ್ಯ:– ಆಗ್ನೇಯಪಶುಗಳ ಆಲಂಭನವಿಷಯದಲ್ಲಿ ವಿಚಾರವಿದೆ. ಪಶುಗಳ ಆಲಂಭನವೇ ಬೇಡವೇ? ಉಪಾಕರಣವನ್ನು ಮಾಡಿ ಬಿಡಬೇಕೇ? ಅಥವಾ ಯಾಗವನ್ನು ಪೂರ್ಣಗೊಳಿಸಬೇಕೇ?

ಈ ಮೂರು ರೀತಿಯಲ್ಲಿಯೂ ದೋಷವಿರುವುದರಿಂದ ಅಸಿಸ್ಪರ್ಶ(ಕತ್ತಿಯ ಸ್ಪರ್ಶ)ವನ್ನು ಮಾಡಿ, ಪರ್ಯಗ್ನಿಕರಣದ ಬಳಿಕ ಬಿಡಬೇಕು. ಇದರಿಂದ **'ಮೃದಾ ವಿಲಿಪ್ಯೋಪದಧಾತಿ'** ಎಂದು ವಿಹಿತವಾದ ಉಪಧಾನ ದಲ್ಲಿ ಶಿರಸ್ಸುಗಳು ಸಾರಹೀನವಾಗುವುದಿಲ್ಲ. ಪ್ರಜಾಪತಿದೇವತಾಕವಾದ ತೂಪರ(ಕೊಂಬಿಲ್ಲದ)ವಾದ ಅಜಪಶು ವಿನಿಂದ ಯಾಗವನ್ನು ಸಂಪೂರ್ಣಗೊಳಿಸಬೇಕು. ಆಗ ಯಜ್ಞದ ವಿಚ್ಛಿತ್ತಿ ಇಲ್ಲದೆ ದೋಷತ್ರಯವೂ ಇರುವುದಿಲ್ಲ.

**'ಆಪ್ರೀ'** ಎಂಬ ಹೆಸರಿನ **'ಊರ್ಧ್ವಾ ಅಸ್ಯ'** [ತೈ. ಸಂ. 4.1.8] ಎಂದು ಪ್ರಾರಂಭವಾಗುವ ಹನ್ನೆರಡು ಮಂತ್ರಗಳು ಪ್ರಯಾಜ ಯಾಜ್ಯೆಗಳು. ಇವು ಅನೇಕಪ್ರಕಾರವಾದ ಛಂದಸ್ಸುಗಳಿಂದ ಕೂಡಿವೆ. ಇವೆಲ್ಲವೂ ತ್ರಿಪದೆಗಳು. ಇವುಗಳಲ್ಲಿ ಮೊದಲನೆಯ ಪಾದಗಳೂ ಕೊನೆಯ ಪಾದಗಳೂ ಹನ್ನೊಂದು ಅಕ್ಷರಗಳನ್ನು ಹೊಂದಿವೆ.

–ರ್ಯಜ್ಞಮೇವೈತಾಭಿರ್ಮುಖತ ಆ ಪ್ರೀಣಾತ್ಯಪರಿಮಿತಛಂದಸೋ ಭವಂತ್ಯ ಪರಿಮಿತಃ ಪ್ರಜಾಪತಿಃ ಪ್ರಜಾಪತೇರಾಪ್ತ್ಯಾ ಊನಾತಿರಿಕ್ತಾ ಮಿಥುನಾಃ ಪ್ರಜಾತ್ಯೈ೩೮

---

ಯಜ್ಞಮ್ । ಏವ । ಏತಾಭಿಃ । ಮುಖತಃ । ಏತಿ । ಪ್ರೀಣಾತಿ । ಅಪರಿಮಿತಛಂದಸ ಇತ್ಯಪರಿಮಿತ–ಛಂದಸಃ । ಭವಂತಿ । ಅಪರಿಮಿತ ಇತ್ಯಪರಿ–ಮಿತಃ । ಪ್ರಜಾಪತಿರಿತಿ ಪ್ರಜಾ–ಪತಿಃ । ಪ್ರಜಾಪತೇರಿತಿ ಪ್ರಜಾ–ಪತೇಃ । ಆಪ್ತ್ಯೈ೩೮ । ಊನಾತಿರಿಕ್ತಾ ಇತ್ಯೂನ–ಅತಿರಿಕ್ತಾಃ । ಮಿಥುನಾಃ । ಪ್ರಜಾತ್ಯಾ ಇತಿ ಪ್ರ–ಜಾತ್ಯೈ೩೮ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಏತಾಭಿಃ ಮುಖತಃ ಯಜ್ಞಮ್ ಏವ ಆ ಪ್ರೀಣಾತಿ** | ಈ ಆಪ್ರಿಗಳಿಂದ (ಪ್ರಜಾಪತಿಸ್ವರೂಪವಾದ) ಯಜ್ಞವನ್ನು ಪ್ರಾರಂಭದಲ್ಲಿಯೇ ಯಜಮಾನನು ಸಂತೋಷಪಡಿಸುತ್ತಾನೆ. |

**ಅನೇಕ ಛಂದಸ್ಸುಗಳು ಇರುವುದರ ಪ್ರಶಂಸೆ**

| | |
|---|---|
| **ಅಪರಿಮಿತಛಂದಸಃ ಭವಂತಿ** | ಆಪ್ರೀಮಂತ್ರಗಳು ಹಲವು ಛಂದಸ್ಸುಗಳಿಂದ ಕೂಡಿವೆ. |
| **ಪ್ರಜಾಪತಿಃ ಅಪರಿಮಿತಃ** | ಪ್ರಜಾಪತಿಯು ಅಪರಿಮಿತಮಹಿಮೆಯುಳ್ಳವನು. |
| **ಪ್ರಜಾಪತೇಃ ಆಪ್ತ್ಯೈ೩೮** | ಇದು ಪ್ರಜಾಪತಿಯ ಅನುಗ್ರಹಪ್ರಾಪ್ತಿಗೆ ಸಾಧನವಾಗುತ್ತದೆ. |
| **ಊನಾತಿರಿಕ್ತಾಃ** | ಇವುಗಳಲ್ಲಿ ಮಧ್ಯಮಪಾದಗಳು ಕ್ರಮವಾಗಿ ನ್ಯೂನಾಕ್ಷರಗಳೂ ಅಧಿಕಾಕ್ಷರಗಳೂ ಆಗಿವೆ. |
| **ಮಿಥುನಾಃ ಪ್ರಜಾತ್ಯೈ೩೮** | ಇದು ಸ್ತ್ರೀಪುರುಷರೂಪವಾಗಿ ಯಜಮಾನನಿಗೆ ಪ್ರಜಾಪ್ರಾಪ್ತಿಗೆ ಕಾರಣವಾಗುತ್ತದೆ. |

---

ಮಧ್ಯದ ಪಾದಗಳು ಕ್ರಮವಾಗಿ ಐದು, ಆರು, ಏಳು, ಎಂಟು ಅಕ್ಷರಗಳಿಂದ ಕೂಡಿವೆ. ಇವುಗಳನ್ನು **'ಪಿಪೀಲಿಕಾಮಧ್ಯಾ ಉಷ್ಣಿಕ್'** ಎಂದು ಹೇಳುತ್ತಾರೆ. **'ದೈವ್ಯಾ ಹೋತಾರೌ'** **'ತಿಸ್ರೋ ದೇವೀಃ'** ಈ ಋಕ್ಕುಗಳು ಗಾಯತ್ರೀಛಂದಸ್ಸಿನವು.

ಲೋಮಶಂ ವೈ ನಾಮೈತಚ್ಛಂದಃ ಪ್ರಜಾಪತೇಃ ಪಶವೋ ಲೋಮಶಾಃ ಪಶೂನೇವಾವರುಂಧೇ ಸರ್ವಾಣಿ ವಾ ಏತಾ ರೂಪಾಣಿ ಸರ್ವಾಣಿ ರೂಪಾಣ್ಯಗ್ನೌ ಚಿತ್ಯೇ ಕ್ರಿಯಂತೇ ತಸ್ಮಾದೇತಾ ಅಗ್ನೇಶ್ಚಿತ್ಯಸ್ಯ [(೪೨)ಭವಂತ್ಯೇ..]

---

ಲೋಮಶಮ್ । ವೈ । ನಾಮ । ಏತತ್ । ಛಂದಃ । ಪ್ರಜಾಪತೇರಿತಿ ಪ್ರಜಾ–ಪತೇಃ । ಪಶವಃ । ಲೋಮಶಾಃ । ಪಶೂನ್ । ಏವ । ಅವೇತಿ । ರುಂಧೇ । ಸರ್ವಾಣಿ । ವೈ । ಏತಾಃ । ರೂಪಾಣಿ । ಸರ್ವಾಣಿ । ರೂಪಾಣಿ । ಅಗ್ನೌ । ಚಿತ್ಯೇ । ಕ್ರಿಯಂತೇ । ತಸ್ಮಾತ್ । ಏತಾಃ । ಅಗ್ನೇಃ । ಚಿತ್ಯಸ್ಯ । (೪೨) । ಭವಂತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ಮಧ್ಯಮಪಾದದ ಅಲ್ಪತ್ವದ ಪ್ರಶಂಸೆ** |
| **ಏತತ್ ಛಂದಃ ಲೋಮಶಮ್ ವೈ ನಾಮ** | ಆಪ್ರಿಗಳ ಮಧ್ಯಛಂದಸ್ಸು ಲೋಮದಂತೆ ಸೂಕ್ಷ್ಮವಾಗಿದೆ. |
| **ಪ್ರಜಾಪತೇಃ ಪಶವಃ ಲೋಮಶಾಃ** | ಪ್ರಜಾಪತಿಯು ಸೃಷ್ಟಿಸಿರುವ ಪಶುಗಳೂ ಲೋಮಭರಿತ ವಾಗಿವೆ. |
| **ಪಶೂನ್ ಅವರುಂಧೇ ಏವ** | (ಛಂದಸ್ಸುಗಳಿಗೂ ಪಶುಗಳಿಗೂ ಸೂಕ್ಷ್ಮತೆಯ ಸಾಮ್ಯ ದಿಂದ) ಯಜಮಾನನು ಪಶುಗಳನ್ನು ಹೊಂದುತ್ತಾನೆ. |
| | **ಆಪ್ರಿಗಳ ಬಹುರೂಪತ್ವದ ಪ್ರಶಂಸೆ** |
| **ಸರ್ವಾಣಿ ವೈ ಏತಾಃ ರೂಪಾಣಿ** | ಹೀಗೆ ಈ ಆಪ್ರೀಮಂತ್ರಗಳು ವಿವಿಧರೂಪಗಳಾಗಿ ಪ್ರಕಾಶಿಸುತ್ತವೆ. |
| **ಚಿತ್ಯೇ ಅಗ್ನೌ ಸರ್ವಾಣಿ ರೂಪಾಣಿ ಕ್ರಿಯಂತೇ** | ಚಯನ ಮಾಡಬೇಕಾಗಿರುವ ಅಗ್ನಿಯಲ್ಲಿಯೂ ಸಹ ರೆಕ್ಕೆ, ಬಾಲರೂಪದಲ್ಲಿಯೂ, ಶ್ಯೇನ, ಪಕ್ಷಿ, ಕಂಕಪಕ್ಷಿಯ ರೂಪದಲ್ಲಿಯೂ, ಕಾಮನೆಗೆ ಅನುಗುಣವಾಗಿ ರೂಪ ಗಳು ಮಾಡಲ್ಪಡುತ್ತವೆ. |
| **ತಸ್ಮಾತ್ ಏತಾಃ ಚಿತ್ಯಸ್ಯ ಅಗ್ನೇಃ ಭವಂತಿ** | ಆಪ್ರಿಗಳಿಗೂ, ಚಯನಾಗ್ನಿಗೂ ಈ ಬಹುರೂಪತ್ವದ ಹೋಲಿಕೆಯು ಇರುವುದರಿಂದ ಅಗ್ನಿಚಯನಕ್ಕೆ ಇವು ಆಪ್ರಿಗಳಾಗಲು ಅರ್ಹವಾಗಿವೆ. |

ಭವಂತ್ಯೇಕವಿಗ್ಂಶತಿಗ್ಂ ಸಾಮಿಧೇನೀರನ್ವಾಹ ರುಗ್ವಾ ಏಕವಿಗ್ಂಶೋ ರುಚಮೇವ ಗಚ್ಛತ್ಯಥೋ ಪ್ರತಿಷ್ಠಾಮೇವ ಪ್ರತಿಷ್ಠಾ ಹ್ಯೇಕವಿಗ್ಂಶ–

---

ಏಕವಿಗ್ಂಶತಿಮಿತ್ಯೇಕ–ವಿಗ್ಂಶತಿಮ್ । ಸಾಮಿಧೇನೀರಿತಿ ಸಾಮ್–ಇಧೇನೀಃ । ಅನ್ವಿತಿ । ಆಹ । ರುಕ್ । ವೈ । ಏಕವಿಗ್ಂಶ ಇತ್ಯೇಕ–ವಿಗ್ಂಶಃ । ರುಚಮ್ । ಏವ । ಗಚ್ಛತಿ । ಅಥೋ ಇತಿ । ಪ್ರತಿಷ್ಠಾಮಿತಿ ಪ್ರತಿ–ಸ್ಥಾಮ್ । ಏವ । ಪ್ರತಿಷ್ಠೇತಿ ಪ್ರತಿ–ಸ್ಥಾ । ಹಿ । ಏಕವಿಗ್ಂಶ ಇತ್ಯೇಕ–ವಿಗ್ಂಶಃ ।

---

**ಹೀಗೆ ಚತುರ್ಥಕಾಂಡದ ಪ್ರಥಮಪ್ರಪಾಠಕದ ಎಂಟನೆಯ ಅನುವಾಕದ ಆಪ್ರಿಗಳನ್ನು ವ್ಯಾಖ್ಯಾನ ಮಾಡಿ ಏಳನೆಯ ಅನುವಾಕದಲ್ಲಿ ಪಠಿತವಾದ 'ಸಮಾಸ್ತ್ವಾಗ್ನೇ' ಮುಂತಾದ ಸಾಮಿಧೇನೀಮಂತ್ರಗಳನ್ನು ವ್ಯಾಖ್ಯಾನ ಮಾಡಲಾಗಿದೆ.**

**ಪ್ರಕೃತಿಯಾಗದಿಂದಲೇ 'ಪ್ರ ವೋ ವಾಜಾಃ' ಮುಂತಾದ ಹನ್ನೊಂದು ಸಾಮಿಧೇನೀಮಂತ್ರಗಳು ಪ್ರಾಪ್ತವಾಗುತ್ತವೆ. ಈ ಅಗ್ನಿಚಯನಕ್ಕೆ ಸಂಬಂಧಿಸಿದಂತೆ 'ಸಮಾಸ್ತ್ವಾಗ್ನೇ' ಮುಂತಾದ ಹತ್ತು ಸಾಮಿಧೇನೀ ಮಂತ್ರಗಳಾಗುತ್ತವೆ.**

**ಇವೆರಡನ್ನೂ ಸೇರಿಸಿ ಇಪ್ಪತ್ತೊಂದು ಸಾಮಿಧೇನಿಗಳು.**

---

| ಬ್ರಾಹ್ಮಣಭಾಗ | ವಿವರಣೆ |
|---|---|

**ಏಕವಿಂಶತಿಸಾಮಿಧೇನೀವಿಧಿ; ಅರ್ಥವಾದ**

| | |
|---|---|
| **ಏಕವಿಗ್ಂಶತಿಮ್ ಸಾಮಿಧೇನೀಃ** | ಇಪ್ಪತ್ತೊಂದು ಸಾಮಿಧೇನಿಗಳನ್ನು |
| **ಅನ್ವಾಹ** | ಹೇಳಬೇಕು. |
| **ಏಕವಿಗ್ಂಶಃ ರುಕ್ ವೈ** | ಏಕವಿಂಶಸ್ತೋಮವು ದೀಪ್ತಿರೂಪವಾಗಿದೆ. |
| **ರುಚಮ್ ಗಚ್ಛತಿ ಏವ** | ಇದರಿಂದ ಯಜಮಾನನು ಪ್ರಕಾಶವನ್ನು ಪಡೆಯುತ್ತಾನೆ. |
| [**ಅಥೋ ಪ್ರತಿಷ್ಠಾಮ್ ಏವ**] ಗಚ್ಛತಿ | ಮತ್ತು ಶ್ರೇಷ್ಠಸ್ಥಿತಿಯನ್ನೂ ಪಡೆಯುತ್ತಾನೆ. |
| **ಏಕವಿಗ್ಂಶಃ ಪ್ರತಿಷ್ಠಾ ಹಿ** | ಏಕವಿಂಶಸ್ತೋಮವು ಪ್ರತಿಷ್ಠಾರೂಪವಾಗಿದೆ. |

---

ತಾತ್ಪರ್ಯ:–ಹೀಗೆ ಐದು ಅಕ್ಷರಗಳಿಂದ ಆರಂಭಿಸಿ ಎಂಟು ಅಕ್ಷರಗಳವರೆಗೆ ಕೆಳಗಿನಿಂದ ಮೇಲಿನವರೆಗೆ ಅಧಿಕಾಕ್ಷರಗಳೂ, ಮೇಲಿನಿಂದ ಕೆಳಗಿನವರೆಗೆ ನ್ಯೂನಾಕ್ಷರಗಳೂ ಆಗಿವೆ. ಈ ರೀತಿ ಇಬ್ಬಗೆಯಿರುವುದರಿಂದ ಸ್ತ್ರೀಪುರುಷರೂಪವಾಗಿ ಯಜಮಾನನ ಪ್ರಜಾಪ್ರಾಪ್ತಿಗೆ ಕಾರಣವಾಗುತ್ತದೆ.

ಇದು ಆಪ್ರಿಗಳ ಪ್ರಶಂಸೆಯಾಗಿದೆ.

-ಶ್ಚತುರ್ವಿಗ್ಂಶತಿಮನ್ವಾಹ ಚತುರ್ವಿಗ್ಂಶತಿರರ್ಧಮಾಸಾಃ ಸಂವಥ್ಸರ

ಸ್ಸಂವಥ್ಸರೋಽಗ್ನಿರ್ವೈಶ್ವಾನರಃ ಸಾಕ್ಷಾದೇವ ವೈಶ್ವಾನರಮವರುಂಧೇ

ಪರಾಚೀರನ್ವಾಹ ಪರಾಙಿವ ಹಿ ಸುವರ್ಗೋ ಲೋಕಃ

---

ಚತುರ್ವಿಗ್ಂಶತಿಮಿತಿ ಚತುಃ-ವಿಗ್ಂಶತಿಮ್ । ಅನ್ವಿತಿ । ಆಹ । ಚತುರ್ವಿಗ್ಂಶತಿರಿತಿ ಚತುಃ-ವಿಗ್ಂಶತಿಃ । ಅರ್ಧಮಾಸಾ ಇತ್ಯರ್ಧ-ಮಾಸಾಃ । ಸಂವಥ್ಸರ ಇತಿ ಸಮ್-ವಥ್ಸರಃ । ಸಂವಥ್ಸರ ಇತಿ ಸಮ್-ವಥ್ಸರಃ । ಅಗ್ನಿಃ । ವೈಶ್ವಾನರಃ । ಸಾಕ್ಷಾದಿತಿ ಸ-ಅಕ್ಷಾತ್ । ಏವ । ವೈಶ್ವಾನರಮ್ । ಅವೇತಿ । ರುಂಧೇ । ಪರಾಚೀಃ । ಅನ್ವಿತಿ । ಆಹ । ಪರಾಙ್ । ಇವ । ಹಿ । ಸುವರ್ಗ ಇತಿ ಸುವಃ-ಗಃ । ಲೋಕಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ಸಾಮಿಧೇನೀಸಂಖ್ಯಾಪೂರ್ತಿಗಾಗಿ ಪಕ್ಷಾಂತರ** |
| **ಚತುರ್ವಿಗ್ಂಶತಿಮ್ ಅನ್ವಾಹ** | (ಸಾಮಿಧೇನಿಗಳಲ್ಲಿ ಶಾಖಾಂತರದ **'ಉಪೇಮಸೃಕ್ಷಿ ವಾಜಯುಃ'** [**ಋ.** 2.35.1]ಮುಂತಾದ ಮೂರು ಸಾಮಿಧೇನಿಗಳನ್ನು ಸೇರಿಸಿಕೊಂಡು) ಇಪ್ಪತ್ತನಾಲ್ಕು ಸಾಮಿಧೇನಿಗಳನ್ನು ಹೇಳಬೇಕು. |
| **ಚತುರ್ವಿಗ್ಂಶತಿಃ ಅರ್ಧಮಾಸಾಃ ಸಂವಥ್ಸರಃ** | ಇಪ್ಪತ್ತನಾಲ್ಕು ಅರ್ಧಮಾಸಗಳು (ಪಕ್ಷಗಳು) ಸಂವತ್ಸರವಾಗಿವೆ. |
| **ಸಂವಥ್ಸರಃ ವೈಶ್ವಾನರಃ ಅಗ್ನಿಃ** | ಸಂವತ್ಸರವೇ ಎಲ್ಲರಿಗೂ ದಾಹ-ಪಾಕಾದಿಗಳಿಗೆ ಅನುಕೂಲವಾಗಿ ಹಿತವಾದ ವೈಶ್ವಾನರರೂಪವಾಗಿದೆ. |
| **ಸಾಕ್ಷಾತ್ ವೈಶ್ವಾನರಮ್ ಏವ ಅವರುಂಧೇ** | ಯಜಮಾನನು ಸಾಕ್ಷಾತ್ತಾಗಿ ವೈಶ್ವಾನರನನ್ನೇ(ಈ ಸಾಮಿಧೇನಿಗಳಿಂದ) ಹೊಂದುತ್ತಾನೆ. |
| **ಪರಾಚೀಃ ಅನ್ವಾಹ** | ಈ ಸಾಮಿಧೇನಿಗಳನ್ನು ಆವೃತ್ತಿ ಇಲ್ಲದೆಯೇ ಹೇಳಬೇಕು. |
| **ಸುವರ್ಗಃ ಲೋಕಃ ಪರಾಙ್ ಇವ ಹಿ** | ಸ್ವರ್ಗಲೋಕವೂ ಆವೃತ್ತವಾಗುವುದಿಲ್ಲವಷ್ಟೆ. |

---

**'ಯ ಏವಂ ವಿದ್ವಾಗ್ಂಸ ಏಕವಿಗ್ಂಶತಿರಾತ್ರಮಾಸತೇ ರೋಚಂತ ಏವ'** ಎಂಬುದಾಗಿ ಸಪ್ತಮಕಾಂಡದಲ್ಲಿ ಏಕವಿಂಶತಿಸಂಖ್ಯೆಯು ದೀಪ್ತಿಗೆ ಕಾರಣವೆಂದು ಹೇಳಿದೆ. **'ಏಕವಿಗ್ಂಶಃ ಸ್ತೋಮಾನಾಂ ಪ್ರತಿಷ್ಠಾ'** ಎಂದೂ ಅಲ್ಲಿಯೇ

ಸಮಾಸ್ತ್ವಾಽಗ್ನ ಋತವೋ ವರ್ಧಯಂತ್ವಿತ್ಯಾಹ ಸಮಾಭಿರೇವಾಗ್ನಿಂ ವರ್ಧಯ[ವರ್ಧಯತಿ(೪೩)ಋತುಭಿಃ]ತ್ಯೃತುಭಿಸ್ಸಂವಥ್ಸರಂ ವಿಶ್ವಾ ಆ ಭಾಹಿ ಪ್ರದಿಶಃ ಪೃಥಿವ್ಯಾ ಇತ್ಯಾಹ ತಸ್ಮಾದಗ್ನಿಸ್ಸರ್ವಾ ದಿಶೋಽನು ವಿಭಾತಿ

---

ಸಮಾಃ । ತ್ವಾ । ಅಗ್ನೇ । ಋತವಃ । ವರ್ಧಯಂತು । ಇತಿ । ಆಹ । ಸಮಾಭಿಃ । ಏವ । ಅಗ್ನಿಮ್ । ವರ್ಧಯತಿ । (೪೩) । ಋತುಭಿರಿತ್ಯೃತು–ಭಿಃ । ಸಂವಥ್ಸರಮಿತಿ ಸಮ್–ವಥ್ಸರಮ್ । ವಿಶ್ವಾಃ । ಏತಿ । ಭಾಹಿ । ಪ್ರದಿಶ ಇತಿ ಪ್ರ–ದಿಶಃ । ಪೃಥಿವ್ಯಾಃ । ಇತಿ । ಆಹ । ತಸ್ಮಾತ್ । ಅಗ್ನಿಃ । ಸರ್ವಾಃ । ದಿಶಃ । ಅನು । ವೀತಿ । ಭಾತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|

**ಸಾಮಿಧೇನಿಯಲ್ಲಿನ 'ಸಮಾ' ಶಬ್ದದ ತಾತ್ಪರ್ಯ**

| | |
|---|---|
| **ಸಮಾಸ್ತ್ವಾಗ್ನ ಋತವಃ ವರ್ಧಯಂತು ಇತಿ ಆಹ** | 'ಸಮಾಸ್ತ್ವಾಗ್ನೇ ಋತವಃ ವರ್ಧಯಂತು' ಎಂಬ ಮಂತ್ರಭಾಗವು ಹೀಗೆ ಹೇಳುತ್ತದೆ. |
| **ಸಮಾಭಿಃ ಏವ ಅಗ್ನಿಮ್ ವರ್ಧಯತಿ** | ಸಂವತ್ಸರಗಳು ಅಗ್ನಿಯನ್ನು ವೃದ್ಧಿಗೊಳಿಸುತ್ತವೆ. |
| **ಋತುಭಿಃ ಸಂವತ್ಸರಮ್** ವರ್ಧಯತಿ | ಪ್ರವೃತ್ತವಾದ ಋತುಗಳು ಸಂವತ್ಸರವನ್ನು ವೃದ್ಧಿಗೊಳಿಸುತ್ತವೆ. |

**'ಆಭಾಹಿ' ಎಂಬುದರ ತಾತ್ಪರ್ಯ**

| | |
|---|---|
| **ವಿಶ್ವಾಃ ಆ ಭಾಹಿ ಪ್ರದಿಶಃ ಪೃಥಿವ್ಯಾಃ ಇತಿ ಆಹ** | ಈ ಭಾಗವು 'ಹೇ! ಅಗ್ನಿಯೇ! ನೀನು ಭೂಮಿಯ ಎಲ್ಲ ದಿಕ್ಕುಗಳನ್ನೂ, ವಿದಿಕ್ಕುಗಳನ್ನೂ ಪ್ರಕಾಶಗೊಳಿಸು' ಎಂದು ಹೇಳುತ್ತದೆ. |
| **ತಸ್ಮಾತ್ ಅಗ್ನಿಃ ಸರ್ವಾಃ ದಿಶಃ ಅನು ವಿಭಾತಿ** | ಆದುದರಿಂದ ಅಗ್ನಿಯು ತನ್ನ ತೇಜಸ್ಸಿನಿಂದ ದಿಕ್ಕುಗಳೆಲ್ಲವನ್ನೂ ಪ್ರಕಾಶಗೊಳಿಸುತ್ತಾನೆ. |

---

ಹೇಳಿದೆ. ಸ್ತೋಮಗಳಲ್ಲಿ ಏಕವಿಂಶಸ್ತೋಮವು ಪ್ರತಿಷ್ಠಾರೂಪವಾದುದು.

ಪ್ರಕೃತಿಯಾಗದಲ್ಲಿ ಸಾಮಿಧೇನೀಮಂತ್ರಗಳಿಗೆ **'ತ್ರಿಃ ಪ್ರಥಮಾಮ್'** ಎಂದು ಆವೃತ್ತಿಯು ಇದೆ.**ಇಲ್ಲಿ ಇರುವುದಿಲ್ಲ.** **'ಸಂವತ್ಸರಮುಖ್ಯಂ ಭೃತ್ವಾ'** ಎಂಬ ಶ್ರುತಿಯಿರುವುದರಿಂದ ಸಂವತ್ಸರಕ್ಕೂ ಉಖ್ಯಾಗ್ನಿಗೂ ಸಂಬಂಧವಿದೆ.

ಪ್ರತ್ಯೌಹತಾಮಶ್ವಿನಾ ಮೃತ್ಯುಮಸ್ಮಾದಿತ್ಯಾಹ ಮೃತ್ಯುಮೇವಾಸ್ಮಾದಪನುದ ತ್ಯುದ್ವಯಂ ತಮಸಸ್ಪರೀತ್ಯಾಹ ಪಾಪ್ಮಾ ವೈ ತಮಃ ಪಾಪ್ಮಾನಮೇವಾಸ್ಮಾದಪ ಹಂತ್ಯಗನ್ಮ ಜ್ಯೋತಿರುತ್ತಮಮಿತ್ಯಾಹಾ-

---

ಪ್ರತೀತಿ । ಔಹತಾಮ್ । ಅಶ್ವಿನಾ । ಮೃತ್ಯುಮ್ । ಅಸ್ಮಾತ್ । ಇತಿ । ಆಹ । ಮೃತ್ಯುಮ್ । ಏವ । ಅಸ್ಮಾತ್ । ಅಪೇತಿ । ನುದತಿ । ಉದಿತಿ । ವಯಮ್ । ತಮಸಃ । ಪರೀತಿ । ಇತಿ । ಆಹ । ಪಾಪ್ಮಾ । ವೈ । ತಮಃ । ಪಾಪ್ಮಾನಮ್ । ಏವ । ಅಸ್ಮಾತ್ । ಅಪೇತಿ । ಹಂತಿ । ಅಗನ್ಮ । ಜ್ಯೋತಿಃ । ಉತ್ತಮಮಿತ್ಯುತ್-ತಮಮ್ । ಇತಿ । ಆಹ ।

---

| ಬ್ರಾಹ್ಮಣಭಾಗ | ವಿವರಣೆ |
|---|---|

**'ಪ್ರತ್ಯೌಹತಾ' ಎಂಬ ಮಂತ್ರಭಾಗದ ವಿವರಣೆ**

| | |
|---|---|
| **ಪ್ರತ್ಯೌಹತಾಮ್ ಅಶ್ವಿನಾ ಮೃತ್ಯುಮ್ ಅಸ್ಮಾತ್ ಇತಿ ಆಹ** | 'ದೇವವೈದ್ಯರಾದ ಅಶ್ವಿನೀದೇವತೆಗಳೇ! ನೀವು ಈ ಯಜಮಾನನಿಂದ ಮೃತ್ಯುವನ್ನು ದೂರ ಮಾಡಿರಿ' ಎಂದು ಈ ಮಂತ್ರವು ಹೇಳುತ್ತದೆ. |
| **ಅಸ್ಮಾತ್ ಮೃತ್ಯುಮ್ ಅಪನುದತಿ ಏವ** | ಅಧ್ವರ್ಯುವು ಅಶ್ವಿನೀದೇವತೆಗಳ ಅನುಗ್ರಹದಿಂದ ಯಜಮಾನನಿಂದ ಮೃತ್ಯುವನ್ನು ದೂರ ಮಾಡುತ್ತಾನೆ. |

**'ಉದ್ವಯಮ್' ಎಂಬ ಮಂತ್ರಭಾಗದ ವಿವರಣೆ**

| | |
|---|---|
| **ಉದ್ವಯಂ ತಮಸಃ ಪರಿ ಇತಿ ಆಹ** | 'ನಾವು ಕತ್ತಲೆಯಿಂದ/ಪಾಪದಿಂದ ಮೇಲೆ ಇರುವಂತೆ ಮಾಡು' ಎಂದು ಈ ಮಂತ್ರಭಾಗವು ಹೇಳುತ್ತದೆ. |
| **ಪಾಪ್ಮಾ ವೈ ತಮಃ** | ಪಾಪವೇ ತಮಸ್ಸಾಗಿದೆ. |
| **ಅಸ್ಮಾತ್ ಪಾಪ್ಮಾನಮ್ ಏವ ಅಪಹಂತಿ** | ಈ ಮಂತ್ರದಿಂದ ಅಧ್ವರ್ಯುವು ಯಜಮಾನನಿಂದ ಪಾಪವನ್ನು ಹೋಗಲಾಡಿಸುತ್ತಾನೆ. |

**'ಅಗನ್ಮ' ಎಂಬ ಮಂತ್ರಭಾಗದ ವಿವರಣೆ**

| | |
|---|---|
| **ಅಗನ್ಮ ಜ್ಯೋತಿಃ ಉತ್ತಮಮ್ ಇತಿ ಆಹ** | 'ನಾವು ಈ ಮಂತ್ರಪಾಠದಿಂದ ಉತ್ತಮವಾದ ಪ್ರಕಾಶವನ್ನು ಹೊಂದಿದೆವು' ಎಂದು ಈ ಮಂತ್ರಭಾಗವು ಹೇಳುತ್ತದೆ. |

–ಸೌ ವಾ ಆದಿತ್ಯೋ ಜ್ಯೋತಿರುತ್ತಮಮಾದಿತ್ಯಸ್ಯೈವ ಸಾಯುಜ್ಯಂ ಗಚ್ಛತಿ ನ ಸಂವಥ್ಸರಸ್ತಿಷ್ಠತಿ ನಾಸ್ಯ ಶ್ರೀಸ್ತಿಷ್ಠತಿ ಯಸ್ಯೈತಾಃ ಕ್ರಿಯಂತೇ ಜ್ಯೋತಿಷ್ಮತೀಮುತ್ತಮಾಮನ್ವಾಹ

ಅಸೌ । ವೈ । ಆದಿತ್ಯಃ । ಜ್ಯೋತಿಃ । ಉತ್ತಮಮಿತ್ಯುತ್–ತಮಮ್ । ಆದಿತ್ಯಸ್ಯ । ಏವ । ಸಾಯುಜ್ಯಮ್ । ಗಚ್ಛತಿ । ನ । ಸಂವಥ್ಸರ ಇತಿ ಸಮ್–ವಥ್ಸರಃ । ತಿಷ್ಠತಿ । ನ । ಅಸ್ಯ । ಶ್ರೀಃ । ತಿಷ್ಠತಿ । ಯಸ್ಯ । ಏತಾಃ । ಕ್ರಿಯಂತೇ । ಜ್ಯೋತಿಷ್ಮತೀಮ್ । ಉತ್ತಮಾಮಿತ್ಯುತ್–ತಮಾಮ್ । ಅನ್ವಿತಿ । ಆಹ ।

| ಬ್ರಾಹ್ಮಣಭಾಗ | ವಿವರಣೆ |
|---|---|
| **ಅಸೌ ವೈ ಆದಿತ್ಯಃ ಜ್ಯೋತಿಃ ಉತ್ತಮಮ್ ಆದಿತ್ಯಸ್ಯ ಏವ ಸಾಯುಜ್ಯಮ್ ಗಚ್ಛತಿ** | ಈ ಸೂರ್ಯನೇ ಶ್ರೇಷ್ಠವಾದ ಜ್ಯೋತಿಯಾಗಿರುತ್ತಾನೆ. ಅಧ್ವರ್ಯುವಿನ ಈ ಮಂತ್ರಪಾಠದಿಂದ ಯಜಮಾನನು ಸೂರ್ಯನ ಸಹಭಾವವನ್ನೇ ಪಡೆಯುತ್ತಾನೆ. |

ಮಂತ್ರದ ಅಂತಿಮಭಾಗದ ಪ್ರಶಂಸೆ

| | |
|---|---|
| **ಯಸ್ಯ ಏತಾಃ ಕ್ರಿಯಂತೇ** | ಯಾವ ಯಜಮಾನನಿಗಾಗಿ ಈ **'ಸಮಾಸ್ತ್ವಾಗ್ನೇ'** ಮುಂತಾದ ಸಾಮಿಧೇನಿಗಳು ಹೇಳಲ್ಪಡುತ್ತವೆಯೋ ಅಂತಹ |
| **ಸಂವಥ್ಸರಃ ನ ತಿಷ್ಠತಿ** | (ಈ ಯಜಮಾನನಿಗೆ ಸ್ವರ್ಗವನ್ನು ಪಡೆಯುವುದಕ್ಕಾಗಿ) ಉಖ್ಯಧಾರಣಸಾಧನವಾದ ಸಂವತ್ಸರವು ಸಹಾಯಕ ವಾಗುವುದಿಲ್ಲ. |
| **ಅಸ್ಯ ಶ್ರೀಃ ನ ತಿಷ್ಠತಿ** | ಉಖ್ಯಾಗ್ನಿಸಾಧನಗಳ ಸಮೂಹರೂಪವಾದ ಸಂಪತ್ತೂ (ಸಾಧನಸಂಪತ್ತೂ) ಉಪಕಾರಕವಾಗುವುದಿಲ್ಲ. |
| **ಜ್ಯೋತಿಷ್ಮತೀಮ್ ಉತ್ತಮಾಮ್ ಅನ್ವಾಹ** | (ಹೀಗಾಗಿ) **'ಉದ್ವಯಂ..ಜ್ಯೋತಿರುತ್ತರಮ್'** ಎಂದು ಜ್ಯೋತಿಃಶಬ್ದಯುಕ್ತವಾದ ಋಕ್ಕನ್ನು ಕೊನೆಯದಾಗಿ ಆ ಯಜಮಾನನಿಗಾಗಿ ಹೇಳಬೇಕು. |

ಇಪ್ಪತ್ತನಾಲ್ಕು ಸಾಮಿಧೇನಿಗಳ ಸಂಖ್ಯಾಪೂರ್ತಿಯನ್ನು ಭಟ್ಟಭಾಸ್ಕರಭಾಷ್ಯದಲ್ಲಿ ಇನ್ನೊಂದು ಬಗೆಯಿಂದ ಹೇಳಿದ್ದಾರೆ. **'ಪ್ರ ವೋ ವಾಜಾಃ'** ಎಂದು ಆರಂಭವಾಗುವ ೧೧ ಸಾಮಿಧೇನಿಗಳು. **'ಸಮಾಸ್ತ್ವಾಗ್ನೇ'** ಎಂದು

ಜ್ಯೋತಿರೇವಾಸ್ಮಾ ಉಪರಿಷ್ಟಾದ್ದಧಾತಿ ಸುವರ್ಗಸ್ಯ

ಲೋಕಸ್ಯಾನುಖ್ಯಾತ್ಯೈ ॥ ೪೪–8 ॥

[ಯಾವಂತೋಽಸ್ಯ ಮುಖತಶ್ಚಿತ್ಯಸ್ಯ ವರ್ಧಯತ್ಯಾದಿತ್ಯೋಽಷ್ಟಾವಿಗ್ಂಶತಿಶ್ಚ ॥]

---

ಜ್ಯೋತಿಃ । ಏವ । ಅಸ್ಮೈ । ಉಪರಿಷ್ಟಾತ್ । ದಧಾತಿ । ಸುವರ್ಗಸ್ಯೇತಿ ಸುವಃ–ಗಸ್ಯ । ಲೋಕಸ್ಯ । ಅನುಖ್ಯಾತ್ಯಾ ಇತ್ಯನು–ಖ್ಯಾತ್ಯೈ ॥ ೪೪ ॥

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಅಸ್ಮೈ ಜ್ಯೋತಿಃ ಏವ ಉಪರಿಷ್ಟಾತ್ ದಧಾತಿ | (ಈ ಯಜಮಾನನಿಗಾಗಿ ಜ್ಯೋತಿಷ್ಮತೀ ಋಕ್ಕನ್ನು ಕಡೆಯಲ್ಲಿ ಹೇಳುವುದರಿಂದ) ಬೆಳಕನ್ನು ಮೇಲೆ ಹಿಡಿದಂತಾಗುತ್ತದೆ. |
| ಸುವರ್ಗಸ್ಯ ಲೋಕಸ್ಯ ಅನುಖ್ಯಾತ್ಯೈ | (ಇದರಿಂದ ಮೇಲುಗಡೆಯೇ ಇರುವ) ಸ್ವರ್ಗಲೋಕವನ್ನು ಪ್ರಸಿದ್ಧಿಪಡಿಸುವುದಕ್ಕಾಗಿ ಬೆಳಕನ್ನು ಮೇಲೆ ಹಿಡಿದಂತಾಗುತ್ತದೆ. |

---

ಆರಂಭವಾಗುವ ೧೦ ಸಾಮಿಧೇನಿಗಳು. **'ಪೃಥುಪಾಜಾ'** ಎಂದು ಆರಂಭಗೊಳ್ಳುವ ೨ ಸಾಮಿಧೇನಿಗಳು. ಹಾಗೂ **'ಯುಕ್ಷ್ವಾ ಹಿ'** ಎಂಬ ಒಂದು ಸಾಮಿಧೇನಿ. ಹೀಗೆ ೨೪ ಎಂದು ಹೇಳಿದ್ದಾರೆ.

**'ಸಮಾಸ್ತ್ವಾಗ್ನೇ'** ಎಂದು ಆರಂಭವಾಗಿರುವ ಸಾಮಿಧೇನಿಗಳಲ್ಲಿ **'ಉದ್ವಯಂ'** ಎಂದಿರುವ ಸಾಮಿಧೇನಿಯನ್ನು ಕಡೆಯದನ್ನಾಗಿ ಹೇಳಬೇಕು. ಆ ವಿಧಿಯ ಪ್ರಶಂಸೆಯು ಇದು.



## ॥ ನವಮೋಽನುವಾಕಃ ॥

ಷಡ್ಭಿರ್ದೀಕ್ಷಯತಿ ಷಡ್ವಾ ಋತವ ಋತುಭಿರೇವೈನಂ ದೀಕ್ಷಯತಿ
ಸಪ್ತಭಿರ್ದೀಕ್ಷಯತಿ

---

ಷಡ್ಭಿರಿತಿ ಷಟ್-ಭಿಃ । ದೀಕ್ಷಯತಿ । ಷಟ್ । ವೈ । ಋತವಃ । ಋತುಭಿರಿತ್ಯೃತು-ಭಿಃ । ಏವ । ಏನಮ್ । ದೀಕ್ಷಯತಿ । ಸಪ್ತಭಿರಿತಿ ಸಪ್ತ-ಭಿಃ । ದೀಕ್ಷಯತಿ ।

---

ಎಂಟನೆಯ ಅನುವಾಕದಲ್ಲಿ ಆಪ್ರೀಮಂತ್ರಗಳಿಗೆ ಸಂಬಂಧಿಸಿದ ಬ್ರಾಹ್ಮಣವು ಹೇಳಲ್ಪಟ್ಟಿತು. ಈ ಒಂಬತ್ತನೆಯ ಅನುವಾಕದಲ್ಲಿ ಅಗ್ನ್ಯುತ್ಪತ್ತಿಯು ಹೇಳಲ್ಪಡುತ್ತದೆ.

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ಚಯನಾಂಗವಾದ ದೀಕ್ಷಾಹುತಿವಿಧಿ** |
| **ಷಡ್ಭಿಃ ದೀಕ್ಷಯತಿ** | ಅಧ್ವರ್ಯುವು **'ಆಕೂತಿಮಗ್ನಿಮ್'** ಎಂದು ಆರಂಭಗೊಳ್ಳುವ ಆರು ಮಂತ್ರಗಳಿಂದ ಯಜಮಾನನನ್ನು ದೀಕ್ಷಾಸಂಸ್ಕಾರದಿಂದ ಸಂಸ್ಕೃತನನ್ನಾಗಿ ಮಾಡುತ್ತಾನೆ. |
| **ಷಟ್ ವೈ ಋತವಃ** | ಋತುಗಳು ಆರು. |
| **ಋತುಭಿಃ ಏವ ಏನಮ್ ದೀಕ್ಷಯತಿ** | ಈ ಆರು ಹೋಮಗಳಿಂದ (ಸಂಖ್ಯಾಸಾಮ್ಯವಿರುವುದರಿಂದ) ಋತುಗಳಿಂದಲೇ ಯಜಮಾನನಿಗೆ ಅಧ್ವರ್ಯುವು ದೀಕ್ಷೆಯನ್ನು ಮಾಡಿದವನಾಗುತ್ತಾನೆ. |
| | **ಸಪ್ತಸಂಖ್ಯೆಯ ಪ್ರಶಂಸೆ** |
| **ಸಪ್ತಭಿಃ ದೀಕ್ಷಯತಿ** | ಪೂರ್ಣಾಹುತಿಯುಕ್ತವಾಗಿ ಏಳು ಹೋಮಗಳನ್ನು ಮಾಡಬೇಕು. |

ಸಪ್ತ ಛಂದಾಗ್‍ಂಸಿ ಛಂದೋಭಿರೇವೈನಂ ದೀಕ್ಷಯತಿ ವಿಶ್ವೇ ದೇವಸ್ಯ ನೇತುರಿತ್ಯ ನುಷ್ಟುಭೋತ್ತಮಯಾ ಜುಹೋತಿ ವಾಗ್ವಾ ಅನುಷ್ಟುಪ್ತಸ್ಮಾತ್ಪ್ರಾಣಾನಾಂ ವಾಗುತ್ತ-

---

ಸಪ್ತ । ಛಂದಾಗ್‍ಂಸಿ । ಛಂದೋಭಿರಿತಿ ಛಂದಃ-ಭಿಃ । ಏವ । ಏನಮ್ । ದೀಕ್ಷಯತಿ । ವಿಶ್ವೇ । ದೇವಸ್ಯ । ನೇತುಃ । ಇತಿ । ಅನುಷ್ಟುಭೇತ್ಯನು-ಸ್ತುಭಾ । ಉತ್ತಮಯೇತ್ಯುತ್-ತಮಯಾ । ಜುಹೋತಿ । ವಾಕ್ । ವೈ । ಅನುಷ್ಟುಬಿತ್ಯನು-ಸ್ತುಪ್ । ತಸ್ಮಾತ್ । ಪ್ರಾಣಾನಾಮಿತಿ ಪ್ರ-ಅನಾನಾಮ್ । ವಾಕ್ । ಉತ್ತಮೇತ್ಯುತ್-ತಮಾ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಸಪ್ತ ಛಂದಾಗ್‍ಂಸಿ** | ಏಳು ಛಂದಸ್ಸುಗಳು. |
| **ಛಂದೋಭಿಃ ಏವ ಏನಮ್ ದೀಕ್ಷಯತಿ** | ಅಧ್ವರ್ಯುವು ಈ ಯಜಮಾನನಿಗೆ ಏಳು ಛಂದಸ್ಸುಗಳಿಂದಲೇ ದೀಕ್ಷೆಯನ್ನು ಮಾಡಿದವನಾಗುತ್ತಾನೆ. |

**ಅನುಷ್ಟುಪ್ ಛಂದಸ್ಸಿನಿಂದ ಹೋಮವಿಧಿ; ಪ್ರಶಂಸೆ**

| | |
|---|---|
| **ವಿಶ್ವೇ ದೇವಸ್ಯ ನೇತುಃ ಇತಿ** | **'ವಿಶ್ವೇ ದೇವಸ್ಯ ನೇತುಃ'** ಎಂಬ |
| **ಉತ್ತಮಯಾ ಅನುಷ್ಟುಭಾ ಜುಹೋತಿ** | ಶ್ರೇಷ್ಠವಾದ ಮತ್ತು ಕೊನೆಯದಾದ ಮಂತ್ರದಿಂದ ಹೋಮವನ್ನು ಮಾಡಬೇಕು. |
| **ವಾಕ್ ವೈ ಅನುಷ್ಟುಪ್** | ಅನುಷ್ಟುಪ್ ಛಂದಸ್ಸು ವಾಗ್ರೂಪವಾಗಿದೆ. (ವಾಕ್ಕು ಲೋಕದಲ್ಲಿ ಪೂಜ್ಯವಾದುದಾಗಿದೆ) |
| **ತಸ್ಮಾತ್ ಪ್ರಾಣಾನಾಮ್ ವಾಕ್ ಉತ್ತಮಾ** | ಆದುದರಿಂದ ವಾಗ್ರೂಪವಾದ ಛಂದಸ್ಸು ಮುಖದಲ್ಲಿರುವ ಏಳು ಪ್ರಾಣಸ್ಥಾನಗಳಲ್ಲಿ ಉತ್ತಮವಾಗಿ ಪ್ರಶಸ್ತವಾಗಿದೆ. (ಉತ್ತಮವಾದ ಮಾತುಗಾರನು ಸಭೆಯಲ್ಲಿ ಗೌರವಕ್ಕೆ ಅರ್ಹನಷ್ಟೆ) |

---

**ತಾತ್ಪರ್ಯ:-'ಗಾಯತ್ರೀ ತ್ರಿಷ್ಟುಬ್ಜಗತ್ಯನುಷ್ಟುಕ್ಪಙ್ಕ್ತ್ಯಾ ಸಹ । ಬೃಹತ್ಯುಷ್ಣಿಹಾ ಕಕುತ್ಸೂಚೀಭಿಃ ಶಿಮ್ಯಂತು ತ್ವಾ ॥'** ಎಂಬ [ತೈ. ಸಂ. 5. 2. 11]ಮಂತ್ರದಲ್ಲಿ ಹೇಳಲ್ಪಟ್ಟಿರುವ ಛಂದಸ್ಸುಗಳು ಎಂಟು. ೧) ಗಾಯತ್ರೀ ೨) ತ್ರಿಷ್ಟುಪ್ ೩) ಜಗತೀ ೪) ಅನುಷ್ಟುಕ್ ೫) ಪಂಕ್ತಿಃ ೬) ಬೃಹತೀ ೭) ಉಷ್ಣಿಹಾ ೮) ಕಕುತ್.

ಇವುಗಳಲ್ಲಿ ಕಡೆಯದಾದ ಉಷ್ಣಿಹೆ, ಕಕುತ್ ಛಂದಸ್ಸುಗಳನ್ನು ಒಂದೆಂದು ಭಾವಿಸಿ, ಏಳು ಛಂದಸ್ಸುಗಳನ್ನು ಪರಿಗಣಿಸಿ, ಸಪ್ತಸಂಖ್ಯೆಯ ಪ್ರಶಂಸೆ ಮಾಡಲಾಗಿದೆ.

–ಮ್ಯೈಕಸ್ಮಾದಕ್ಷರಾದನಾಪ್ತಂ ಪ್ರಥಮಂ ಪದನ್ತಸ್ಮಾದ್ಯದ್ವಾಚೋऽನಾಪ್ತಂ ತನ್ಮನುಷ್ಯಾ ಉಪಜೀವಂತಿ ಪೂರ್ಣಯಾ ಜುಹೋತಿ ಪೂರ್ಣ ಇವ ಹಿ ಪ್ರಜಾಪತಿಃ [(೪೫)] ಪ್ರಜಾಪತೇರಾಪ್ತ್ಯೈ ನ್ಯೂನಯಾ ಜುಹೋತಿ

---

ಏಕಸ್ಮಾತ್ । ಅಕ್ಷರಾತ್ । ಅನಾಪ್ತಮ್ । ಪ್ರಥಮಮ್ । ಪದಮ್ । ತಸ್ಮಾತ್ । ಯತ್ । ವಾಚಃ । ಅನಾಪ್ತಮ್ । ತತ್ । ಮನುಷ್ಯಾಃ । ಉಪೇತಿ । ಜೀವಂತಿ । ಪೂರ್ಣಯಾ । ಜುಹೋತಿ । ಪೂರ್ಣಃ । ಇವ । ಹಿ । ಪ್ರಜಾಪತಿರಿತಿ ಪ್ರಜಾ–ಪತಿಃ । (೪೫) । ಪ್ರಜಾಪತೇರಿತಿ ಪ್ರಜಾ–ಪತೇಃ । ಆಪ್ತ್ಯೈ । ನ್ಯೂನಯೇತಿ ನಿ–ಊನಯಾ । ಜುಹೋತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|

**ಅಶೇಷವಾದ ಜಗತ್ತಿನ ವ್ಯವಹಾರಸಾಧನವಾಗಿ ಮಂತ್ರಗಳ ಪ್ರಶಂಸೆ**

| | |
|---|---|
| **ಏಕಸ್ಮಾತ್ ಅಕ್ಷರಾತ್ ಅನಾಪ್ತಮ್ ಪ್ರಥಮಮ್ ಪದಮ್** | ('ವಿಶ್ವೇ ದೇವಸ್ಯ ನೇತುಃ' ಎಂಬ ಈ ಋಕ್ಕಿನಲ್ಲಿ ಮೊದಲನೆಯ ಪಾದದಲ್ಲಿ ಏಳು ಅಕ್ಷರಗಳಿವೆ. ಅನುಷ್ಟುಪ್ ಛಂದಸ್ಸಿನಂತೆ ಎಂಟು ಅಕ್ಷರಗಳು ಇರಬೇಕು) ಹೀಗಾಗಿ ಒಂದು ಅಕ್ಷರವು ಕಡಿಮೆಯಾಗಿದೆ. ಈ ಪಾದವು ಒಂದು ಅಕ್ಷರದಿಂದ ಅಸಂಪೂರ್ಣವಾಗಿದೆ. |
| **ತಸ್ಮಾತ್ ವಾಚಃ ಯತ್ ಅನಾಪ್ತಮ್** | ಆದುದರಿಂದ ವಾಕ್ತತ್ತ್ವದ ಅಸಂಪೂರ್ಣವಾದ ಯಾವ (ವೈಖರೀರೂಪವಿದೆಯೋ) |
| **ತತ್ ಮನುಷ್ಯಾಃ ಉಪ ಜೀವಂತಿ** | ಅದನ್ನು (ಅವಲಂಬಿಸಿ) ಮನುಷ್ಯರು ವ್ಯವಹರಿಸುತ್ತಾರೆ. |
| **ಪೂರ್ಣಯಾ ಜುಹೋತಿ** | ಪೂರ್ಣವಾದ ಋಕ್ಕಿನಿಂದ ಹೋಮವನ್ನು ಅಧ್ವರ್ಯುವು ಮಾಡುತ್ತಾನೆ. |
| **ಪ್ರಜಾಪತಿಃ ಪೂರ್ಣಃ ಇವ ಹಿ** | ಪ್ರಜಾಪತಿಯು ಸರ್ವಶಕ್ತಿಪರಿಪೂರ್ಣನಷ್ಟೆ. |
| **ಪ್ರಜಾಪತೇಃ ಆಪ್ತ್ಯೈ** | ಈ ಹೋಮವು ಪ್ರಜಾಪತಿಯ ಅನುಗ್ರಹಪ್ರಾಪ್ತಿಗೆ ಕಾರಣವಾಗುತ್ತದೆ. |
| **ನ್ಯೂನಯಾ ಜುಹೋತಿ** | ಪ್ರಥಮಪಾದದಲ್ಲಿ ಒಂದು ಅಕ್ಷರ ನ್ಯೂನವಾದ ಮಂತ್ರದಿಂದ ಹೋಮವನ್ನು ಮಾಡುತ್ತಾನೆ. |

ನ್ಯೂನಾದ್ಧಿ ಪ್ರಜಾಪತಿಃ ಪ್ರಜಾ ಅಸೃಜತ ಪ್ರಜಾನಾಗ್ಂ ಸೃಷ್ಟ್ಯೈ ಯದರ್ಚಿಷಿ ಪ್ರವೃಞ್ಜ್ಯಾದ್ಭೂತಮವರುಂಧೀತ ಯದಂಗಾರೇಷು ಭವಿಷ್ಯದಂಗಾರೇಷು ಪ್ರವೃಣಕ್ತಿ

---

ನ್ಯೂನಾದಿತಿ ನಿ-ಊನಾತ್ । ಹಿ । ಪ್ರಜಾಪತಿರಿತಿ ಪ್ರಜಾ-ಪತಿಃ । ಪ್ರಜಾ ಇತಿ ಪ್ರ-ಜಾಃ । ಅಸೃಜತ । ಪ್ರಜಾನಾಮಿತಿ ಪ್ರ-ಜಾನಾಮ್ । ಸೃಷ್ಟ್ಯೈ । ಯತ್ । ಅರ್ಚಿಷಿ । ಪ್ರವೃಞ್ಜ್ಯಾದಿತಿ ಪ್ರ-ವೃಞ್ಜ್ಯಾತ್ । ಭೂತಮ್ । ಅವೇತಿ । ರುಂಧೀತ । ಯತ್ । ಅಂಗಾರೇಷು । ಭವಿಷ್ಯತ್ । ಅಂಗಾರೇಷು । ಪ್ರೇತಿ । ವೃಣಕ್ತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ನ್ಯೂನಾತ್ ಹಿ ಪ್ರಜಾಪತಿಃ ಪ್ರಜಾಃ ಅಸೃಜತ** | ಶೂನ್ಯವಾದ ಜಗದ್ಬೀಜದಿಂದಲೇ ಪ್ರಜಾಪತಿಯು ಪ್ರಜೆಗಳನ್ನು ಸೃಷ್ಟಿಸಿದನಷ್ಟೆ. |
| **ಪ್ರಜಾನಾಮ್ ಸೃಷ್ಟ್ಯೈ** | ಇದು ಪ್ರಜಾಪತಿಯ ಅನುಗ್ರಹವನ್ನು ಹೊಂದಿ ಪ್ರಜೋತ್ಪತ್ತಿಗೆ ಕಾರಣವಾಗುತ್ತದೆ. |

**ಕೆಂಡಗಳಲ್ಲಿ ಉಖಾಪಾತ್ರದ ತಪನವಿಧಿ; ಅರ್ಥವಾದ**

| | |
|---|---|
| **ಯತ್ ಅರ್ಚಿಷಿ ಪ್ರವೃಞ್ಜ್ಯಾತ್ ಭೂತಮ್ ಅವರುಂಧೀತ** | ಅಗ್ನಿಜ್ವಾಲೆಯಲ್ಲಿ ಉಖೆಯನ್ನು ಕಾಯಿಸಿದರೆ ಹಿಂದೆ ಇರುವ ಧನವನ್ನು ಯಜಮಾನನು ರಕ್ಷಿಸುತ್ತಾನೆ. |
| **ಯತ್ ಅಂಗಾರೇಷು ಭವಿಷ್ಯತ್** ಅವರುಂಧೀತ | ಕೆಂಡಗಳಲ್ಲಿ ಕಾಯಿಸಿದರೆ ಮುಂದೆ ಹೊಂದುವ ಧನವನ್ನು ರಕ್ಷಿಸಿಕೊಳ್ಳುತ್ತಾನೆ. |
| **ಅಂಗಾರೇಷು ಪ್ರ ವೃಣಕ್ತಿ** | ಕೆಂಡಗಳಲ್ಲಿ ಉಖೆಯನ್ನು ಕಾಯಿಸಬೇಕು [ವಿಧಿ] |

---

ದೀಕ್ಷಾಹುತಿಯ ಏಳನೆಯ ಮಂತ್ರವಾದ **'ವಿಶ್ವೇ ದೇವಸ್ಯ ನೇತುಃ...ಪುಷ್ಯಸೇ ಸ್ವಾಹಾ'** ಎಂಬ ಮಂತ್ರದಲ್ಲಿ ಪ್ರಥಮಪಾದದಲ್ಲಿ ಏಳು ಅಕ್ಷರಗಳು ಇವೆ. ಆದರೆ ಮಂತ್ರದಲ್ಲಿ 32 ಅಕ್ಷರಗಳು ಇವೆ. [7+7+8+10] ಪ್ರಥಮ ಪಾದದಲ್ಲಿ ಒಂದು ಅಕ್ಷರವು ಛಂದೋನಿಯಮದಂತೆ ಕಡಿಮೆ ಇದೆ. ಆದುದರಿಂದ ಮನುಷ್ಯರು ಅಸಂಪೂರ್ಣವಾದ ವಾಕ್ಕಿನ ಸ್ವರೂಪವನ್ನು ಅವಲಂಬಿಸಿ ವ್ಯವಹರಿಸುತ್ತಾರೆ.

ಇದರ ವಿವರಣೆ ಹೀಗಿದೆ; ಪ್ರಾಣಿಗಳ ಮೂಲಾಧಾರದಿಂದ ಹುಟ್ಟುವ ವರ್ಣಗಳನ್ನು ಉತ್ಪಾದಿಸುವ ವಾಯುವು-ಮೂರ್ಧಸ್ಥಾನದವರೆಗೆ ಪ್ರಸರಿಸಿ, ಮುಖದಲ್ಲಿ ಕಂಠವೇ ಮುಂತಾದ ಸ್ಥಾನಗಳಲ್ಲಿ-ವರ್ಣಗಳನ್ನು ಉತ್ಪಾದಿಸುತ್ತದೆ.

ಭವಿಷ್ಯದೇವಾವರುಂಧೇ ಭವಿಷ್ಯದ್ಧಿ ಭೂಯೋ ಭೂತಾದ್ದ್ವಾಭ್ಯಾಂ ಪ್ರವೃಣಕ್ತಿ ದ್ವಿಪಾದ್ಯಜಮಾನಃ ಪ್ರತಿಷ್ಠಿತ್ಯೈ ಬ್ರಹ್ಮಣಾ ವಾ ಏಷಾ ಯಜುಷಾ ಸಂಭೃತಾ

---

ಭವಿಷ್ಯತ್ । ಏವ । ಅವೇತಿ । ರುಂಧೇ । ಭವಿಷ್ಯತ್ । ಹಿ । ಭೂಯಃ । ಭೂತಾತ್ । ದ್ವಾಭ್ಯಾಮ್ । ಪ್ರೇತಿ । ವೃಣಕ್ತಿ । ದ್ವಿಪಾದಿತಿ ದ್ವಿ–ಪಾತ್ । ಯಜಮಾನಃ । ಪ್ರತಿಷ್ಠಿತ್ಯಾ ಇತಿ ಪ್ರತಿ–ಸ್ಥಿತ್ಯೈ । ಬ್ರಹ್ಮಣಾ । ವೈ । ಏಷಾ । ಯಜುಷಾ । ಸಂಭೃತೇತಿ ಸಮ್–ಭೃತಾ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಭವಿಷ್ಯತ್ ಏವ ಅವ ರುಂಧೇ** | (ಇದರಿಂದ) ಮುಂದೆ ಹೊಂದುವ ಧನವನ್ನು ರಕ್ಷಿಸಿಕೊಳ್ಳುವನು. |
| **ಭೂತಾತ್ ಭವಿಷ್ಯತ್ ಭೂಯಃ ಹಿ** | ಲೋಕದಲ್ಲಿ ಇರುವ ಧನಕ್ಕಿಂತಲೂ ಮುಂದೆ ಸಂಪಾದಿಸುವ ಧನವೇ ಹೆಚ್ಚಿನದಷ್ಟೆ. |
| **ದ್ವಾಭ್ಯಾಮ್ ಪ್ರ ವೃಣಕ್ತಿ** | **'ಮಾ ಸುಭಿತ್ಥಾಃ' 'ದೃಗ್ಂಹಸ್ವ'** ಎಂಬ ಎರಡು ಮಂತ್ರಗಳಿಂದ ಉಖೆಯನ್ನು ಕೆಂಡದಲ್ಲಿ ಕಾಯಿಸಬೇಕು. |
| **ದ್ವಿಪಾತ್ ಯಜಮಾನಃ ಪ್ರತಿಷ್ಠಿತ್ಯೈ** | ಇದರಿಂದ ಎರಡು ಪಾದಗಳುಳ್ಳ ಯಜಮಾನನು ಪ್ರತಿಷ್ಠಿತನಾದಂತಹವನಾಗುವನು. |

**ಉಖೆಯನ್ನು ಮಿತ್ರದೇವನಿಗೆ ಕೊಡುವ ವಿಧಿ**

| | |
|---|---|
| **ಯತ್ ಉಖಾ** | ಉಖೆಯು ಯಾವುದಿದೆಯೋ |
| **ಏಷಾ ಬ್ರಹ್ಮಣಾ ವೈ ಯಜುಷಾ ಸಂಭೃತಾ** | ಇದು **'ವಸವಸ್ತ್ವಾ ಕೃಣ್ವಂತು'** ಎಂಬ ಯಜುರ್ಮಂತ್ರದಿಂದ ಸಂಪಾದಿಸಲ್ಪಟ್ಟಿದೆ. |

---

ಇಂತಹ ವರ್ಣಗಳು ವ್ಯವಹಾರಸಾಧನಗಳು. ಈ ವರ್ಣಗಳ ಅಭಿವ್ಯಕ್ತಿಯೆಂಬ ಸ್ವರೂಪವು ವಾಕ್ತತ್ತ್ವದ ನಾಲ್ಕನೆಯ ಪಾದವಾಗಿದೆ. ವಾಕ್ಕಿಗೆ ಪರಾ, ಪಶ್ಯಂತೀ, ಮಧ್ಯಮಾ ಎಂಬ ಇನ್ನೂ ಮೂರು ಸ್ವರೂಪಗಳಿದ್ದು, ಅವು ಸೂಕ್ಷ್ಮ, ಸೂಕ್ಷ್ಮತರ, ಸೂಕ್ಷ್ಮತಮಗಳಾಗಿವೆ. ಅವು ಕಂಠಕ್ಕಿಂತಲೂ ಕೆಳಗೆ ಇದ್ದು ಅಭಿವ್ಯಂಜನಗೊಳ್ಳುವುದಿಲ್ಲ. ವರ್ಣಗಳ ಅಭಿವ್ಯಕ್ತಿಸ್ವರೂಪದ ವಾಕ್ **'ವೈಖರೀ'** ಎನ್ನಿಸುತ್ತದೆ. ಜನರು ಈ ವೈಖರೀರೂಪವಾದ ಒಂದು ರೂಪವನ್ನು ಉಪಯೋಗಿಸಿಕೊಂಡು ವ್ಯವಹರಿಸುತ್ತಾರೆ. ಇದನ್ನೇ **'ತುರೀಯಂ ವಾಚಃ ಮನುಷ್ಯಾಃ ವದಂತಿ'** ಎಂದು ಶ್ರುತಿಯು ಹೇಳುತ್ತದೆ. ಈ ರೀತಿಯ ಅಸಂಪೂರ್ಣತೆಯ ಹೋಲಿಕೆಯು ಪ್ರಥಮಪಾದಕ್ಕಿದೆ.

ಯದು॒ಖಾ ಸಾ ಯದ್ಭಿ॒ದ್ಯೇತಾರ್ತಿ॒ಮಾರ್ಛೇ॒ದ್ಯ[ಮಾರ್ಛೇತ್(೪೬)ಯಜಮಾನಃ]

–ಜಮಾನೋ ಹ॒ನ್ಯೇತಾ॒ಸ್ಯ ಯ॒ಜ್ಞೋ ಮಿತ್ರೈ॒ತಾಮು॒ಖಾಂ ತ॒ಪೇತ್ಯಾ॒ಹ ಬ್ರಹ್ಮ॒

ವೈ ಮಿ॒ತ್ರೋ

---

ಯತ್ । ಉ॒ಖಾ । ಸಾ । ಯತ್ । ಭಿದ್ಯೇತ । ಆರ್ತಿಮ್ । ಏತಿ । ಋ॒ಚ್ಛೇ॒ತ್ । (೪೬) । ಯಜಮಾನಃ । ಹ॒ನ್ಯೇತ ।

ಅ॒ಸ್ಯ॒ । ಯ॒ಜ್ಞಃ । ಮಿತ್ರ । ಏ॒ತಾಮ್ । ಉ॒ಖಾಮ್ । ತ॒ಪ॒ । ಇತಿ । ಆ॒ಹ॒ । ಬ್ರಹ್ಮ । ವೈ । ಮಿ॒ತ್ರಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಸಾ ಯತ್ ಭಿದ್ಯೇತ** | ಅದು ಒಂದು ವೇಳೆ ಪ್ರಮಾದದಿಂದ ಒಡೆದುಬಿಟ್ಟರೆ |
| **ಯಜಮಾನಃ ಆರ್ತಿಮ್ ಆರ್ಛೇತ್** | ಯಜಮಾನನು ಮೃತನಾಗುತ್ತಾನೆ. |
| **ಅಸ್ಯ ಯಜ್ಞಃ ಹನ್ಯೇತ** | ಈ ಯಜಮಾನನ ಯಜ್ಞವು ಹಾಳಾಗುತ್ತದೆ. (ಅದಕ್ಕಾಗಿ ಎಚ್ಚರವಾಗಿರಬೇಕು) |
| **ಮಿತ್ರ ಏತಾಮ್ ಉಖಾಮ್ ತಪ ಇತಿ ಆಹ** | ಹೇ! ಮಿತ್ರದೇವನೇ! ಈ ಉಖೆಯನ್ನು ಒಡೆಯದಂತೆ ಚೆನ್ನಾಗಿ ಕಾಯಿಸು/ಒಡೆಯದೆ ಇರುವುದಕ್ಕಾಗಿ/(ರಕ್ಷಣೆಗಾಗಿ ನಿನಗೆ ಕೊಡುತ್ತೇನೆ.) ಎಂದು ಈ ಮಂತ್ರವು ಹೇಳುತ್ತದೆ. |
| **ಬ್ರಹ್ಮ ವೈ ಮಿತ್ರಃ** | ಮಿತ್ರದೇವನು ಬ್ರಹ್ಮಸ್ವರೂಪನೇ ಆಗಿರುತ್ತಾನೆ. |

---

ಅಸಂಪೂರ್ಣವಾದ ವಾಕ್ಕಿನಿಂದ ವ್ಯವಹಾರದಂತೆ ಪಾದದಲ್ಲಿ ಅಸಂಪೂರ್ಣವಾದ ಛಂದೋಲಕ್ಷಣವಿರುವ ಮಂತ್ರದಿಂದ ದೀಕ್ಷಾಹುತಿಯನ್ನು ಅನುಷ್ಠಿಸುವುದರಿಂದ ವಾಕ್ಕಿನ ಸಾಮ್ಯವಿದೆ. ಆದರೆ ಉಳಿದ ಪಾದಗಳನ್ನು ಪರಿಗಣಿಸಿದಾಗ [7+7+8+10] ಅನುಷ್ಟುಪ್ ಛಂದಸ್ಸಿಗೆ ಬೇಕಾಗಿರುವ 32 ಅಕ್ಷರಗಳು ಇರುವುದರಿಂದ **'ನ್ಯೂನಯಾ ಜುಹೋತಿ'** ಎಂದೂ **'ಪೂರ್ಣಯಾ ಜುಹೋತಿ'** ಎಂದೂ ಶ್ರುತಿಯು ಹೇಳುತ್ತಿದೆ.

ಅನುಷ್ಟುಪ್ ಛಂದಸ್ಸಿನ ಲಕ್ಷಣವು ಹೀಗಿದೆ;

**ಪಂಚಮಂ ಲಘು ಸರ್ವತ್ರ ಸಪ್ತಮಂ ದ್ವಿಚತುರ್ಥಯೋಃ ।**

**ಷಷ್ಠಂ ಗುರು ಚ ಸರ್ವೇಷಾಮೇತಚ್ಛ್ಲೋಕಸ್ಯ ಲಕ್ಷಣಮ್ ॥**

ಎಲ್ಲ ನಾಲ್ಕು ಪಾದಗಳಲ್ಲಿಯೂ ಐದನೆಯ ಅಕ್ಷರವು ಲಘುವಾಗಿದ್ದು, ಎರಡು ಮತ್ತು ನಾಲ್ಕನೆಯ ಪಾದಗಳಲ್ಲಿ ಏಳನೆಯ ಅಕ್ಷರವು ಲಘುವಾಗಿದ್ದು, ಎಲ್ಲ ಪಾದಗಳಲ್ಲಿಯೂ ಆರನೆಯ ಅಕ್ಷರವು ಗುರುವಾಗಿರುತ್ತದೆ. ಇದು ಅನುಷ್ಟುಪ್ ಛಂದಸ್ಸಿನ ಶ್ಲೋಕದ ಲಕ್ಷಣವಾಗಿದೆ.

ಬ್ರಹ್ಮನ್ನೇವೈನಾಂ ಪ್ರತಿಷ್ಠಾಪಯತಿ ನಾರ್ತಿಮಾರ್ಛತಿ ಯಜಮಾನೋ ನಾಸ್ಯ

ಯಜ್ಞೋ ಹನ್ಯತೇ ಯದಿ ಭಿದ್ಯೇತ ತೈರೇವ ಕಪಾಲೈಸ್ಸಗ್ಂ ಸೃಜೇಥ್ಸೈವ

ತತಃ ಪ್ರಾಯಶ್ಚಿತ್ತಿಃ

---

ಬ್ರಹ್ಮನ್ನ್ । ಏವ । ಏನಾಮ್ । ಪ್ರತೀತಿ । ಸ್ಥಾಪಯತಿ । ನ । ಆರ್ತಿಮ್ । ಏತಿ । ಋಚ್ಛತಿ । ಯಜಮಾನಃ । ನ । ಅಸ್ಯ । ಯಜ್ಞಃ । ಹನ್ಯತೇ । ಯದಿ । ಭಿದ್ಯೇತ । ತೈಃ । ಏವ । ಕಪಾಲೈಃ । ಸಮಿತಿ । ಸೃಜೇತ್ । ಸಾ । ಏವ । ತತಃ । ಪ್ರಾಯಶ್ಚಿತ್ತಿಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಏನಾಮ್ ಬ್ರಹ್ಮನ್ ಏವ ಪ್ರತಿಷ್ಠಾಪಯತಿ** | (ಈ ಮಂತ್ರದಿಂದ ಅಧ್ವರ್ಯುವು) ಬ್ರಹ್ಮನಲ್ಲಿಯೇ ರಕ್ಷಣೆಗಾಗಿ ಉಖೆಯನ್ನು ಚೆನ್ನಾಗಿ ಸ್ಥಾಪಿಸುತ್ತಾನೆ. |
| **ಯಜಮಾನಃ ಆರ್ತಿಮ್ ನ ಆರ್ಛತಿ** | ಇದರಿಂದ ಯಜಮಾನನೂ ಮೃತನಾಗುವುದಿಲ್ಲ. |
| **ಅಸ್ಯ ಯಜ್ಞಃ ನ ಹನ್ಯತೇ** | ಈ ಯಜಮಾನನ ಯಜ್ಞವೂ ಕೆಡುವುದಿಲ್ಲ. |

**ಒಡೆದರೆ ಮಾಡಬೇಕಾದ ಪ್ರಾಯಶ್ಚಿತ್ತ**

| | |
|---|---|
| **ಯದಿ ಭಿದ್ಯೇತ** | ಒಂದು ವೇಳೆ ಉಖೆಯು ಒಡೆದರೆ |
| **ತೈಃ ಕಪಾಲೈಃ ಏವ ಸಂ ಸೃಜೇತ್** | (ಬೇರೆಯ ಮಣ್ಣನ್ನು ತಂದು) ಈ ಉಖೆಯ ಕಪಾಲಗಳನ್ನೂ ಸೇರಿಸಿ ಹೊಸದಾದ ಉಖೆಯನ್ನು ಮಾಡಬೇಕು. |
| **ತತಃ ಸಾ ಏವ ಪ್ರಾಯಶ್ಚಿತ್ತಿಃ** | ಅದೇ ಉಖೆಯು ಒಡೆದುದರ ಪ್ರಾಯಶ್ಚಿತ್ತವಾಗಿದೆ. |

---

ಹೀಗಿರುವಲ್ಲಿ 'ವಿಶ್ವೇ ದೇವಸ್ಯ ನೇತುಃ' ಎಂಬ ಪಾದದಲ್ಲಿ ಒಂದು ಅಕ್ಷರವು ಕಡಿಮೆ ಇರುವುದನ್ನು ಲಕ್ಷಿಸಿ, ಎರಡನೆಯ ಪಾದದಲ್ಲಿಯೂ ಏಳು ಅಕ್ಷರಗಳು ಇದ್ದರೂ ಅಲ್ಲಿ ಅಕ್ಷರಪೂರಣ ಮಾಡಬಹುದೆಂದೂ, ಪ್ರಥಮ ಪಾದದಲ್ಲಿ ಅಕ್ಷರಪೂರಣ ಮಾಡಿದರೆ ಲಕ್ಷಣದೋಷವುಂಟಾಗುವುದರಿಂದ ಶ್ರುತಿಯು **'ಪ್ರಥಮಮ್ ಪದಮ್'** ಎಂದು ಹೇಳಿದೆ ಎಂದು ಶ್ರೀ ಭಟ್ಟಭಾಸ್ಕರರು ವಿವರಿಸಿರುತ್ತಾರೆ.

ಉಖೆಯ ಸುತ್ತಲೂ ಕೆಂಡಗಳನ್ನು ಹಾಕಿ ಕಾಯಿಸಬೇಕು. ಎರಡು ಮಂತ್ರಗಳನ್ನು ಹೇಳಿ ರಕ್ಷಣಾರ್ಥವಾಗಿ ಮಿತ್ರದೇವನಿಗೆ ಕೊಡಬೇಕು.

ಪರಬ್ರಹ್ಮನ ನಿಃಶ್ವಾಸರೂಪವಾದುದರಿಂದ ಯಜುಸ್ಸು ಬ್ರಹ್ಮವೇ. ಅಂತಹ ಯಜುಸ್ಸಿನಿಂದ ಉತ್ಪನ್ನವಾದ ಉಖೆಯು ಭಿನ್ನವಾಗುವುದು ಯುಕ್ತವಾದುದಲ್ಲ. ಕುಂಬಾರನು ಮಾಡುವ ಗಡಿಗೆಗಿಂತಲೂ ಇದು ಭಿನ್ನವಾದುದಷ್ಟೆ.

ಹೀಗಾಗಿ ಅದು ಭಿನ್ನವಾಗದಂತೆ ಮಿತ್ರದೇವನಿಗೆ ಅರ್ಪಿಸಬೇಕು.

ಯೋ೯ ಗತಶ್ರೀಸ್ಸ್ಯಾನ್ಮಥಿತ್ವಾ ತಸ್ಯಾವದಧ್ಯಾದ್ಭೂತೋ ವಾ ಏಷ ಸ ಸ್ವಾ[ಸ್ವಾಮ್(೪೭)ದೇವತಾ] ನ್ದೇವತಾಮುಪೈತಿ ಯೋ ಭೂತಿಕಾಮಸ್ಸ್ಯಾದ್ಯ ಉಖಾಯೈ ಸಂ ಭವೇಥ್ಸ ಏವ ತಸ್ಯ ಸ್ಯಾದತೋ ಹ್ಯೇಷ ಸಂಭವ-

---

ಯಃ। ಗತಶ್ರೀರಿತಿ ಗತ-ಶ್ರೀಃ। ಸ್ಯಾತ್। ಮಥಿತ್ವಾ। ತಸ್ಯ। ಅವೇತಿ। ದಧ್ಯಾತ್। ಭೂತಃ। ವೈ। ಏಷಃ। ಸಃ। ಸ್ವಾಮ್। (೪೭)। ದೇವತಾಮ್। ಉಪೇತಿ। ಏತಿ। ಯಃ। ಭೂತಿಕಾಮ ಇತಿ ಭೂತಿ-ಕಾಮಃ। ಸ್ಯಾತ್। ಯಃ। ಉಖಾಯೈ। ಸಂಭವೇದಿತಿ ಸಮ್-ಭವೇತ್। ಸಃ। ಏವ। ತಸ್ಯ। ಸ್ಯಾತ್। ಅತಃ। ಹಿ। ಏಷಃ। ಸಂಭವತೀತಿ ಸಮ್-ಭವತಿ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ಉಖಾಗ್ನಿಯ ವಿಷಯದಲ್ಲಿ ವಿನಿಯೋಗವೈವಿಧ್ಯಗಳು** |
| ಯಃ ಗತಶ್ರೀಃ ಸ್ಯಾತ್ | ಯಾವನು 'ಗತಶ್ರೀ' ಎನಿಸಿರುವನೋ |
| ತಸ್ಯ ಮಥಿತ್ವಾ ಅವದಧ್ಯಾತ್ | ಅವನಿಗಾಗಿ ಮಥನದಿಂದ ಅಗ್ನಿಯನ್ನು ಮಾಡಿ ಅದನ್ನು ಉಖೆಯಲ್ಲಿ ಸ್ಥಾಪಿಸಬೇಕು. |
| ಏಷಃ ವೈ ಭೂತಃ | ಈ ಯಜಮಾನನು ಶ್ರೀಮಂತನೇ ಆಗಿದ್ದಾನೆ. |
| ಸಃ ಸ್ವಾಮ್ ದೇವತಾಮ್ ಉಪೈತಿ | (ಇದರಿಂದ)ಚಯನ ಮಾಡುವ ಯಜಮಾನನು ತನ್ನ ದೇವತೆಯಾದ ಅಗ್ನಿಯನ್ನೇ ಹೊಂದುತ್ತಾನೆ. |
| | **ಉಖಾಗ್ನಿಯ ವಿಷಯದಲ್ಲಿ ಕಾಮನಾಭೇದಗಳು.** |
| ಯಃ ಭೂತಿಕಾಮಃ ಸ್ಯಾತ್ | ಚಯನಕರ್ತನಾದ ಯಾವ 'ಗತಶ್ರೀ' ಎನಿಸಿದ ಯಜಮಾನನು ಐಶ್ವರ್ಯವನ್ನು ಬಯಸುತ್ತಾನೆಯೋ (ಅವನಿಗಾಗಿ ಹೀಗೆ ಅನುಷ್ಠಿಸಬೇಕು) |
| ಯಃ ಉಖಾಯೈ ಸಂಭವೇತ್ | ಉಖೆಯನ್ನು ಅಗ್ನಿಯಲ್ಲಿ ಕಾಯಿಸುವುದರಿಂದ ಯಾವ ಅಗ್ನಿಯು ಉತ್ಪನ್ನವಾಗುವುದೋ |
| ತಸ್ಯ ಸಃ ಏವ ಸ್ಯಾತ್ | ಆ ಅಗ್ನಿಯೇ ಆ ಯಜಮಾನನಿಗೆ ಉಖ್ಯಾಗ್ನಿಯಾಗುತ್ತಾನೆ. |
| ಏಷಃ ಅತಃ ಹಿ ಸಂಭವತಿ | ಈ ಉಖೆಯಿಂದಲೇ ಈ ಅಗ್ನಿಯು ಹುಟ್ಟಿರುವನಷ್ಟೆ. |

–ತ್ಯೇಷ ವೈ ಸ್ವಯಂಭೂರ್ನಾಮ ಭವತ್ಯೇವ ಯಂ ಕಾಮಯೇತ

ಭ್ರಾತೃವ್ಯಮಸ್ಮೈ ಜನಯೇಯಮಿತ್ಯನ್ಯತಸ್ತಸ್ಯಾಹೃತ್ಯಾವ ದಧ್ಯಾತ್ಸಾಕ್ಷಾ

ದೇವಾಸ್ಮೈ ಭ್ರಾತೃವ್ಯಂ ಜನಯತ್ಯಂಬರೀಷಾದನ್ನಕಾಮಸ್ಯಾವ ದಧ್ಯಾ–

---

ಏಷಃ । ವೈ । ಸ್ವಯಂಭೂರಿತಿ ಸ್ವಯಮ್–ಭೂಃ । ನಾಮ । ಭವತಿ । ಏವ । ಯಮ್ । ಕಾಮಯೇತ । ಭ್ರಾತೃವ್ಯಮ್ । ಅಸ್ಮೈ । ಜನಯೇಯಮ್ । ಇತಿ । ಅನ್ಯತಃ । ತಸ್ಯ । ಆಹೃತ್ಯೇತ್ಯಾ–ಹೃತ್ಯ । ಅವೇತಿ । ದಧ್ಯಾತ್ । ಸಾಕ್ಷಾದಿತಿ ಸ–ಅಕ್ಷಾತ್ । ಏವ । ಅಸ್ಮೈ । ಭ್ರಾತೃವ್ಯಮ್ । ಜನಯತಿ । ಅಂಬರೀಷಾತ್ । ಅನ್ನಕಾಮಸ್ಯೇತ್ಯನ್ನ–ಕಾಮಸ್ಯ । ಅವೇತಿ । ದಧ್ಯಾತ್ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಏಷಃ ವೈ ಸ್ವಯಂಭೂಃ ನಾಮ | ಈ ಅಗ್ನಿಯು ತಾನೇ ಹುಟ್ಟಿರುವುದರಿಂದ 'ಸ್ವಯಂಭೂ' ಎನಿಸಿಕೊಳ್ಳುತ್ತಾನೆ. |
| ಭವತಿ ಏವ | ಈ ಚಯನಕರ್ತನಾದ ಯಜಮಾನನು ಐಶ್ವರ್ಯವಂತನೇ ಆಗುತ್ತಾನೆ. |

ಅಧ್ವರ್ಯುವಿನ ಕಾಮನೆಯನ್ನು ಅನುಸರಿಸಿ ಮಾಡುವ ಕಾಮ್ಯಪ್ರಯೋಗ

| | |
|---|---|
| ಯಮ್ | ಯಾವ ಯಜಮಾನನನ್ನು ಉದ್ದೇಶಿಸಿ |
| ಭ್ರಾತೃವ್ಯಮ್ ಅಸ್ಮೈ ಜನಯೇಯಮ್ ಇತಿ ಕಾಮಯೇತ | ಇವನಿಗೆ ಶತ್ರುವು ಹುಟ್ಟಲಿ ಎಂದು ಅಧ್ವರ್ಯುವು ಅಪೇಕ್ಷಿಸುತ್ತಾನೆಯೋ |
| ತಸ್ಯ ಅನ್ಯತಃ ಆಹೃತ್ಯ ಅವದಧ್ಯಾತ್ | ಅವನ ಚಯನದಲ್ಲಿ ಬೇರೆಯೆಡೆಯಿಂದ ಅಗ್ನಿಯನ್ನು ತಂದು ಉಖೆಯಲ್ಲಿ ಹಾಕಬೇಕು. |
| ಸಾಕ್ಷಾತ್ ಏವ ಅಸ್ಮೈ ಭ್ರಾತೃವ್ಯಮ್ ಜನಯತಿ | (ಇದರಿಂದ)ಬೇಗನೇ ಈ ಯಜಮಾನನಿಗೆ ಶತ್ರುವು ಹುಟ್ಟುವಂತೆ ಮಾಡುತ್ತಾನೆ. |

ಅನ್ನಕಾಮನಿಗೆ ಸಂಬಂಧಿಸಿದ ಕಾಮ್ಯಪ್ರಯೋಗವಿಧಿ; ಪ್ರಶಂಸೆ

| | |
|---|---|
| ಅನ್ನಕಾಮಸ್ಯ ಅಂಬರೀಷಾತ್ ಅವದಧ್ಯಾತ್ | ಅನ್ನವನ್ನು ಬಯಸುವ ಯಜಮಾನನಿಗಾಗಿ ಅಧ್ವರ್ಯುವು ಅಂಬರೀಷ(ಹುರಿಯುವ ಓಡು, ಬಾಣಲಿಗಳಿಂದ)ಗಳಿಂದ ಅಗ್ನಿಯನ್ನುಂಟುಮಾಡಿ ಉಖೆಯಲ್ಲಿ ಹಾಕಬೇಕು. |

–ದಂಬರೀಷೇ ವಾ ಅನ್ನಂ ಭ್ರಿಯತೇ ಸಯೋನ್ಯೈವಾನ್ನ[ಅನ್ನಮ್(೪೮)ಅವರುಂಧೇ]
ಮವರುಂಧೇ ಮುಂಜಾನವದಧಾತ್ಯೂರ್ಗ್ವೈ ಮುಂಜಾ ಊರ್ಜಮೇವಾಸ್ಮಾ
ಅಪಿದಧಾತ್ಯಗ್ನಿರ್ದೇವೇಭ್ಯೋ ನಿಲಾಯತ ಸ ಕ್ರುಮುಕಂ ಪ್ರಾವಿಶ–

---

ಅಂಬರೀಷೇ । ವೈ । ಅನ್ನಮ್ । ಭ್ರಿಯತೇ । ಸಯೋನೀತಿ ಸ–ಯೋನಿ । ಏವ । ಅನ್ನಮ್ । (೪೮) । ಅವೇತಿ । ರುಂಧೇ ।
ಮುಂಜಾನ್ । ಅವೇತಿ । ದಧಾತಿ । ಊರ್ಕ್ । ವೈ । ಮುಂಜಾಃ । ಊರ್ಜಮ್ । ಏವ । ಅಸ್ಮೈ । ಅಪೀತಿ । ದಧಾತಿ ।
ಅಗ್ನಿಃ । ದೇವೇಭ್ಯಃ । ನಿಲಾಯತ । ಸಃ । ಕ್ರುಮುಕಮ್ । ಪ್ರೇತಿ । ಅವಿಶತ್ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಅಂಬರೀಷೇ ವೈ ಅನ್ನಮ್ ಭ್ರಿಯತೇ** | ಲೋಕದಲ್ಲಿ ಬಾಣಲಿ ಮುಂತಾದ ಪಾತ್ರಗಳಲ್ಲಿ ತಾನೇ ಅನ್ನವನ್ನು ಧರಿಸುತ್ತಾರೆ.! |
| **ಅನ್ನಮ್ ಸಯೋನಿ ಏವ ಅವರುಂಧೇ** | (ಇದರಿಂದ)ಸಮಾನಸ್ಥಾನದಲ್ಲಿ ಹುಟ್ಟುವ ಅನ್ನವನ್ನು ಯಜಮಾನನು ಹೊಂದುತ್ತಾನೆ. |

**ಉಖಾಗ್ನಿಯಲ್ಲಿ ನೊಜೆಯನ್ನು ಹಾಕುವ ವಿಧಿ**

| | |
|---|---|
| **ಮುಂಜಾನ್ ಅವದಧಾತಿ** | ಉಖಾಗ್ನಿಯಲ್ಲಿ ನೊಜೆಗಳನ್ನು ಹಾಕಬೇಕು. |
| **ಊರ್ಕ್ ವೈ ಮುಂಜಾಃ** | ಎಮ್ಮೆ ಮುಂತಾದ ಪ್ರಾಣಿಗಳಿಗೆ ನೊಜೆಹುಲ್ಲುಗಳು ಅನ್ನರೂಪವಾಗಿವೆ. |
| **ಅಸ್ಮೈ ಊರ್ಜಮ್ ಏವ ಅಪಿದಧಾತಿ** | ಈ ನೊಜೆಗಳನ್ನು ಉಖೆಯಲ್ಲಿ ಹಾಕುವುದರಿಂದ ಅಧ್ವರ್ಯುವು ಈ ಯಜಮಾನನಿಗೆ ಅನ್ನವನ್ನು ಸಂಪಾದಿಸಿಕೊಡುತ್ತಾನೆ. |

**ಅಗ್ನಿಯಲ್ಲಿ ಸೌದೆಯ ಚೂರುಗಳನ್ನು ಹಾಕುವ ವಿಧಿ**

| | |
|---|---|
| **ಅಗ್ನಿಃ ದೇವೇಭ್ಯಃ ನಿಲಾಯತ** | ಒಂದು ಸಮಯದಲ್ಲಿ ಅಗ್ನಿಯು ದೇವತೆಗಳಿಂದ ದೂರ ಹೊರಟುಹೋದನು. |
| **ಸಃ ಕ್ರುಮುಕಮ್ ಪ್ರಾವಿಶತ್** | ಅವನು ಮರದ ಚೂರು/ಹೊಟ್ಟುಗಳನ್ನು ಪ್ರವೇಶಿಸಿದನು. |

–ತ್ಕ್ರುಮುಕಮವದಧಾತಿ ಯದೇವಾಸ್ಯ ತತ್ರ ನ್ಯಕ್ತಂ ತದೇವಾವರುಂಧ ಆಜ್ಯೇನ

ಸಂಯೌತ್ಯೇತದ್ವಾ ಅಗ್ನೇಃ ಪ್ರಿಯಂ ಧಾಮ ಯದಾಜ್ಯಂ ಪ್ರಿಯೇಣೈವೈನಂ

ಧಾಮ್ನಾ ಸಮರ್ಧಯತ್ಯಥೋ ತೇಜಸಾ [ತೇಜಸಾ(೪೯)]

---

ಕ್ರುಮುಕಮ್ । ಅವೇತಿ । ದಧಾತಿ । ಯತ್ । ಏವ । ಅಸ್ಯ । ತತ್ರ । ನ್ಯಕ್ತಮಿತಿ ನಿ–ಅಕ್ತಮ್ । ತತ್ । ಏವ । ಅವೇತಿ । ರುಂಧೇ । ಆಜ್ಯೇನ । ಸಮಿತಿ । ಯೌತಿ । ಏತತ್ । ವೈ । ಅಗ್ನೇಃ । ಪ್ರಿಯಮ್ । ಧಾಮ । ಯತ್ । ಆಜ್ಯಮ್ । ಪ್ರಿಯೇಣ । ಏವ । ಏನಮ್ । ಧಾಮ್ನಾ । ಸಮಿತಿ । ಅರ್ಧಯತಿ । ಅಥೋ ಇತಿ । ತೇಜಸಾ । (೪೯) ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಕ್ರುಮುಕಮ್ ಅವ ದಧಾತಿ | ಉಖೆಯಲ್ಲಿ ಮರದ ಸಣ್ಣ ತುಂಡುಗಳನ್ನು ಹಾಕಬೇಕು. |
| ತತ್ರ ಯತ್ ಏವ ಅಸ್ಯ ನ್ಯಕ್ತಮ್ ತತ್ ಅವರುಂಧೇ ಏವ | ಇದರಿಂದ ಅದರಲ್ಲಿ ಅಡಗಿರುವ ಅಗ್ನಿಯನ್ನು ಯಜಮಾನನು ಹೊಂದುತ್ತಾನೆ. |

**ಕಾಷ್ಠಚೂರ್ಣಗಳನ್ನು ತುಪ್ಪದಿಂದ ಕಲೆಸುವ ವಿಧಿ**

| | |
|---|---|
| ಆಜ್ಯೇನ ಸಂಯೌತಿ | ಮುಂಜಗಳನ್ನೂ, ಕ್ರುಮುಕಗಳನ್ನೂ ಆಜ್ಯಮಿಶ್ರ ಮಾಡಿ ಉಖಾಗ್ನಿಯಲ್ಲಿ ಹಾಕಬೇಕು. |
| ಯತ್ ಆಜ್ಯಮ್ ಏತತ್ ಅಗ್ನೇಃ ಪ್ರಿಯಮ್ ಧಾಮ ವೈ | ತುಪ್ಪವೆನ್ನುವುದು ಯಾವುದು ಇದೆಯೋ ಅದು ಅಗ್ನಿಯ ಪ್ರಿಯವಾದ ಸ್ಥಾನವಾಗಿದೆ. |
| ಏನಮ್ ಪ್ರಿಯೇಣ ಧಾಮ್ನಾ ಏವ ಸಮರ್ಧಯತಿ | ಅಧ್ವರ್ಯುವು ಅಗ್ನಿಯನ್ನು ಅವನ ಪ್ರಿಯವಾದ ಸ್ಥಾನದಿಂದಲೇ ವೃದ್ಧಿಗೊಳಿಸುತ್ತಾನೆ. |
| ಅಥೋ ತೇಜಸಾ | ಮತ್ತು ತೇಜಸ್ಸಿನಿಂದಲೂ ಸಮೃದ್ಧಿಗೊಳಿಸುತ್ತಾನೆ. |

---

'**ತ್ರಯೋ ವೈ ಗತಶ್ರಿಯಃ ಶುಶ್ರುವಾನ್ ಗ್ರಾಮಣೀ ರಾಜನ್ಯಃ**' ಎಂಬುದಾಗಿ '**ಗತಶ್ರೀ**' ಶಬ್ದದ ವಿವರಣೆಯು ಇದೆ. ಈ '**ಗತಶ್ರೀ**' ಎನ್ನಿಸಿಕೊಂಡವರಲ್ಲಿ ಅಗ್ನಿಚಯನಕರ್ತರಾದವರು ಮಥಿತಾಗ್ನಿಯನ್ನು ಉಖೆಯಲ್ಲಿ ಹಾಕಬೇಕು. ಉಖೆಯನ್ನು ಗಾರ್ಹಪತ್ಯದಲ್ಲಿ ಕಾಯಿಸಬೇಕಾಗಿಲ್ಲ. ಈ '**ಗತಶ್ರೀ**' ಎನ್ನಿಸಿಕೊಂಡವರಲ್ಲಿ ಪ್ರಭುವಾದವನು ಶ್ರೀಮಂತನೇ ಆಗಿದ್ದಾನೆ. ಅವನು ಮಥಿತಾಗ್ನಿರೂಪದೇವತೆಯನ್ನೇ ಹೊಂದಲು ಅರ್ಹನು.

'ಗತಶ್ರೀ' ಆದವನೂ ಐಶ್ವರ್ಯವನ್ನು ಬಯಸಿದರೆ ಅವನು ಉಖೆಯನ್ನು ಕಾಯಿಸಬೇಕು.

ವೈಕಂಕತೀಮಾ ದಧಾತಿ ಭಾ ಏವಾವರುಂಧೇ ಶಮೀಮಯೀಮಾ ದಧಾತಿ ಶಾಂತ್ಯೈ ಸೀದ ತ್ವಂ ಮಾತುರಸ್ಯಾ ಉಪಸ್ಥ ಇತಿ ತಿಸೃಭಿರ್ಜಾತಮುಪತಿಷ್ಠತೇ ತ್ರಯ ಇಮೇ ಲೋಕಾ

---

ವೈಕಂಕತೀಮ್ । ಏತಿ । ದಧಾತಿ । ಭಾಃ । ಏವ । ಅವೇತಿ । ರುಂಧೇ । ಶಮೀಮಯೀಮಿತಿ ಶಮೀ–ಮಯೀಮ್ । ಏತಿ । ದಧಾತಿ । ಶಾಂತ್ಯೈ । ಸೀದ । ತ್ವಮ್ । ಮಾತುಃ । ಅಸ್ಯಾಃ । ಉಪಸ್ಥ ಇತ್ಯುಪ–ಸ್ಥೇ । ಇತಿ । ತಿಸೃಭಿರಿತಿ ತಿಸೃ–ಭಿಃ । ಜಾತಮ್ । ಉಪೇತಿ । ತಿಷ್ಠತೇ । ತ್ರಯಃ । ಇಮೇ । ಲೋಕಾಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ವೈಕಂಕತಸಮಿದಾಧಾನವಿಧಿ; ಫಲ** | |
| **ವೈಕಂಕತೀಮ್ ಆ ದಧಾತಿ** | ಹುಳಿಬೇಲದ ಮರದ ಸಮಿತ್ತನ್ನು **'ಪರಸ್ಯಾ ಅಧಿ'** ಎಂಬ ಮಂತ್ರದಿಂದ ಉಖ್ಯಾಗ್ನಿಯಲ್ಲಿ ಹಾಕಬೇಕು. |
| **ಭಾಃ ಏವ ಅವರುಂಧೇ** | ಇದರಿಂದ ಯಜಮಾನನು ತೇಜಸ್ಸನ್ನು/ಕಾಂತಿಯನ್ನು ಹೊಂದುತ್ತಾನೆ. |
| **ಶಮೀಸಮಿದಾಧಾನವಿಧಿ; ಫಲ** | |
| **ಶಮೀಮಯೀಮ್ ಆ ದಧಾತಿ ಶಾಂತ್ಯೈ** | **'ಪರಮಸ್ಯಾಃ' ಎಂಬ ಮಂತ್ರದಿಂದ ಬನ್ನಿಮರದ ಸಮಿತ್ತನ್ನು ಉಖ್ಯಾಗ್ನಿಯಲ್ಲಿ ಹಾಕಬೇಕು. ಇದರಿಂದ ಅಗ್ನಿಯನ್ನು ಶಾಂತಿಗೊಳಿಸಿದಂತಾಗುತ್ತದೆ.** |
| **ಉಖ್ಯಾಗ್ನಿಯ ಉಪಸ್ಥಾನ** | |
| **ಸೀದ ತ್ವಮ್ ಮಾತುಃ ಅಸ್ಯಾಃ ಉಪಸ್ಥೇ ಇತಿ ತಿಸೃಭಿಃ ಜಾತಮ್ ಉಪತಿಷ್ಠತೇ** | **'ಸೀದ ತ್ವಮ್' 'ಅಂತರಗ್ನೇ' 'ಶಿವೋ ಭೂತ್ವಾ' ಎಂಬ ಮೂರು ಮಂತ್ರಗಳಿಂದ–ಉತ್ಪನ್ನನಾದ ಉಖ್ಯಾಗ್ನಿಯ–ಉಪಸ್ಥಾನವನ್ನು ಮಾಡಬೇಕು.** |
| **ಇಮೇ ಲೋಕಾಃ ತ್ರಯಃ** | ಭೂಃ, ಭುವಃ, ಸುವಃ (ಭೂಮಿ, ಅಂತರಿಕ್ಷ ಮತ್ತು ದ್ಯುಲೋಕಗಳು) ಮೂರಾಗಿವೆ. |

---

ಅನ್ನಕಾಮನಾದ ಯಜಮಾನನು ಅಂಬರೀಷದ ಅಗ್ನಿಯನ್ನು ಉಖಾಗ್ನಿಯನ್ನಾಗಿ ಮಾಡಿಕೊಳ್ಳಬೇಕು.

ಬಾಣಲಿಯನ್ನು ಚೆನ್ನಾಗಿ ಕಾಯಿಸಿದರೆ ಅದರಿಂದ ಬೆಂಕಿಯು ಹುಟ್ಟುತ್ತದೆ. ಇದನ್ನು ಉಖಾಗ್ನಿಯನ್ನಾಗಿ ಮಾಡಿಕೊಂಡು ಚಯನದಲ್ಲಿ ಉಪಯೋಗಿಸಿಕೊಳ್ಳಬೇಕು. ಹೀಗೆ ಮಾಡುವುದರಿಂದ ಅನ್ನಪ್ರಾಪ್ತಿಯಾಗುತ್ತದೆ.

ಏಷ್ವೇವ ಲೋಕೇಷ್ವಾವಿದಂ ಗಚ್ಛತ್ಯಥೋ ಪ್ರಾಣಾನೇವಾತ್ಮನ್ಧತ್ತೇ ॥ ೫೦–9 ॥

[ಪ್ರಜಾಪತಿರ್ ಋಚ್ಛೇಥ್ಸ್ವಮೇವಾನ್ನಂ ತೇಜಸಾ ಚತುಸ್ತ್ರಿಗ್ಂಶಚ್ಚ ॥]

---

ಏಷು । ಏವ । ಲೋಕೇಷು । ಆವಿದಮಿತ್ಯಾ–ವಿದಮ್ । ಗಚ್ಛತಿ । ಅಥೋ ಇತಿ । ಪ್ರಾಣಾನಿತಿ ಪ್ರ–ಅನಾನ್ । ಏವ । ಆತ್ಮನ್ನ್ । ಧತ್ತೇ ॥ ೫೦ ॥

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಏಷು ಲೋಕೇಷು ಏವ ಆವಿದಮ್ ಗಚ್ಛತಿ** | ಈ ಮೂರು ಲೋಕಗಳಲ್ಲಿ ಈ ಯಜಮಾನನು ಪ್ರಸಿದ್ಧಿಯನ್ನು ಪಡೆಯುತ್ತಾನೆ. |
| **ಅಥೋ ಆತ್ಮನ್ ಪ್ರಾಣಾನ್ ಏವ ಧತ್ತೇ** | ಮತ್ತು ಪ್ರಾಣ, ಅಪಾನ, ವ್ಯಾನಗಳೆಂಬ ಮೂರು ಪ್ರಾಣಗಳನ್ನೂ ತನ್ನಲ್ಲಿ ಧರಿಸುತ್ತಾನೆ. |

---

ಪ್ರವ್ರಜನಾಗ್ನಿಗೆ ಸಂಬಂಧಿಸಿದ ಪ್ರಾಸಂಗಿಕವಿಷಯಗಳನ್ನು ಹೇಳಿ ಉಖಾಗ್ನಿಯಲ್ಲಿ ಹಾಕಬೇಕಾದ ವಸ್ತುಗಳನ್ನು ಹೇಳಲಾಗಿದೆ. **'ದ್ರ್ವನ್ನಃ'** ಎಂಬ ಮಂತ್ರದಿಂದ ಸೌದೆಯ ಚೂರುಗಳನ್ನು/ನೊಜೆಹುಲ್ಲುಗಳನ್ನೂ ಹಾಕಬೇಕು.

**'ಆ ಪ್ಯಾಯತಾಂ ಘೃತಯೋನಿಃ' 'ಅಗ್ನಿರ್ ಹವ್ಯಾನುಮನ್ಯತಾಮ್'** ಎಂಬ ಮಂತ್ರದಲ್ಲಿ ಆಜ್ಯವು ಅಗ್ನಿಯ ಪ್ರಿಯವಾದ ಸ್ಥಾನವೆಂದು ಹೇಳಲಾಗಿದೆ.

**'ತಗ್ಂ ಶಮ್ಯಾ ಅಶಮಯತ್'** ಎಂದು ಆಧಾನಬ್ರಾಹ್ಮಣದಲ್ಲಿ ಶಮಿಯು ಶಾಂತಿಸಾಧನವೆಂದು ಹೇಳಲಾಗಿದೆ.

**'ಸೀದ ತ್ವಮ್'** ಮುಂತಾದ ಮೂರು ಮಂತ್ರಗಳಿಂದ ಉಪಸ್ಥಾನವು ವಿಹಿತವಾಗಿದೆ. ಈ ಬ್ರಾಹ್ಮಣಭಾಗದಲ್ಲಿ ತ್ರಿತ್ವ (ಮೂರು) ಸಂಖ್ಯೆಯ ಪ್ರಶಂಸೆಯು ಇದೆ. ಶ್ರುತಿಯಲ್ಲಿ ಅಲ್ಲಲ್ಲಿ ಸಂಖ್ಯಾಪ್ರಶಂಸೆಯು ಇದೆ.

## ॥ ದಶಮೋಽನುವಾಕಃ ॥

ನ ಹ ಸ್ಮ ವೈ ಪುರಾಽಗ್ನಿರಪರಶುವೃಕ್ಣಂ ದಹತಿ ತದಸ್ಮೈ ಪ್ರಯೋಗ ಏವ ರ್‍ಷಿರಸ್ವದಯದ್ಯದಗ್ನೇ ಯಾನಿ ಕಾನಿ ಚೇತಿ ಸಮಿಧಮಾ ದಧಾ-

---

ನ । ಹ । ಸ್ಮ । ವೈ । ಪುರಾ । ಅಗ್ನಿಃ । ಅಪರಶುವೃಕ್ಣಮಿತ್ಯಪರಶು-ವೃಕ್ಣಮ್ । ದಹತಿ । ತತ್ । ಅಸ್ಮೈ । ಪ್ರಯೋಗ ಇತಿ ಪ್ರ-ಯೋಗಃ । ಏವ । ಋಷಿಃ । ಅಸ್ವದಯತ್ । ಯತ್ । ಅಗ್ನೇ । ಯಾನಿ । ಕಾನಿ । ಚ । ಇತಿ । ಸಮಿಧಮಿತಿ ಸಮ್-ಇಧಮ್ । ಏತಿ । ದಧಾತಿ ।

---

ಒಂಬತ್ತನೆಯ ಅನುವಾಕದಲ್ಲಿ ಉಖ್ಯಾಗ್ನಿಜನನವು ಹೇಳಲ್ಪಟ್ಟಿತು. ಹತ್ತನೆಯ ಅನುವಾಕದಲ್ಲಿ ಉಖ್ಯಾಗ್ನಿ ಧಾರಣವು ಹೇಳಲ್ಪಟ್ಟಿದೆ.

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಸಮಿದಾಧಾನವಿಧಿ; ಅರ್ಥವಾದ** | |
| **ಪುರಾ** | ಈ ಮಂತ್ರಪ್ರಯೋಗಕ್ಕೆ ಮೊದಲು |
| **ಅಪರಶುವೃಕ್ಣಮ್ ಅಗ್ನಿಃ ನ ಹ ಸ್ಮ ವೈ ದಹತಿ** | ಕೊಡಲಿಯಿಂದ ಕಡಿಯದಿರುವ/ತಾನಾಗಿಯೇ ಬಿದ್ದಿರುವ ಕಟ್ಟಿಗೆಯನ್ನು ಅಗ್ನಿಯು ಚೆನ್ನಾಗಿ ದಹಿಸುವುದಿಲ್ಲ/ಭಸ್ಮ ಮಾಡುವುದಿಲ್ಲ. |
| **ತತ್ ಪ್ರಯೋಗಃ ಏವ ಋಷಿಃ ಅಸ್ಮೈ ಅಸ್ವದಯತ್** | ಆ ಕಟ್ಟಿಗೆಯನ್ನು ಪ್ರಯೋಗ ಮಾಡಿರುವ ಮಂತ್ರವೇ ಅಗ್ನಿಗೆ ರುಚಿಸುವಂತೆ ಮಾಡಿತು. |
| **ಯದಗ್ನೇ ಯಾನಿ ಕಾನಿ ಚ ಇತಿ ಸಮಿಧಮ್ ಆ ದಧಾತಿ** | 'ಅಗ್ನಿಯೇ! ನೀನು ಯಾವುದಾದರೂ ಕಟ್ಟಿಗೆಯನ್ನು ಧರಿಸುವೆಯೋ ಆ ಕಟ್ಟಿಗೆಯು ನಿನಗೆ ತುಪ್ಪದಂತೆ ರುಚಿಕರವಾಗಲಿ' ಎಂಬ ಮಂತ್ರದಿಂದ ಅಧ್ವರ್ಯುವು ಅಗ್ನಿಯಲ್ಲಿ ಸಮಿತ್ತನ್ನು ಹಾಕುತ್ತಾನೆ. |

–ತ್ಯಪರಶುವೃಕ್ಣಮೇವಾಸ್ಮೈ ಸ್ವದಯತಿ ಸರ್ವಮಸ್ಮೈ ಸ್ವದತೇ ಯ ಏವಂ ವೇದೌದುಂಬರೀಮಾದಧಾತ್ಯೂರ್ಗ್ವಾ ಉದುಂಬರ ಊರ್ಜಮೇವಾಸ್ಮಾ ಅಪಿ ದಧಾತಿ ಪ್ರಜಾಪತಿರಗ್ನಿಮಸೃಜತ ತಗ್ಂ ಸೃಷ್ಟಗ್ಂ ರಕ್ಷಾಗ್ಂಸ್ಯ[ರಕ್ಷಾಗ್ಂಸಿ

(೫೧)ಅಜಿಘಾಗ್ಂಸನ್ತ್ಸ]ಜಿಘಾಗ್ಂಸ–

---

ಅಪರಶುವೃಕ್ಣಮಿತ್ಯಪರಶು–ವೃಕ್ಣಮ್ । ಏವ । ಅಸ್ಮೈ । ಸ್ವದಯತಿ । ಸರ್ವಮ್ । ಅಸ್ಮೈ । ಸ್ವದತೇ । ಯಃ । ಏವಮ್ । ವೇದ । ಔದುಂಬರೀಮ್ । ಏತಿ । ದಧಾತಿ । ಊರ್ಕ್ । ವೈ । ಉದುಂಬರಃ । ಊರ್ಜಮ್ । ಏವ । ಅಸ್ಮೈ । ಅಪೀತಿ । ದಧಾತಿ । ಪ್ರಜಾಪತಿರಿತಿ ಪ್ರಜಾ–ಪತಿಃ । ಅಗ್ನಿಮ್ । ಅಸೃಜತ । ತಮ್ । ಸೃಷ್ಟಮ್ । ರಕ್ಷಾಗ್ಂಸಿ । (೫೧) । ಅಜಿಘಾಗ್ಂಸನ್ನ್ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಅಪರಶುವೃಕ್ಣಮ್ ಏವ ಅಸ್ಮೈ ಸ್ವದಯತಿ** | ಕೊಡಲಿಯಿಂದ ಕಡಿಯದ ಸೌದೆಯೂ ಅಗ್ನಿಗೆ ಆಸ್ವಾದನಾರ್ಹವಾಗುವಂತೆ ಮಾಡುತ್ತಾನೆ. |
| **ಸರ್ವಮ್ ಅಸ್ಮೈ ಸ್ವದತೇ ಯಃ ಏವಮ್ ವೇದ** | ಯಾವನು ಹೀಗೆ ತಿಳಿಯುತ್ತಾನೆಯೋ ಆ ಯಜಮಾನನು ಅರ್ಪಿಸುವ ಕಟ್ಟಿಗೆಯೆಲ್ಲವೂ ಅಗ್ನಿಗೆ ರುಚಿಸುತ್ತದೆ. |

ಆಧಾನದಲ್ಲಿ ವೃಕ್ಷವಿಶೇಷವಿಧಿ; ಪ್ರಶಂಸೆ

| | |
|---|---|
| **ಔದುಂಬರೀಮ್ ಆ ದಧಾತಿ** | ಉದುಂಬರ ಸಮಿತ್ತನ್ನು ಅಧ್ವರ್ಯುವು ಅಗ್ನಿಯಲ್ಲಿ ಹಾಕಬೇಕು. [ವಿಧಿ] |
| **ಊರ್ಕ್ ವೈ ಉದುಂಬರಃ** | ಉದುಂಬರವು ಬಲಸ್ವರೂಪವಾಗಿದೆ. |
| **ಅಸ್ಮೈ ಊರ್ಜಮ್ ಏವ ಅಪಿ ದಧಾತಿ** | ಅಧ್ವರ್ಯುವು ಈ ಸಮಿದಾಧಾನದಿಂದ ಯಜಮಾನನಿಗೆ ಬಲವನ್ನೇ ಸಂಪಾದಿಸಿಕೊಡುತ್ತಾನೆ. |

ರಾಕ್ಷೋಘ್ನಸೂಕ್ತದಿಂದ ಸಮಿದಾಧಾನವಿಧಿ

| | |
|---|---|
| **ಪ್ರಜಾಪತಿಃ ಅಗ್ನಿಮ್ ಅಸೃಜತ** | ಪ್ರಜಾಪತಿದೇವನು ಅಗ್ನಿಯನ್ನು ಸೃಷ್ಟಿಸಿದನು. |
| **ಸೃಷ್ಟಮ್ ತಮ್ ರಕ್ಷಾಗ್ಂಸಿ ಅಜಿಘಾಗ್ಂಸನ್** | ಉತ್ಪನ್ನನಾದ ಆ ಅಗ್ನಿಯನ್ನು ರಕ್ಷೋಗಣಗಳು ನಾಶಪಡಿಸಲು ಯತ್ನಿಸಿದವು. |

–ನ್ಘ್ನ ಏತದ್ರಾಕ್ಷೋಘ್ನಮಪಶ್ಯತ್ತೇನ ವೈ ಸ ರಕ್ಷಾಗ್ಂಸ್ಯಪಾಹತ ಯದ್ರಾಕ್ಷೋಘ್ನಂ ಭವತ್ಯಗ್ನೇರೇವ ತೇನ ಜಾತಾದ್ರಕ್ಷಾಗ್ಂಸ್ಯಪಹಂತ್ಯಾಶ್ವತ್ಥೀಮಾ ದಧಾತ್ಯಶ್ವತ್ಥೋ ವೈ ವನಸ್ಪತೀನಾಗ್ಂ ಸಪತ್ನಸಾಹೋ ವಿಜಿತ್ಯೈ॥

---

ಸಃ । ಏತತ್ । ರಾಕ್ಷೋಘ್ನಮಿತಿ ರಾಕ್ಷಃ–ಘ್ನಮ್ । ಅಪಶ್ಯತ್ । ತೇನ । ವೈ । ಸಃ । ರಕ್ಷಾಗ್ಂಸಿ । ಅಪೇತಿ । ಅಹತ । ಯತ್ । ರಾಕ್ಷೋಘ್ನಮಿತಿ ರಾಕ್ಷಃ–ಘ್ನಮ್ । ಭವತಿ । ಅಗ್ನೇಃ । ಏವ । ತೇನ । ಜಾತಾತ್ । ರಕ್ಷಾಗ್ಂಸಿ । ಅಪೇತಿ । ಹಂತಿ । ಆಶ್ವತ್ಥೀಮ್ । ಏತಿ । ದಧಾತಿ । ಅಶ್ವತ್ಥಃ । ವೈ । ವನಸ್ಪತೀನಾಮ್ । ಸಪತ್ನಸಾಹ ಇತಿ ಸಪತ್ನ–ಸಾಹಃ । ವಿಜಿತ್ಯಾ ಇತಿ ವಿ–ಜಿತ್ಯೈ॥

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಸಃ ಏತತ್ ರಾಕ್ಷೋಘ್ನಮ್ ಅಪಶ್ಯತ್** | ಬಳಿಕ ಆ ಪ್ರಜಾಪತಿಯು ಈ *ರಾಕ್ಷೋಘ್ನಸೂಕ್ತವನ್ನು ತಿಳಿದನು. |
| **ತೇನ ವೈ ಸಃ ರಕ್ಷಾಗ್ಂಸಿ ಅಪಾಹತ** | ಅದರಿಂದ ಅವನು ರಾಕ್ಷಸರನ್ನು ನಾಶ ಮಾಡಿದನು. |
| **ಯತ್ ರಾಕ್ಷೋಘ್ನಮ್ ಭವತಿ ತೇನ ಜಾತಾತ್ ಅಗ್ನೇಃ ಏವ ರಕ್ಷಾಗ್ಂಸಿ ಅಪಹಂತಿ** | ರಾಕ್ಷೋಘ್ನಸೂಕ್ತವೆಂಬುದು ಯಾವುದೋ ಅದರಿಂದ ಯಜಮಾನನು ಉತ್ಪನ್ನನಾದ ಅಗ್ನಿಯಿಂದ ರಕ್ಷೋಗಣಗಳನ್ನು ದೂರಮಾಡಿ ನಾಶಪಡಿಸುತ್ತಾನೆ. |

### ಅಶ್ವತ್ಥಸಮಿದಾಧಾನ

| | |
|---|---|
| **ಆಶ್ವತ್ಥೀಮ್ ಆ ದಧಾತಿ** | ಉಖಾಗ್ನಿಯಲ್ಲಿ ಅರಳಿಮರದ ಸಮಿತ್ತನ್ನು ಹಾಕಬೇಕು. |
| **ವನಸ್ಪತೀನಾಮ್ ಅಶ್ವತ್ಥಃ ವೈ ಸಪತ್ನಸಾಹಃ** | ವನಸ್ಪತಿವೃಕ್ಷಗಳಲ್ಲಿ ಅಶ್ವತ್ಥವೃಕ್ಷವು ರಾಕ್ಷಸರನ್ನು ನಾಶಪಡಿಸಬಲ್ಲುದು. |
| **ವಿಜಿತ್ಯೈ** | ಈ ಸಮಿದಾಧಾನವು ರಕ್ಷೋಗಣಗಳ ಮೇಲೆ ಗೆಲುವಿಗೆ ಕಾರಣವಾಗುತ್ತದೆ. |

---

* **'ಯದಗ್ನೇ ಯಾನಿ...'** ಎಂದು ಆರಂಭಿಸಿ **'ಅಮಿತ್ರಾನುನ್ನಯಾಮಿ ಸ್ವಾಗ್ಂ ಅಹಮ್'** ವರೆಗಿನ ಭಾಗ **ರಾಕ್ಷೋಘ್ನಸೂಕ್ತ.**

ವೈಕಂಕತೀಮಾ ದಧಾತಿ ಭಾ ಏವಾವರುಂಧೇ ಶಮೀಮಯೀಮಾ ದಧಾತಿ ಶಾಂತ್ಯೈಲ ಸಗ್ಂಶಿತಂ ಮೇ ಬ್ರಹ್ಮೋದೇಷಾಂ ಬಾಹೂ ಅತಿರಮಿತ್ಯುತ್ತಮೇ ಔದುಂಬರೀ[(೫೨)ವಾಚಯತಿ] ವಾಚಯತಿ

---

ವೈಕಂಕತೀಮ್ । ಏತಿ । ದಧಾತಿ । ಭಾಃ । ಏವ । ಅವೇತಿ । ರುಂಧೇ । ಶಮೀಮಯೀಮಿತಿ ಶಮೀ–ಮಯೀಮ್ । ಏತಿ । ದಧಾತಿ । ಶಾಂತ್ಯೈಲ । ಸಗ್ಂಶಿತಮಿತಿ ಸಮ್–ಶಿತಮ್ । ಮೇ । ಬ್ರಹ್ಮ । ಉದಿತಿ । ಏಷಾಮ್ । ಬಾಹೂ ಇತಿ । ಅತಿರಮ್ । ಇತಿ । ಉತ್ತಮೇ ಇತ್ಯುತ್–ತಮೇ । ಔದುಂಬರೀ ಇತಿ । (೫೨) । ವಾಚಯತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|

### ವೈಕಂಕತಸಮಿದಾಧಾನ

| | |
|---|---|
| **ವೈಕಂಕತೀಮ್ ಆದಧಾತಿ** | **'ಯೇ ಜನೇಷು'** ಎಂಬ ಮಂತ್ರದಿಂದ ವಿಕಂಕತ (ಹುಳಿಬೇಲ)ದ ಸಮಿತ್ತನ್ನು ಅಗ್ನಿಯಲ್ಲಿ ಹಾಕಬೇಕು. |
| **ಭಾಃ ಏವ ಅವರುಂಧೇ** | ಇದರಿಂದ ಯಜಮಾನನು ಕಾಂತಿಯನ್ನು ಹೊಂದುತ್ತಾನೆ. |

### ಶಮೀಸಮಿದಾಧಾನ

| | |
|---|---|
| **ಶಮೀಮಯೀಮ್ ಆದಧಾತಿ ಶಾಂತ್ಯೈಲ** | **'ಯೋ ಅಸ್ಮಭ್ಯಮ್'** ಎಂದು ಶಮೀಸಮಿತ್ತನ್ನು ಹಾಕಬೇಕು. ಇದು ಅಗ್ನಿಶಾಂತಿಗೆ ಕಾರಣವಾಗುತ್ತದೆ. |

### ಯಜಮಾನವಾಚನವಿಧಿ; ಬ್ರಾಹ್ಮಣ–ಕ್ಷತ್ರಿಯ ಪರಸ್ಪರೋಪಕಾರ

| | |
|---|---|
| **ಸಗ್ಂಶಿತಮ್ ಮೇ ಬ್ರಹ್ಮ ಏಷಾಮ್ ಬಾಹೂ ಉತ್ ಅತಿರಮ್ ಇತಿ** | 'ನನ್ನ ಬ್ರಾಹ್ಮಣ್ಯವು ತೀಕ್ಷ್ಣವಾಗಲಿ/ಕಾರ್ಯಸಮರ್ಥವಾಗಲಿ.' ' ಈ ನಮ್ಮವರ ಕೈ ಮೇಲಾಗುವಂತೆ ಮಾಡಿದೆನು' (ಎಂಬ ಅರ್ಥದ) |
| **ಉತ್ತಮೇ ಔದುಂಬರೀ ವಾಚಯತಿ** | ಕೊನೆಯ ಎರಡು ರಾಕ್ಷೋಘ್ನಮಂತ್ರಗಳನ್ನು ಯಜಮಾನನಿಂದ ಹೇಳಿಸಬೇಕು. [ತಾನು (ಅಧ್ವರ್ಯುವು) ಎರಡು ಔದುಂಬರೀಸಮಿಧೆಗಳನ್ನು ಮಂತ್ರರಹಿತವಾಗಿ ಅಗ್ನಿಯಲ್ಲಿ ಹಾಕಬೇಕು.] |

ಬ್ರಹ್ಮಣೈವ ಕ್ಷತ್ರಗ್ಂ ಸಗ್ಂಶ್ಯತಿ ಕ್ಷತ್ರೇಣ ಬ್ರಹ್ಮ ತಸ್ಮಾದ್ಬ್ರಾಹ್ಮಣೋ

ರಾಜನ್ಯವಾನತ್ಯನ್ಯಂ ಬ್ರಾಹ್ಮಣಂ ತಸ್ಮಾದ್ರಾಜನ್ಯೋ ಬ್ರಾಹ್ಮಣವಾನತ್ಯನ್ಯಗ್ಂ

ರಾಜನ್ಯಂ ಮೃತ್ಯುರ್ವಾ ಏಷ ಯದಗ್ನಿರಮೃತಗ್ಂ ಹಿರಣ್ಯಗ್ಂ

---

ಬ್ರಹ್ಮಣಾ । ಏವ । ಕ್ಷತ್ರಮ್ । ಸಮಿತಿ । ಶ್ಯತಿ । ಕ್ಷತ್ರೇಣ । ಬ್ರಹ್ಮ । ತಸ್ಮಾತ್ । ಬ್ರಾಹ್ಮಣಃ । ರಾಜನ್ಯವಾನಿತಿ ರಾಜನ್ಯ–ವಾನ್ । ಅತೀತಿ । ಅನ್ಯಮ್ । ಬ್ರಾಹ್ಮಣಮ್ । ತಸ್ಮಾತ್ । ರಾಜನ್ಯಃ । ಬ್ರಾಹ್ಮಣವಾನಿತಿ ಬ್ರಾಹ್ಮಣ–ವಾನ್ । ಅತೀತಿ । ಅನ್ಯಮ್ । ರಾಜನ್ಯಮ್ । ಮೃತ್ಯುಃ । ವೈ । ಏಷಃ । ಯತ್ । ಅಗ್ನಿಃ । ಅಮೃತಮ್ । ಹಿರಣ್ಯಮ್ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಬ್ರಹ್ಮಣಾ ಏವ ಕ್ಷತ್ರಮ್ ಸಂಶ್ಯತಿ** | ಇದು ಬ್ರಾಹ್ಮಣಬೆಂಬಲದಿಂದ ಕ್ಷತ್ರಿಯನು ತೀಕ್ಷ್ಣನಾಗುವಂತೆ/ಪ್ರಜಾಪಾಲನಕಾರ್ಯಸಮರ್ಥನಾಗುವಂತೆ ಮಾಡುತ್ತದೆ. |
| **ಕ್ಷತ್ರೇಣ ಬ್ರಹ್ಮ** ಸಂಶ್ಯತಿ | ಕ್ಷತ್ರಿಯನಿಂದ ಬ್ರಾಹ್ಮಣನು ತನ್ನ ಧರ್ಮಕಾರ್ಯದಲ್ಲಿ ನಿರತನಾಗುವಂತೆ ಮಾಡುತ್ತದೆ. |
| **ತಸ್ಮಾತ್ ಬ್ರಾಹ್ಮಣಃ ರಾಜನ್ಯವಾನ್ ಅತಿ ಅನ್ಯಮ್ ಬ್ರಾಹ್ಮಣಮ್** | ಅದರಿಂದ ಬ್ರಾಹ್ಮಣನು ಪಾಲಕನಾದ ರಾಜನಿಲ್ಲದ ಬೇರೆಯ ಬ್ರಾಹ್ಮಣನನ್ನು ಮೀರಿಸಿ ಉತ್ತಮಪಾಲಕನಾದ ರಾಜನನ್ನು ಪಡೆದವನಾಗುತ್ತಾನೆ. |
| **ತಸ್ಮಾತ್ ರಾಜನ್ಯಃ ಬ್ರಾಹ್ಮಣವಾನ್ ಅತಿ ಅನ್ಯಮ್ ರಾಜನ್ಯಮ್** | ರಾಜನೂ ಧರ್ಮಬೋಧಕನಾದ ಪುರೋಹಿತನಿಲ್ಲದ ಬೇರೆಯ ರಾಜನನ್ನು ಮೀರಿಸಿ ಉತ್ತಮ ಧರ್ಮಬೋಧಕನಾದ ಪುರೋಹಿತನನ್ನು ಪಡೆದವನಾಗುತ್ತಾನೆ. |

### ಸುವರ್ಣಹಾರಧಾರಣೆಯ ವಿಧಿ; ಅರ್ಥವಾದ

| | |
|---|---|
| **ಯತ್ ಅಗ್ನಿಃ** | ಅಗ್ನಿಯೆಂಬುದು ಯಾವುದುಂಟೋ |
| **ಏಷಃ ಮೃತ್ಯುಃ ವೈ** | ಅದು ದಾಹಕವಾದುದರಿಂದ ಮೃತ್ಯುವೇ ಆಗಿರುತ್ತದೆ. |
| **ಹಿರಣ್ಯಮ್ ಅಮೃತಮ್** | [ಚೆನ್ನಾಗಿ ಕಾಯಿಸಿದರೂ ಭಸ್ಮವಾಗದ] ಬಂಗಾರವು ಅಮೃತವೇ ಆಗಿದೆ. |

---

**ತಾತ್ಪರ್ಯ:–** ಉಖೆಯಲ್ಲಿ ಸಮಿತ್ತನ್ನು ಆಧಾನ ಮಾಡಬೇಕು. ಔದುಂಬರೀ ಸಮಿತ್ತನ್ನು ಆಧಾನ ಮಾಡುವುದರಿಂದ

ರುಕ್ಮಮಂತರಂ ಪ್ರತಿಮುಂಚತೇಽಮೃತಮೇವ ಮೃತ್ಯೋರಂತರ್ಧತ್ತ

ಏಕವಿಗ್ಂಶತಿನಿರ್ಬಾಧೋ ಭವತ್ಯೇಕವಿಗ್ಂಶತಿರ್ವೈ ದೇವಲೋಕಾ ದ್ವಾದಶ

ಮಾಸಾಃ ಪಂಚರ್ತವಸ್ತ್ರಯ ಇಮೇ ಲೋಕಾ

---

ರುಕ್ಮಮ್ । ಅಂತರಮ್ । ಪ್ರತೀತಿ । ಮುಂಚತೇ । ಅಮೃತಮ್ । ಏವ । ಮೃತ್ಯೋಃ । ಅಂತಃ । ಧತ್ತೇ ।

ಏಕವಿಗ್ಂಶತಿನಿರ್ಬಾಧ ಇತ್ಯೇಕವಿಗ್ಂಶತಿ–ನಿರ್ಬಾಧಃ । ಭವತಿ । ಏಕವಿಗ್ಂಶತಿರಿತ್ಯೇಕ–ವಿಗ್ಂಶತಿಃ । ವೈ ।

ದೇವಲೋಕಾ ಇತಿ ದೇವ–ಲೋಕಾಃ । ದ್ವಾದಶ । ಮಾಸಾಃ । ಪಂಚ । ಋತವಃ । ತ್ರಯಃ । ಇಮೇ । ಲೋಕಾಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ರುಕ್ಮಮ್ ಅಂತರಮ್ ಪ್ರತಿಮುಂಚತೇ** | ಚಿನ್ನದ ಹಾರವನ್ನು ಅಗ್ನಿಗೂ ಹೃದಯಕ್ಕೂ ಮಧ್ಯದಲ್ಲಿ ತಡೆಯಂತೆ ಯಜಮಾನನು ಧರಿಸುತ್ತಾನೆ. |
| **ಮೃತ್ಯೋಃ** | ಮೃತ್ಯುವಿಗೂ (ತನಗೂ) |
| **ಅಮೃತಮ್ ಏವ ಅಂತಃ ಧತ್ತೇ** | (ಯಜಮಾನನಿಗೂ) ಮಧ್ಯದಲ್ಲಿ ಅಮೃತರೂಪವಾದ ಹಿರಣ್ಯದ ಹಾರವನ್ನು ಧರಿಸಿದಂತಾಗುತ್ತದೆ. |

**ಚಿನ್ನದ ಹಾರದ ಲಕ್ಷಣ; ಅರ್ಥವಾದ**

| ಬ್ರಾಹ್ಮಣಭಾಗ | ವಿವರಣೆ |
|---|---|
| **ಏಕವಿಗ್ಂಶತಿನಿರ್ಬಾಧಃ ಭವತಿ** | ಆ ಹಿರಣ್ಯಹಾರವು ಉಬ್ಬು–ತಗ್ಗುಗಳನ್ನು ಹೊಂದಿರಬೇಕು. ಶತ್ರುಗಳ ಪ್ರಹಾರವನ್ನು ತಡೆದು ಅವರನ್ನು ಬಾಧಿಸುವಂತೆ ಇರಬೇಕು. ಇಪ್ಪತ್ತೊಂದು ಸಂಖ್ಯೆಯಿಂದ ಕೂಡಿರಬೇಕು. |
| **ದೇವಲೋಕಾಃ ಏಕವಿಗ್ಂಶತಿಃ ವೈ** | ದೇವತೆಗಳ ಭೋಗಸಾಧನವಾದ ಕಾಲದೇಶಾದಿಗಳು ಇಪ್ಪತ್ತೊಂದು. |
| **ದ್ವಾದಶ ಮಾಸಾಃ** | ಹನ್ನೆರಡು ತಿಂಗಳುಗಳು. |
| **ಪಂಚ ಋತವಃ** | *ಐದು ಋತುಗಳು. |
| **ಇಮೇ ಲೋಕಾಃ ತ್ರಯಃ** | ಈ ಭೂರಾದಿ ಲೋಕಗಳು ಮೂರು. |

---

ಯಜಮಾನನಿಗೆ ಬಲವು ಉಂಟಾಗುತ್ತದೆ. ಅಗ್ನಿಯಲ್ಲಿ ಐದು ಸಮಿತ್ತುಗಳನ್ನು ಹಾಕಬೇಕು. ರಾಕ್ಷೋಘ್ನಸೂಕ್ತದಿಂದ

---

* ಹೇಮಂತ–ಶಿಶಿರ ಋತುಗಳನ್ನು ಕೂಡಿಸಿ ಒಂದೆಂಬ ಪರಿಗಣನೆ.

ಅಸಾವಾದಿತ್ಯ [ಅಸಾವಾದಿತ್ಯಃ(೫೩)ಏಕವಿಗ್ಂಶ] ಏಕವಿಗ್ಂಶ ಏತಾವಂತೋ ವೈ ದೇವಲೋಕಾಸ್ತೇಭ್ಯ ಏವ ಭ್ರಾತೃವ್ಯಮಂತರೇತಿ ನಿರ್ಬಾಧೈರ್ವೈ ದೇವಾ ಅಸುರಾನ್ನಿರ್ಬಾಧೇಽಕುರ್ವತ ತನ್ನಿರ್ಬಾಧಾನಾನ್ನಿರ್ಬಾಧತ್ವಂ ನಿರ್ಬಾಧೀ ಭವತಿ ಭ್ರಾತೃವ್ಯಾನೇವ ನಿರ್ಬಾಧೇ ಕುರುತೇ

---

ಅಸೌ । ಆದಿತ್ಯಃ । (೫೩) । ಏಕವಿಗ್ಂಶ ಇತ್ಯೇಕ–ವಿಗ್ಂಶಃ । ಏತಾವಂತಃ । ವೈ । ದೇವಲೋಕಾ ಇತಿ ದೇವ–ಲೋಕಾಃ । ತೇಭ್ಯಃ । ಏವ । ಭ್ರಾತೃವ್ಯಮ್ । ಅಂತಃ । ಏತಿ । ನಿರ್ಬಾಧೈರಿತಿ ನಿಃ–ಬಾಧೈಃ । ವೈ । ದೇವಾಃ । ಅಸುರಾನ್ । ನಿರ್ಬಾಧ ಇತಿ ನಿಃ–ಬಾಧೇ । ಅಕುರ್ವತ । ತತ್ । ನಿರ್ಬಾಧಾನಾಮಿತಿ ನಿಃ–ಬಾಧಾನಾಮ್ । ನಿರ್ಬಾಧತ್ವಮಿತಿ ನಿರ್ಬಾಧ–ತ್ವಮ್ । ನಿರ್ಬಾಧೀತಿ ನಿಃ–ಬಾಧೀ । ಭವತಿ । ಭ್ರಾತೃವ್ಯಾನ್ । ಏವ । ನಿರ್ಬಾಧ ಇತಿ ನಿಃ–ಬಾಧೇ । ಕುರುತೇ ।

---

| ಬ್ರಾಹ್ಮಣಭಾಗ | ವಿವರಣೆ |
| --- | --- |
| **ಅಸೌ ಆದಿತ್ಯಃ ಏಕವಿಗ್ಂಶಃ** | ಪ್ರತ್ಯಕ್ಷನಾಗಿರುವ ಈ ಆದಿತ್ಯನು ಇಪ್ಪತ್ತೊಂದನೆಯವನು. |
| **ದೇವಲೋಕಾಃ ಏತಾವಂತಃ ವೈ** | ಇಷ್ಟು ದೇವತೆಗಳ ಭೋಗಸಾಧನಗಳಾಗಿವೆ. |
| **ತೇಭ್ಯಃ ಏವ ಭ್ರಾತೃವ್ಯಮ್ ಅಂತರೇತಿ** | ಇವುಗಳಿಂದ ಶತ್ರುವನ್ನು ಅಧ್ವರ್ಯುವು ಒಳಗಿಡುತ್ತಾನೆ/ದೊರೆಯದಂತೆ ಮಾಡುತ್ತಾನೆ. |
| **ದೇವಾಃ ನಿರ್ಬಾಧೈಃ ವೈ** | ದೇವತೆಗಳು ನಿರ್ಬಾಧಗಳಿಂದ |
| **ಅಸುರಾನ್ ನಿರ್ಬಾಧೇ ಅಕುರ್ವತ** | ರಾಕ್ಷಸರನ್ನು ಬಾಧೆಯುಳ್ಳವರನ್ನಾಗಿ ಮಾಡಿದರು. |
| **ತತ್ ನಿರ್ಬಾಧಾನಾಮ್** | ಹೀಗೆ ಶತ್ರುವನ್ನು ಬಾಧಿಸುವುದರಿಂದ ಈ ನಿರ್ಬಾಧ |
| **ನಿರ್ಬಾಧತ್ವಮ್** | ಗಳ ನಿರ್ಬಾಧಶಬ್ದವು ಅನ್ವರ್ಥವಾಗಿದೆ. |
| **ನಿರ್ಬಾಧೀ ಭವತಿ** | ಯಜಮಾನನು ಬಾಧೆರಹಿತನಾಗುತ್ತಾನೆ. |
| **ಭ್ರಾತೃವ್ಯಾನ್ ಏವ ನಿರ್ಬಾಧೇ ಕುರುತೇ** | ಶತ್ರುಗಳನ್ನು ನಿಶ್ಚಯವಾಗಿಯೂ ತೊಂದರೆಯಲ್ಲಿ ಬೀಳುವಂತೆ ಮಾಡುತ್ತಾನೆ. |

ಸಾವಿತ್ರಿಯಾ ಪ್ರತಿ ಮುಂಚತೇ ಪ್ರಸೂತ್ಯೈಽ

ನಕ್ತೋಷಾಸೇತ್ಯುತ್ತರಯಾಽಹೋರಾತ್ರಾಭ್ಯಾಮೇವೈನಮುದ್ಯಚ್ಛತೇ ದೇವಾ

ಅಗ್ನಿಂ ಧಾರಯನ್ದ್ರವಿಣೋದಾ ಇತ್ಯಾಹ

---

ಸಾವಿತ್ರಿಯಾ । ಪ್ರತೀತಿ । ಮುಂಚತೇ । ಪ್ರಸೂತ್ಯಾ ಇತಿ ಪ್ರ–ಸೂತ್ಯೈಽ । ನಕ್ತೋಷಾಸಾ । ಇತಿ । ಉತ್ತರಯೇತ್ಯುತ್–ತರಯಾ । ಅಹೋರಾತ್ರಾಭ್ಯಾಮಿತ್ಯಹಃ–ರಾತ್ರಾಭ್ಯಾಮ್ । ಏವ । ಏನಮ್ । ಉದಿತಿ । ಯಚ್ಛತೇ । ದೇವಾಃ । ಅಗ್ನಿಮ್ । ಧಾರಯನ್ನ್ । ದ್ರವಿಣೋದಾ ಇತಿ ದ್ರವಿಣಃ–ದಾಃ । ಇತಿ । ಆಹ ।

---

| ಬ್ರಾಹ್ಮಣಭಾಗ | ವಿವರಣೆ |
|---|---|

**ಉಖೆಯ ಶಿಕ್ಯಪಾಶ [ನೆಲುವಿನ ಹಗ್ಗ]ವನ್ನು ಧರಿಸಲು**

| | |
|---|---|
| **ಸಾವಿತ್ರಿಯಾ ಪ್ರತಿ ಮುಂಚತೇ ಪ್ರಸೂತ್ಯೈಽ** | ಸವಿತೃದೇವನ ಅನುಮತಿಗಾಗಿ **'ಸವಿತಾ ವರೇಣ್ಯಃ'** ಎಂಬ ಪದಗಳುಳ್ಳ ಸಾವಿತ್ರೀದೇವತಾಕವಾದ ಋಕ್ಕಿನಿಂದ ನೆಲುವಿನ ಹಗ್ಗವನ್ನು ಯಜಮಾನನು ಧರಿಸಬೇಕು. |

**ಕೃಷ್ಣಾಜಿನಧಾರಣವಿಧಿ; 'ದೇವಾ ಅಗ್ನಿಮ್' ಎಂಬ ಮಂತ್ರಭಾಗದ ವಿವರಣೆ**

| | |
|---|---|
| **ನಕ್ತೋಷಾಸಾ ಇತಿ** **ಉತ್ತರಯಾ** ಪ್ರತಿಮುಂಚತೇ | **'ನಕ್ತೋಷಾಸಾ'** ಎಂದು ಮುಂದಿನ ಮಂತ್ರದಿಂದ ಯಜಮಾನನು ಕೃಷ್ಣಾಜಿನವನ್ನು ಧರಿಸಬೇಕು. |
| **ಏನಮ್ ಅಹೋರಾತ್ರಾಭ್ಯಾಮ್ ಏವ ಉದ್ಯಚ್ಛತೇ** | (ಅಹೋರಾತ್ರಿಗಳನ್ನು ಸ್ತುತಿಸುವ ಮಂತ್ರದಿಂದ) ಈ ಅಗ್ನಿಯನ್ನು ಹಗಲು–ರಾತ್ರಿಗಳಿಂದ ಮೇಲೆತ್ತಿ ಮೇಲೆ ಧರಿಸಿದವನಾಗುತ್ತಾನೆ. |
| **ದೇವಾಃ ಅಗ್ನಿಮ್ ಧಾರಯನ್ ದ್ರವಿಣೋದಾಃ ಇತಿ ಆಹ** | ಈ ಮಂತ್ರದ **'ದೇವಾ...ದ್ರವಿಣೋದಾಃ'** ಎಂಬ ಭಾಗವು ಯಾಗಮೂಲವಾದ ಧನವನ್ನು ಕೊಡುವ ಪ್ರಾಣಗಳು ಅಗ್ನಿಯನ್ನು ಧರಿಸಿರುತ್ತವೆ. ಎಂದು ಹೇಳುತ್ತದೆ. |

---

ಸಮಿದಾಧಾನವನ್ನು ಮಾಡಬೇಕು. ಅಲ್ಲದೆ ಅಶ್ವತ್ಥಸಮಿತ್ತನ್ನೂ, ವೈಕಂಕತ (ಹುಳಿಬೇಲ)ದ ಸಮಿತ್ತನ್ನೂ ಆಧಾನ

ಪ್ರಾಣಾ ವೈ ದೇವಾ ದ್ರವಿಣೋದಾ ಅಹೋರಾತ್ರಾಭ್ಯಾಮೇವೈನಮುದ್ಯತ್ಯ [(೫೪)]ಪ್ರಾಣೈರ್ದಾಧಾರಾಸೀನಃ ಪ್ರತಿಮುಂಚತೇ ತಸ್ಮಾದಾಸೀನಾಃ ಪ್ರಜಾಃ ಪ್ರಜಾಯಂತೇ ಕೃಷ್ಣಾಜಿನಮುತ್ತರಂ ತೇಜೋ ವೈ ಹಿರಣ್ಯಂ ಬ್ರಹ್ಮ ಕೃಷ್ಣಾಜಿನಂ

---

ಪ್ರಾಣಾ ಇತಿ ಪ್ರ–ಅನಾಃ । ವೈ । ದೇವಾಃ । ದ್ರವಿಣೋದಾ ಇತಿ ದ್ರವಿಣಃ–ದಾಃ । ಅಹೋರಾತ್ರಾಭ್ಯಾಮಿತ್ಯಹಃ–ರಾತ್ರಾಭ್ಯಾಮ್ । ಏವ । ಏನಮ್ । ಉದ್ಯತ್ಯೇತ್ಯುತ್–ಯತ್ಯ । (೫೪) । ಪ್ರಾಣೈರಿತಿ ಪ್ರ–ಅನೈಃ । ದಾಧಾರ । ಆಸೀನಃ । ಪ್ರತೀತಿ । ಮುಂಚತೇ । ತಸ್ಮಾತ್ । ಆಸೀನಾಃ । ಪ್ರಜಾ ಇತಿ ಪ್ರ–ಜಾಃ । ಪ್ರೇತಿ । ಜಾಯಂತೇ । ಕೃಷ್ಣಾಜಿನಮಿತಿ ಕೃಷ್ಣ–ಅಜಿನಮ್ । ಉತ್ತರಮಿತ್ಯುತ್–ತರಮ್ । ತೇಜಃ । ವೈ । ಹಿರಣ್ಯಮ್ । ಬ್ರಹ್ಮ । ಕೃಷ್ಣಾಜಿನಮಿತಿ ಕೃಷ್ಣ–ಅಜಿನಮ್ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ದ್ರವಿಣೋದಾಃ ಪ್ರಾಣಾಃ ವೈ ದೇವಾಃ** | ವಿಹರಿಸುವ ಪ್ರಾಣಗಳೇ ದೇವಪದವಾಚ್ಯವಾಗಿವೆ. |
| **ಏನಮ್ ಅಹೋರಾತ್ರಾಭ್ಯಾಮ್ ಏವ ಉದ್ಯತ್ಯ ಪ್ರಾಣೈಃ ದಾಧಾರ** | ಈ ಮಂತ್ರಪಾಠದಿಂದ ಅಧ್ವರ್ಯುವು ಅಹೋರಾತ್ರಿಗಳಿಂದ ಅಗ್ನಿಯನ್ನು ಮೇಲಕ್ಕೆ ಎತ್ತಿ ಪ್ರಾಣಗಳಿಂದ ಧರಿಸಿದವನಾಗುತ್ತಾನೆ. |
| **ಆಸೀನಃ ಪ್ರತಿಮುಂಚತೇ** | ಯಜಮಾನನು ಕುಳಿತುಕೊಂಡು ಹಿರಣ್ಯ–ಶಿಕ್ಯಪಾಶ–ಕೃಷ್ಣಾಜಿನಗಳನ್ನು ಧರಿಸಬೇಕು. |
| **ತಸ್ಮಾತ್ ಆಸೀನಾಃ ಪ್ರಜಾಃ ಪ್ರ ಜಾಯಂತೇ** | ಆದುದರಿಂದಲೇ ಪ್ರಜೆಗಳು ಕುಳಿತವರಾಗಿಯೇ ಜನಿಸುತ್ತಾರೆ. |
| **ಕೃಷ್ಣಾಜಿನಮ್ ಉತ್ತರಮ್** | ಕೃಷ್ಣಾಜಿನವನ್ನು ಮೇಲೆ ಧರಿಸಬೇಕು. |
| **ಹಿರಣ್ಯಮ್ ತೇಜಃ ವೈ** | ಹಿರಣ್ಯವು ತೇಜೋರೂಪವಾಗಿದೆ. |
| **ಕೃಷ್ಣಾಜಿನಮ್ ಬ್ರಹ್ಮ** | ಕೃಷ್ಣಾಜಿನವು ಬ್ರಹ್ಮಸ್ವರೂಪವಾದುದು/ವೇದಸ್ವರೂಪವಾದುದು. |

---

ಮಾಡಬೇಕು. ಈ ಆಧಾನಗಳ ಪ್ರಾಶಸ್ತ್ಯವನ್ನು ಹೇಳಿದೆ.

ಆಧಾನಬ್ರಾಹ್ಮಣದಲ್ಲಿ **'ತಗ್ಂ ಶಮ್ಯಾऽಶಮಯತ್'** ಎಂದು ಶಮಿಯು ಶಾಂತಿಗೆ ಕಾರಣವೆಂದು ಹೇಳಿದೆ. ರಾಕ್ಷೋಘ್ನಮಂತ್ರಗಳಲ್ಲಿ ಕಡೆಯ ಎರಡು ಮಂತ್ರಗಳನ್ನು ಯಜಮಾನನಿಂದ ಹೇಳಿಸಬೇಕು.

ತೇಜಸಾ ಚೈವೈನಂ ಬ್ರಹ್ಮಣಾ ಚೋಭಯತಃ ಪರಿ ಗೃಹ್ಣಾತಿ ಷಡುದ್ಯಾಮಗ್ಂ

ಶಿಕ್ಯಂ ಭವತಿ ಷಡ್ವಾ ಋತವ ಋತುಭಿರೇವೈನಮುದ್ಯಚ್ಛತೇ

ಯದ್ದ್ವಾದಶೋದ್ಯಾಮಗ್ಂ ಸಂವತ್ಸರೇಣೈವ

---

ತೇಜಸಾ । ಚ । ಏವ । ಏನಮ್ । ಬ್ರಹ್ಮಣಾ । ಚ । ಉಭಯತಃ । ಪರೀತಿ । ಗೃಹ್ಣಾತಿ । ಷಡುದ್ಯಾಮಮಿತಿ ಷಟ್–ಉದ್ಯಾಮಮ್ । ಶಿಕ್ಯಮ್ । ಭವತಿ । ಷಟ್ । ವೈ । ಋತವಃ । ಋತುಭಿರಿತ್ಯೃತು–ಭಿಃ । ಏವ । ಏನಮ್ । ಉದಿತಿ । ಯಚ್ಛತೇ । ಯತ್ । ದ್ವಾದಶೋದ್ಯಾಮಮಿತಿ ದ್ವಾದಶ–ಉದ್ಯಾಮಮ್ । ಸಂವತ್ಸರೇಣೇತಿ ಸಮ್–ವತ್ಸರೇಣ । ಏವ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಏನಮ್ ತೇಜಸಾ ಚ ಬ್ರಹ್ಮಣಾ ಚ ಏವ ಉಭಯತಃ ಪರಿಗೃಹ್ಣಾತಿ** | ಈ ಶಿಕ್ಯಪಾಶವನ್ನು ತೇಜಸ್ಸಿನಿಂದಲೂ, ಬ್ರಹ್ಮ ವರ್ಚಸದಿಂದಲೂ ಕೆಳಗೆ ಮತ್ತು ಮೇಲೆ ಯಜಮಾನನು ಧರಿಸಿದವನಾಗುತ್ತಾನೆ. |

**ಶಿಕ್ಯಪಾಶದ ಹುರಿಗಳ ಸಂಖ್ಯಾವಿಧಿ; ಅರ್ಥವಾದ**

| | |
|---|---|
| **ಶಿಕ್ಯಮ್ ಷಡುದ್ಯಾಮಮ್ ಭವತಿ** | ಶಿಕ್ಯವು (ನೆಲವು) ಆರು ಹುರಿಗಳಿಂದ ಕೂಡಿರಬೇಕು. |
| **ಋತವಃ ಷಟ್ ವೈ** | ಋತುಗಳು ಆರು. |
| **ಏನಮ್ ಋತುಭಿಃ ಏವ ಉದ್ಯಚ್ಛತೇ** | ಋತುಗಳಿಂದಲೇ ಯಜಮಾನನು ಈ ಶಿಕ್ಯವನ್ನು ಮೇಲೆತ್ತಿದವನಾಗುತ್ತಾನೆ. |
| **ಯತ್ ದ್ವಾದಶೋದ್ಯಾಮಮ್** ಶಿಕ್ಯಂ ಭವತಿ | ಶಿಕ್ಯವು ಹನ್ನೆರಡು ಹುರಿಗಳಿಂದ ಕೂಡಿರುತ್ತದೆ. (ಪಕ್ಷಾಂತರ) |
| **ಸಂವತ್ಸರೇಣ ಏವ** ಏನಮ್ ಉದ್ಯಚ್ಛತೇ | ಇದರಿಂದ ಸಂವತ್ಸರಾಭಿಮಾನಿದೇವತೆಯಿಂದಲೇ ಶಿಕ್ಯವನ್ನು ಯಜಮಾನನು ಮೇಲೆತ್ತಿದವನಾಗುತ್ತಾನೆ. |

---

ಬ್ರಹ್ಮ–ಕ್ಷತ್ರಗಳು ಪರಸ್ಪರೋಪಕಾರಕಗಳೆಂದು ತಾತ್ಪರ್ಯ. ಇಬ್ಬರೂ ಉತ್ತಮರಾಗುತ್ತಾರೆ.

ಹಿರಣ್ಯದ ಹಾರವನ್ನು ಧರಿಸುವುದರಿಂದ ಮೃತ್ಯುರೂಪಿಯಾದ ಅಗ್ನಿಗೂ ಯಜಮಾನನಿಗೂ ಮಧ್ಯದಲ್ಲಿ ತಡೆಯನ್ನುಂಟುಮಾಡಿದಂತಾಗುತ್ತದೆ.

**'ನಿಶ್ಚಯೇನ ಬಾಧ್ಯತೇ ಭ್ರಾತೃವ್ಯಃ ಏಭಿಃ ಇತಿ ನಿರ್ಬಾಧಾಃ'** ಇವುಗಳಿಂದ ಶತ್ರುವಿನ ಬಾಧೆಯು ನಿಶ್ಚಯವಾಗಿಯೂ ಆಗುತ್ತದೆ. ಆದುದರಿಂದ ಅವುಗಳನ್ನು **'ನಿರ್ಬಾಧ'** ಎಂದು ಹೇಳುವರು. ಇಂತಹ ಇಪ್ಪತ್ತೊಂದು ನಿರ್ಬಾಧೆಗಳು

ಮೌಂಜಂ ಭವತ್ಯೂರ್ಗ್ವೈ ಮುಂಜಾ ಊರ್ಜೈವೈನಗ್ಂ ಸಮರ್ಧಯತಿ ಸುಪರ್ಣೋಽಸಿ ಗರುತ್ಮಾನಿತ್ಯವೇಕ್ಷತೇ ರೂಪಮೇವಾಸ್ಯೈತನ್ಮಹಿಮಾನಂ ವ್ಯಾಚಷ್ಟೇ

ಮೌಂಜಮ್ । ಭವತಿ । ಊರ್ಕ್ । ವೈ । ಮುಂಜಾಃ । ಊರ್ಜಾ । ಏವ । ಏನಮ್ । ಸಮಿತಿ । ಅರ್ಧಯತಿ । ಸುಪರ್ಣ ಇತಿ ಸು-ಪರ್ಣಃ । ಅಸಿ । ಗರುತ್ಮಾನ್ । ಇತಿ । ಅವೇತಿ । ಈಕ್ಷತೇ । ರೂಪಮ್ । ಏವ । ಅಸ್ಯ । ಏತತ್ । ಮಹಿಮಾನಮ್ । ವ್ಯಾಚಷ್ಟ ಇತಿ ವಿ-ಆಚಷ್ಟೇ ।

| ಬ್ರಾಹ್ಮಣಭಾಗ | ವಿವರಣೆ |
|---|---|
| **ಉದ್ಯಾಮದ ಪ್ರಕೃತಿದ್ರವ್ಯವಿಧಿ; ಅರ್ಥವಾದ** | |
| ಶಿಕ್ಯಂ **ಮೌಂಜಮ್ ಭವತಿ** | ಶಿಕ್ಯದ ಹಗ್ಗವನ್ನು ನೊಜೆ ಹುಲ್ಲುಗಳಿಂದ ಮಾಡಬೇಕು. |
| **ಊರ್ಕ್ ವೈ ಮುಂಜಾಃ** | ನೊಜೆಹುಲ್ಲುಗಳು ಬಲಯುಕ್ತ/ದೃಢವಾಗಿವೆ. |
| **ಏನಮ್ ಊರ್ಜಾ ಏವ ಸಮರ್ಧಯತಿ** | ಈ ಶಿಕ್ಯವನ್ನು ಬಲದಿಂದ ಕೂಡಿದ ನೊಜೆಗಳಿಂದ ಸಮೃದ್ಧವನ್ನಾಗಿ ಮಾಡುತ್ತಾನೆ. |
| **ಶಿಕ್ಯಾಗ್ನಿ/ಉಖ್ಯಾಗ್ನಿಯ ದರ್ಶನವಿಧಿ; ಅರ್ಥವಾದ** | |
| **ಸುಪರ್ಣಃ ಅಸಿ ಗರುತ್ಮಾನ್ ಇತಿ ಅವೇಕ್ಷತೇ** | 'ಹೇ! ಉಖ್ಯಾಗ್ನಿಯೇ! ನೀನು ರೆಕ್ಕೆಗಳುಳ್ಳ ಗರುಡನಾಗಿರುತ್ತೀಯೆ' ಎಂದು ಉಖ್ಯಾಗ್ನಿಯನ್ನು ನೋಡಬೇಕು. |
| **ಅಸ್ಯ ರೂಪಮ್ ಏವ ಏತತ್ ಮಹಿಮಾನಮ್ ವ್ಯಾಚಷ್ಟೇ** | ಈ ಅಗ್ನಿಯ ರೂಪವೇ ಇದರ ಮಹಿಮೆಯನ್ನು ಹೇಳುತ್ತದೆ. (ಅದನ್ನು ಹೇಳಬೇಕಾಗಿಯೇ ಇಲ್ಲ) |

ಆ ಸುವರ್ಣಹಾರದಲ್ಲಿ ಇರಬೇಕು.

ಅಹೋರಾತ್ರಿಗಳನ್ನು ಸ್ತುತಿಸುವ ಮಂತ್ರದಿಂದ ಯಜಮಾನನು ಕೃಷ್ಣಾಜಿನವನ್ನು ಧರಿಸುತ್ತಾನೆ. **'ನಕ್ತೋಷಾಸಾ'** ಎಂಬ ಈ ಮಂತ್ರಪಾಠದಿಂದ ಅಧ್ವರ್ಯುವು ಅಹೋರಾತ್ರಿಗಳಿಂದ ಅಗ್ನಿಯನ್ನು ಮೇಲೆತ್ತಿ ಪ್ರಾಣಗಳಿಂದ ಧರಿಸಿದವನಾಗುತ್ತಾನೆ. ಕೃಷ್ಣಾಜಿನವನ್ನು ಧರಿಸುವುದನ್ನು ರಾತ್ರಿ-ಹಗಲುಗಳು ಅಗ್ನಿರೂಪವಾದ ಶಿಶುವನ್ನು ಧರಿಸಿದಂತಹವನಾಗುತ್ತಾನೆಂದು ರೂಪಿಸಲಾಗಿದೆ.

ದಿವಂ ಗಚ್ಛ ಸುವಃ ಪತೇತ್ಯಾಹ ಸುವರ್ಗಮೇವೈನಂ

ಲೋಕಂ ಗಮಯತಿ ॥ ೫೫–10 ॥

[ರಕ್ಷಾಗ್ಂಸ್ಯೌದುಂಬರೀ ಆದಿತ್ಯ ಉದ್ಯತ್ಯ ಸಂ ಚತುರ್ವಿಗ್ಂಶತಿಶ್ಚ ॥]

---

ದಿವಮ್ । ಗಚ್ಛ । ಸುವಃ । ಪತ । ಇತಿ । ಆಹ । ಸುವರ್ಗಮಿತಿ ಸುವಃ–ಗಮ್ । ಏವ । ಏನಮ್ । ಲೋಕಮ್ ।

ಗಮಯತಿ ॥ ೫೫ ॥

---

ಬ್ರಾಹ್ಮಣಭಾಗ — ವಿವರಣೆ

**ಉಖ್ಯಾಗ್ನಿಯ ದರ್ಶನವಿಧಿ; ಅರ್ಥವಾದ**

| ಬ್ರಾಹ್ಮಣಭಾಗ | ವಿವರಣೆ |
| --- | --- |
| **ದಿವಮ್ ಗಚ್ಛ ಸುವಃ ಪತ ಇತಿ ಆಹ** | ಈ ಮಂತ್ರವು 'ಹೇ! ಉಖ್ಯಾಗ್ನಿಯೇ! ನೀನು ಅಂತರಿಕ್ಷಕ್ಕೆ (ಗರುಡನಂತೆ) ಹಾರು. ಸ್ವರ್ಗಲೋಕವನ್ನು ಹೊಂದು' ಎಂದು ಹೇಳುತ್ತದೆ. |
| **ಏನಮ್ ಸುವರ್ಗಮ್ ಲೋಕಮ್ ಏವ ಗಮಯತಿ** | ಈ ಮಂತ್ರದಿಂದ ಅಗ್ನಿಯು ಯಜಮಾನನನ್ನು ದೇವಲೋಕಕ್ಕೇ ಕೊಂಡೊಯ್ಯುತ್ತದೆ. |

## || ಏಕಾದಶೋಽನುವಾಕಃ ||

ಸಮಿದ್ಧೋ ಅಂಜನ್ಕೃದರಂ ಮತೀನಾಂ ಘೃತಮಗ್ನೇ ಮಧುಮತ್ಪಿನ್ವಮಾನಃ ।
ವಾಜೀ ವಹನ್ವಾಜಿನಂ ಜಾತವೇದೋ ದೇವಾನಾಂ ವಕ್ಷಿ ಪ್ರಿಯಮಾ ಸಧಸ್ಥಮ್ ॥

ಸಮಿದ್ಧ ಇತಿ ಸಮ್-ಇದ್ಧಃ । ಅಂಜನ್ನ್ । ಕೃದರಮ್ । ಮತೀನಾಮ್ । ಘೃತಮ್ । ಅಗ್ನೇ । ಮಧುಮದಿತಿ ಮಧು-ಮತ್ । ಪಿನ್ವಮಾನಃ ॥ ವಾಜೀ । ವಹನ್ನ್ । ವಾಜಿನಮ್ । ಜಾತವೇದ ಇತಿ ಜಾತ-ವೇದಃ । ದೇವಾನಾಮ್ । ವಕ್ಷಿ । ಪ್ರಿಯಮ್ । ಐತಿ । ಸಧಸ್ಥಮಿತಿ ಸಧ-ಸ್ಥಮ್ ॥

ಹತ್ತನೆಯ ಅನುವಾಕದಲ್ಲಿ ಉಖ್ಯಾಗ್ನಿಧಾರಣವು ಹೇಳಲ್ಪಟ್ಟಿತು ಈ ಹನ್ನೊಂದನೆಯ ಅನುವಾಕದಲ್ಲಿ ಅಶ್ವಮೇಧಕ್ಕೆ ಸಂಬಂಧಿಸಿದ ಅಶ್ವದ ಆಪ್ರಿಯಗಳೆನಿಸಿಕೊಳ್ಳುವ ಪ್ರಯಾಜಯಾಜ್ಯೆಗಳು ಹೇಳಲ್ಪಟ್ಟಿವೆ. ಇವು ಸಾರಸ್ವತಪಾಠದಂತೆ ಆಗ್ನೇಯಕಾಂಡದ ಬ್ರಾಹ್ಮಣಗಳ ಮಧ್ಯದಲ್ಲಿ ಪಠಿತವಾಗಿವೆ. ಇವು ಅಶ್ವಮೇಧಕ್ಕೆ ಸಂಬಂಧಿಸಿದುದರಿಂದ ವೈಶ್ವದೇವ ಕಾಂಡಕ್ಕೆ ಸೇರಿವೆ. ಇವು ಹನ್ನೊಂದು. ಇವೆಲ್ಲವೂ ತ್ರಿಷ್ಟುಪ್ ಛಂದಸ್ಸಿನಲ್ಲಿವೆ. **'ಸಮಿದ್ಧೋ ಅಂಜನ್'** ಎಂದು ಇವು ಆರಂಭಗೊಳ್ಳುತ್ತವೆ.

| ಮಂತ್ರ | ವಿನಿಯೋಗ |
|---|---|
| ಸಮಿದ್ಧೋ...ಸಧಸ್ಥಮ್ ॥ | ಪ್ರಥಮಪ್ರಯಾಜದ ಮಂತ್ರ. |

**ಪದಶಃ ಅರ್ಥ:-** **ಅಗ್ನೇ**=ಹೇ! ಅಗ್ನಿಯೇ! **ಜಾತವೇದಃ**=ಹುಟ್ಟಿದುದೆಲ್ಲವನ್ನೂ ತಿಳಿದಿರುವವನೇ! [ನೀನು] **ಸಮಿದ್ಧಃ**=ಪ್ರಕಾಶಮಾನನಾಗಿರುವವನು. **ಮತೀನಾಮ್**=ಅಭಿಜ್ಞರಿಗೆ; **ಕೃದರಮ್**=ಪೆಟ್ಟಿಯಂತೆ /ಕಣಜದಂತೆ ಇರುವ; **ಮಧುಮತ್**=ಮಧುರವಾಗಿರುವ; **ಘೃತಮ್**=ತುಪ್ಪವನ್ನು/ಹವಿಸ್ಸನ್ನು; **ಪಿನ್ವಮಾನಃ**=ಕುಡಿಯುವವನು/ಸೇವಿಸುವವನು (ನೀನು); **ವಾಜೀ**=ಅನ್ನವುಳ್ಳವನು/ಯಾಗದ ಫಲವಾಗಿ ಅನ್ನವನ್ನು ಕೊಡುವವನು;/ಮಳೆಯನ್ನು ಸುರಿಸುವವನು. **ಅಂಜನ್**=ಪ್ರಕಾಶಗೊಳಿಸುವವನು; **ದೇವಾನಾಮ್**=ದೇವತೆಗಳಿಗೆ; **ಪ್ರಿಯಮ್**=ಪ್ರಿಯವಾದ; ಆ **ಸಧಸ್ಥಮ್**=ಇತರ ಪಶುಗಳೊಡನೆ ಇರುವ; **ವಾಜಿನಮ್**=ಅಶ್ವವನ್ನು; **ವಹನ್**=ಒಯ್ಯುತ್ತಾ; ದೇವಾನಾಮ್=ದೇವತೆಗಳಿಗೆ; **ವಕ್ಷಿ**=ಒದಗಿಸು.

ಘೃತೇನಾಂಜನ್ಥ್ಸಂ ಪಥೋ ದೇವಯಾನಾನ್ಪ್ರಜಾನನ್ವಾಜ್ಯಪ್ಯೇತು ದೇವಾನ್ ।
ಅನು ತ್ವಾ ಸಪ್ತೇ ಪ್ರದಿಶಸ್ಸಚಂತಾಗ್ಂ ಸ್ವಧಾಮಸ್ಮೈ ಯಜಮಾನಾಯ ಧೇಹಿ ॥
ಈಡ್ಯಶ್ಚಾಸಿ ವಂದ್ಯಶ್ಚ ವಾಜಿನ್ನಾಶುಶ್ಚಾಸಿ ಮೇಧ್ಯಶ್ಚ ಸಪ್ತೇ ।

---

ಘೃತೇನ । ಅಂಜನ್ನ್ । ಸಮಿತಿ । ಪಥಃ । ದೇವಯಾನಾನಿತಿ ದೇವ-ಯಾನಾನ್ । ಪ್ರಜಾನನ್ನಿತಿ ಪ್ರ-ಜಾನನ್ನ್ । ವಾಜೀ । ಅಪೀತಿ । ಏತು । ದೇವಾನ್ ॥ ಅನ್ವಿತಿ । ತ್ವಾ । ಸಪ್ತೇ । ಪ್ರದಿಶ ಇತಿ ಪ್ರ-ದಿಶಃ । ಸಚಂತಾಮ್ । ಸ್ವಧಾಮಿತಿ ಸ್ವ-ಧಾಮ್ । ಅಸ್ಮೈ । ಯಜಮಾನಾಯ । ಧೇಹಿ ॥ ಈಡ್ಯಃ । ಚ । ಅಸಿ । ವಂದ್ಯಃ । ಚ । ವಾಜಿನ್ನ್ । ಆಶುಃ । ಚ । ಅಸಿ । ಮೇಧ್ಯಃ । ಚ । ಸಪ್ತೇ ॥

---

| ಮಂತ್ರ | ವಿನಿಯೋಗ |
|---|---|
| ಘೃತೇನಾಂಜನ್ಥ್ಸಂ...ಧೇಹಿ ॥ | ಎರಡನೆಯ ಪ್ರಯಾಜದ ಮಂತ್ರ. |
| ಈಡ್ಯಶ್ಚಾಸಿ...ಜಾತವೇದಾಃ ॥ | ಮೂರನೆಯ ಪ್ರಯಾಜದ ಮಂತ್ರ. |

---

▲ **ವಾಜೀ**=ಈ ಅಶ್ವವು; **ಘೃತೇನ**=ತನ್ನ ಮೇಲಿರುವ ತುಪ್ಪದಿಂದ; **ಅಂಜನ್**=ಗುರುತುಪಡಿಸುತ್ತಾ; **ದೇವಯಾನಾನ್ ಪಥಃ**=ದೇವಲೋಕದ ಮಾರ್ಗಗಳನ್ನು; **ಸಮ್ ಪ್ರಜಾನನ್**=ಅನುಕೂಲವಾಗಿರುವಂತೆ ತಿಳಿಯಪಡಿಸುತ್ತಾ; **ದೇವಾನ್**=ದೇವತೆಗಳನ್ನು; **ಅಪ್ಯೇತು**=ಹೊಂದಲಿ. **ಸಪ್ತೇ**=ಹೇ! ಅಶ್ವವೇ! **ಪ್ರದಿಶಃ**=ಎಲ್ಲ ಶ್ರೇಷ್ಠವಾದ ದಿಕ್ಕುಗಳೂ; **ತ್ವಾ**=ನಿನ್ನನ್ನು; **ಅನು ಸಚಂತಾಮ್**=ಅನುಸರಿಸಿ ತೊಂದರೆಯಿಲ್ಲದೆ ತಿಳಿಯುವಂತಾಗಲಿ. **ಅಸ್ಮೈ ಯಜಮಾನಾಯ**=(ನೀನು) ಈ ಯಜಮಾನನಿಗೆ; **ಸ್ವಧಾಮ್**=ಅನ್ನವನ್ನು; **ಧೇಹಿ**=ಕೊಡು. ▲ **ವಾಜಿನ್**=ಅಶ್ವವೇ! **ಈಡ್ಯಃ ಚ ಅಸಿ**=ನೀನು ಸ್ತುತಿಸಬೇಕಾದವನಾಗಿರುವೆ. **ವಂದ್ಯಃ ಚ** ಅಸಿ=ನಮಸ್ಕರಿಸಬೇಕಾದವನೂ ಆಗಿರುವೆ. **ಸಪ್ತೇ**=ಅಶ್ವವೇ! **ಆಶುಃ ಚ ಅಸಿ**=ವೇಗಗಾಮಿಯೂ ಆಗಿರುವೆ. **ಮೇಧ್ಯಃ ಚ** ಅಸಿ=ಯಾಗಾರ್ಹನೂ ಆಗಿರುವೆ.

---

**ತಾತ್ಪರ್ಯ:-** ಅಗ್ನಿದೇವನು ಪ್ರಕಾಶಮಾನನು. ಬುದ್ಧಿವಂತರ/ಜ್ಞಾನಿಗಳ ಜ್ಞಾನವನ್ನು ಪ್ರಕಾಶಪಡಿಸುವವನು. ದೇವತೆಗಳಿಗೆ ಹವಿಸ್ಸನ್ನು ಒಯ್ಯುವವನು. ಇಂತಹ ಸರ್ವಜ್ಞನಾದ ಅಗ್ನಿದೇವನು ದೇವತೆಗಳಿಗೆ ಪ್ರಿಯವಾದ ಅಶ್ವವನ್ನು ದೇವಲೋಕಕ್ಕೆ ಒಯ್ಯಲಿ.

ಈ ಅಶ್ವವು ತನ್ನ ಮೇಲಿರುವ ತುಪ್ಪದ ಗುರುತಿನಿಂದ ದೇವಮಾರ್ಗಗಳನ್ನು ತಿಳಿಯಪಡಿಸುತ್ತಾ ದೇವತೆಗಳನ್ನು ಹೊಂದಲಿ. ಹೇ! ಅಶ್ವವೇ! ಎಲ್ಲ ದಿಕ್ಕುಗಳೂ ನಿನ್ನನ್ನು ಅನುಸರಿಸಿ ಸರಾಗವಾಗಿ ತಿಳಿಯುವಂತಾಗಲಿ.

ಅಗ್ನಿಷ್ಟ್ವಾ [ಅಗ್ನಿಷ್ಟ್ವಾ(೫೬)] ದೇವೈರ್ವಸುಭಿಸ್ಸಜೋಷಾಃ ಪ್ರೀತಂ ವಹ್ನಿಂ ವಹತು ಜಾತವೇದಾಃ ॥ ಸ್ತೀರ್ಣಂ ಬರ್ಹಿಸ್ಸುಷ್ಟರೀಮಾ ಜುಷಾಣೋರು ಪೃಥು ಪ್ರಥಮಾನಂ ಪೃಥಿವ್ಯಾಮ್ । ದೇವೇಭಿರ್ಯುಕ್ತಮದಿತಿಸ್ಸಜೋಷಾಸ್ಸ್ಯೋನಂ ಕೃಣ್ವಾನಾ ಸುವಿತೇ ದಧಾತು ॥

---

ಅಗ್ನಿಃ । ತ್ವಾ । (೫೬) । ದೇವೈಃ । ವಸುಭಿರಿತಿ ವಸು–ಭಿಃ । ಸಜೋಷಾ ಇತಿ ಸ–ಜೋಷಾಃ । ಪ್ರೀತಮ್ । ವಹ್ನಿಮ್ । ವಹತು । ಜಾತವೇದಾ ಇತಿ ಜಾತ–ವೇದಾಃ ॥ ಸ್ತೀರ್ಣಮ್ । ಬರ್ಹಿಃ । ಸುಷ್ಟರೀಮೇತಿ ಸು–ಸ್ತರೀಮ । ಜುಷಾಣಾ । ಉರು । ಪೃಥು । ಪ್ರಥಮಾನಮ್ । ಪೃಥಿವ್ಯಾಮ್ ॥ ದೇವೇಭಿಃ । ಯುಕ್ತಮ್ । ಅದಿತಿಃ । ಸಜೋಷಾ ಇತಿ ಸ–ಜೋಷಾಃ । ಸ್ಯೋನಮ್ । ಕೃಣ್ವಾನಾ । ಸುವಿತೇ । ದಧಾತು ॥

---

| ಮಂತ್ರ | ವಿನಿಯೋಗ |
|---|---|
| ಸ್ತೀರ್ಣಂ...ದಧಾತು ॥ | ಪ್ರಯಾಜಯಾಜ್ಯೆಯ ನಾಲ್ಕನೆಯ ಮಂತ್ರ. |

---

**ವಸುಭಿಃ**=ಜಗನ್ನಿವಾಸಕಾರಣರಾದ; **ದೇವೈಃ**=ದೇವತೆಗಳೊಡನೆ; **ಸಜೋಷಾಃ**=ಸಮಾನಪ್ರೀತಿಯುಳ್ಳವನಾದ; **ಜಾತವೇದಾಃ**=ಎಲ್ಲವನ್ನೂ ತಿಳಿದಿರುವ; **ಅಗ್ನಿಃ**=ಅಗ್ನಿದೇವನು; **ಪ್ರೀತಮ್**=ಪ್ರೀತಿಪಾತ್ರನಾದ; **ವಹ್ನಿಮ್**=ಎಲ್ಲವನ್ನೂ ಹೊರಬಲ್ಲ; **ತ್ವಾ**=ನಿನ್ನನ್ನು; **ವಹತು**=ದೇವಲೋಕಕ್ಕೆ ಒಯ್ಯಲಿ. 🔔 **ಸ್ತೀರ್ಣಮ್**=ಅಶ್ವದ ಸಂಜ್ಞಪನಕ್ಕಾಗಿ (ಅಶ್ವವನ್ನು ಮಲಗಿಸಲು) ಹರಡಿರುವ; **ಸುಷ್ಟರೀಮ**=ಚೆನ್ನಾಗಿ ಹರಡಲು ಯೋಗ್ಯವಾಗಿರುವ; **ಪೃಥಿವ್ಯಾಮ್**=ನೆಲದ ಮೇಲೆ; **ಉರು**=ತುಂಬಿಕೊಂಡಿರುವಂತೆಯೂ; **ಪೃಥು**=ವಿಸ್ತಾರವಾಗಿ ಇರುವಂತೆಯೂ; **ಪ್ರಥಮಾನಮ್**=ಹಾಸಿರುವ; **ಬರ್ಹಿಃ**=ದರ್ಭೆಯನ್ನು/ದರ್ಭೆಗಳನ್ನು; **ಜುಷಾಣಾ**=ಸೇವಿಸುತ್ತಿರುವ; **ದೇವೇಭಿಃ**=ಎಲ್ಲ ದೇವತೆಗಳೊಡನೆ; **ಸಜೋಷಾಃ**=ಸಮಾನವಾದ ಪ್ರೀತಿಯುಳ್ಳ; **ಅದಿತಿಃ**=ಭೂದೇವಿಯು/ದೇವಮಾತೆಯು; **ಯುಕ್ತಮ್**=ಯೋಗ್ಯವಾದ; **ಸ್ಯೋನಮ್ ಕೃಣ್ವಾನಾ**=ಸುಖಕರವಾದ ಸ್ಥಾನವನ್ನು ಮಾಡುವವಳಾಗಿ; **ಸುವಿತೇ ದಧಾತು**=ಸುಲಭವಾಗಿ ಹೊಂದಲು ಯೋಗ್ಯವಾದ ಸ್ಥಾನದಲ್ಲಿ ಈ ಅಶ್ವವನ್ನು ಸ್ಥಾಪಿಸಲಿ.

---

ನೀನು ಈ ಯಜಮಾನನಿಗೆ ಅನ್ನವನ್ನು ಕೊಡು.

ಏತಾ ಉ ವಸ್ಸುಭಗಾ ವಿಶ್ವರೂಪಾ ವಿಪಕ್ಷೋಭಿಶ್ಶ್ರಯಮಾಣಾ ಉದಾತ್ಯೈಃ ।
ಋಷ್ವಾಸ್ಸತೀಃ ಕವಷಶ್ಶುಂಭಮಾನಾ ದ್ವಾರೋ ದೇವೀಸ್ಸುಪ್ರಾಯಣಾ ಭವಂತು ॥
ಅಂತರಾ ಮಿತ್ರಾವರುಣಾ ಚರಂತೀ ಮುಖಂ ಯಜ್ಞಾನಾಮಭಿ ಸಂವಿದಾನೇ ।

ಏತಾಃ । ಉ । ವಃ । ಸುಭಗಾ ಇತಿ ಸು-ಭಗಾಃ । ವಿಶ್ವರೂಪಾ ಇತಿ ವಿಶ್ವ-ರೂಪಾಃ । ವೀತಿ । ಪಕ್ಷೋಭಿರಿತಿ ಪಕ್ಷಃ-ಭಿಃ । ಶ್ರಯಮಾಣಾಃ । ಉದಿತಿ । ಆತ್ಯೈಃ ॥ ಋಷ್ವಾಃ । ಸತೀಃ । ಕವಷಃ । ಶುಂಭಮಾನಾಃ । ದ್ವಾರಃ । ದೇವೀಃ । ಸುಪ್ರಾಯಣಾ ಇತಿ ಸು-ಪ್ರಾಯಣಾಃ । ಭವಂತು ॥ ಅಂತರಾ । ಮಿತ್ರಾವರುಣೇತಿ ಮಿತ್ರಾ-ವರುಣಾ । ಚರಂತೀ ಇತಿ । ಮುಖಮ್ । ಯಜ್ಞಾನಾಮ್ । ಅಭೀತಿ । ಸಂವಿದಾನೇ ಇತಿ ಸಮ್-ವಿದಾನೇ ॥

| ಮಂತ್ರ | ವಿನಿಯೋಗ |
|---|---|
| ಏತಾ ಉ ವಃ...ಭವಂತು ॥ | ಪ್ರಯಾಜಯಾಜ್ಯೆಯ ಐದನೆಯ ಮಂತ್ರ. |
| ಅಂತರಾ...ಸಾದಯಾಮಿ ॥ | ಪ್ರಯಾಜಯಾಜ್ಯೆಯ ಆರನೆಯ ಮಂತ್ರ. |

🔔 **ವಃ**=ಋತ್ವಿಗ್ಯಜಮಾನರಾದ ನಿಮಗೆ; **ಸುಭಗಾಃ**=ಸೌಭಾಗ್ಯವನ್ನುಂಟುಮಾಡುವ; **ವಿಶ್ವರೂಪಾಃ**=ಬಗೆಬಗೆಯ ರೂಪವುಳ್ಳ; **ಪಕ್ಷೋಭಿಃ**=ಗಮನಾಗಮನವಿಶೇಷಗಳಿಂದಲೂ; **ಆತ್ಯೈಃ**=ಬಗೆಬಗೆಯ ವಾಹನಗಳಿಂದಲೂ; **ವಿ ಉತ್ ಶ್ರಯಮಾಣಾಃ**=ಮೇಲಕ್ಕೆ ಒಯ್ಯುವಂತೆ ಇರುವ; **ಏತಾಃ ಉ ದ್ವಾರಃ ದೇವೀಃ**=ಈ ದ್ವಾರಾಭಿಮಾನಿದೇವತೆಗಳು; **ಋಷ್ವಾಃ ಸತೀಃ**=ಗಮನಾಗಮನಯೋಗ್ಯವಾಗಿರುವ; **ಕವಷಃ**=ಬಾಗಿಲುಗಳಿಂದ; **ಶುಂಭಮಾನಾಃ**=ಶೋಭಿಸುವವುಗಳಾಗಿರಲಿ. ದ್ವಾರಃ ದೇವೀಃ=ಈ ದ್ವಾರಾಭಿಮಾನಿ ದೇವತೆಗಳು; **ಸುಪ್ರಾಯಣಾಃ ಭವಂತು**=ಚೆನ್ನಾಗಿ/ತೊಂದರೆಯಿಲ್ಲದೆ ಈ ಕುದುರೆಯನ್ನು ಮುಟ್ಟಿಸುವಂತಹವುಗಳಾಗಿರಲಿ/ದ್ವಾರದೇವಿಗಳು ನಿಮಗೆ ಸುಖವಾಗಿ ಪ್ರಾಪ್ಯವಾಗಲಿ. 🔔 **ಮಿತ್ರಾವರುಣಾ**=ಮಿತ್ರಾವರುಣದೇವತಾರೂಪರಾದ; **ಅಂತರಾ**=ಬ್ರಹ್ಮಾಂಡಮಧ್ಯದಲ್ಲಿ; **ಚರಂತೀ**=ಸಂಚರಿಸುವ; **ಯಜ್ಞಾನಾಮ್ ಮುಖಮ್**=ಯಜ್ಞದ ಪ್ರಾರಂಭವನ್ನು ಕುರಿತು; **ಅಭಿ ಸಂವಿದಾನೇ**=ಪರಸ್ಪರವಾಗಿ ಐಕಮತ್ಯದಿಂದ ಪ್ರವರ್ತಿಸುವ;

ಅಶ್ವವೇ! ನೀನು ಸ್ತುತಿಸಲ್ಪಡತಕ್ಕವನಾಗಿರುವೆ. ನೀನು ನಮಸ್ಕರಿಸಲ್ಪಡಬೇಕಾದವನೂ ಹೌದು. ನೀನು ಶೀಘ್ರಗಾಮಿಯೂ ಆಗಿರುವೆ. ಯಾಗಕ್ಕೆ ಅರ್ಹನಾಗಿರುವೆ.

ಉಷಾಸಾ ವಾಗ್ಂ[ವಾಮ್(೫೭)ಸುಹಿರಣ್ಯೇ]ಸುಹಿರಣ್ಯೇ ಸುಶಿಲ್ಪೇ ಋತಸ್ಯ

ಯೋನಾವಿಹ ಸಾದಯಾಮಿ ॥ ಪ್ರಥಮಾ ವಾಗ್ಂ ಸರಥಿನಾ ಸುವರ್ಣಾ ದೇವೌ

ಪಶ್ಯಂತೌ ಭುವನಾನಿ ವಿಶ್ವಾ । ಅಪಿಪ್ರಯಂ ಚೋದನಾ ವಾಂ ಮಿಮಾನಾ

ಹೋತಾರಾ ಜ್ಯೋತಿಃ ಪ್ರದಿಶಾ ದಿಶಂತಾ ॥

---

ಉಷಾಸಾ । ವಾಮ್ । (೫೭) । ಸುಹಿರಣ್ಯೇ ಇತಿ ಸು-ಹಿರಣ್ಯೇ । ಸುಶಿಲ್ಪೇ ಇತಿ ಸು-ಶಿಲ್ಪೇ । ಋತಸ್ಯ । ಯೋನೌ । ಇಹ । ಸಾದಯಾಮಿ ॥ ಪ್ರಥಮಾ । ವಾಮ್ । ಸರಥಿನೇತಿ ಸ-ರಥಿನಾ । ಸುವರ್ಣೇತಿ ಸು-ವರ್ಣಾ । ದೇವೌ । ಪಶ್ಯಂತೌ । ಭುವನಾನಿ । ವಿಶ್ವಾ ॥ ಅಪಿಪ್ರಯಮ್ । ಚೋದನಾ । ವಾಮ್ । ಮಿಮಾನಾ । ಹೋತಾರಾ । ಜ್ಯೋತಿಃ । ಪ್ರದಿಶೇತಿ ಪ್ರ-ದಿಶಾ । ದಿಶಂತಾ ॥

---

| ಮಂತ್ರ | ವಿನಿಯೋಗ |
|---|---|
| ಪ್ರಥಮಾ ವಾಗ್ಂ...ದಿಶಂತಾ ॥ | ಪ್ರಯಾಜಯಾಜ್ಯೆಯ ಏಳನೆಯ ಮಂತ್ರ. |

---

**ಸುಹಿರಣ್ಯೇ**=ಸುವರ್ಣದಂತೆ ಪ್ರಕಾಶಿಸುವ ಸೂರ್ಯಚಂದ್ರರಿಂದ ಕೂಡಿರುವ; **ಸುಶಿಲ್ಪೇ**=ಸರ್ವ ವ್ಯವಹಾರಗಳಿಗೂ ನಿಮಿತ್ತವಾಗಿರುವ ನೈಪುಣ್ಯದಿಂದ ಕೂಡಿರುವ; **ಉಷಾಸಾ**=ಅಹೋರಾತ್ರದೇವತೆಗಳೇ! **ವಾಮ್**=ನಿಮ್ಮಿಬ್ಬರನ್ನು; **ಋತಸ್ಯ ಯೋನೌ**=ಯಜ್ಞಕಾರಣವಾದ; **ಇಹ**=ಈ ಅಶ್ವದಲ್ಲಿ; **ಸಾದಯಾಮಿ**=ಸ್ಥಾಪಿಸುತ್ತೇನೆ. 🔔 (ಯಜಮಾನದಂಪತಿಗಳೇ!) **ವಾಮ್**=ನಿಮಗಾಗಿ; **ಪ್ರಥಮಾ**=ಪ್ರಧಾನರಾದ; **ಸರಥಿನಾ**=ಸಮಾನವಾದ ರಥದಲ್ಲಿ ಕುಳಿತಿರುವ; **ಸುವರ್ಣಾ**=ಒಳ್ಳೆಯ ಬಣ್ಣವುಳ್ಳ; **ದೇವೌ**=ಪ್ರಕಾಶಮಾನರಾದ; **ವಿಶ್ವಾ**=ಎಲ್ಲ; **ಭುವನಾನಿ**=ಲೋಕಗಳನ್ನು; **ಪಶ್ಯಂತೌ**=ನೋಡುತ್ತಿರುವ; **ವಾಮ್**=ನಿಮಗೆ; **ಚೋದನಾ**=ವಿಹಿತವಾದ ಕರ್ಮಗಳನ್ನು; **ಮಿಮಾನಾ**=ಕ್ರಮಬದ್ಧವಾಗಿ ಮಾಡುವ; **ಪ್ರದಿಶಾ**=ಶ್ರೇಷ್ಠವಾದ ದಿಕ್ಕುಗಳಲ್ಲಿ; **ಜ್ಯೋತಿಃ**=ಪ್ರಕಾಶವನ್ನು; **ದಿಶಂತಾ**=ಪ್ರಸರಪಡಿಸುವ; **ಹೋತಾರಾ**=ದೇವತೆಗಳಲ್ಲಿ ಹೋತೃಗಳಾದವರನ್ನು; **ಅಪಿಪ್ರಯಮ್**=ಸಂತೋಷಪಡಿಸುವೆನು.

---

ಜಗತ್ತಿನ ನಿವಾಸಕ್ಕೆ/ಸ್ಥಿತಿಗೆ ಕಾರಣರಾದ ದೇವತೆಗಳೊಡನೆ ಸಮಾನವಾದ ಪ್ರೀತಿಯುಳ್ಳವನೂ, ಎಲ್ಲವನ್ನೂ ತಿಳಿದವನೂ ಆದ ಅಗ್ನಿದೇವನು ಪ್ರೀತಿಪಾತ್ರನೂ, ಎಲ್ಲವನ್ನೂ ಹೊರಬಲ್ಲವನೂ ಆದ ನಿನ್ನನ್ನು ದೇವಲೋಕಕ್ಕೆ ಒಯ್ಯಲಿ.

ಆದಿತ್ಯೈರ್ನೋ ಭಾರತೀ ವಷ್ಟು ಯಜ್ಞಗ್ಂ ಸರಸ್ವತೀ ಸಹ ರುದ್ರೈರ್ನ ಆವೀತ್ ।

ಇಡೋಪಹೂತಾ ವಸುಭಿಸ್ಸಜೋಷಾ ಯಜ್ಞಂ ನೋ ದೇವೀರಮೃತೇಷು ಧತ್ತ ॥

ತ್ವಷ್ಟಾ ವೀರಂ ದೇವಕಾಮಂ ಜಜಾನ ತ್ವಷ್ಟುರರ್ವಾ ಜಾಯತ ಆಶುರಶ್ವಃ[(೫೮)]

---

ಆದಿತ್ಯೈಃ । ನಃ । ಭಾರತೀ । ವಷ್ಟು । ಯಜ್ಞಮ್ । ಸರಸ್ವತೀ । ಸಹ । ರುದ್ರೈಃ । ನಃ । ಆವೀತ್ ॥ ಇಡಾ । ಉಪಹೂತೇತ್ಯುಪ-ಹೂತಾ । ವಸುಭಿರಿತಿ ವಸು-ಭಿಃ । ಸಜೋಷಾ ಇತಿ ಸ-ಜೋಷಾಃ । ಯಜ್ಞಮ್ । ನಃ । ದೇವೀಃ । ಅಮೃತೇಷು । ಧತ್ತ ॥ ತ್ವಷ್ಟಾ । ವೀರಮ್ । ದೇವಕಾಮಮಿತಿ ದೇವ-ಕಾಮಮ್ । ಜಜಾನ । ತ್ವಷ್ಟುಃ । ಅರ್ವಾ । ಜಾಯತೇ । ಆಶುಃ । ಅಶ್ವಃ ॥ (೫೮) ।

---

| ಮಂತ್ರ | ವಿನಿಯೋಗ |
|---|---|
| ಆದಿತ್ಯೈರ್ನೋ...ಧತ್ತ ॥ | ಪ್ರಯಾಜಯಾಜ್ಯೆಯ ಎಂಟನೆಯ ಮಂತ್ರ. |
| ತ್ವಷ್ಟಾ ವೀರಂ...ಹೋತಃ ॥ | ಪ್ರಯಾಜಯಾಜ್ಯೆಯ ಒಂಬತ್ತನೆಯ ಮಂತ್ರ. |

---

**ಭಾರತೀ**=ಭಾರತಿಯೆಂಬ ದೇವಿಯು; **ಆದಿತ್ಯೈಃ**=ದ್ವಾದಶಾದಿತ್ಯರೊಡನೆ; **ನಃ**=ನಮ್ಮ; **ಯಜ್ಞಮ್**=ಯಜ್ಞವನ್ನು; **ವಷ್ಟು**=ಅಪೇಕ್ಷಿಸಲಿ. **ಸರಸ್ವತೀ**=ಸರಸ್ವತೀದೇವಿಯು; **ರುದ್ರೈಃ ಸಹ**=ಏಕಾದಶರುದ್ರರೊಡನೆ; **ನಃ**=ನಮ್ಮನ್ನು; **ಆವೀತ್**=ರಕ್ಷಿಸಲಿ; **ಇಡಾ**=ಇಡಾದೇವಿಯು; **ವಸುಭಿಃ**=ಅಷ್ಟವಸುಗಳೊಡನೆ; **ಸಜೋಷಾಃ**=ಸಮಾನಪ್ರೀತಿಯುಳ್ಳವಳಾಗಿ; **ಉಪಹೂತಾ**=(ನಮ್ಮಿಂದ) ಆಹೂತಳಾಗಿ/ಅನುಜ್ಞಾತಳಾಗಿ; ಅವತು=(ನಮ್ಮನ್ನು) ಕಾಪಾಡಲಿ; **ದೇವೀಃ**=ಭಾರತ್ಯಾದಿ ದೇವಿಯರೇ!; **ನಃ ಯಜ್ಞಮ್**=ನಮ್ಮ ಯಜ್ಞವನ್ನು; **ಅಮೃತೇಷು**=ಮರಣರಹಿತರಾದ ದೇವತೆಗಳಲ್ಲಿ; **ಧತ್ತ**=ಸ್ಥಾಪಿಸಿರಿ. 🔔 **ತ್ವಷ್ಟಾ**=ತ್ವಷ್ಟೃದೇವನು; **ದೇವಕಾಮಮ್**=ದೇವತೆಗಳನ್ನು ಅಪೇಕ್ಷಿಸುವ; **ವೀರಮ್**=ಕರ್ಮಗಳಲ್ಲಿ ಸಮರ್ಥನಾದ ಪುತ್ರನನ್ನು; **ಜಜಾನ**=ಉತ್ಪಾದಿಸುತ್ತಾನೆ. **ತ್ವಷ್ಟುಃ**=ಆ ತ್ವಷ್ಟೃದೇವನಿಂದಲೇ; **ಅರ್ವಾ**=ಗಮನಕುಶಲವಾದ; **ಆಶುಃ**=ಶೀಘ್ರಗಾಮಿಯಾದ; **ಅಶ್ವಃ**=ಕುದುರೆಯೂ; **ಜಾಯತೇ**=ಉತ್ಪನ್ನವಾಗುತ್ತದೆ.

---

**'ಇಯಂ ವೈ ಅದಿತಿಃ'** ಎಂದು ಶ್ರುತಿಯಲ್ಲಿ ಭೂಮಿಯನ್ನು ಅದಿತಿ ಎನ್ನಲಾಗಿದೆ. ದೇವಮಾತೆಯೂ ಆಗಿರುವ ಅದಿತಿಯು ಅಶ್ವವನ್ನು ದರ್ಭೆಯ ಹಾಸಿನ ಭೂಮಿಯಲ್ಲಿ ಸ್ಥಾಪಿಸಲಿ.

ದ್ವಾರಪ್ರಯಾಜಯಾಜ್ಯೆಗಳ ಸ್ತುತಿಯಿದು. ದ್ವಾರಾಭಿಮಾನಿದೇವತೆಗಳು ತೊಂದರೆಯಿಲ್ಲದೆ ಈ ಕುದುರೆಯನ್ನು

**ತ್ವಷ್ಟೇದಂ ವಿಶ್ವಂ ಭುವನಂ ಜಜಾನ ಬಹೋಃ ಕರ್ತಾರಮಿಹ ಯಕ್ಷಿ ಹೋತಃ ॥**

**ಅಶ್ವೋ ಘೃತೇನ ತ್ಮನ್ಯಾ ಸಮಕ್ತ ಉಪ ದೇವಾಗ್ಂ ಋತುಶಃ ಪಾಥ ಏತು ।**

**ವನಸ್ಪತಿರ್ದೇವಲೋಕಂ ಪ್ರಜಾನನ್ನಗ್ನಿನಾ ಹವ್ಯಾ ಸ್ವದಿತಾನಿ ವಕ್ಷತ್ ॥**

---

**ತ್ವಷ್ಟಾ । ಇದಮ್ । ವಿಶ್ವಮ್ । ಭುವನಮ್ । ಜಜಾನ । ಬಹೋಃ । ಕರ್ತಾರಮ್ । ಇಹ । ಯಕ್ಷಿ । ಹೋತಃ ॥ ಅಶ್ವಃ । ಘೃತೇನ । ತ್ಮನ್ಯಾ । ಸಮಕ್ತ ಇತಿ ಸಮ್-ಅಕ್ತಃ । ಉಪೇತಿ । ದೇವಾನ್ । ಋತುಶ ಇತ್ಯೃತು-ಶಃ । ಪಾಥಃ । ಏತು ॥ ವನಸ್ಪತಿಃ । ದೇವಲೋಕಮಿತಿ ದೇವ-ಲೋಕಮ್ । ಪ್ರಜಾನನ್ನಿತಿ ಪ್ರ-ಜಾನನ್ । ಅಗ್ನಿನಾ । ಹವ್ಯಾ । ಸ್ವದಿತಾನಿ । ವಕ್ಷತ್ ॥**

---

| ಮಂತ್ರ | ವಿನಿಯೋಗ |
|---|---|
| ಅಶ್ವೋ ಘೃತೇನ...ವಕ್ಷತ್ ॥ | ಪ್ರಯಾಜಯಾಜ್ಯೆಯ ಹತ್ತನೆಯ ಮಂತ್ರ. |

---

**ತ್ವಷ್ಟಾ**=ತ್ವಷ್ಟನೇ; **ಇದಮ್**=ಈ; **ವಿಶ್ವಮ್**=ಸಮಸ್ತ; **ಭುವನಮ್**=ವಿಶ್ವವನ್ನೂ; **ಜಜಾನ**=ಉತ್ಪಾದಿಸುತ್ತಾನೆ; **ಹೋತಃ**=ಹೋತೃವೇ! **ಬಹೋಃ**=ಹೀಗೆ ಅಖಿಲಜಗತ್ತಿನ; **ಕರ್ತಾರಮ್**=ಉತ್ಪಾದಕನಾದ ತ್ವಷ್ಟೃದೇವನನ್ನು; **ಇಹ**=ಈ ಕರ್ಮದಲ್ಲಿ; **ಯಕ್ಷಿ**=ಉದ್ದೇಶಿಸಿ ಯಾಗ ಮಾಡು; (ಆತನು ಪ್ರಸನ್ನನಾಗಲಿ) ▲ **ಅಶ್ವಃ**=ಈ ಅಶ್ವವು; **ತ್ಮನ್ಯಾ**=ತಾನಾಗಿಯೇ; **ಘೃತೇನ**=ತುಪ್ಪದಿಂದ; **ಸಮಕ್ತಃ**=ತೋಯಿಸಲ್ಪಟ್ಟಂತೆ ರುಚಿಕರವಾಗಿ; **ದೇವಾನ್ ಉಪ**=ದೇವತೆಗಳ ಸಮೀಪವನ್ನು; **ಋತುಶಃ**=ಆಯಾ ಕಾಲಗಳಲ್ಲಿ; **ಪಾಥಃ**= ಅನ್ನವಾಗಿ; **ಏತು**=ಹೊಂದಲಿ; **ವನಸ್ಪತಿಃ**=ವನಸ್ಪತಿದೇವನು; **ದೇವಲೋಕಮ್**=ದೇವಲೋಕವನ್ನು; **ಪ್ರಜಾನನ್**=ಚೆನ್ನಾಗಿ ತಿಳಿದವನಾಗಿ; **ಅಗ್ನಿನಾ**=ಅಗ್ನಿಯೊಡನೆ; **ಸ್ವದಿತಾನಿ**=ರುಚಿಕರವಾದ; **ಹವ್ಯಾ**=ಹವ್ಯಗಳನ್ನು; **ವಕ್ಷತ್**=ದೇವತೆಗಳಿಗೆ ಹೊಂದಿಸಲಿ.

---

ಮುಟ್ಟಿಸಲಿ.

ಮಿತ್ರಾವರುಣದೇವತಾರೂಪರಾದ ಅಹೋರಾತ್ರದೇವತೆಗಳೇ! ನಾನಾಗುಣಗಳಿಂದ ಒಡಗೂಡಿರುವ ನಿಮ್ಮನ್ನು ಯಜ್ಞಕಾರಣವಾದ ಅಶ್ವದಲ್ಲಿ ಸ್ಥಾಪಿಸುತ್ತೇನೆ.

**'ಮೈತ್ರಂ ವಾ ಅಹಃ' 'ವಾರುಣೀ ರಾತ್ರಿಃ'** ಎಂಬುದಾಗಿ ಅಹೋರಾತ್ರಗಳು ಮಿತ್ರಾವರುಣದೇವತಾಕಗಳಾದುದರಿಂದ ಅಹೋರಾತ್ರಗಳನ್ನು ಮಿತ್ರಾವರುಣರೆಂದು ಹೇಳಲಾಗಿದೆ. **'ಉಷಾಸಾ'** ಎಂದು ಅಹೋರಾತ್ರಗಳನ್ನು ಉಪಲಕ್ಷಿಸಿ ಹೇಳಲಾಗಿದೆ.

ಪ್ರಜಾಪತೇಸ್ತಪಸಾ ವಾವೃಧಾನಸ್ಸದ್ಯೋ ಜಾತೋ ದಧಿಷೇ ಯಜ್ಞಮಗ್ನೇ ।
ಸ್ವಾಹಾಕೃತೇನ ಹವಿಷಾ ಪುರೋಗಾ ಯಾಹಿ ಸಾಧ್ಯಾ ಹವಿರದಂತು
ದೇವಾಃ ॥ ೫೯–11 ॥

[ಅಗ್ನಿಷ್ಟ್ವಾ ವಾಮಶ್ಯೋ ದ್ವಿಚತ್ವಾರಿಗ್ಂಶಚ್ಚ ॥]

**ಪ್ರಜಾಪತೇರಿತಿ ಪ್ರಜಾ–ಪತೇಃ । ತಪಸಾ । ವಾವೃಧಾನಃ । ಸದ್ಯಃ । ಜಾತಃ । ದಧಿಷೇ । ಯಜ್ಞಮ್ । ಅಗ್ನೇ । ಸ್ವಾಹಾಕೃತೇನೇತಿ ಸ್ವಾಹಾ–ಕೃತೇನ । ಹವಿಷಾ । ಪುರೋಗಾ ಇತಿ ಪುರಃ–ಗಾಃ । ಯಾಹಿ । ಸಾಧ್ಯಾ । ಹವಿಃ । ಅದಂತು । ದೇವಾಃ ॥ ೫೯ ॥**

| ಮಂತ್ರ | ವಿನಿಯೋಗ |
|---|---|
| ಪ್ರಜಾಪತೇಸ್ತಪಸಾ...ದೇವಾಃ ॥ | ಪ್ರಯಾಜಯಾಜ್ಯೆಯ ಹನ್ನೊಂದನೆಯ ಮಂತ್ರ. |

▲ **ಅಗ್ನೇ**=ಅಗ್ನಿದೇವನೇ! **ಪ್ರಜಾಪತೇಃ**=ಪರಮೇಶ್ವರನ; **ತಪಸಾ**=ಪರ್ಯಾಲೋಚನೆಯಿಂದ/ಯಜಮಾನನ ಈ ಕರ್ಮದಿಂದ; **ವಾವೃಧಾನಃ**=ವೃದ್ಧಿಹೊಂದುವವನಾಗಿ; **ಜಾತಃ ಸದ್ಯಃ**=ಹುಟ್ಟಿದೊಡನೆಯೇ; **ಯಜ್ಞಮ್**=ಯಜ್ಞವನ್ನು; **ದಧಿಷೇ**=ನಿರ್ವಹಿಸುತ್ತೀಯೆ. **ಪುರೋಗಾಃ**=ಮುಂದೆ ಹೋಗುವ ಅಗ್ನಿದೇವನೇ! **ಸ್ವಾಹಾಕೃತೇನ ಹವಿಷಾ**=ಯಜಮಾನನು ಸ್ವಾಹಾಕಾರದಿಂದ ಸಮರ್ಪಿಸಿದ ಹವಿಸ್ಸಿನೊಡನೆ; (ಸಾಧು=ತಡೆಯಿಲ್ಲದೆ) **ಯಾಹಿ**=ದೇವತೆಗಳನ್ನು ಹೊಂದು; **ಸಾಧ್ಯಾ**=ನಮಗೆ ಪೂಜನೀಯರಾದ **ದೇವಾಃ**=ದೇವತೆಗಳು (ದೇವಾಃ=ದೇವತೆಗಳು; ಸಾಧ್ಯಾ=ಯಜಮಾನನು ಸಿದ್ಧಪಡಿಸಿದ/ಸಾಧುವಾದ; ಹವಿಃ=ಹವಿಸ್ಸುಗಳನ್ನು;) **ಹವಿಃ**=ಹವಿಸ್ಸುಗಳನ್ನು; **ಅದಂತು**=ಆಸ್ವಾದಿಸಲಿ/ಅನುಭವಿಸಲಿ/ಪ್ರಸನ್ನರಾಗಲಿ.

ಹೇ! ಯಜಮಾನದಂಪತಿಗಳೇ! ನಿಮಗಾಗಿ ಅನೇಕಗುಣಗಳಿಂದ ಕೂಡಿರುವ ದೇವತೆಗಳಲ್ಲಿ ಹೋತೃಗಳಾದವರನ್ನು ಸಂತೋಷಪಡಿಸುವೆನು. ಇದು ಹೋತೃಪ್ರಯಾಜದೇವತೆಗಳ ಸ್ತುತಿ. **'ಪ್ರಥಮಾ' (ಪ್ರಥಮೌ) 'ಪ್ರದಿಶಾ' (ಪ್ರದಿಶ್ಚ)** ಮುಂತಾದವು ವೈದಿಕಪ್ರಯೋಗಗಳು.

ಇಡಾ–ಸರಸ್ವತೀ–ಭಾರತೀ ದೇವಿಯರು ವಸು–ರುದ್ರ–ಆದಿತ್ಯರೊಡಗೂಡಿ ನಮ್ಮನ್ನು ಕಾಪಾಡಲಿ. ಅವರು ನಮ್ಮ ಯಜ್ಞವನ್ನು ದೇವತೆಗಳಲ್ಲಿ ಸ್ಥಾಪಿಸಲಿ. (ದೇವೀಃ=ದೇವ್ಯಃ) ಮುಂತಾದವು ವೈದಿಕಪ್ರಯೋಗಗಳು.

ತ್ವಷ್ಟೃದೇವನು ಸಂತತಿಪ್ರದನು. ಅವನೇ ಯಾಗಾಶ್ವವನ್ನು ಸೃಜಿಸುತ್ತಾನೆ. ಈ ಸಮಸ್ತವಿಶ್ವವೂ ಆ ತ್ವಷ್ಟೃದೇವನಿಂದಲೇ ನಿರ್ಮಿತವಾಗಿದೆ. ಹೋತೃವೇ! ನೀನು ಆ ಅಖಿಲಜಗದುತ್ಪಾದಕನಾದ ತ್ವಷ್ಟೃದೇವನನ್ನು ಕುರಿತು ಯಾಗವನ್ನು ಅನುಷ್ಠಿಸು. ಆತನು ಪ್ರಸನ್ನನಾಗಲಿ.

ಈ ಯಾಗಾಶ್ವವು ರುಚಿಕರವಾಗಿ ದೇವತೆಗಳ ಸಮೀಪಕ್ಕೆ ತೆರಳಲಿ. ವನಸ್ಪತಿದೇವನು ಅಗ್ನಿಯೊಡಗೂಡಿ ಈ ಹವ್ಯಗಳನ್ನು ದೇವತೆಗಳಿಗೆ ಮುಟ್ಟಿಸಲಿ.

ಹೇ! ಅಗ್ನಿದೇವನೇ! ಪರಮೇಶ್ವರನ ಪರ್ಯಾಲೋಚನೆಯಿಂದ ಜನಿಸಿದ ನೀನು ಹುಟ್ಟಿದೊಡನೆಯೇ ಯಜ್ಞಗಳನ್ನು ನಿರ್ವಹಿಸುವವನಾಗಿರುವೆ. ನೀನು ಮುನ್ನಡೆಯುವವನು. ಯಜಮಾನನು ಸ್ವಾಹಾಶಬ್ದದೊಡನೆ ಸಮರ್ಪಿಸಿದ ಹವಿಸ್ಸಿನೊಡಗೂಡಿ ದೇವತೆಗಳ ಬಳಿ ಸಾರು. ಆ ದೇವತೆಗಳು ಯಜಮಾನನು ಸಿದ್ಧಪಡಿಸಿದ ಹವಿಸ್ಸುಗಳನ್ನು ಆಸ್ವಾದಿಸಲಿ. ಅನುಭವಿಸಲಿ. ಎಲ್ಲರ ವಿಷಯದಲ್ಲಿಯೂ ಪ್ರಸನ್ನರಾಗಲಿ.

ಇಲ್ಲಿಗೆ ಈ ಅನುವಾಕದ ಹನ್ನೊಂದು ಪ್ರಯಾಜಮಂತ್ರಗಳು ಸಮಾಪ್ತವಾಗುತ್ತವೆ.

---

**ಸಮಿದ್ಧ ಇತ್ಯಾಪ್ರಿಯಃ ಸ್ಯುರಶ್ವಸ್ಯೈಕಾದಶೋದಿತಾಃ ॥**

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ-11

---

## ಅನುವಾಕದ ವಿಶೇಷವಿಷಯಗಳು

### ಅ) ಛಂದಸ್ಸು

| ಮಂತ್ರ | ಛಂದಸ್ಸು |
|---|---|
| ಸಮಿದ್ಧೋ...ಸಧಸ್ಥಮ್ ॥ | ತ್ರಿಷ್ಟುಪ್ |
| ಘೃತೇನಾಂಜನ್ಥ್ಸಂ...ಧೇಹಿ ॥ | ತ್ರಿಷ್ಟುಪ್ |
| ಈಡ್ಯಶ್ಚಾಸಿ...ಜಾತವೇದಾಃ ॥ | ತ್ರಿಷ್ಟುಪ್ |
| ಸ್ತೀರ್ಣಂ...ದಧಾತು ॥ | ತ್ರಿಷ್ಟುಪ್ |
| ಏತಾ ಉ ವಃ...ಭವಂತು ॥ | ತ್ರಿಷ್ಟುಪ್ |
| ಅಂತರಾ...ಸಾದಯಾಮಿ ॥ | ತ್ರಿಷ್ಟುಪ್ |
| ಪ್ರಥಮಾ ವಾಗ್ಂ...ದಿಶಂತಾ ॥ | ತ್ರಿಷ್ಟುಪ್ |

ಆದಿತ್ಯೈರ್ನೋ...ಧತ್ತ ॥ ತ್ರಿಷ್ಟುಪ್

ತ್ವಷ್ಟಾ ವೀರಂ...ಹೋತಃ ॥ ತ್ರಿಷ್ಟುಪ್

ಅಶ್ವೋ ಘೃತೇನ...ವಕ್ಷತ್ ॥ ತ್ರಿಷ್ಟುಪ್

ಪ್ರಜಾಪತೇಸ್ತಪಸಾ...ದೇವಾಃ ॥ ತ್ರಿಷ್ಟುಪ್

---

ಸಾವಿತ್ರಾಣಿ ವ್ಯೃದ್ಧಮುತ್ಕ್ರಾಮ ದೇವಸ್ಯ ಖನತಿ ಕ್ರೂರಂ ವಾರುಣಸ್ಸಪ್ತಭಿರೇಕವಿಗ್ಂಶತ್ಯಾ ಷಡ್ಭಿರ್ನ ಹ ಸ್ಮ ಸಮಿದ್ಧೋ ಅಂಜನ್ನೇಕಾದಶ ॥ 11 ॥

ಸಾವಿತ್ರಾಣ್ಯುತ್ಕ್ರಾಮ ಕ್ರೂರಂ ವಾರುಣಃ ಪಶವಸ್ಸ್ವರ್ನ ಹ ಸ್ಮ ನವಪಂಚಾಶತ್ ॥ 59 ॥

ಸಾವಿತ್ರಾಣಿ ಹವಿರದಂತು ದೇವಾಃ ॥

ಹರಿಃ ಓಮ್ ॥

ಶ್ರೀ ಕೃಷ್ಣಾರ್ಪಣಮಸ್ತು ॥

ಇತಿ ಪಂಚಮಕಾಂಡೇ ಪ್ರಥಮಃ ಪ್ರಶ್ನಃ

# ತೈತ್ತಿರೀಯ ಸಂಹಿತಾ

## ಪಂಚಮಃ ಕಾಂಡಃ ದ್ವಿತೀಯಃ ಪ್ರಶ್ನಃ

## ॥ ಪ್ರಥಮೋಽನುವಾಕಃ ॥

ವಿಷ್ಣುಮುಖಾ ವೈ ದೇವಾ-

---

ವಿಷ್ಣುಮುಖಾ ಇತಿ ವಿಷ್ಣು-ಮುಖಾಃ । ವೈ । ದೇವಾಃ ।

---

**ಪೀಠಿಕಾ**

ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಮ್ ॥
ಉಖ್ಯಾಗ್ನಿಃ ಪ್ರಥಮೇ ಪ್ರೋಕ್ತೋ ದ್ವಿತೀಯೇ ಚಿತ್ಯುಪಕ್ರಮಃ ।
ದ್ವಾದಶಾತ್ರಾನುವಾಕಾಃ ಸ್ಯುರಾಸಂದ್ಯಾಂ ವಕ್ಷ್ಯವಸ್ಥಿತಿಃ ॥
ವಾತ್ಸಪ್ರೇಣಾಪ್ಯುಪಸ್ಥಾನಂ ಪ್ರಥಮೇ ಸಮುದೀರಿತಮ್ ।
ದ್ವಿತೀಯೇ ತೂಖ್ಯನಯನಂ ಗಾರ್ಹಪತ್ಯಂ ಚಿನೋತಿ ಹಿ ॥
ತೃತೀಯೇ ತು ಚತುರ್ಥೇ ತೂಖ್ಯಾಗ್ನಿಂ ತತ್ರ ಸಂವಪೇತ್ ।
ಪಂಚಮೇ ಕೃಷತಿ ಕ್ಷೇತ್ರಂ ಷಷ್ಠೇ ತು ಸಿಕತಾದಿಕಮ್ ॥
ವಪೇದ್ರುಕ್ಮಾದ್ಯುಪಾದಧ್ಯಾತ್ಸಪ್ತಮೇ ಚಾಷ್ಟಮೇ ಪುನಃ ।
ಸ್ಥಾಪಯೇತ್ ಸ್ವಯಮಾತೃಣ್ಣಾಮುಖಾದೀನ್ನವಮೇ ತಥಾ ॥
ಅಪಸ್ಯಾಶ್ಚ ಪ್ರಾಣಭೃತಸ್ತಥಾಽಪಾನಭೃತಶ್ಚಿತೌ ।
ಪ್ರಥಮಾಯಾಮುಪಾದಧ್ಯಾತ್ ದಶಮೇ ತತ್ಸಮೀರಿತಮ್ ॥

---

| ಬ್ರಾಹ್ಮಣಭಾಗ | ವಿವರಣೆ |
|---|---|
| | ವಿಷ್ಣುಕ್ರಮವಿಧಿ; ಅರ್ಥವಾದ |
| **ವಿಷ್ಣುಮುಖಾಃ ವೈ ದೇವಾಃ** | ವಿಷ್ಣುವನ್ನೇ ಮುಖ್ಯನನ್ನಾಗಿ ಇಟ್ಟುಕೊಂಡ ದೇವತೆಗಳು |

–ಶ್ಛಂದೋಭಿರಿಮಾಲ್ಲೋಕಾನನಪಜಯ್ಯಮಭ್ಯಜಯನ್, ಯದ್ವಿಷ್ಣುಕ್ರಮಾನ್ಕ್ರಮತೇ ವಿಷ್ಣುರೇವ ಭೂತ್ವಾ ಯಜಮಾನಶ್ಛಂದೋಭಿರಿಮಾಲ್ಲೋಕಾನನಪಜಯ್ಯಮಭಿ ಜಯತಿ

---

ಛಂದೋಭಿರಿತಿ ಛಂದಃ–ಭಿಃ । ಇಮಾನ್ । ಲೋಕಾನ್ । ಅನಪಜಯ್ಯಮಿತ್ಯನಪ–ಜಯ್ಯಮ್ । ಅಭೀತಿ । ಅಜಯನ್ನ್ । ಯತ್ । ವಿಷ್ಣುಕ್ರಮಾನಿತಿ ವಿಷ್ಣು–ಕ್ರಮಾನ್ । ಕ್ರಮತೇ । ವಿಷ್ಣುಃ । ಏವ । ಭೂತ್ವಾ । ಯಜಮಾನಃ । ಛಂದೋಭಿರಿತಿ ಛಂದಃ–ಭಿಃ । ಇಮಾನ್ । ಲೋಕಾನ್ । ಅನಪಜಯ್ಯಮಿತ್ಯನಪ–ಜಯ್ಯಮ್ । ಅಭೀತಿ । ಜಯತಿ ।

---

ಏಕಾದಶದ್ವಾದಶೌ ತು ವಿಜ್ಞೇಯಾವಾಶ್ವಮೇಧಿಕೌ ।
ಅಶ್ವಸ್ಯಾಸಿಪಥಾಃ ಕಲ್ಪ್ಯಾ ಗಾಯತ್ರೀತ್ಯಾದಿಮಂತ್ರಕೈಃ ॥
ಕಸ್ತ್ವೇತ್ಯಸಿಪಥೇಽಶ್ವಸ್ಯಾಽಽಚ್ಛ್ಯೇತ್ತ್ವಚಂ ಕೃಷತಾಂ ದ್ವಯಮ್ ॥

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಛಂದೋಭಿಃ** | ಗಾಯತ್ರ್ಯಾದಿಛಂದೋಭಿಮಾನಿದೇವತೆಗಳೊಡನೆ |
| **ಇಮಾನ್ ಲೋಕಾನ್** | ಈ ಪೃಥಿವ್ಯಾದಿಲೋಕಗಳನ್ನು |
| **ಅನಪಜಯ್ಯಮ್** | ಬೇರೆಯವರಿಂದ ಗೆಲ್ಲಲು ಸಾಧ್ಯವಿಲ್ಲದಂತೆ |
| **ಅಭ್ಯಜಯನ್** | ಜಯಿಸಿದರು. |
| **ಯತ್ ವಿಷ್ಣುಕ್ರಮಾನ್ ಕ್ರಮತೇ** | ಈ ವಿಷ್ಣುಕ್ರಮಗಳನ್ನು ಇಡುವುದು ಯಾವುದುಂಟೋ ಅದರಿಂದ |
| **ಯಜಮಾನಃ ವಿಷ್ಣುಃ ಏವ ಭೂತ್ವಾ** | ಯಜಮಾನನು ವಿಷ್ಣುರೂಪನೇ ಆಗಿ |
| **ಛಂದೋಭಿಃ** | ಗಾಯತ್ರ್ಯಾದಿಛಂದೋದೇವತೆಗಳಿಂದ ಕೂಡಿಕೊಂಡು |
| **ಇಮಾನ್ ಲೋಕಾನ್ ಅನಪಜಯ್ಯಮ್ ಅಭಿ ಜಯತಿ** | ಈ ಪೃಥಿವ್ಯಾದಿಲೋಕಗಳನ್ನು ಇತರರಿಂದ ಜಯಿಸಲು ಸಾಧ್ಯವಿಲ್ಲದಂತೆ ಗೆಲ್ಲುತ್ತಾನೆ. |

---

**ತಾತ್ಪರ್ಯ:–'ಉಪರಿ ನಾಭೇರ್ಧಾರಯಮಾಣಃ ವಿಷ್ಣೋಃ ಕ್ರಮೋಽಸೀತಿ ಚತುರೋ ವಿಷ್ಣುಕ್ರಮಾನ್ ಪ್ರಾಚಃ ಕ್ರಾಮತಿ'(ಆಪ. ಶ್ರೌ. ಸೂ. 16.10.12)**ಎಂಬ ವಿಧಿಯಂತೆ ಯಜಮಾನನು ನಾಲ್ಕು ಹೆಜ್ಜೆಗಳನ್ನು ಪೂರ್ವಕ್ಕೆ ಇಡುತ್ತಾನೆ. ಈ ಬ್ರಾಹ್ಮಣವು ನಾಲ್ಕನೆಯ ಕಾಂಡದ ಎರಡನೆಯ ಪ್ರಪಾಠಕದ ಮಂತ್ರಗಳಿಗೆ ಸಂಬಂಧಿಸಿದೆ. ಅಲ್ಲಿಯ

ವಿಷ್ಣೋಃ ಕ್ರಮೋಽಸ್ಯಭಿಮಾತಿಹೇತ್ಯಾಹ ಗಾಯತ್ರೀ ವೈ ಪೃಥಿವೀ ತ್ರೈಷ್ಟುಭ ಮಂತರಿಕ್ಷಂ ಜಾಗತೀ ದ್ಯೌರಾನುಷ್ಟುಭೀರ್ದಿಶಶ್ಛನ್ದೋಭಿರೇವೇಮಾಲ್ಲೋಕಾನ್, ಯಥಾಪೂರ್ವಮಭಿ ಜಯತಿ

---

ವಿಷ್ಣೋಃ । ಕ್ರಮಃ । ಅಸಿ । ಅಭಿಮಾತಿಹೇತ್ಯಭಿಮಾತಿ–ಹಾ । ಇತಿ । ಆಹ । ಗಾಯತ್ರೀ । ವೈ । ಪೃಥಿವೀ । ತ್ರೈಷ್ಟುಭಮ್ । ಅಂತರಿಕ್ಷಮ್ । ಜಾಗತೀ । ದ್ಯೌಃ । ಆನುಷ್ಟುಭೀರಿತ್ಯಾನು–ಸ್ತುಭೀಃ । ದಿಶಃ । ಛಂದೋಭಿರಿತಿ ಛಂದಃ–ಭಿಃ । ಏವ । ಇಮಾನ್ । ಲೋಕಾನ್ । ಯಥಾಪೂರ್ವಮಿತಿ ಯಥಾ–ಪೂರ್ವಮ್ । ಅಭೀತಿ । ಜಯತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ವಿಷ್ಣೋಃ ಕ್ರಮಃ ಅಸಿ ಅಭಿಮಾತಿಹಾ ಇತಿ ಆಹ** | 'ಎಲೈ! ವಿಷ್ಣುರೂಪನಾದ ಯಜಮಾನನ ಪಾಪವನ್ನು ಹೋಗಲಾಡಿಸುವ ಪ್ರಥಮಪಾದನ್ಯಾಸವೇ! ನೀನು ಗಾಯತ್ರೀಛಂದಸ್ಸನ್ನು ಆಕ್ರಮಿಸಿ, ಪೃಥಿವೀಲೋಕವನ್ನು ಜಯಿಸು' ಎಂದು ಈ ಮಂತ್ರವು ಹೇಳುತ್ತದೆ. |
| **ಗಾಯತ್ರೀ ವೈ ಪೃಥಿವೀ** | ಗಾಯತ್ರ್ಯಭಿಮಾನಿಛಂದೋದೇವತೆಯು ಪೃಥಿವೀ ಸ್ವಾಮಿಸ್ವರೂಪವಾಗಿದೆ. |
| **ತ್ರೈಷ್ಟುಭಮ್ ಅಂತರಿಕ್ಷಮ್** | ತ್ರಿಷ್ಟುಪ್‌ಛಂದೋಭಿಮಾನಿದೇವತೆಯು ಅಂತರಿಕ್ಷ ಸ್ವಾಮಿಸ್ವರೂಪವಾಗಿದೆ. |
| **ಜಾಗತೀ ದ್ಯೌಃ** | ಜಗತೀಛಂದೋಭಿಮಾನಿದೇವತೆಯು ದ್ಯುಲೋಕ ಸ್ವಾಮಿಸ್ವರೂಪವಾಗಿದೆ. |
| **ಆನುಷ್ಟುಭೀಃ ದಿಶಃ** | ಅನುಷ್ಟುಪ್‌ಛಂದೋಭಿಮಾನಿದೇವತೆಯು ದಿಕ್ಕುಗಳ ಸ್ವಾಮಿಯಾಗಿದೆ. |
| **ಛಂದೋಭಿಃ ಏವ ಇಮಾನ್ ಲೋಕಾನ್ ಯಥಾಪೂರ್ವಮ್ ಅಭಿ ಜಯತಿ** | ಗಾಯತ್ರ್ಯಾದಿಛಂದೋಭಿಮಾನಿದೇವತೆಗಳಿಂದಲೇ ಈ ಪೃಥಿವ್ಯಾದಿಲೋಕಗಳನ್ನು ಕ್ರಮವಾಗಿ ಗೆಲ್ಲುತ್ತಾನೆ. |

---

ಮಂತ್ರಗಳಿಗೆ ಸಂಬಂಧಿಸಿದ ಈ ಪ್ರಥಮಾನುವಾಕದ ಬ್ರಾಹ್ಮಣಭಾಗದಲ್ಲಿ ಆಸಂದಿ(ಆಸನ)ಯಲ್ಲಿ ಉಖ್ಯಾಗ್ನಿಯ ಸ್ಥಾಪನವು ಉಕ್ತವಾಗಿದೆ. ಆದಕ್ಕಾಗಿ ವಿಷ್ಣುಕ್ರಮಗಳು.

ಪ್ರಜಾಪತಿರಗ್ನಿಮಸೃಜತ ಸೋಽಸ್ಮಾತ್ಸೃಷ್ಟಃ [(೧)]ಪರಾಙೈತ್ತಮೇತಯಾಽನ್ವೈ
–ದಕ್ರಂದದಿತಿ ತಯಾ ವೈ ಸೋಽಗ್ನೇಃ ಪ್ರಿಯಂ ಧಾಮಾವಾರುನ್ಧ ಯದೇತಾ
ಮನ್ವಾಹಾಗ್ನೇರೇವೈತಯಾ ಪ್ರಿಯಂ ಧಾಮಾವರುನ್ಧೇ

---

ಪ್ರಜಾಪತಿರಿತಿ ಪ್ರಜಾ–ಪತಿಃ। ಅಗ್ನಿಮ್। ಅಸೃಜತ। ಸಃ। ಅಸ್ಮಾತ್। ಸೃಷ್ಟಃ। (೧)। ಪರಾಙ್। ಐತ್। ತಮ್। ಏತಯಾ। ಅನ್ವಿತಿ। ಐತ್। ಅಕ್ರಂದತ್। ಇತಿ। ತಯಾ। ವೈ। ಸಃ। ಅಗ್ನೇಃ। ಪ್ರಿಯಮ್। ಧಾಮ। ಅವೇತಿ। ಅರುಂಧ। ಯತ್। ಏತಾಮ್। ಅನ್ವಾಹೇತ್ಯನು–ಆಹ। ಅಗ್ನೇಃ। ಏವ। ಏತಯಾ। ಪ್ರಿಯಮ್। ಧಾಮ। ಅವೇತಿ। ರುಂಧೇ।

---

ಬ್ರಾಹ್ಮಣಭಾಗ | ವಿವರಣೆ

**ಮಂತ್ರಾನುವಚನ–ಆವೃತ್ತಿವಿಧಿ**

| | |
|---|---|
| **ಪ್ರಜಾಪತಿಃ ಅಗ್ನಿಮ್ ಅಸೃಜತ** | ಪ್ರಜಾಪತಿದೇವನು ಅಗ್ನಿಯನ್ನು ಸೃಷ್ಟಿಸಿದನು. |
| **ಅಸ್ಮಾತ್ ಸೃಷ್ಟಃ ಸಃ** | ಪ್ರಜಾಪತಿಯಿಂದ ಸೃಜಿಸಲ್ಪಟ್ಟ ಆ ಅಗ್ನಿಯು |
| **ಪರಾಙ್ ಐತ್** | ಆವೃತ್ತಿರಹಿತನಾಗಿ ಹೊರಟನು. |
| **ತಮ್ ಏತಯಾ ಅನ್ವೈತ್ ಅಕ್ರಂದತ್ ಇತಿ** | ಅವನನ್ನು ಪ್ರಜಾಪತಿಯು **'ಅಕ್ರಂದತ್...ಅಂತಃ'** ಎಂಬ ಈ ಮಂತ್ರದಿಂದ ಹಿಂಬಾಲಿಸಿದನು. |
| **ಸಃ ತಯಾ ವೈ ಅಗ್ನೇಃ ಪ್ರಿಯಮ್ ಧಾಮ ಅವಾರುಂಧ** | ಆ ಋಕ್ಕಿನಿಂದ ಪ್ರಜಾಪತಿಯು ಅಗ್ನಿಯ ಪ್ರಿಯರೂಪವನ್ನು/ಛಂದೋರೂಪಶರೀರವನ್ನು ಹೊಂದಿದನು. |
| **ಯತ್ ಏತಾಮ್ ಅನ್ವಾಹ** | ಈ ಮಂತ್ರಾನುವಚನವನ್ನು ಮಾಡುತ್ತಾನೆಂಬುದರಿಂದ ಯಜಮಾನನು |
| **ಏತಯಾ ಅಗ್ನೇಃ ಏವ ಪ್ರಿಯಮ್ ಧಾಮ ಅವರುಂಧೇ** | ಈ ಮಂತ್ರದಿಂದ ಅಗ್ನಿಯ ಛಂದೋರೂಪವಾದ ಪ್ರಿಯಶರೀರವನ್ನು ಹೊಂದುತ್ತಾನೆ. |

---

ಯಾಗದ ಯಜಮಾನನು ತನ್ನನ್ನು ವಿಷ್ಣುವೆಂದು ಭಾವಿಸಿಕೊಳ್ಳಬೇಕು. ವಿಷ್ಣುವೇ ಯಜಮಾನಸ್ವರೂಪನು. ಆ ಯಜಮಾನನು ನಾಲ್ಕು ವಿಷ್ಣುಕ್ರಮಗಳನ್ನು ಕ್ರಮವಾಗಿ ಮುಂದೆ ಇಡುತ್ತಾನೆ. ಈ ನಾಲ್ಕು ಪಾದನ್ಯಾಸಗಳನ್ನು ನಾಲ್ಕು ಲೋಕಗಳೆಂದು ಭಾವಿಸಬೇಕು. ಆ ನಾಲ್ಕು ವಿಷ್ಣುಕ್ರಮಗಳನ್ನು **ಅಭಿಮಾತಿಹಾ=ಪಾಪನಾಶಕ, ಅಭಿಶಸ್ತಿಹಾ=**ಮಿಥ್ಯಾಪ

ಈಶ್ವರೋ ವಾ ಏಷ ಪರಾಙ್ಪ್ರದಘೋ ಯೋ ವಿಷ್ಣುಕ್ರಮಾನ್ಕ್ರಮತೇ ಚತಸೃಭಿರಾ ವರ್ತತೇ ಚತ್ವಾರಿ ಛಂದಾಗ್ಂಸಿ ಛಂದಾಗ್ಂಸಿ ಖಲು ವಾ ಅಗ್ನೇಃ ಪ್ರಿಯಾ ತನೂಃ ಪ್ರಿಯಾಮೇವಾಸ್ಯ ತನುವಮಭಿ [(೨)] ಪರ್ಯಾವರ್ತತೇ

---

ಈಶ್ವರಃ । ವೈ । ಏಷಃ । ಪರಾಙ್ । ಪ್ರದಘ ಇತಿ ಪ್ರ-ದಘಃ । ಯಃ । ವಿಷ್ಣುಕ್ರಮಾನಿತಿ ವಿಷ್ಣು-ಕ್ರಮಾನ್ । ಕ್ರಮತೇ । ಚತಸೃಭಿರಿತಿ ಚತಸೃ-ಭಿಃ । ಏತಿ । ವರ್ತತೇ । ಚತ್ವಾರಿ । ಛಂದಾಗ್ಂಸಿ । ಛಂದಾಗ್ಂಸಿ । ಖಲು । ವೈ । ಅಗ್ನೇಃ । ಪ್ರಿಯಾ । ತನೂಃ । ಪ್ರಿಯಾಮ್ । ಏವ । ಅಸ್ಯ । ತನುವಮ್ । ಅಭೀತಿ । (೨) । ಪರ್ಯಾವರ್ತತ ಇತಿ ಪರಿ-ಆವರ್ತತೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ಆವೃತ್ತಿವಿಧಿ; ಅರ್ಥವಾದ** |
| **ಯಃ ವಿಷ್ಣುಕ್ರಮಾನ್ ಕ್ರಮತೇ** | ಯಾವ ಯಜಮಾನನು ವಿಷ್ಣುಕ್ರಮಗಳನ್ನು ಆಚರಿಸುವನೋ |
| **ಏಷಃ ಪರಾಙ್ ಪ್ರದಘಃ ಈಶ್ವರಃ ವೈ** | ಈ ಯಜಮಾನನು ಆವೃತ್ತಿರಹಿತನಾಗಿಯೇ ಹೋಗಲು ಸಮರ್ಥನು. |
| **ಚತಸೃಭಿಃ ಆ ವರ್ತತೇ** | **'ಅಗ್ನೇಽಭ್ಯಾವರ್ತಿನ್'** ಎಂದು ಆರಂಭವಾಗುವ ನಾಲ್ಕು ಮಂತ್ರಗಳಿಂದ ಪ್ರದಕ್ಷಿಣೆಯನ್ನು ಮಾಡಬೇಕು. |
| **ಚತ್ವಾರಿ ಛಂದಾಗ್ಂಸಿ** | ಗಾಯತ್ರೀ, ತ್ರಿಷ್ಟುಪ್, ಜಗತೀ ಹಾಗೂ ಅನುಷ್ಟುಪ್ ಎಂದು ನಾಲ್ಕು ಮುಖ್ಯ ಛಂದಸ್ಸುಗಳು. |
| **ಛಂದಾಗ್ಂಸಿ ಖಲು ವೈ ಅಗ್ನೇಃ ಪ್ರಿಯಾ ತನೂಃ** | ಈ ಛಂದಸ್ಸುಗಳು ಅಗ್ನಿಯ ಪ್ರಿಯವಾದ ಶರೀರದಂತೆ ಇವೆ. |
| **ಅಸ್ಯ ಪ್ರಿಯಾಮ್ ತನುವಮ್ ಏವ ಅಭಿ ಪರ್ಯಾವರ್ತತೇ** | ಮಂತ್ರಗಳಿಂದ ಮಾಡುವ ಪ್ರದಕ್ಷಿಣೆಯು ಅಗ್ನಿಯ ಪ್ರಿಯವಾದ ಶರೀರದ ಪ್ರದಕ್ಷಿಣೆಯೇ ಆಗಿದೆ. |

---

ವಾದವನ್ನು ದೂರ ಮಾಡುವವನು; **ಅರಾತೀಯತಃ ಹಂತಾ**=ದಾನಪ್ರತಿಬಂಧಕನನ್ನು ನಾಶಪಡಿಸುವವನು; **ಶತ್ರೂಯತಃ ಹಂತಾ**=ಶತ್ರುವಾಗಬೇಕೆಂದಿರುವವನ್ನು ಪರಿಹರಿಸುವವನು ಎಂದು ಶ್ರುತಿಯು ಹೇಳುತ್ತದೆ.

ದಕ್ಷಿಣಾ ಪರ್ಯಾವರ್ತತೇ ಸ್ವಮೇವ ವೀರ್ಯಮನು ಪರ್ಯಾವರ್ತತೇ ತಸ್ಮಾದ್ದಕ್ಷಿಣೋಽರ್ಧ ಆತ್ಮನೋ ವೀರ್ಯಾವತ್ತರೋಽಥೋ ಆದಿತ್ಯಸ್ಯೈವಾಽಽವೃತಮನು ಪರ್ಯಾವರ್ತತೇ ಶುನಶ್ಶೇಪಮಾಜೀಗರ್ತಿಂ ವರುಣೋಽಗೃಹ್ಣಾ–

---

ದಕ್ಷಿಣಾ । ಪರ್ಯಾವರ್ತತ ಇತಿ ಪರಿ–ಆವರ್ತತೇ । ಸ್ವಮ್ । ಏವ । ವೀರ್ಯಮ್ । ಅನ್ವಿತಿ । ಪರ್ಯಾವರ್ತತ ಇತಿ ಪರಿ–ಆವರ್ತತೇ । ತಸ್ಮಾತ್ । ದಕ್ಷಿಣಃ । ಅರ್ಧಃ । ಆತ್ಮನಃ । ವೀರ್ಯಾವತ್ತರ ಇತಿ ವೀರ್ಯಾವತ್–ತರಃ । ಅಥೋ ಇತಿ । ಆದಿತ್ಯಸ್ಯ । ಏವ । ಆವೃತಮಿತ್ಯಾ–ವೃತಮ್ । ಅನ್ವಿತಿ । ಪರ್ಯಾವರ್ತತ ಇತಿ ಪರಿ–ಆವರ್ತತೇ । ಶುನಶ್ಶೇಪಮ್ । ಆಜೀಗರ್ತಿಮ್ । ವರುಣಃ । ಅಗೃಹ್ಣಾತ್ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ದಕ್ಷಿಣಾ ಪರ್ಯಾವರ್ತತೇ** | ಪ್ರದಕ್ಷಿಣಾಕಾರವಾಗಿ ಅಗ್ನಿಯನ್ನು ಸುತ್ತಬೇಕು. |
| **ಸ್ವಮ್ ವೀರ್ಯಮ್ ಏವ ಅನು ಪರ್ಯಾವರ್ತತೇ** | ತನ್ನ ಶಕ್ತಿಯುಕ್ತವಾದ ಭಾಗವನ್ನೇ ಪ್ರದಕ್ಷಿಣ ಮಾಡಿದಂತಾಗುತ್ತದೆ. |
| **ತಸ್ಮಾತ್ ಆತ್ಮನಃ ದಕ್ಷಿಣಃ ಅರ್ಧಃ ವೀರ್ಯಾವತ್ತರಃ** | ಹೀಗಾಗಿ ತನ್ನ ಶರೀರದ ಬಲಭಾಗವು ಹೆಚ್ಚು ಶಕ್ತಿಯುಕ್ತವಾಗಿದೆ. |
| **ಅಥೋ ಆದಿತ್ಯಸ್ಯ ಆವೃತಮ್ ಏವ ಅನು ಪರ್ಯಾವರ್ತತೇ** | ಮತ್ತು ಪ್ರದಕ್ಷಿಣವಾಗಿ ಸುತ್ತುವ ಸೂರ್ಯನನ್ನು ಅನುಸರಿಸಿದಂತೆ ಆಗುತ್ತದೆ. |

ಶಿಕ್ಯಪಾಶವನ್ನು ತೆಗೆದು ಹಾಕುವ ವಿಧಿ; ಅರ್ಥವಾದ

| | |
|---|---|
| **ಆಜೀಗರ್ತಿಮ್ ಶುನಶ್ಶೇಪಮ್ ವರುಣಃ ಅಗೃಹ್ಣಾತ್** | ಆಜೀಗರ್ತನ ಮಗನಾದ ಶುನಃಶೇಪನನ್ನು ವರುಣನು ಆಕ್ರಮಿಸಿಕೊಂಡನು/ಅವನಿಗೆ ಜಲೋದರವ್ಯಾಧಿಯು ಒದಗಿತು. |

---

ಯಜಮಾನನು ಹೆಜ್ಜೆಗಳನ್ನು ಲೋಕಗಳೆಂದು ಭಾವಿಸಿ, ಗಾಯತ್ರ್ಯಾದಿಛಂದೋಭಿಮಾನಿದೇವತೆಗಳ ಬೆಂಬಲದಿಂದ ಆ ಲೋಕಗಳನ್ನು ಜಯಿಸುತ್ತಾನೆಂದು ತಾತ್ಪರ್ಯ. ಹೀಗೆ ಹೆಜ್ಜೆಯಿಟ್ಟು ಆ ಪ್ರದೇಶದಲ್ಲಿರುವ ಶತ್ರುಗಳನ್ನು ದೂರ ಮಾಡುತ್ತೇನೆ ಎಂದು ಭಾವಿಸಬೇಕು.

–ಥ್ಸ ಏತಾಂ ವಾರುಣೀಮಪಶ್ಯತ್ತಯಾ ವೈ ಸ ಆತ್ಮಾನಂ ವರುಣಪಾಶಾದಮುಞ್ಚ–

ದ್ವರುಣೋ ವಾ ಏತಂ ಗೃಹ್ಣಾತಿ ಯ ಉಖಾಂ ಪ್ರತಿಮುಂಚತ ಉದುತ್ತಮಂ

ವರುಣ ಪಾಶಮಸ್ಮದಿತ್ಯಾಹಾಽಽತ್ಮಾನಮೇವೈತಯಾ[ತಯಾ(೩)ವರುಣಪಾಶಾನ್]

ವರುಣಪಾಶಾನ್ಮುಂಚತ್ಯಾತ್ವಾಽಹಾರ್ಷಮಿತ್ಯಾಹಾ–

---

ಸಃ । ಏತಾಮ್ । ವಾರುಣೀಮ್ । ಅಪಶ್ಯತ್ । ತಯಾ । ವೈ । ಸಃ । ಆತ್ಮಾನಮ್ । ವರುಣಪಾಶಾದಿತಿ ವರುಣ–ಪಾಶಾತ್ । ಅಮುಞ್ಚತ್ । ವರುಣಃ । ವೈ । ಏತಮ್ । ಗೃಹ್ಣಾತಿ । ಯಃ । ಉಖಾಮ್ । ಪ್ರತಿಮುಂಚತ ಇತಿ ಪ್ರತಿ–ಮುಂಚತೇ । ಉದಿತಿ । ಉತ್ತಮಮಿತ್ಯುತ್–ತಮಮ್ । ವರುಣ । ಪಾಶಮ್ । ಅಸ್ಮತ್ । ಇತಿ । ಆಹ । ಆತ್ಮಾನಮ್ । ಏವ । ಏತಯಾ । (೩) । ವರುಣಪಾಶಾದಿತಿ ವರುಣ–ಪಾಶಾತ್ । ಮುಂಚತಿ । ಏತಿ । ತ್ವಾ । ಅಹಾರ್ಷಮ್ । ಇತಿ । ಆಹ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಸಃ ಏತಾಮ್ ವಾರುಣೀಮ್ ಅಪಶ್ಯತ್** | ಆ ಶುನಃಶೇಪನು ಈ ವರುಣದೇವತಾಕವಾದ ಋಕ್ಕನ್ನು(ಉದುತ್ತಮಂ..ಸ್ಯಾಮ)ತಿಳಿದುಕೊಂಡನು. |
| **ತಯಾ ವೈ ಸಃ ಆತ್ಮಾನಮ್ ವರುಣಪಾಶಾತ್ ಅಮುಞ್ಚತ್** | ಆ ಋಕ್ಕಿನಿಂದ/ಪ್ರಭಾವದಿಂದ ಆ ಶುನಃಶೇಪನು ತನ್ನನ್ನು ವರುಣಪಾಶದಿಂದ ಬಿಡಿಸಿಕೊಂಡನು. |
| **ಯಃ ಉಖಾಮ್ ಪ್ರತಿಮುಂಚತೇ** | ಯಾವ ಯಜಮಾನನು ಉಖಾಪಾಶವನ್ನು ತೆಗೆದು ಹಾಕುವನೋ |
| **ಏತಮ್ ವರುಣಃ ಗೃಹ್ಣಾತಿ ವೈ** | ಅವನನ್ನು ವರುಣದೇವನು ಆಕ್ರಮಿಸುತ್ತಾನೆ. |
| **ಉದುತ್ತಮಮ್ ವರುಣ ಪಾಶಮ್ ಅಸ್ಮತ್ ಇತಿ ಆಹ** | ಅದಕ್ಕಾಗಿ ಆ ಯಜಮಾನನು 'ಉದುತ್ತಮಮ್... ಸ್ಯಾಮ' ಎಂಬ ಮಂತ್ರವನ್ನು ಹೇಳುತ್ತಾನೆ. |
| **ಆತ್ಮಾನಮ್ ಏವ ಏತಯಾ ವರುಣಪಾಶಾತ್ ಮುಂಚತಿ** | ಇದರಿಂದಲೇ ಆ ಯಜಮಾನನು ತನ್ನನ್ನು ವರುಣ ಪಾಶದಿಂದ ಬಿಡಿಸಿಕೊಂಡವನಾಗುತ್ತಾನೆ. |

ಅಗ್ನಿಯ ಆಹರಣವಿಧಿ; ಮಂತ್ರಪಾದಗಳ ಅರ್ಥವಾದ

| | |
|---|---|
| **ಆ ತ್ವಾ ಅಹಾರ್ಷಮ್ ಇತಿ ಆಹ** | ಈ ಮಂತ್ರವು 'ಅಗ್ನಿಯೇ! ನಿನ್ನನ್ನು ತಂದಿರುತ್ತೇನೆ' ಎಂದು ಹೇಳುತ್ತದೆ. |

ऽऽಹ್ಯೇನಗ್ಂ ಹರತಿ ಧ್ರುವಸ್ತಿಷ್ಠಾವಿಚಾಚಲಿರಿತ್ಯಾಹ ಪ್ರತಿಷ್ಠಿತ್ಯೈ ವಿಶಸ್ತ್ವಾ
ಸರ್ವಾ ವಾಂಛಂತ್ವಿತ್ಯಾಹ ವಿಶೈವೈನಗ್ಂ ಸಮರ್ಧಯತ್ಯಸ್ಮಿನ್ರಾಷ್ಟ್ರಮಧಿ
ಶ್ರಯೇತ್ಯಾಹ ರಾಷ್ಟ್ರಮೇವಾಸ್ಮಿನ್ಧ್ರುವಮಕ–

---

ಏತಿ । ಹಿ । ಏನಮ್ । ಹರತಿ । ಧ್ರುವಃ । ತಿಷ್ಠ । ಅವಿಚಾಚಲಿರಿತ್ಯವಿ–ಚಾಚಲಿಃ । ಇತಿ । ಆಹ । ಪ್ರತಿಷ್ಠಿತ್ಯಾ ಇತಿ ಪ್ರತಿ–ಸ್ಥಿತ್ಯೈ । ವಿಶಃ । ತ್ವಾ । ಸರ್ವಾಃ । ವಾಂಛಂತು । ಇತಿ । ಆಹ । ವಿಶಾ । ಏವ । ಏನಮ್ । ಸಮಿತಿ । ಅರ್ಧಯತಿ । ಅಸ್ಮಿನ್ । ರಾಷ್ಟ್ರಮ್ । ಅಧೀತಿ । ಶ್ರಯ । ಇತಿ । ಆಹ । ರಾಷ್ಟ್ರಮ್ । ಏವ । ಅಸ್ಮಿನ್ । ಧ್ರುವಮ್ । ಅಕಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಏನಮ್ ಆ ಹರತಿ ಹಿ | ಈ ಯಜಮಾನನು ಅಗ್ನಿಯನ್ನು ತರುತ್ತಾನಷ್ಟೆ. ಇದು ಸ್ಪಷ್ಟಾರ್ಥವಾಗಿದೆ. |

ದ್ವಿತೀಯಪಾದದ ವಿವರಣೆ

| | |
|---|---|
| ಧ್ರುವಃ ಅವಿಚಾಚಲಿಃ ತಿಷ್ಠ ಇತಿ ಆಹ | 'ಹೇ! ಅಗ್ನಿಯೇ! ನೀನು ಚಲನೆಯಿಲ್ಲದೆ ಸ್ಥಿರವಾಗಿರು' ಎಂದು ಈ ಮಂತ್ರಭಾಗವು ಹೇಳುತ್ತದೆ. |
| ಪ್ರತಿಷ್ಠಿತ್ಯೈ | ಹೀಗೆ ಹೇಳುವುದು ಪ್ರಕೃಷ್ಟಸ್ಥಿತಿಗೆ ಕಾರಣವಾಗುತ್ತದೆ. |

ಆಹರಣಮಂತ್ರಭಾಗದ ವಿವರಣೆ–ಅರ್ಥವಾದ

| | |
|---|---|
| ವಿಶಃ ತ್ವಾ ಸರ್ವಾಃ ವಾಂಛಂತು ಇತಿ ಆಹ | 'ಪ್ರಜೆಗಳೆಲ್ಲರೂ ನಿನ್ನನ್ನು/ಯಜಮಾನನನ್ನು ಅಪೇಕ್ಷಿಸಲಿ' ಎಂದು ಈ ಮಂತ್ರಭಾಗವು ಹೇಳುತ್ತದೆ. |
| ವಿಶಾ ಏವ ಏನಮ್ ಸಮರ್ಧಯತಿ | ಈ ಮಂತ್ರಭಾಗದ ಪಾಠವು ಈ ಯಜಮಾನನನ್ನು ಪ್ರಜೆಗಳಿಂದ ತುಂಬಿದವನನ್ನಾಗಿ ಮಾಡುತ್ತದೆ. |
| ಅಸ್ಮಿನ್ ರಾಷ್ಟ್ರಮ್ ಅಧಿ ಶ್ರಯ ಇತಿ ಆಹ | 'ಈ ಯಜಮಾನನಲ್ಲಿ ರಾಷ್ಟ್ರವು ಸ್ಥಿರವಾಗಿರುವಂತೆ ಮಾಡು' ಎಂದು ಈ ಮಂತ್ರಭಾಗವು ಹೇಳುತ್ತದೆ. |
| ಅಸ್ಮಿನ್ ರಾಷ್ಟ್ರಮ್ ಏವ ಧ್ರುವಮ್ ಅಕಃ | (ಅಧ್ವರ್ಯುವು ಈ ಮಂತ್ರಭಾಗದ ಪಾಠದಿಂದ) ಈ ಯಜಮಾನನಲ್ಲಿ ರಾಷ್ಟ್ರವು ಸ್ಥಿರವಾಗಿರುವಂತೆ ಮಾಡುತ್ತಾನೆ. |

ಯಂ ಕಾಮಯೇತ ರಾಷ್ಟ್ರಗ್ಗ್ಂ ಸ್ಯಾದಿತಿ ತಂ ಮನಸಾ ಧ್ಯಾಯೇದ್ರಾಷ್ಟ್ರಮೇವ ಭವ[ಭವತಿ(೪)ಅಗ್ರೇ]ತ್ಯಗ್ರೇ ಬೃಹನ್ನುಷಸಾಮೂರ್ಧ್ವೋ ಅಸ್ಥಾದಿತ್ಯಾಹಾಗ್ರ ಮೇವೈನಗ್ಂ ಸಮಾನಾನಾಂ ಕರೋತಿ ನಿರ್ಜಗ್ಮಿವಾನ್ತಮಸ ಇತ್ಯಾಹ

---

ಯಮ್ । ಕಾಮಯೇತ । ರಾಷ್ಟ್ರಮ್ । ಸ್ಯಾತ್ । ಇತಿ । ತಮ್ । ಮನಸಾ । ಧ್ಯಾಯೇತ್ । ರಾಷ್ಟ್ರಮ್ । ಏವ । ಭವತಿ । (೪) । ಅಗ್ರೇ । ಬೃಹನ್ನ್ । ಉಷಸಾಮ್ । ಊರ್ಧ್ವಃ । ಅಸ್ಥಾತ್ । ಇತಿ । ಆಹ । ಅಗ್ರಮ್ । ಏವ । ಏನಮ್ । ಸಮಾನಾನಾಮ್ । ಕರೋತಿ । ನಿರ್ಜಗ್ಮಿವಾನಿತಿ ನಿಃ-ಜಗ್ಮಿವಾನ್ । ತಮಸಃ । ಇತಿ । ಆಹ ।

---

| ಬ್ರಾಹ್ಮಣಭಾಗ | ವಿವರಣೆ |
|---|---|

**ಕಾಮ್ಯವಾದ ಮಾನಸಿಕಧ್ಯಾನವಿಧಿ; ಅರ್ಥವಾದ**

| | |
|---|---|
| **ಯಮ್ ರಾಷ್ಟ್ರಮ್ ಸ್ಯಾತ್ ಇತಿ ಕಾಮಯೇತ** | ಅಧ್ವರ್ಯುವು ಯಾವ ಯಜಮಾನನನ್ನು ಉದ್ದೇಶಿಸಿ ಆತನಲ್ಲಿ ರಾಜ್ಯವು ಇರಬೇಕೆಂದು ಅಪೇಕ್ಷಿಸುವನೋ, |
| **ತಮ್ ಮನಸಾ ಧ್ಯಾಯೇತ್** | (ಈ ಮಂತ್ರದ ನಾಲ್ಕನೆಯ ಪಾದದ ಉಚ್ಚಾರಣೆಯ ಸಮಯದಲ್ಲಿ) ಆ ಯಜಮಾನನನ್ನು ಮನಸ್ಸಿನಿಂದ ಧ್ಯಾನಿಸಬೇಕು. |
| **ರಾಷ್ಟ್ರಮ್ ಏವ ಭವತಿ** | (ಇದರಿಂದ) ಆ ಯಜಮಾನನಲ್ಲಿ ರಾಷ್ಟ್ರವು ಸ್ಥಿರವಾಗಿ ರುತ್ತದೆ. |

**ಶಿಕ್ಯಾಗ್ನಿಯ ಉಪಸ್ಥಾನ-ಅರ್ಥವಿವರಣೆ**

| | |
|---|---|
| **ಅಗ್ರೇ ಬೃಹನ್ ಉಷಸಾಮ್ ಊರ್ಧ್ವಃ ಅಸ್ಥಾತ್ ಇತಿ ಆಹ** | 'ಉಷಃಕಾಲದಲ್ಲಿ ಅಗ್ನಿಹೋತ್ರಾದಿಹೋಮಗಳಿಗಾಗಿ ಪ್ರಜ್ವಾಲಿತನಾಗಿ ಈ ಅಗ್ನಿಯು ಮೇಲ್ಮುಖನಾಗಿರುತ್ತಾನೆ' ಎಂದು ಈ ಮಂತ್ರಭಾಗವು ಹೇಳುತ್ತದೆ. |
| **ಏನಮ್ ಸಮಾನಾನಾಮ್ ಅಗ್ರಮ್ ಏವ ಕರೋತಿ** | ಈ ಮಂತ್ರಭಾಗಪಾಠವು ಈ ಯಜಮಾನನನ್ನು ಸಮಾನರ ನಡುವೆ ಶ್ರೇಷ್ಠನನ್ನಾಗಿಯೇ ಮಾಡುತ್ತದೆ. |
| **ನಿರ್ಜಗ್ಮಿವಾನ್ ತಮಸಃ ಇತಿ ಆಹ** | ಈ ಅಗ್ನಿಯು ಕತ್ತಲನ್ನು ದೂರ ಮಾಡಿ ಬಂದಿರುವನೆಂದು ಈ ಮಂತ್ರವು ಹೇಳುತ್ತದೆ. |

ತಮ ಏವಾಸ್ಮಾದಪಹಂತಿ ಜ್ಯೋತಿಷಾಽಗಾದಿತ್ಯಾಹ ಜ್ಯೋತಿರೇವಾಸ್ಮಿನ್ದಧಾತಿ

ಚತಸೃಭಿಸ್ಸಾದಯತಿ ಚತ್ವಾರಿ ಛಂದಾಗ್ಂಸಿ

ಛಂದೋಭಿರೇವಾತಿಚ್ಛಂದಸೋತ್ತಮಯಾ

---

ತಮಃ । ಏವ । ಅಸ್ಮಾತ್ । ಅಪೇತಿ । ಹಂತಿ । ಜ್ಯೋತಿಷಾ । ಏತಿ । ಅಗಾತ್ । ಇತಿ । ಆಹ । ಜ್ಯೋತಿಃ । ಏವ । ಅಸ್ಮಿನ್ನ್ । ದಧಾತಿ । ಚತಸೃಭಿರಿತಿ ಚತಸೃ–ಭಿಃ । ಸಾದಯತಿ । ಚತ್ವಾರಿ । ಛಂದಾಗ್ಂಸಿ । ಛಂದೋಭಿರಿತಿ ಛಂದಃ–ಭಿಃ । ಏವ । ಅತಿಚ್ಛಂದಸೇತ್ಯತಿ–ಛಂದಸಾ । ಉತ್ತಮಯೇತ್ಯುತ್–ತಮಯಾ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಅಸ್ಮಾತ್ ತಮಃ ಏವ ಅಪಹಂತಿ** | ಈ ಅಗ್ನಿಯು ಯಜಮಾನನಿಂದ ಕತ್ತಲೆಯನ್ನು (ಅಜ್ಞಾನವನ್ನು) ದೂರ ಮಾಡುವನು. |
| **ಜ್ಯೋತಿಷಾ ಆಗಾತ್ ಇತಿ ಆಹ** | 'ಅಗ್ನಿಯು ತನ್ನ ತೇಜಸ್ಸಿನಿಂದ ಬೆಳಗುತ್ತಾ ಬರುತ್ತಾನೆ' ಎಂದು ಈ ಮಂತ್ರಭಾಗವು ಹೇಳುತ್ತದೆ. |
| **ಅಸ್ಮಿನ್ ಜ್ಯೋತಿಃ ಏವ ದಧಾತಿ** | ಈ ಮಂತ್ರಭಾಗದ ಪಾಠವು ಈ ಯಜಮಾನನಲ್ಲಿ ಜ್ಯೋತಿ/ಪ್ರಕಾಶವನ್ನೇ ಉಂಟು ಮಾಡುತ್ತದೆ. |

**ಅಂತರ್ವೇದಿಯಲ್ಲಿ ಉಖ್ಯಾಗ್ನಿಯ ಸ್ಥಾಪನೆ; ಅರ್ಥವಾದ**

| | |
|---|---|
| **ಚತಸೃಭಿಃ ಸಾದಯತಿ** | **'ಸೀದ ತ್ವಮ್'** ಮೊದಲಾದ ನಾಲ್ಕು ಮಂತ್ರಗಳಿಂದ ಉಖ್ಯಾಗ್ನಿಯನ್ನು ಇಡಬೇಕು. |

**ಚತುಃಸಂಖ್ಯೆಯ ಪ್ರಶಂಸೆ**

| | |
|---|---|
| **ಚತ್ವಾರಿ ಛಂದಾಗ್ಂಸಿ** | ಗಾಯತ್ರೀ, ತ್ರಿಷ್ಟುಪ್, ಜಗತೀ, ಅನುಷ್ಟುಪ್ ಇವು ನಾಲ್ಕು ಛಂದಸ್ಸುಗಳು. |
| **ಛಂದೋಭಿಃ ಏವ** ಸಾದಯತಿ | ಛಂದಸ್ಸುಗಳಿಂದ ಉಖ್ಯಾಗ್ನಿಯನ್ನು ಸ್ಥಾಪಿಸಿದವನಾಗುತ್ತಾನೆ. |
| **ಅತಿಚ್ಛಂದಸಾ ಉತ್ತಮಯಾ** ಸಾದಯತಿ | **'ಹಗ್ಂಸಃ...ಬೃಹತ್'** ಎಂಬ ಅತಿಚ್ಛಂದಸ್ಸಿನ (ಜಗತೀ) ಕಡೆಯ ಮಂತ್ರದಿಂದ ಅಗ್ನಿಸ್ಥಾಪನೆಯನ್ನು ಮಾಡುತ್ತಾನೆ. |

ವರ್ಷ್ಮ ವಾ ಏಷಾ ಛಂದಸಾಂ ಯದತಿಚ್ಛಂದಾ ವರ್ಷ್ಮೈವೈನಗ್ಂ

ಸಮಾನಾನಾಂ ಕರೋತಿ ಸದ್ವತೀ [(೫)ಭವತಿ ಸತ್ತ್ವ] ಭವತಿ

ಸತ್ತ್ವಮೇವೈನಂ ಗಮಯತಿ ವಾಥ್ಸಪ್ರೇಣೋಪತಿಷ್ಠತ

---

ವರ್ಷ್ಮ । ವೈ । ಏಷಾ । ಛಂದಸಾಮ್ । ಯತ್ । ಅತಿಚ್ಛಂದಾ ಇತ್ಯತಿ-ಛಂದಾಃ । ವರ್ಷ್ಮ । ಏವ । ಏನಮ್ ।

ಸಮಾನಾನಾಮ್ । ಕರೋತಿ । ಸದ್ವತೀತಿ ಸತ್-ವತೀ । (೫) । ಭವತಿ । ಸತ್ತ್ವಮಿತಿ ಸತ್-ತ್ವಮ್ । ಏವ ।

ಏನಮ್ । ಗಮಯತಿ । ವಾಥ್ಸಪ್ರೇಣೇತಿ ವಾಥ್ಸ-ಪ್ರೇಣ । ಉಪೇತಿ । ತಿಷ್ಠತೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಯತ್ ಅತಿಚ್ಛಂದಾಃ | *ಅತಿಚ್ಛಂದಸ್ಸೆಂಬ ಛಂದಸ್ಸುಳ್ಳ ಋಕ್ |
| ಏಷಾ ಛಂದಸಾಮ್ ವರ್ಷ್ಮ ವೈ | ಛಂದಸ್ಸುಗಳ ಶರೀರದಂತೆ ಇದೆ/ಛಂದಸ್ಸುಗಳಲ್ಲಿ ಶ್ರೇಷ್ಠವಾಗಿದೆ. |
| ಏನಮ್ ಸಮಾನಾನಾಮ್ ವರ್ಷ್ಮ ಏವ ಕರೋತಿ | (ಈ ಅತಿಚ್ಛಂದೋಮಂತ್ರದ ಪಾಠವು] ಈ ಯಜಮಾನನನ್ನು ಸಮಾನರಲ್ಲಿ ಶ್ರೇಷ್ಠನನ್ನಾಗಿ ಮಾಡುತ್ತದೆ. |
| ಸದ್ವತೀ ಭವತಿ | ಈ **'ಹಗ್ಂಸಃ...ಬೃಹತ್'** ಎಂಬ ಮಂತ್ರದಲ್ಲಿ **'ಶುಚಿಷತ್'** ಮುಂತಾದ ಹಲವು ಪದಗಳು ಸತ್ ಪದಗಳಿಂದ ಕೂಡಿದೆ. |
| ಏನಮ್ ಸತ್ತ್ವಮ್ ಏವ ಗಮಯತಿ | ಈ ಮಂತ್ರಪಾಠವು ಯಜಮಾನನಿಗೆ ಸತ್ವವನ್ನು (ಶಕ್ತಿಯನ್ನು) ಕೊಡುತ್ತದೆ. |

**ಉಖ್ಯಾಗ್ನಿಯ ಉಪಸ್ಥಾನ; ಅರ್ಥವಾದ**

| | |
|---|---|
| ವಾತ್ಸಪ್ರೇಣ ಉಪ ತಿಷ್ಠತೇ | ಉಖ್ಯಾಗ್ನಿಯನ್ನು *1ವಾತ್ಸಪ್ರಸೂಕ್ತದಿಂದ ಉಪಸ್ಥಾನ ಮಾಡಬೇಕು. |

---

* **ಅತಿಚ್ಛಂದಾಃ=ಜಗತೀ ।** ಪ್ರಕೃತ ಜಗತೀಛಂದಸ್ಸಿನ ಋಕ್ಕಿನಲ್ಲಿ ಅಕ್ಷರ ಸಂಖ್ಯೆಯ ಪರಿಮಾಣದಿಂದ ಎಲ್ಲ ಛಂದಸ್ಸುಗಳೂ (ಗಾಯತ್ರೀ, ಅನುಷ್ಟುಪ್ ಮತ್ತು ತ್ರಿಷ್ಟುಪ್) ಒಳಗೊಳ್ಳುವುದರಿಂದ ಅದು 'ಅತಿಚ್ಛಂದಸ್ಸು' ಎನಿಸಿದೆ. ಅದು ಉಳಿದ ಛಂದಸ್ಸುಗಳ ಶರೀರವಾಗಿದೆ.

*1 **ವಾತ್ಸಪ್ರಮ್**=ವತ್ಸಪ್ರೀಮುನಿಯಿಂದ ತಿಳಿದು ಅಧ್ಯಯನ ಮಾಡಲ್ಪಟ್ಟ ಸೂಕ್ತ.

ಏತೇನ ವೈ ವಥ್ಸಪ್ರೀರ್ಭಾಲಂದನೋऽಗ್ನೇಃ ಪ್ರಿಯಂ ಧಾಮಾವಾರುಂಧಾಗ್ನೇ
ರೇವೈತೇನ ಪ್ರಿಯಂ ಧಾಮಾವರುನ್ಧ ಏಕಾದಶಂ ಭವತ್ಯೇಕಧೈವ ಯಜಮಾನೇ
ವೀರ್ಯಂ ದಧಾತಿ ಸ್ತೋಮೇನ ವೈ ದೇವಾ ಅಸ್ಮಿಲ್ಲೋಕ
ಆರ್ಧ್ನುವಞ್ಛಂದೋಭಿರಮುಷ್ಮಿ-

---

ಏತೇನ । ವೈ । ವಥ್ಸಪ್ರೀರಿತಿ ವಥ್ಸ-ಪ್ರೀಃ । ಭಾಲಂದನಃ । ಅಗ್ನೇಃ । ಪ್ರಿಯಮ್ । ಧಾಮ । ಅವೇತಿ । ಅರುಂಧ । ಅಗ್ನೇಃ । ಏವ । ಏತೇನ । ಪ್ರಿಯಮ್ । ಧಾಮ । ಅವೇತಿ । ರುಂಧೇ । ಏಕಾದಶಮ್ । ಭವತಿ । ಏಕಧೇತ್ಯೇಕ-ಧಾ । ಏವ । ಯಜಮಾನೇ । ವೀರ್ಯಮ್ । ದಧಾತಿ । ಸ್ತೋಮೇನ । ವೈ । ದೇವಾಃ । ಅಸ್ಮಿನ್ನ್ । ಲೋಕೇ । ಆರ್ಧ್ನುವನ್ನ್ । ಛಂದೋಭಿರಿತಿ ಛಂದಃ-ಭಿಃ । ಅಮುಷ್ಮಿನ್ನ್ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ವತ್ಸಪ್ರೀಃ ಭಾಲಂದನಃ ಏತೇನ ವೈ ಅಗ್ನೇಃ ಪ್ರಿಯಮ್ ಧಾಮ ಅವಾರುಂಧ** | ಭಾಲಂದನನ/ಭಲಂದನನ ಮಗನಾದ ವತ್ಸಪ್ರಿಯು ತಾನು ತಿಳಿದ ಈ ಸೂಕ್ತದಿಂದ ಅಗ್ನಿಯ ಪ್ರಿಯವಾದ ಸ್ಥಾನವನ್ನು ಹೊಂದಿದನು. |
| **ಏತೇನ ಅಗ್ನೇಃ ಪ್ರಿಯಮ್ ಧಾಮ ಅವರುಂಧೇ ಏವ** | ಈ ಉಪಸ್ಥಾನದಿಂದ ಯಜಮಾನನು ಅಗ್ನಿಯ ಪ್ರಿಯವಾದ ಸ್ಥಾನವನ್ನು ಹೊಂದುತ್ತಾನೆ. |
| **ಏಕಾದಶಮ್ ಭವತಿ** | ಈ ಸೂಕ್ತವು ಹನ್ನೊಂದು ಮಂತ್ರಗಳಿಂದ ಕೂಡಿದೆ. |
| **ಯಜಮಾನೇ ಏಕಧಾ ಏವ ವೀರ್ಯಮ್ ದಧಾತಿ** | ಯಜಮಾನನಲ್ಲಿ ಏಕಕಾಲದಲ್ಲಿಯೇ ಅಧ್ವರ್ಯುವು ಸಾಮರ್ಥ್ಯವನ್ನು ಉಂಟುಮಾಡುತ್ತಾನೆ. |

**ವಾತ್ಸಪ್ರಸೂಕ್ತದ ಅರ್ಥವಾದ/ವಿಷ್ಣುಕ್ರಮಗಳ ಪ್ರಶಂಸೆ**

| | |
|---|---|
| **ದೇವಾಃ ಸ್ತೋಮೇನ ವೈ ಅಸ್ಮಿನ್ ಲೋಕೇ ಆರ್ಧ್ನುವನ್** | ದೇವತೆಗಳು *ಸ್ತೋಮದಿಂದ ಈ ಭೂಲೋಕದಲ್ಲಿ ವೃದ್ಧಿಯನ್ನು ಹೊಂದಿದರು. |
| **ಅಮುಷ್ಮಿನ್** ಲೋಕೇ **ಛಂದೋಭಿಃ** ಆರ್ಧ್ನುವನ್ | ಛಂದಸ್ಸುಗಳಿಂದ ಪರಲೋಕದಲ್ಲಿ ವೃದ್ಧಿಯನ್ನು ಹೊಂದಿದರು. |

---

* ಸ್ತೋಮ=ಗೀತಿಯಲ್ಲಿ ಆವೃತ್ತವಾಗುವ ಸ್ತುತಿಗೆ ಕಾರಣವಾಗುವ ಋಕ್ಕುಗಳ ಸಮೂಹ.

ಸ್ತೋಮಸ್ಯೇವ ಖಲು ವಾ ಏತದ್ರೂಪಂ ಯದ್ವಾಥ್ಸಪ್ರಂ
ಯದ್ವಾಥ್ಸಪ್ರೇಣೋಪ ತಿಷ್ಠತ[ಉಪತಿಷ್ಠತೇ(೬)]ಇಮಮೇವ ತೇನ
ಲೋಕಮಭಿ ಜಯತಿ ಯದ್ವಿಷ್ಣು ಕ್ರಮಾನ್ಕ್ರಮತೇಽಮುಮೇವ ತೈರ್ಲೋಕಮಭಿ
ಜಯತಿ ಪೂರ್ವೇದ್ಯುಃ ಪ್ರ ಕ್ರಾಮತ್ಯುತ್ತರೇದ್ಯುರುಪ ತಿಷ್ಠತೇ

---

ಸ್ತೋಮಸ್ಯ । ಇವ । ಖಲು । ವೈ । ಏತತ್ । ರೂಪಮ್ । ಯತ್ । ವಾಥ್ಸಪ್ರಮಿತಿ ವಾಥ್ಸ-ಪ್ರಮ್ । ಯತ್ । ವಾಥ್ಸಪ್ರೇಣೇತಿ ವಾಥ್ಸ-ಪ್ರೇಣ । ಉಪತಿಷ್ಠತ ಇತ್ಯುಪ-ತಿಷ್ಠತೇ । (೬) । ಇಮಮ್ । ಏವ । ತೇನ । ಲೋಕಮ್ । ಅಭೀತಿ । ಜಯತಿ । ಯತ್ । ವಿಷ್ಣುಕ್ರಮಾನಿತಿ ವಿಷ್ಣು-ಕ್ರಮಾನ್ । ಕ್ರಮತೇ । ಅಮುಮ್ । ಏವ । ತೈಃ । ಲೋಕಮ್ । ಅಭೀತಿ । ಜಯತಿ । ಪೂರ್ವೇದ್ಯುಃ । ಪ್ರೇತಿ । ಕ್ರಾಮತಿ । ಉತ್ತರೇದ್ಯುಃ । ಉಪೇತಿ । ತಿಷ್ಠತೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಯತ್ ವಾಥ್ಸಪ್ರಮ್ ಸ್ತೋಮಸ್ಯ ಇವ ಏತತ್ ರೂಪಮ್ ಖಲು ವೈ | ಈ ವಾತ್ಸಪ್ರಸೂಕ್ತವು ಮಂತ್ರಸಮೂಹರೂಪವಾಗಿರುವುದರಿಂದ ಸ್ತೋಮದ ರೂಪದಂತೆಯೇ ಇದೆಯಷ್ಟೆ. |
| ಯತ್ ವಾಥ್ಸಪ್ರೇಣ ಉಪತಿಷ್ಠತೇ | ವಾತ್ಸಪ್ರಸೂಕ್ತದಿಂದ ಶಿಕ್ಯಾಗ್ನಿಯ ಉಪಸ್ಥಾನವನ್ನು ಮಾಡುವುದೆಂಬುದು (ಯಾವುದೋ) |
| ಇಮಮ್ ಲೋಕಮ್ ಏವ ತೇನ ಅಭಿಜಯತಿ | ಅದರಿಂದ ಯಜಮಾನನು ಈ ಲೋಕವನ್ನು ಜಯಿಸುತ್ತಾನೆ. |
| ಯತ್ ವಿಷ್ಣುಕ್ರಮಾನ್ ಕ್ರಮತೇ | ಯಜಮಾನನು ವಿಷ್ಣುಕ್ರಮಮಂತ್ರಗಳಿಂದ ಹೆಜ್ಜೆಯಿಡುವುದರಿಂದ |
| ತೈಃ ಅಮುಮ್ ಲೋಕಮ್ ಏವ ಅಭಿಜಯತಿ | (ವಿಷ್ಣುಕ್ರಮಮಂತ್ರಗಳ)ಛಂದಸ್ಸುಗಳ ಬೆಂಬಲದಿಂದ ಸ್ವರ್ಗವನ್ನು ಜಯಿಸಿದವನಾಗುತ್ತಾನೆ. |

ಕಾಲವಿಶೇಷವಿಧಿ

| | |
|---|---|
| ಪೂರ್ವೇದ್ಯುಃ ಪ್ರಕ್ರಾಮತಿ | ಹಿಂದಿನ ದಿನ ವಿಷ್ಣುಕ್ರಮನ್ಯಾಸವನ್ನು ಅನುಷ್ಠಿಸುತ್ತಾನೆ. |
| ಉತ್ತರೇದ್ಯುಃ ಉಪತಿಷ್ಠತೇ | ಮಾರನೆಯ ದಿನ ವಾತ್ಸಪ್ರದಿಂದ ಅಗ್ನಿಯ ಉಪಸ್ಥಾನವನ್ನು ಮಾಡಬೇಕು./ಮಾಡುತ್ತಾನೆ. |

ತಸ್ಮಾದ್ಯೋಗೇಽನ್ಯಾಸಾಂ ಪ್ರಜಾನಾಂ ಮನಃ,

ಕ್ಷೇಮೇಽನ್ಯಾಸಾನ್ತಸ್ಮಾದ್ಯಾಯಾವರಃ, ಕ್ಷೇಮ್ಯಸ್ಯೇಶೇ

ತಸ್ಮಾದ್ಯಾಯಾವರಃ, ಕ್ಷೇಮ್ಯಮಧ್ಯವಸ್ಯತಿ

---

ತಸ್ಮಾತ್ । ಯೋಗೇ । ಅನ್ಯಾಸಾಮ್ । ಪ್ರಜಾನಾಮಿತಿ ಪ್ರ–ಜಾನಾಮ್ । ಮನಃ । ಕ್ಷೇಮೇ । ಅನ್ಯಾಸಾಮ್ । ತಸ್ಮಾತ್ । ಯಾಯಾವರಃ । ಕ್ಷೇಮ್ಯಸ್ಯ । ಈಶೇ । ತಸ್ಮಾತ್ । ಯಾಯಾವರಃ । ಕ್ಷೇಮ್ಯಮ್ । ಅಧ್ಯವಸ್ಯತೀತ್ಯಧಿ–ಅವಸ್ಯತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ತಸ್ಮಾತ್ ಅನ್ಯಾಸಾಮ್ ಪ್ರಜಾನಾಮ್ ಯೋಗೇ ಮನಃ** | ಆದುದರಿಂದ ಕೆಲವರು ಪ್ರಜೆಗಳ ಮನಸ್ಸು *ಯೋಗದಲ್ಲಿ ಆಸಕ್ತವಾಗಿರುತ್ತದೆ. |
| **ಅನ್ಯಾಸಾಮ್** ಪ್ರಜಾನಾಮ್ **ಕ್ಷೇಮೇ** ಮನಃ | ಕೆಲವು ಪ್ರಜೆಗಳ ಮನಸ್ಸು *ಕ್ಷೇಮದಲ್ಲಿ ಆಸಕ್ತವಾಗಿರುತ್ತದೆ. |
| **ತಸ್ಮಾತ್ ಯಾಯಾವರಃ ಕ್ಷೇಮ್ಯಸ್ಯ ಈಶೇ** | ಆದುದರಿಂದ ಪ್ರಯಾಣಶೀಲನಾದ ದೀಕ್ಷಿತನು ಇರುವುದನ್ನು ರಕ್ಷಿಸಿಕೊಳ್ಳಲು ಸಮರ್ಥನಾಗುತ್ತಾನೆ. |
| **ತಸ್ಮಾತ್ ಯಾಯಾವರಃ ಕ್ಷೇಮ್ಯಮ್ ಅಧ್ಯವಸ್ಯತಿ** | (ಆದುದರಿಂದ ಯಾಗವನ್ನು ಅನುಷ್ಠಿಸುವ ದೇವಯಜನಕ್ಕೆ ಬಂದಿರುವ] ಯಜಮಾನನು ಯಾಯಾವರನಾದುದರಿಂದ ಅಗ್ನ್ಯಾದಿಸಾಧನಗಳನ್ನು ಉಪಸ್ಥಾನಾದಿಗಳಿಂದ ರಕ್ಷಿಸಿಕೊಳ್ಳಲು ಯತ್ನಿಸುತ್ತಾನೆ. |

---

ವಿಷ್ಣುಕ್ರಮಗಳನ್ನು ಹಿಂದಿನ ದಿನ ಅನುಷ್ಠಿಸಿ, ಅಗ್ನ್ಯುಪಸ್ಥಾನವನ್ನು ಮರುದಿನ ನಡೆಸಬೇಕೆಂಬ ವಿಧಿಯು ಇದೆ. ಈ ಕ್ರಮಣ–ಉಪಸ್ಥಾನಗಳನ್ನು ಅನುಷ್ಠಿಸುವ ಕಾಲವು ಭಿನ್ನವಾದುದರಿಂದಲೇ ಪ್ರಜೆಗಳ ಮನೋವೃತ್ತಿಯೂ ಭಿನ್ನವಾಗಿಯೇ ಇದೆ. ಕೆಲವರು ಸಂಪಾದಿಸುವ ಸ್ವಭಾವವುಳ್ಳವರು ದ್ರವ್ಯಸಂಗ್ರಹಶೀಲರಾಗಿರುತ್ತಾರೆ. ಸಂಗ್ರಹ ಮಾಡುವ ಸಾಮರ್ಥ್ಯವಿಲ್ಲದವರು ವ್ಯಯವನ್ನು ಮಾಡಲು ಅಂಜಿ ಇರುವುದನ್ನೇ ರಕ್ಷಿಸಿಕೊಳ್ಳುವವರಾಗಿರುತ್ತಾರೆ.

ಹೀಗಾಗಿ ಯಜಮಾನನು ಪ್ರಯಾಣಶೀಲನಾದವನು ಇದ್ದುದನ್ನೇ ಕಾಪಾಡಿಕೊಳ್ಳುವಂತೆ, ಬೇರೆ ಸಾಧನಗಳನ್ನು ಗಳಿಸಲು ಯತ್ನಿಸದೇ, ಇರುವ ಅಗ್ನಿ ಮುಂತಾದ ಸಾಧನವನ್ನೇ ಉಪಸ್ಥಾನ/ಸ್ತೋತ್ರದಿಂದ ಕಾಪಾಡಿಕೊಳ್ಳುವನು.

---

* ಅಲಬ್ಧಸ್ಯ ಲಾಭಃ **ಯೋಗಃ** । ಲಬ್ಧಸ್ಯ ಪರಿಪಾಲನಂ **ಕ್ಷೇಮಃ** ॥

ಮುಷ್ಟೀ ಕರೋತಿ ವಾಚಂ ಯಚ್ಛತಿ ಯಜ್ಞಸ್ಯ ಧೃತ್ಯೈ ॥ ೭-1 ॥

[ಸ್ಪೃಷ್ಟೋಽಭ್ಯೇತಯಾ ಭವತಿ ಸದ್ವತ್ಯುಪತಿಷ್ಠತೇ ದ್ವಿಚತ್ವಾರಿಗ್ಂಶಚ್ಚ ॥]

---

ಮುಷ್ಟೀ ಇತಿ । ಕರೋತಿ । ವಾಚಮ್ । ಯಚ್ಛತಿ । ಯಜ್ಞಸ್ಯ । ಧೃತ್ಯೈ ॥ (೭) ॥

---

| ಬ್ರಾಹ್ಮಣಭಾಗ | ವಿವರಣೆ |
|---|---|
| | ದೀಕ್ಷಾಂಗವಾದ ಕಾಲವಿಶೇಷವಿಧಿ |
| **ಮುಷ್ಟೀ ಕರೋತಿ ವಾಚಮ್ ಯಚ್ಛತಿ** | 'ಸ್ವಾಹಾ ಯಜ್ಞಂ ಮನಸಾ' ಮೊದಲಾದ ಮಂತ್ರಗಳಿಂದ ಮುಷ್ಟಿಗಳನ್ನು ಮಾಡಬೇಕು. ಬಳಿಕ ಮಾತನಾಡದೆ ಮೌನವಾಗಿರಬೇಕು. |
| **ಯಜ್ಞಸ್ಯ ಧೃತ್ಯೈ** | ಇದರಿಂದ ಯಜ್ಞವು ಯಜಮಾನನಲ್ಲಿ ಸ್ಥಿರವಾಗಿರುತ್ತದೆ. |

---

ಮುಷ್ಟಿಯನ್ನು ಬಿಗಿಯುವುದು, ಮೌನವನ್ನು ಅವಲಂಬಿಸುವುದು ಯಜ್ಞವು ಯಜಮಾನನಲ್ಲಿ ನೆಲೆಸುವಂತೆ ಮಾಡುತ್ತದೆ.

ಖ❀ಡಖ❀ಡ

## ॥ ದ್ವಿತೀಯೋಽನುವಾಕಃ ॥

ಅನ್ನಪತೇಽನ್ನಸ್ಯ ನೋ ದೇಹೀತ್ಯಾಹಾಗ್ನಿರ್ವಾ ಅನ್ನಪತಿಸ್ಸ ಏವಾಸ್ಮಾ ಅನ್ನಂ ಪ್ರಯಚ್ಛತ್ಯನಮೀವಸ್ಯ ಶುಷ್ಮಿಣ ಇತ್ಯಾಹಾ–

---

ಅನ್ನಪತ ಇತ್ಯನ್ನ–ಪತೇ । ಅನ್ನಸ್ಯ । ನಃ । ದೇಹಿ । ಇತಿ । ಆಹ । ಅಗ್ನಿಃ । ವೈ । ಅನ್ನಪತಿರಿತ್ಯನ್ನ–ಪತಿಃ । ಸಃ । ಏವ । ಅಸ್ಮೈ । ಅನ್ನಮ್ । ಪ್ರೇತಿ । ಯಚ್ಛತಿ । ಅನಮೀವಸ್ಯ । ಶುಷ್ಮಿಣಃ । ಇತಿ । ಆಹ ।

---

ಹಿಂದಿನ ಅನುವಾಕದಲ್ಲಿ ಉಖ್ಯಾಗ್ನಿಯ ಉಪಸ್ಥಾನವು ಉಕ್ತವಾಗಿದೆ. ಈ ಎರಡನೆಯ ಅನುವಾಕದಲ್ಲಿ ಚಯನಾನುಷ್ಠಾನಕ್ಕಾಗಿ ದೇವಯಜನಪರಿಗ್ರಹವು ಉಕ್ತವಾಗಿದೆ.

ಇಲ್ಲಿಯ ಕಲ್ಪಸೂತ್ರವು ಹೀಗಿದೆ; **'ವ್ರತಕಾಲೇ ಅನ್ನಪತೇಽನ್ನಸ್ಯ ನೋ ದೇಹಿ ಇತಿ ಔದುಂಬರೀಂ ಸಮಿಧಮ್ ವ್ರತೇ ಅಭ್ಯಾದಧಾತಿ ಜಪತಿ ವಾ ಇತಿ' [ಆಪ. ಶ್ರೌ. ಸೂ. 16.11.3]**

ಯಜಮಾನನು 'ಅನ್ನಪತೇ' ಎಂಬ ಮಂತ್ರದಿಂದ ಅತ್ತಿಯ ಸಮಿತ್ತನ್ನು ವ್ರತಕ್ಕಾಗಿ ಇರುವ ಕ್ಷೀರದ್ರವ್ಯದಲ್ಲಿ ಆಧಾನ ಮಾಡಬೇಕು. ಅಥವಾ ಮಂತ್ರವನ್ನು ಜಪಿಸಬೇಕು.

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ಸಮಿದಾಧಾನ/ಜಪ** |
| **ಅನ್ನಪತೇ** ಅನಮೀವಸ್ಯ ಶುಷ್ಮಿಣಃ **ಅನ್ನಸ್ಯ ನಃ ದೇಹಿ ಇತಿ ಆಹ** | 'ಅನ್ನಕ್ಕೆ ಒಡೆಯನಾದ ಅಗ್ನಿಯೇ! ನಮಗೆ ರೋಗ ರಹಿತವಾದ, ಬಲಹೇತುವಾದ ಅನ್ನದ ಪ್ರಾಪ್ತಿಯನ್ನು ಕೊಡು' ಎಂದು ಈ ಮಂತ್ರಭಾಗವು ಹೇಳುತ್ತದೆ. |
| **ಅಗ್ನಿಃ ವೈ ಅನ್ನಪತಿಃ** | ಅಗ್ನಿಯೇ ಅನ್ನದ ರಕ್ಷಕನು. ಒಡೆಯನು. |
| **ಸಃ ಏವ ಅಸ್ಮೈ ಅನ್ನಮ್ ಪ್ರ ಯಚ್ಛತಿ** | ಅವನೇ ಈ ಯಜಮಾನನಿಗೆ ಅನ್ನವನ್ನು ಕೊಡುತ್ತಾನೆ. |
| **ಅನಮೀವಸ್ಯ ಶುಷ್ಮಿಣಃ ಇತಿ ಆಹ** | ಶ್ರುತಿಯು **'ಅನಮೀವಸ್ಯ ಶುಷ್ಮಿಣಃ'** ಎಂದು ಹೇಳುತ್ತದೆ. |

ಯಕ್ಷ್ಮಸ್ಯೇತಿ ವಾವೈತದಾಹ ಪ್ರ ಪ್ರ ದಾತಾರಂ ತಾರಿಷ ಊರ್ಜಂ ನೋ ಧೇಹಿ ದ್ವಿಪದೇ ಚತುಷ್ಪದ ಇತ್ಯಾಹಾಽಽಶಿಷಮೇವೈತಾಮಾ ಶಾಸ್ತ ಉದು ತ್ವಾ ವಿಶ್ವೇ ದೇವಾ ಇತ್ಯಾಹ ಪ್ರಾಣಾ ವೈ ವಿಶ್ವೇ ದೇವಾಃ [(೮)]

---

ಅಯಕ್ಷ್ಮಸ್ಯ । ಇತಿ । ವಾವ । ಏತತ್ । ಆಹ । ಪ್ರೇತಿ । ಪ್ರದಾತಾರಮಿತಿ ಪ್ರ-ದಾತಾರಮ್ । ತಾರಿಷಃ । ಊರ್ಜಮ್ । ನಃ । ಧೇಹಿ । ದ್ವಿಪದ ಇತಿ ದ್ವಿ-ಪದೇ । ಚತುಷ್ಪದ ಇತಿ ಚತುಃ-ಪದೇ । ಇತಿ । ಆಹ । ಆಶಿಷಮಿತ್ಯಾ-ಶಿಷಮ್ । ಏವ । ಏತಾಮ್ । ಏತಿ । ಶಾಸ್ತೇ । ಉದಿತಿ । ಉ । ತ್ವಾ । ವಿಶ್ವೇ । ದೇವಾಃ । ಇತಿ । ಆಹ । ಪ್ರಾಣಾ ಇತಿ ಪ್ರ-ಅನಾಃ । ವೈ । ವಿಶ್ವೇ । ದೇವಾಃ । (೮) ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಏತತ್ ಅಯಕ್ಷ್ಮಸ್ಯ ಇತಿ ವಾವ ಆಹ | ರೋಗರಹಿತವಾದ ಎಂಬ ಶಬ್ದಾರ್ಥವನ್ನೇ ಇದು ಹೇಳುತ್ತದೆ. ಈ ಮಂತ್ರಭಾಗಾರ್ಥವು ಸ್ಪಷ್ಟವಾಗಿದೆ. |
| ಪ್ರ ಪ್ರದಾತಾರಮ್ ತಾರಿಷಃ ಊರ್ಜಮ್ ನಃ ಧೇಹಿ ದ್ವಿಪದೇ ಚತುಷ್ಪದೇ ಇತಿ ಆಹ | 'ಹವಿಸ್ಸನ್ನು ಸಮರ್ಪಿಸುವ ಯಜಮಾನನನ್ನು ವೃದ್ಧಿಗೊಳಿಸು/ಪಾಪದಿಂದ ದೂರ ಮಾಡು. ನಮಗೆ ಸಂಬಂಧಪಟ್ಟ ಎರಡು ಕಾಲಿನ ಪ್ರಾಣಿಗಳಿಗೂ, ನಾಲ್ಕು ಕಾಲಿನ ಪ್ರಾಣಿಗಳಿಗೂ ಬಲವನ್ನು ಕೊಡು' ಎಂದು ಈ ಮಂತ್ರವು ಹೇಳುತ್ತದೆ. |
| ಏತಾಮ್ ಆಶಿಷಮ್ ಏವ ಆಶಾಸ್ತೇ | ಈ ಮಂತ್ರವು ಶುಭಾಶಂಸನೆಯನ್ನೇ ತಿಳಿಸುತ್ತದೆ. |

**ಉಖ್ಯಾಗ್ನಿಯನ್ನು ಮೇಲಕ್ಕೆ ಎತ್ತುವಿಕೆ**

| | |
|---|---|
| ಉದು ತ್ವಾ ವಿಶ್ವೇ ದೇವಾಃ ಇತಿ ಆಹ | 'ಹೇ! ಅಗ್ನಿಯೇ! ಸರ್ವದೇವತೆಗಳೂ/ಪ್ರಾಣಗಳೂ ನಿನ್ನನ್ನು ಮೇಲೆತ್ತಲಿ' ಎಂದು ಈ ಮಂತ್ರಭಾಗವು ಹೇಳುತ್ತದೆ. |
| ಪ್ರಾಣಾಃ ವೈ ವಿಶ್ವೇ ದೇವಾಃ* | ತಮ್ಮ ಕಾರ್ಯದಲ್ಲಿ ಪ್ರವರ್ತಿಸುವ ಪ್ರಾಣಗಳೇ ದೇವತೆಗಳು. |

---

*ದೀವ್ಯಂತಿ=ಸ್ವಸ್ವಕಾರ್ಯೇಷು ವ್ಯವಹರಂತಿ ಇತಿ ದೇವಾಃ=ಪ್ರಾಣಾಃ । ತಮ್ಮ ತಮ್ಮ ಕಾರ್ಯದಲ್ಲಿ ಪ್ರವರ್ತಿಸುವವರು ದೇವಾಃ=ಪ್ರಾಣಾಃ ॥

ಪ್ರಾಣೈರೇವೈನಮುದ್ಯಚ್ಛತೇಽಗ್ನೇ ಭರಂತು ಚಿತ್ತಿಭಿರಿತ್ಯಾಹ ಯಸ್ಮಾ ಏವೈನಂ ಚಿತ್ತಾಯೋದ್ಯಚ್ಛತೇ ತೇನೈವೈನಗ್ಂ ಸಮರ್ಧಯತಿ ಚತಸೃಭಿರಾಸಾದಯತಿ ಚತ್ವಾರಿ ಛಂದಾಗ್ಂಸಿ ಛಂದೋಭಿರೇವಾ–

---

ಪ್ರಾಣೈರಿತಿ ಪ್ರ–ಅನೈಃ। ಏವ। ಏನಮ್। ಉದಿತಿ। ಯಚ್ಛತೇ। ಅಗ್ನೇ। ಭರಂತು। ಚಿತ್ತಿಭಿರಿತಿ ಚಿತ್ತಿ–ಭಿಃ। ಇತಿ। ಆಹ। ಯಸ್ಮೈ। ಏವ। ಏನಮ್। ಚಿತ್ತಾಯ। ಉದ್ಯಚ್ಛತ ಇತ್ಯುತ್–ಯಚ್ಛತೇ। ತೇನ। ಏವ। ಏನಮ್। ಸಮಿತಿ। ಅರ್ಧಯತಿ। ಚತಸೃಭಿರಿತಿ ಚತಸೃ–ಭಿಃ। ಏತಿ। ಸಾದಯತಿ। ಚತ್ವಾರಿ। ಛಂದಾಗ್ಂಸಿ। ಛಂದೋಭಿರಿತಿ ಛಂದಃ–ಭಿಃ। ಏವ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಪ್ರಾಣೈಃ ಏವ ಏನಮ್ ಉದ್ಯಚ್ಛತೇ** | ಅಧ್ವರ್ಯುವು ಇಂತಹ ಪ್ರಾಣಗಳಿಂದಲೇ ಅಗ್ನಿಯನ್ನು ಮೇಲಕ್ಕೆ ಎತ್ತಿದವನಾಗುತ್ತಾನೆ. |

**ಉಖ್ಯದ ಉದ್ಯಮನಮಂತ್ರದ ವಿವರಣೆ**

| | |
|---|---|
| **ಅಗ್ನೇ ಭರಂತು ಚಿತ್ತಿಭಿಃ ಇತಿ ಆಹ ಯಸ್ಮೈ ಏವ ಏನಮ್ ಚಿತ್ತಾಯ ಉದ್ಯಚ್ಛತೇ ತೇನ ಏವ ಏನಮ್ ಸಮರ್ಧಯತಿ** | ಶ್ರುತಿಯು 'ಹೇ ಅಗ್ನಿಯೇ! ಚಿತ್ತಾಭಿಪ್ರೇತವಾದ ಕಾರ್ಯವು ಸಮೃದ್ಧಿಯನ್ನು ಉಂಟುಮಾಡಲಿ' ಎಂದು ಹೇಳುತ್ತದೆ. ಹೇ! ಅಗ್ನಿಯೇ! ಯಾವ ಅಭಿಪ್ರೇತವಾದ ಕಾರ್ಯಕ್ಕಾಗಿ ಈ ಉದ್ಯಮನವಿದೆಯೋ ಆ ಕಾರ್ಯದಿಂದಲೇ ನಿನ್ನನ್ನು ಸಮೃದ್ಧಗೊಳಿಸುತ್ತಾನೆ. |

**ಗಾಡಿಯ ಅಗ್ರಭಾಗದಲ್ಲಿ ಉಖ್ಯಾಗ್ನಿಸ್ಥಾಪನ/ಅರ್ಥವಾದ**

| | |
|---|---|
| **ಚತಸೃಭಿಃ ಆಸಾದಯತಿ** | 'ಸೀದ ತ್ವಮ್' ಎಂದು ಪ್ರಾರಂಭವಾಗುವ ನಾಲ್ಕು ಮಂತ್ರಗಳಿಂದ ಉಖ್ಯಾಗ್ನಿಯನ್ನು ಆಸಾದನ ಮಾಡಬೇಕು. |
| **ಛಂದಾಗ್ಂಸಿ ಚತ್ವಾರಿ** | ಗಾಯತ್ರೀ ಮುಂತಾದ ಛಂದಸ್ಸುಗಳು ನಾಲ್ಕು. |
| **ಛಂದೋಭಿಃ ಏವ** ಆಸಾದಯತಿ | (ಇದರಿಂದ) ಛಂದೋದೇವತೆಗಳ ಅನುಗ್ರಹದಿಂದಲೇ ಆಸಾದನ ಮಾಡಿದಂತಾಗುತ್ತದೆ. |

–ತಿಚ್ಛಂದಸೋತ್ತಮಯಾ ವರ್ಷ್ಮ ವಾ ಏಷಾ ಛಂದಸಾಂ ಯದತಿಚ್ಛಂದಾ ವರ್ಷ್ಮೈ
ವೈನಗ್ಂ ಸಮಾನಾನಾಂ ಕರೋತಿ ಸದ್ವತೀ ಭವತಿ ಸತ್ತ್ವಮೇವೈನಂ ಗಮಯತಿ
ಪ್ರೇದಗ್ನೇ ಜ್ಯೋತಿಷ್ಮಾನ್,[(೯)]ಯಾಹೀತ್ಯಾಹ ಜ್ಯೋತಿರೇವಾಸ್ಮಿನ್ದಧಾತಿ

---

ಅತಿಚ್ಛಂದಸೇತ್ಯತಿ–ಛಂದಸಾ । ಉತ್ತಮಯೇತ್ಯುತ್–ತಮಯಾ । ವರ್ಷ್ಮ । ವೈ । ಏಷಾ । ಛಂದಸಾಮ್ । ಯತ್ ।
ಅತಿಚ್ಛಂದಾ ಇತ್ಯತಿ–ಛಂದಾಃ । ವರ್ಷ್ಮ । ಏವ । ಏನಮ್ । ಸಮಾನಾನಾಮ್ । ಕರೋತಿ । ಸದ್ವತೀತಿ ಸತ್–ವತೀ ।
ಭವತಿ । ಸತ್ತ್ವಮಿತಿ ಸತ್–ತ್ವಮ್ । ಏವ । ಏನಮ್ । ಗಮಯತಿ । ಪ್ರೇತಿ । ಇತ್ । ಅಗ್ನೇ । ಜ್ಯೋತಿಷ್ಮಾನ್ । (೯) ।
ಯಾಹಿ । ಇತಿ । ಆಹ । ಜ್ಯೋತಿಃ । ಏವ । ಅಸ್ಮಿನ್ನ್ । ದಧಾತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಅತಿಚ್ಛಂದಸಾ ಉತ್ತಮಯಾ** ಆಸಾದಯತಿ | ಕೊನೆಯದಾಗಿ **'ಹಗ್ಂಸಃ ಶುಚಿಷತ್'** ಎಂಬ ಅತಿಚ್ಛಂದಸ್ಸಿನ ಮಂತ್ರದಿಂದ ಆಸಾದನ ಮಾಡಬೇಕು. |
| **ಯತ್ ಅತಿಚ್ಛಂದಾಃ** | *ಅತಿಚ್ಛಂದಸ್ಸೆಂಬ ಛಂದಸ್ಸುಳ್ಳ ಋಕ್ಕು |
| **ಏಷಾ ಛಂದಸಾಮ್ ವರ್ಷ್ಮ ವೈ** | ಛಂದಸ್ಸುಗಳ ಶರೀರದಂತೆ ಇದೆ/ಛಂದಸ್ಸುಗಳಲ್ಲಿ ಶ್ರೇಷ್ಠವಾಗಿದೆ. |
| **ಏನಮ್ ಸಮಾನಾನಾಮ್ ವರ್ಷ್ಮ ಏವ ಕರೋತಿ** | ಈ ಅತಿಚ್ಛಂದಸ್ಸು ಯಜಮಾನನನ್ನು ಸಮಾನರಲ್ಲಿ ಮೇಲಾದವನನ್ನಾಗಿಸುತ್ತದೆ. |
| **ಸದ್ವತೀ ಭವತಿ** | ಈ **'ಹಗ್ಂಸಃ'** ಎಂಬ ಮಂತ್ರವು ಅನೇಕ **'ಸತ್'** ಪದ ಗಳಿಂದ ಒಡಗೂಡಿದೆ. |
| **ಸತ್ತ್ವಮ್ ಏವ ಏನಮ್ ಗಮಯತಿ** | ಈ ಮಂತ್ರಪಾಠವು ಯಜಮಾನನನ್ನು ಶಕ್ತಿಯುತನ ನ್ನಾಗಿಸುತ್ತದೆ. |

**ಪ್ರಯಾಣಮಂತ್ರ/ಅರ್ಥವಾದ**

| | |
|---|---|
| **ಪ್ರೇದಗ್ನೇ ಜ್ಯೋತಿಷ್ಮಾನ್ ಯಾಹಿ ಇತಿ ಆಹ** | 'ಅಗ್ನಿಯೇ! ಪ್ರಕಾಶಮಾನನಾಗಿ ದೇವಯಜನಕ್ಕೆ ಪ್ರಯಾಣ ಮಾಡು' ಎಂದು ಈ ಮಂತ್ರವು ಹೇಳುತ್ತದೆ. |
| **ಅಸ್ಮಿನ್ ಜ್ಯೋತಿಃ ಏವ ದಧಾತಿ** | ಇದರಿಂದ ಅಧ್ವರ್ಯುವು ಈ ಯಜಮಾನನಲ್ಲಿ ತೇಜಸ್ಸನ್ನು ಉಂಟು ಮಾಡುತ್ತಾನೆ. |

---

* ೧೫೫ ಪುಟಸಂಖ್ಯೆಯನ್ನು ನೋಡಿ.

ತನುವಾ ವಾ ಏಷ ಹಿನಸ್ತಿ ಯಗ್ಂ ಹಿನಸ್ತಿ ಮಾ ಹಿಗ್ಂಸೀಸ್ತನುವಾ ಪ್ರಜಾ ಇತ್ಯಾಹ ಪ್ರಜಾಭ್ಯ ಏವೈನಗ್ಂ ಶಮಯತಿ ರಕ್ಷಾಗ್ಂಸಿ ವಾ ಏತದ್ಯಜ್ಞಗ್ಂ ಸಚಂತೇ ಯದನ ಉತ್ಸರ್ಜತ್ಯಕ್ರನ್ದದಿತ್ಯನ್ವಾಹ ರಕ್ಷಸಾಮಪಹತ್ಯಾ

ತನುವಾ । ವೈ । ಏಷಃ । ಹಿನಸ್ತಿ । ಯಮ್ । ಹಿನಸ್ತಿ । ಮಾ । ಹಿಗ್ಂಸೀಃ । ತನುವಾ । ಪ್ರಜಾ ಇತಿ ಪ್ರ-ಜಾಃ । ಇತಿ । ಆಹ । ಪ್ರಜಾಭ್ಯ ಇತಿ ಪ್ರ-ಜಾಭ್ಯಃ । ಏವ । ಏನಮ್ । ಶಮಯತಿ । ರಕ್ಷಾಗ್ಂಸಿ । ವೈ । ಏತತ್ । ಯಜ್ಞಮ್ । ಸಚಂತೇ । ಯತ್ । ಅನಃ । ಉತ್ಸರ್ಜತೀತ್ಯುತ್-ಸರ್ಜತಿ । ಅಕ್ರಂದತ್ । ಇತಿ । ಅನ್ವಿತಿ । ಆಹ । ರಕ್ಷಸಾಮ್ । ಅಪಹತ್ಯಾ ಇತ್ಯಪ-ಹತ್ಯೈ ॥

| ಬ್ರಾಹ್ಮಣಭಾಗ | ವಿವರಣೆ |
|---|---|
| | **ಅಗ್ನಿಯಿಂದ ಹಿಂಸೆಯಾಗದಿರಲೆಂಬ ಪ್ರಾರ್ಥನೆ/ಅರ್ಥವಾದ** |
| **ಯಮ್ ಏಷಃ ಹಿನಸ್ತಿ ತನುವಾ ವೈ ಹಿನಸ್ತಿ** | ತಾನು ಹಿಂಸಿಸಬೇಕೆಂದಿರುವವನನ್ನು ಈ ಅಗ್ನಿಯು ತನ್ನ ಶರೀರದಿಂದಲೇ ಜ್ವಾಲೆಯ ಮೂಲಕ ಹಿಂಸಿಸುತ್ತಾನೆ. |
| **ತನುವಾ ಪ್ರಜಾಃ ಮಾ ಹಿಗ್ಂಸೀಃ ಇತಿ ಆಹ** | (ಇಂತಹ ಹಿಂಸೆಯ ಪರಿಹಾರಕ್ಕಾಗಿ) 'ಅಗ್ನಿಯೇ! ನಿನ್ನ ಶರೀರದಿಂದ ಪ್ರಜೆಗಳನ್ನು ಹಿಂಸಿಸಬೇಡ' ಎಂದು ಅಧ್ವರ್ಯುವು ಪ್ರಾರ್ಥಿಸುತ್ತಾನೆ. |
| **ಏನಮ್ ಪ್ರಜಾಭ್ಯಃ ಏವ ಶಮಯತಿ** | (ಅಧ್ವರ್ಯುವು ಈ ಪ್ರಾರ್ಥನೆಯಿಂದ) ಅಗ್ನಿಯು ಪ್ರಸನ್ನನಾಗಿ ಪ್ರಜೆಗಳನ್ನು ಹಿಂಸಿಸದೆ ಶಾಂತನಾಗಿರುವಂತೆ ಮಾಡುತ್ತಾನೆ. |
| | **ರಕ್ಷೋಬಾಧಾನಿವಾರಕಮಂತ್ರಜಪ/ಅರ್ಥವಾದ** |
| **ಯತ್ ಅನಃ ಉತ್ಸರ್ಜತಿ ಏತತ್ ಯಜ್ಞಮ್** | ಪ್ರಯಾಣಕಾಲದಲ್ಲಿ ಶಬ್ದ ಮಾಡುವ ಶಕಟವೇ ಮೊದಲಾದ ಯಜ್ಞಸಾಧನವನ್ನು |
| **ರಕ್ಷಾಗ್ಂಸಿ ಸಚಂತೇ ವೈ** | ರಕ್ಷೋಗಣಗಳು ಅಡರಿ (ನಾಶಪಡಿಸುತ್ತವೆ) |
| **ಅಕ್ರಂದತ್ ಇತಿ ಅನ್ವಾಹ** | ಅದಕ್ಕಾಗಿ 'ಅಕ್ರಂದತ್...ಅಂತಃ' ಎಂಬ ಮಂತ್ರವನ್ನು ಶಬ್ದವನ್ನು ಅನುಸರಿಸಿ ಹೇಳಬೇಕು. |
| **ರಕ್ಷಸಾಮ್ ಅಪಹತ್ಯೈ** | ಈ ಮಂತ್ರಜಪದಿಂದ ರಕ್ಷೋಬಾಧೆಯ ಪರಿಹಾರವಾಗುತ್ತದೆ. |

ಅನಸಾ ವಹಂತ್ಯಪಚಿತಿಮೇವಾಸ್ಮಿನ್ದಧಾತಿ ತಸ್ಮಾದನಸ್ವೀ ಚ ರಥೀ ಚಾತಿಥೀನಾ ಮಪಚಿತತಮಾ[..ಚಿತತಮೌ(೧೧)ಅಪಚಿತಿ..]ವಪಚಿತಿಮಾನ್ಭವತಿ ಯ ಏವಂ ವೇದ ಸಮಿಧಾಽಗ್ನಿಂ ದುವಸ್ಯತೇತಿ ಘೃತಾನುಷಿಕ್ತಾಮವಸಿತೇ

---

ಅನಸಾ । ವಹಂತಿ । ಅಪಚಿತಿಮಿತ್ಯಪ–ಚಿತಿಮ್ । ಏವ । ಅಸ್ಮಿನ್ನ್ । ದಧಾತಿ । ತಸ್ಮಾತ್ । ಅನಸ್ವೀ । ಚ । ರಥೀ । ಚ । ಅತಿಥೀನಾಮ್ । ಅಪಚಿತತಮಾವಿತ್ಯಪಚಿತ–ತಮೌ । (೧೧) । ಅಪಚಿತಿಮಾನಿತ್ಯಪಚಿತಿ–ಮಾನ್ । ಭವತಿ । ಯಃ । ಏವಮ್ । ವೇದ । ಸಮಿಧೇತಿ ಸಮ್–ಇಧಾ । ಅಗ್ನಿಮ್ । ದುವಸ್ಯತ । ಇತಿ । ಘೃತಾನುಷಿಕ್ತಾಮಿತಿ ಘೃತ–ಅನುಷಿಕ್ತಾಮ್ । ಅವಸಿತ ಇತ್ಯವ–ಸಿತೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|

**ಶಕಟದಿಂದ ದೇವಯಜನಕ್ಕೆ ಅಗ್ನಿಯನ್ನು ಒಯ್ಯುವ ವಿಧಿ–ಅರ್ಥವಾದ–ವೇದನಪ್ರಶಂಸೆ**

| | |
|---|---|
| **ಅನಸಾ ವಹಂತಿ** | ಅಗ್ನಿಯನ್ನು ಶಕಟದಲ್ಲಿಟ್ಟು ಕೊಂಡೊಯ್ಯಬೇಕು. |
| **ಅಸ್ಮಿನ್ ಅಪಚಿತಿಮ್ ಏವ ದಧಾತಿ** | ಇದರಿಂದ ಈ ಅಗ್ನಿಗೆ ಪೂಜೆಯನ್ನು ಸಲ್ಲಿಸಿದಂತಾಗುತ್ತದೆ. |
| **ತಸ್ಮಾತ್ ಅನಸ್ವೀ ಚ ರಥೀ ಚ** | ಆದುದರಿಂದ ಲೋಕದಲ್ಲಿ ಬಂಡಿಯಲ್ಲಿ ಹೋಗುವವನೂ ರಥವನ್ನೇರಿ ಹೋಗುವವನೂ |
| **ಅತಿಥೀನಾಮ್ ಅಪಚಿತತಮೌ** | ಅತಿಥಿಗಳ ಪೈಕಿ ಹೆಚ್ಚು ಗೌರವವನ್ನು ಪಡೆಯುವರು. |
| **ಯಃ ಏವಮ್ ವೇದ** | ಯಾರು ಈ ರೀತಿ ತಿಳಿಯುವನೋ (ಅವನು) |
| **ಅಪಚಿತಿಮಾನ್ ಭವತಿ** | ಲೋಕದಲ್ಲಿ ಗೌರವಕ್ಕೆ ಪಾತ್ರನಾಗುವನು. (ಇದು ಅರಿವಿನ ಪ್ರಶಂಸೆ) |

**ಸಮಿದಾಧಾನ–ಪ್ರಶಂಸೆ**

| | |
|---|---|
| **ಸಮಿಧಾಗ್ನಿಮ್ ದುವಸ್ಯತ ಇತಿ ಅವಸಿತೇ ಘೃತಾನುಷಿಕ್ತಾಮ್ ಸಮಿಧಮ್ ಆ ದಧಾತಿ** | ಪ್ರಯಾಣವು ಮುಗಿದ ಮೇಲೆ 'ಸಮಿಧಾಗ್ನಿಂ ದುವಸ್ಯತ...' ಎಂಬ ಮಂತ್ರದಿಂದ ತುಪ್ಪದಲ್ಲಿ ಅದ್ದಿರುವ ಸಮಿತ್ತನ್ನು ಅಗ್ನಿಯಲ್ಲಿ ಹಾಕಬೇಕು. |

ಸಮಿಧಮಾ ದಧಾತಿ ಯಥಾಽತಿಥಯ ಆಗತಾಯ ಸರ್ಪಿಷ್ವದಾತಿಥ್ಯಂ ಕ್ರಿಯತೇ ತಾದೃಗೇವ ತದ್ಗಾಯತ್ರಿಯಾ ಬ್ರಾಹ್ಮಣಸ್ಯ ಗಾಯತ್ರೋ ಹಿ ಬ್ರಾಹ್ಮಣಸ್ತ್ರಿಷ್ಟುಭಾ ರಾಜನ್ಯಸ್ಯ ತ್ರೈಷ್ಟುಭೋ ಹಿ ರಾಜನ್ಯೋ–

---

ಸಮಿಧಮಿತಿ ಸಮ್–ಇಧಮ್ । ಏತಿ । ದಧಾತಿ । ಯಥಾ । ಅತಿಥಯೇ । ಆಗತಾಯೇತ್ಯಾ–ಗತಾಯ । ಸರ್ಪಿಷ್ವತ್ । ಆತಿಥ್ಯಮ್ । ಕ್ರಿಯತೇ । ತಾದೃಕ್ । ಏವ । ತತ್ । ಗಾಯತ್ರಿಯಾ । ಬ್ರಾಹ್ಮಣಸ್ಯ । ಗಾಯತ್ರಃ । ಹಿ । ಬ್ರಾಹ್ಮಣಃ । ತ್ರಿಷ್ಟುಭಾ । ರಾಜನ್ಯಸ್ಯ । ತ್ರೈಷ್ಟುಭಃ । ಹಿ । ರಾಜನ್ಯಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯಥಾ ಆಗತಾಯ ಅತಿಥಯೇ ಸರ್ಪಿಷ್ವತ್ ಆತಿಥ್ಯಮ್ ಕ್ರಿಯತೇ ತಾದೃಕ್ ಏವ ತತ್** | ಮನೆಗೆ ಬಂದ ಅತಿಥಿಗೆ ತುಪ್ಪದಿಂದ ಕೂಡಿರುವ ಆತಿಥ್ಯವನ್ನು ಮಾಡುವಂತೆ ಇದು ಅಗ್ನಿಯ ಆತಿಥ್ಯವಾಗುತ್ತದೆ. |

**ಮಂತ್ರಗಳ ವ್ಯವಸ್ಥೆ–ಅರ್ಥವಾದ**

| | |
|---|---|
| **ಗಾಯತ್ರಿಯಾ ಬ್ರಾಹ್ಮಣಸ್ಯ** | **'ಸಮಿಧಾಗ್ನಿಮ್'** ಎಂಬ ಗಾಯತ್ರೀಛಂದಸ್ಸಿನ ಮಂತ್ರದಿಂದ ಬ್ರಾಹ್ಮಣ ಯಜಮಾನನಿಗಾಗಿ ಸಮಿದಾಧಾನವನ್ನು ಮಾಡಬೇಕು. |
| **ಬ್ರಾಹ್ಮಣಃ ಗಾಯತ್ರಃ ಹಿ** | ಬ್ರಾಹ್ಮಣನು ಗಾಯತ್ರೀಛಂದಸ್ಸಿನವನಷ್ಟೆ. |
| **ತ್ರಿಷ್ಟುಭಾ ರಾಜನ್ಯಸ್ಯ** | **'ಪ್ರ ಪ್ರಾಯಮಗ್ನಿಃ'** ಎಂಬ ತ್ರಿಷ್ಟುಪ್ ಛಂದಸ್ಸಿನ ಮಂತ್ರದಿಂದ ರಾಜನ್ಯನಿಗಾಗಿ ಸಮಿದಾಧಾನವನ್ನು ಮಾಡಬೇಕು. |
| **ರಾಜನ್ಯಃ ತ್ರೈಷ್ಟುಭಃ ಹಿ** | ಕ್ಷತ್ರಿಯನು ತ್ರಿಷ್ಟುಪ್ ಛಂದಸ್ಸಿಗೆ ಸಂಬಂಧಿಸಿದವನಷ್ಟೆ. |

---

**ತಾತ್ಪರ್ಯ:**–ಬ್ರಾಹ್ಮಣ–ಕ್ಷತ್ರಿಯರಿಗೆ ಸಂಬಂಧಿಸಿದ ಛಂದಸ್ಸುಗಳಿಂದ ಸಮಿದಾಧಾನವನ್ನು ಮಾಡಬೇಕು.

ऽಪ್ಸು ಭಸ್ಮ ಪ್ರ ವೇಶಯತ್ಯಪ್ಸುಯೋನಿರ್ವಾ ಅಗ್ನಿಸ್ಸ್ವಾಮೇವೈನಂ ಯೋನಿಂ ಗಮಯತಿ ತಿಸೃಭಿಃ ಪ್ರವೇಶಯತಿ ತ್ರಿವೃದ್ವಾ [ತ್ರಿವೃದ್ವೈ(೧೨)] ಅಗ್ನಿರ್ಯಾವಾನೇವಾಗ್ನಿಸ್ತಂ ಪ್ರತಿಷ್ಠಾಂ ಗಮಯತಿ

---

ಅಪ್ಸ್ವಿತ್ಯಪ್–ಸು । ಭಸ್ಮ । ಪ್ರೇತಿ । ವೇಶಯತಿ । ಅಪ್ಸುಯೋನಿರಿತ್ಯಪ್ಸು–ಯೋನಿಃ । ಅಗ್ನಿಃ । ಸ್ವಾಮ್ । ಏವ । ಏನಮ್ । ಯೋನಿಮ್ । ಗಮಯತಿ । ತಿಸೃಭಿರಿತಿ ತಿಸೃ–ಭಿಃ । ಪ್ರೇತಿ । ವೇಶಯತಿ । ತ್ರಿವೃದಿತಿ ತ್ರಿ–ವೃತ್ । ವೈ । (೧೨) । ಅಗ್ನಿಃ । ಯಾವಾನ್ । ಏವ । ಅಗ್ನಿಃ । ತಮ್ । ಪ್ರತಿಷ್ಠಾಮಿತಿ ಪ್ರತಿ–ಸ್ಥಾಮ್ । ಗಮಯತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|

ಉಖ್ಯದ ಭಸ್ಮವನ್ನು ನೀರಿನಲ್ಲಿ ಹಾಕುವಿಕೆ ವಿವರಣೆ–ಅರ್ಥವಾದ

| | |
|---|---|
| ಅಪ್ಸು ಭಸ್ಮ ಪ್ರ ವೇಶಯತಿ | ನೀರಿನಲ್ಲಿ ಉಖ್ಯದಲ್ಲಿರುವ ಭಸ್ಮವನ್ನು ಹಾಕಬೇಕು. |
| ಅಗ್ನಿಃ ಅಪ್ಸುಯೋನಿಃ ವೈ | ವಾಡವ–ವೈದ್ಯುತರೂಪದಿಂದಿರುವ ಅಗ್ನಿಗೆ ನೀರು ಕಾರಣವಾಗಿದೆ. |
| ಸ್ವಾಮ್ ಯೋನಿಮ್ ಏವ ಏನಮ್ ಗಮಯತಿ | ನೀರಿನಲ್ಲಿ ಭಸ್ಮವನ್ನು ಹಾಕುವುದರಿಂದ ಅಗ್ನಿಯನ್ನು ತನ್ನ ಸ್ಥಾನದಲ್ಲಿಯೇ ಸ್ಥಾಪಿಸಿದಂತಾಗುತ್ತದೆ. |

ಮಂತ್ರಸಂಖ್ಯೆ

| | |
|---|---|
| ತಿಸೃಭಿಃ ಪ್ರವೇಶಯತಿ | **'ಆಪೋ ದೇವೀಃ' 'ಅಪ್ಸ್ವಗ್ನೇ' 'ಗರ್ಭೋ ಅಸ್ಯೋಷಧೀನಾಮ್' ಎಂಬ ಮೂರು ಮಂತ್ರಗಳಿಂದ ನೀರಿನಲ್ಲಿ ಭಸ್ಮವನ್ನು ಹಾಕಬೇಕು.** |
| ಅಗ್ನಿಃ ತ್ರಿವೃತ್ ವೈ | ಅಗ್ನಿಯು ಆಹವನೀಯ–ಗಾರ್ಹಪತ್ಯ–ದಕ್ಷಿಣಾಗ್ನಿ ರೂಪದಿಂದ ಮೂರು ರೂಪಗಳುಳ್ಳವನು. |
| ಅಗ್ನಿಃ ಯಾವಾನ್ ಏವ ತಮ್ ಪ್ರತಿಷ್ಠಾಮ್ ಗಮಯತಿ | ಅಗ್ನಿಯನ್ನು (ಮೂರು ಸಂಖ್ಯೆಯುಳ್ಳ ಮಂತ್ರಗಳಿಂದ ಅನುಷ್ಠಿಸುವುದರಿಂದ)ತನ್ನ ರೂಪದಲ್ಲಿಯೇ ಸೇರಿಸಿದಂತಾಗುತ್ತದೆ. |

---

ಭಸ್ಮದ ಜಲಪ್ರವೇಶವೆಂದರೆ ಸ್ವಸ್ಥಾನಪ್ರವೇಶ ಎಂದು ತಾತ್ಪರ್ಯ.

ಪರಾ ವಾ ಏಷೋಽಗ್ನಿಂ ವಪತಿ ಯೋಽಪ್ಸು ಭಸ್ಮ ಪ್ರವೇಶಯತಿ ಜ್ಯೋತಿಷ್ಮತೀಭ್ಯಾಮವ ದಧಾತಿ ಜ್ಯೋತಿರೇವಾಸ್ಮಿನ್ದಧಾತಿ ದ್ವಾಭ್ಯಾಂ ಪ್ರತಿಷ್ಠಿತ್ಯೈ ಪರಾ ವಾ ಏಷ ಪ್ರಜಾಂ ಪಶೂನ್, ವಪತಿ ಯೋಽಪ್ಸು ಭಸ್ಮ ಪ್ರವೇಶಯತಿ

---

ಪರೇತಿ । ವೈ । ಏಷಃ । ಅಗ್ನಿಮ್ । ವಪತಿ । ಯಃ । ಅಪ್ಸ್ವಿತ್ಯಪ್-ಸು । ಭಸ್ಮ । ಪ್ರವೇಶಯತೀತಿ ಪ್ರ-ವೇಶಯತಿ । ಜ್ಯೋತಿಷ್ಮತೀಭ್ಯಾಮ್ । ಅವೇತಿ । ದಧಾತಿ । ಜ್ಯೋತಿಃ । ಏವ । ಅಸ್ಮಿನ್ನ್ । ದಧಾತಿ । ದ್ವಾಭ್ಯಾಮ್ । ಪ್ರತಿಷ್ಠಿತ್ಯಾ ಇತಿ ಪ್ರತಿ-ಸ್ಥಿತ್ಯೈ । ಪರೇತಿ । ವೈ । ಏಷಃ । ಪ್ರಜಾಮಿತಿ ಪ್ರ-ಜಾಮ್ । ಪಶೂನ್ । ವಪತಿ । ಯಃ । ಅಪ್ಸ್ವಿತ್ಯಪ್-ಸು । ಭಸ್ಮ । ಪ್ರವೇಶಯತೀತಿ ಪ್ರ-ವೇಶಯತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಜ್ಯೋತಿಷ್ಮತೀಮಂತ್ರಗಳಿಂದ ಉಖೆಯಲ್ಲಿ ಭಸ್ಮಸ್ಥಾಪನೆ** | |
| **ಯಃ ಅಪ್ಸು ಭಸ್ಮ ಪ್ರವೇಶಯತಿ** | ಯಾರು ನೀರಿನಲ್ಲಿ ಭಸ್ಮವನ್ನು ಹಾಕುವನೋ (ಭಸ್ಮವನ್ನು ಹಾಕುವುದರಿಂದ) |
| **ಏಷಃ ಅಗ್ನಿಮ್ ಪರಾ ವಪತಿ ವೈ** | ಅವನು ಅಗ್ನಿಯನ್ನು ನಾಶಪಡಿಸುತ್ತಾನೆ. |
| **ಜ್ಯೋತಿಷ್ಮತೀಭ್ಯಾಮ್ ಅವದಧಾತಿ** | 'ಪ್ರಸದ್ಯ ಭಸ್ಮನಾ ಯೋನಿಮ್' 'ಪುನರಾಸದ್ಯ' ಎಂಬ ಜ್ಯೋತಿಃಶಬ್ದಯುಕ್ತವಾಗಿರುವ ಎರಡು ಮಂತ್ರಗಳಿಂದ ಉಖೆಯಲ್ಲಿ ಅಗ್ನಿಯನ್ನು ಹಾಕಬೇಕು. |
| **ಅಸ್ಮಿನ್ ಜ್ಯೋತಿಃ ಏವ ದಧಾತಿ** | ಇದರಿಂದ ಅಧ್ವರ್ಯುವು ಯಜಮಾನನಲ್ಲಿ ಜ್ಯೋತಿಯನ್ನು ಸ್ಥಾಪಿಸುತ್ತಾನೆ. |
| **ದ್ವಾಭ್ಯಾಮ್ ಪ್ರತಿಷ್ಠಿತ್ಯೈ** | ಎರಡು ಮಂತ್ರಗಳಿರುವುದು ಅಗ್ನಿಯು ಸ್ಥಿರನಾಗಿರುವುದಕ್ಕೆ/ಯಜಮಾನನ ಸುಸ್ಥಿತಿಗೆ ಕಾರಣವಾಗುತ್ತದೆ. |
| **ಹಿಂಡಿದ ಭಸ್ಮಸಹಿತವಾದ ಉಖೆಯಲ್ಲಿ ಅಗ್ನಿಸ್ಥಾಪನೆ** | |
| **ಯಃ ಅಪ್ಸು ಭಸ್ಮ ಪ್ರವೇಶಯತಿ** | ಯಾರು ನೀರಿನಲ್ಲಿ ಭಸ್ಮವನ್ನು ಹಾಕುವನೋ (ಭಸ್ಮವನ್ನು ಹಾಕುವುದರಿಂದ) |
| **ಏಷಃ ಪ್ರಜಾಮ್ ಪಶೂನ್ ಪರಾ ವಪತಿ ವೈ** | ಆತನು ಪ್ರಜೆಯನ್ನೂ ಪಶುಗಳನ್ನೂ ವಿನಾಶಪಡಿಸುತ್ತಾನೆ. |

ಪುನರೂರ್ಜಾ ಸಹ ರಯ್ಯೇತಿ ಪುನರುದ್ಯೈತಿ ಪ್ರಜಾಮೇವ ಪಶೂನಾತ್ಮನ್ಧತ್ತೇ ಪುನಸ್ತ್ವಾಽಽದಿತ್ಯಾ [ಆದಿತ್ಯಾಃ (೧೩)] ರುದ್ರಾ ವಸವಸ್ಸಮಿಂಧತಾಮಿತ್ಯಾಹೈತಾ ವಾ ಏತಂ ದೇವತಾ ಅಗ್ರೇ ಸಮೈನ್ಧತ ತಾಭಿರೇವೈನಗ್‌ಂ ಸಮಿಂಧೇ

---

ಪುನಃ । ಊರ್ಜಾ । ಸಹ । ರಯ್ಯಾ । ಇತಿ । ಪುನಃ । ಉದ್ಯೈತೀತ್ಯುತ್-ಐತಿ । ಪ್ರಜಾಮಿತಿ ಪ್ರ-ಜಾಮ್ । ಏವ । ಪಶೂನ್ । ಆತ್ಮನ್ನ್ । ಧತ್ತೇ । ಪುನಃ । ತ್ವಾ । ಆದಿತ್ಯಾಃ । (೧೩) । ರುದ್ರಾಃ । ವಸವಃ । ಸಮಿತಿ । ಇಂಧತಾಮ್ । ಇತಿ । ಆಹ । ಏತಾಃ । ವೈ । ಏತಮ್ । ದೇವತಾಃ । ಅಗ್ರೇ । ಸಮಿತಿ । ಐಂಧತ । ತಾಭಿಃ । ಏವ । ಏನಮ್ । ಸಮಿತಿ । ಇಂಧೇ ।

---

ಬ್ರಾಹ್ಮಣಭಾಗ | ವಿವರಣೆ

### ಉಖ್ಯಾಗ್ನಿಯ ಪ್ರಜ್ವಾಲನೆ-ಪ್ರಶಂಸೆ

| ಬ್ರಾಹ್ಮಣಭಾಗ | ವಿವರಣೆ |
|---|---|
| **ಪುನರೂರ್ಜಾ ಸಹ ರಯ್ಯೇತಿ ಪುನರುದ್ಯೈತಿ** | 'ಪುನರೂರ್ಜಾ' 'ಸಹ ರಯ್ಯಾ' ಎಂಬ ಮಂತ್ರಗಳಿಂದ ಹಿಂಡಿದ ಭಸ್ಮವನ್ನು ಹೊಂದಿರುವ ಉಖೆಯಲ್ಲಿ ಮತ್ತೆ ಅಗ್ನಿಯನ್ನು ಹಾಕಬೇಕು. |
| **ಪ್ರಜಾಮ್ ಪಶೂನ್ ಆತ್ಮನ್ ಧತ್ತೇ ಏವ** | ಇದರಿಂದ ಯಜಮಾನನು ಪ್ರಜೆಯನ್ನೂ, ಪಶುಗಳನ್ನೂ ತನ್ನಲ್ಲಿ ನೆಲೆಗೊಳಿಸಿದವನಾಗುತ್ತಾನೆ. |
| **ಪುನಸ್ತ್ವಾಽಽದಿತ್ಯಾಃ ರುದ್ರಾಃ ವಸವಃ ಸಮಿಂಧತಾಮ್ ಇತಿ ಆಹ** | 'ಅಗ್ನಿಯೇ! 'ಪುನಸ್ತ್ವಾ...ಸಮಿಂಧತಾಮ್' ಎಂಬ ಈ ಮಂತ್ರಭಾಗವು-ಆದಿತ್ಯರೂ, ರುದ್ರರೂ, ವಸುಗಳೂ ನಿನ್ನನ್ನು ಹಿಂದೆ ಪ್ರಜ್ವಲಿಸುವಂತೆ ಮಾಡಿದರು' ಎಂದು -ಪ್ರಶಂಸಿಸುತ್ತದೆ. |
| **ಏತಾಃ ದೇವತಾಃ ವೈ** | ಈ ದೇವತೆಗಳೇ |
| **ಏತಮ್ ಅಗ್ರೇ ಸಮೈಂಧತ** | ಪೂರ್ವದಲ್ಲಿ ಈ ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡಿದರು. |
| **ತಾಭಿಃ ಏವ ಏನಮ್ ಸಮಿಂಧೇ** | ಅಧ್ವರ್ಯುವು ಆ ದೇವತೆಗಳಿಂದಲೇ ಈಗ ಈ ಅಗ್ನಿಯನ್ನು ಜ್ವಲಿಸುವಂತೆ ಮಾಡುತ್ತಾನೆ. |

ಬೋಧಾ ಸ ಬೋಧೀತ್ಯುಪತಿಷ್ಠತೇ ಬೋಧಯತ್ಯೇವೈನಂ ತಸ್ಮಾತ್ಸುಪ್ತ್ವಾ

ಪ್ರಜಾಃ ಪ್ರ ಬುಧ್ಯಂತೇ ಯಥಾಸ್ಥಾನಮುಪ ತಿಷ್ಠತೇ ತಸ್ಮಾದ್ಯಥಾಸ್ಥಾನಂ ಪಶವಃ

ಪುನರೇತ್ಯೋಪ ತಿಷ್ಠಂತೇ ॥ ೧೩-2 ॥

ವೈ ವಿಶ್ವೇ ದೇವಾ ಜ್ಯೋತಿಷ್ಮಾನಪಚಿತತಮೌ ತ್ರಿವೃದ್ವಾ ಆದಿತ್ಯಾ ದ್ವಿಚತ್ವಾರಿಗ್ಂಶಚ್ಚ ॥

---

ಬೋಧ । ಸಃ । ಬೋಧಿ । ಇತಿ । ಉಪೇತಿ । ತಿಷ್ಠತೇ । ಬೋಧಯತಿ । ಏವ । ಏನಮ್ । ತಸ್ಮಾತ್ । ಸುಪ್ತ್ವಾ ।

ಪ್ರಜಾ ಇತಿ ಪ್ರ-ಜಾಃ । ಪ್ರೇತಿ । ಬುಧ್ಯಂತೇ । ಯಥಾಸ್ಥಾನಮಿತಿ ಯಥಾ-ಸ್ಥಾನಮ್ । ಉಪೇತಿ । ತಿಷ್ಠತೇ । ತಸ್ಮಾತ್ ।

ಯಥಾಸ್ಥಾನಮಿತಿ ಯಥಾ-ಸ್ಥಾನಮ್ । ಪಶವಃ । ಪುನಃ । ಏತ್ಯೇತ್ಯಾ-ಇತ್ಯ । ಉಪೇತಿ । ತಿಷ್ಠಂತೇ ॥ ೧೩ ॥

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ಉಪಸ್ಥಾನವಿಧಿ; ಪ್ರಶಂಸೆ** |
| **ಬೋಧಾ ಸ ಬೋಧಿ ಇತಿ ಉಪತಿಷ್ಠತೇ** | **'ಬೋಧಾ ನೋ ಅಸ್ಯ' 'ಸ ಬೋಧಿ'** ಎಂಬ ಬೋಧವತೀಮಂತ್ರಗಳಿಂದ ಉಖ್ಯಾಗ್ನಿಯ ಉಪಸ್ಥಾನವನ್ನು ಮಾಡಬೇಕು. |
| **ಏನಮ್ ಬೋಧಯತಿ ಏವ** | ಅಧ್ವರ್ಯುವು ಇದರಿಂದ ಈ ಅಗ್ನಿಯನ್ನು ಜ್ವಲಿಸುವಂತೆ ಮಾಡುತ್ತಾನೆ/ಯಜಮಾನನನ್ನು ಜ್ಞಾನಿಯನ್ನಾಗಿ ಮಾಡುತ್ತಾನೆ. |
| **ತಸ್ಮಾತ್ ಪ್ರಜಾಃ ಸುಪ್ತ್ವಾ ಪ್ರ ಬುಧ್ಯಂತೇ** | ಆದುದರಿಂದ ಲೋಕದಲ್ಲಿ ಪ್ರಜೆಗಳು ಮಲಗಿ ಮತ್ತೆ ಎಚ್ಚರಗೊಳ್ಳುತ್ತಾರೆ. |
| | **ಉಪಸ್ಥಾನಪ್ರದೇಶದ ವಿಧಿ-ಸ್ತುತಿ** |
| **ಯಥಾಸ್ಥಾನಮ್ ಉಪತಿಷ್ಠತೇ** | ತನ್ನ ಸ್ಥಾನದಲ್ಲಿಯೇ ಯಜಮಾನನು ಉಖ್ಯಾಗ್ನಿಯ ಉಪಸ್ಥಾನವನ್ನು/ಸ್ತುತಿಯನ್ನು ಮಾಡಬೇಕು. |
| **ತಸ್ಮಾತ್ ಪಶವಃ ಪುನಃ ಏತ್ಯ ಯಥಾಸ್ಥಾನಮ್ ಉಪತಿಷ್ಠಂತೇ** | ಆದುದರಿಂದ ಲೋಕದಲ್ಲಿಯೂ ಪಶುಗಳು ಹಗಲು ಮೇಯಲು ಹೋಗಿ ಹಿಂದಿರುಗಿ ತಮ್ಮ ಸ್ಥಾನವನ್ನೇ ಸೇರುತ್ತವೆ. |

ತಾತ್ಪರ್ಯ:–ಆಹವನೀಯಾಗ್ನಿಯ ದಕ್ಷಿಣಭಾಗವು ಯಜಮಾನನ ಉಪಸ್ಥಾನಪ್ರದೇಶವಾಗಿದೆ. ಆದುದರಿಂದ ಯಜಮಾನನು ಉಖ್ಯಾಗ್ನಿಯ ಉಪಸ್ಥಾನವನ್ನು ತನ್ನ ಉಪಸ್ಥಾನಪ್ರದೇಶದಲ್ಲಿಯೇ ಅನುಷ್ಠಿಸಬೇಕು.

ಲೋಕದಲ್ಲಿ ಮೇಯ್ದು ಬಂದ ಪಶುಗಳು ತಮ್ಮ ಸ್ಥಾನವನ್ನೇ ಸೇರುವವಷ್ಟೆ.

---

## *ವಿನಿಯೋಗಸಂಗ್ರಹ

*[1]ಅನ್ನಾದಧಾತಿ ಸಮಿಧಮ್ ಉದ್ಯಚ್ಛೇದುದ್ಯಚಾನಲಮ್ ।
ಪ್ರೇತ್ಪ್ರಯಾತ್ಯಥ ಸಮಿಧಾಗಮ್ಯಂತೇ ಸಮಿಧಂ ಕ್ಷಿಪೇತ್ ॥
ರಾಜನ್ಯಶ್ಚೇತ್ಪ್ರೇತಿ ಮಂತ್ರ ಆಪೋ ಭಸ್ಮಾಪ್ಸು ವೇಶಯೇತ್ ।
ತ್ರಿಭಿಃ ಪ್ರಸೇತಿ ತು ದ್ವಾಭ್ಯಾಂ ಉಖಾಯಾಂ ಸ್ಥಾಪಯೇದಮುಮ್ ॥
ಪುನರ್ದ್ವಾಭ್ಯಾಮುದ್ಯೈತ್ಯಗ್ನಿಂ ಪುನಸ್ತ್ವೇತಿ ಸಮಿಂಧಯೇತ್
ಬೋಧ ದ್ವಾಭ್ಯಾಮುಪಸ್ಥಾನಮ್ ॥

---

* ವಿನಿಯೋಗಸಂಗ್ರಹಕಾರರು ಅನುವಾಕದಲ್ಲಿ ಬಂದಿರುವ ಪ್ರತೀಕಗಳನ್ನು ಉದ್ಧರಿಸಿ, ಮಂತ್ರಗಳ ಸಂಖ್ಯೆಯನ್ನು ತಿಳಿಸುವ ಕ್ರಮವು ಇದೆ. ಇದು ಮಂತ್ರಗಳ ವಿಭಾಗವನ್ನು ತಿಳಿಯಲು ಸಹಾಯವಾಗುವುದು.

ಕೆಲವೆಡೆ ಮಂತ್ರಗಳ ವಿನಿಯೋಗವನ್ನೂ ಸಂಗ್ರಹಕಾರಿಕೆಗಳಲ್ಲಿ ತಿಳಿಸುತ್ತಾರೆ. ಇದರಿಂದ ಮಂತ್ರಗಳ ವಿನಿಯೋಗವನ್ನು ತಿಳಿಯಲು ಸಹಾಯವಾಗುತ್ತದೆ.

ಸಂಗ್ರಹಕಾರರು ಆಪಸ್ತಂಬೋಕ್ತವಿನಿಯೋಗವನ್ನು ಬಹಳ ಮಾಡಿ ಅನುಸರಿಸಿರುವುದು ಕಾಣುತ್ತದೆ.

*[1] ಈ ವಿನಿಯೋಗಸಂಗ್ರಹಕಾರಿಕೆಯನ್ನು ಹಿಂದೆಯೇ ನೀಡಿದೆ. ಸಂಪುಟ... ಪುಟ... ವಿಷಯದ ಮನನಕ್ಕಾಗಿ ಪುನಃ ನೀಡಿದೆ.

## ॥ ತೃತೀಯೋಽನುವಾಕಃ ॥

ಯಾವತೀ ವೈ ಪೃಥಿವೀ ತಸ್ಯೈ ಯಮ ಆಧಿಪತ್ಯಂ ಪರೀಯಾಯ ಯೋ ವೈ ಯಮಂ ದೇವಯಜನಮಸ್ಯಾ ಅನಿರ್ಯಾಚ್ಯಾಗ್ನಿಂ ಚಿನುತೇ

---

ಯಾವತೀ । ವೈ । ಪೃಥಿವೀ । ತಸ್ಯೈ । ಯಮಃ । ಆಧಿಪತ್ಯಮಿತ್ಯಾಧಿ–ಪತ್ಯಮ್ । ಪರೀತಿ । ಇಯಾಯ । ಯಃ । ವೈ । ಯಮಮ್ । ದೇವಯಜನಮಿತಿ ದೇವ–ಯಜನಮ್ । ಅಸ್ಯಾಃ । ಅನಿರ್ಯಾಚ್ಯೇತ್ಯನಿಃ–ಯಾಚ್ಯ । ಅಗ್ನಿಮ್ । ಚಿನುತೇ ।

---

ಹಿಂದಿನ ಅನುವಾಕದಲ್ಲಿ ಅಗ್ನಿಯನ್ನು ಚಯನದೇಶಕ್ಕೆ ತಂದುದನ್ನು ಹೇಳಲಾಗಿದೆ. ಈ ಅನುವಾಕದಲ್ಲಿ ಗಾರ್ಹಪತ್ಯಚಯನವು ಹೇಳಲ್ಪಡುತ್ತದೆ.

---

| ಬ್ರಾಹ್ಮಣಭಾಗ | ವಿವರಣೆ |
|---|---|
| | ದೇವಯಜನಯಾಚನ/ಫಲ |
| **ಯಾವತೀ ವೈ ಪೃಥಿವೀ** | ಭೂಮಿಯು ಎಷ್ಟು ಪರಿಮಾಣವಿದೆಯೋ |
| **ತಸ್ಯೈ ಯಮಃ ಆಧಿಪತ್ಯಮ್ ಪರೀಯಾಯ** | ಅದೆಲ್ಲಕ್ಕೂ ಯಮನು ಒಡೆತನವನ್ನು ಹೊಂದಿದ್ದಾನೆ. |
| **ಅಸ್ಯಾಃ ದೇವಯಜನಮ್ ಯಮಮ್ ಅನಿರ್ಯಾಚ್ಯ** | ಈ ಭೂಮಿಗೆ ಸಂಬಂಧಿಸಿದ ಯಾಗಭೂಮಿಯನ್ನು ಯಮನ ಬಳಿ ಬೇಡಿ ಪಡೆಯದೆ |
| **ಯಃ ವೈ ಅಗ್ನಿಮ್ ಚಿನುತೇ** | ಯಾವ ಯಜಮಾನನು ಅಗ್ನಿಚಯನವನ್ನು ಮಾಡುವನೋ |

---

**ತಾತ್ಪರ್ಯ:–** ಈ ಭೂಮಿಯೆಲ್ಲವೂ ಯಮನ ಆಡಳಿತಕ್ಕೆ ಒಳಪಟ್ಟಿದೆ. ಹೀಗಾಗಿ ಚಯನಕ್ಕಾಗಿ ದೇವಯಜನವನ್ನು ಪ್ರಾರ್ಥಿಸಿಕೊಳ್ಳಬೇಕು. ಹಾಗೆ ಮಾಡದೆ ಇದ್ದರೆ ಯಾಗದ ಫಲವು ಯಮನಿಗೆ ಸೇರಿಹೋಗುತ್ತದೆ. ಹೀಗಾಗಿ ದೇವಯಜನನಿಶ್ಚಯವನ್ನು ಯಮನನ್ನು ಬೇಡಿ ಮಾಡಬೇಕು.

ಯಮಾಯ್ಯೈನಗ್ಂ ಸ ಚಿನುತೇಽಪೇತೇತ್ಯಧ್ಯವಸಾಯಯತಿ ಯಮಮೇವ ದೇವಯಜನಮಸ್ಯೈ ನಿರ್ಯಾಚ್ಯಾತ್ಮನೇಽಗ್ನಿಂ ಚಿನುತ ಇಷ್ವಗ್ರೇಣ ವಾ ಅಸ್ಯಾ ಅನಾಮೃತಮಿಚ್ಛಂತೋ ನಾವಿಂದನ್ತೇ ದೇವಾ

---

ಯಮಾಯ । ಏನಮ್ । ಸಃ । ಚಿನುತೇ । ಅಪೇತಿ । ಇತ । ಇತಿ । ಅಧ್ಯವಸಾಯಯತೀತ್ಯಧಿ–ಅವಸಾಯಯತಿ । ಯಮಮ್ । ಏವ । ದೇವಯಜನಮಿತಿ ದೇವ–ಯಜನಮ್ । ಅಸ್ಯೈ । ನಿರ್ಯಾಚ್ಯೇತಿ ನಿಃ–ಯಾಚ್ಯ । ಆತ್ಮನೇ । ಅಗ್ನಿಮ್ । ಚಿನುತೇ । ಇಷ್ವಗ್ರೇಣೇತೀಷು–ಅಗ್ರೇಣ । ವೈ । ಅಸ್ಯಾಃ । ಅನಾಮೃತಮಿತ್ಯನಾ–ಮೃತಮ್ । ಇಚ್ಛಂತಃ । ನ । ಅವಿಂದನ್ನ್ । ತೇ । ದೇವಾಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಸಃ ಯಮಾಯ ಏನಮ್ ಚಿನುತೇ** | ಅವನು ಯಮನಿಗಾಗಿಯೇ ಚಯನ ಮಾಡಿದವನಾಗುತ್ತಾನೆ. |
| **ಅಪ ಇತ ಇತಿ ಅಧ್ಯವಸಾಯಯತಿ** | ಆದುದರಿಂದ **'ಅಪೇತ'** ಎಂಬ ಮಂತ್ರದಿಂದ ದೇವಯಜನಪ್ರದೇಶವನ್ನು ಪ್ರಾರ್ಥಿಸಿ ನಿಶ್ಚಯಿಸಿಕೊಳ್ಳಬೇಕು. |
| **ಯಮಮ್ ಏವ ದೇವಯಜನಮ್ ಅಸ್ಯೈ ನಿರ್ಯಾಚ್ಯ ಆತ್ಮನೇ ಅಗ್ನಿಮ್ ಚಿನುತೇ** | ಆಗ ಭೂಮಿಯ ಆ ದೇವಯಜನಪ್ರದೇಶವನ್ನು (ಯಜಮಾನನು)ಯಮನಿಂದ ಬೇಡಿ ಪಡೆದು ತನಗಾಗಿಯೇ ಚಯನವನ್ನು ಅನುಷ್ಠಿಸಿದವನಾಗುತ್ತಾನೆ. |

**ಈ ಮಂತ್ರದ ಪ್ರಶಂಸೆ**

| | |
|---|---|
| **ತೇ ದೇವಾಃ ಅಸ್ಯಾಃ ಅನಾಮೃತಮ್ ಇಚ್ಛಂತಃ** | ಆ ದೇವತೆಗಳು (ದೇವಯಜನಕ್ಕಾಗಿ) ಈ ಭೂಮಿಗೆ ಸಂಬಂಧಿಸಿದ ಮೃತಪ್ರಾಣಿಗಳಿಂದ ಕೂಡಿರದ ಪ್ರದೇಶವನ್ನು ಬಯಸುವವರಾಗಿ |
| **ಇಷ್ವಗ್ರೇಣ ನ ಅವಿಂದನ್ ವೈ** | ಒಂದು ಬಾಣದ ಮೊನೆಯಷ್ಟನ್ನೂ ಪಡೆಯಲಿಲ್ಲ. |

---

ಭೂಮಿಯಲ್ಲಿ ಯಾವ ಪ್ರದೇಶವೂ ಸಹ ಮೃತರಿಲ್ಲದೇ ಇಲ್ಲ. ಅಂತಹ ಭೂಮಿಯಿಲ್ಲವೆಂಬುದಕ್ಕೆ ಮಹಾಭಾರತದ ಈ ವಚನವನ್ನು ಸ್ಮರಿಸಬಹುದು. **'ಅತ್ರ ಭೀಷ್ಮಶತಂ ದಗ್ಧಂ ದ್ರೋಣಾನಾಂ ಚ ಶತತ್ರಯಮ್'**

ಏತದ್ಯಜುರಪಶ್ಯನ್ನಪೇತೇತಿ ಯದೇತೇನಾಧ್ಯವಸಾಯಯತ್ಯ

[ಅವಸಾಯಯತಿ(೧೪)ಅನಾಮೃತ]ನಾಮೃತ ಏವಾಗ್ನಿಂ ಚಿನುತ ಉದ್ಧಂತಿ

ಯದೇವಾಸ್ಯಾ ಅಮೇಧ್ಯಂ ತದಪಹಂತ್ಯಪೋಽವೋಕ್ಷತಿ ಶಾಂತ್ಯೈ॥

---

ಏತತ್ । ಯಜುಃ । ಅಪಶ್ಯನ್ನ್ । ಅಪೇತಿ । ಇತ । ಇತಿ । ಯತ್ । ಏತೇನ । ಅಧ್ಯವಸಾಯಯತೀತ್ಯಧಿ-ಅವಸಾಯಯತಿ । (೧೪) । ಅನಾಮೃತ ಇತ್ಯನಾ-ಮೃತೇ । ಏವ । ಅಗ್ನಿಮ್ । ಚಿನುತೇ । ಉದಿತಿ । ಹಂತಿ । ಯತ್ । ಏವ । ಅಸ್ಯಾಃ । ಅಮೇಧ್ಯಮ್ । ತತ್ । ಅಪೇತಿ । ಹಂತಿ । ಅಪಃ । ಅವೇತಿ । ಉಕ್ಷತಿ । ಶಾಂತ್ಯೈ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಏತತ್ ಯಜುಃ ಅಪಶ್ಯನ್** | (ಆಗ) ಅವರು 'ಅಪೇತ' ಎಂಬ ಮಂತ್ರವನ್ನು ಸಾಕ್ಷಾತ್ಕರಿಸಿಕೊಂಡರು. |
| **ಯತ್ ಅಪೇತ ಇತಿ ಏತೇನ ಅಧ್ಯವಸಾಯಯತಿ** | 'ಅಪೇತ' ಎಂಬ ಈ ಮಂತ್ರದಿಂದ ದೇವಯಜನ ಭೂಮಿಯನ್ನು ನಿಶ್ಚಯಿಸುವುದೆಂಬುದು ಯಾವುದೋ (ಅದರಿಂದ) |
| **ಅನಾಮೃತೇ ಏವ ಅಗ್ನಿಮ್ ಚಿನುತೇ** | ಮೃತರಹಿತರಾದ ಭೂಮಿಯಲ್ಲಿಯೇ ಅಗ್ನಿಚಯನವನ್ನು ಅನುಷ್ಠಿಸಿದಂತಾಗುತ್ತದೆ. |

ಉದ್ಧನನವಿಧಿ; ಫಲ

| | |
|---|---|
| **ಉದ್ಧಂತಿ** | ಭೂಮಿಯ ಮೇಲುಭಾಗವನ್ನು ಕೆತ್ತಬೇಕು. |
| **ಅಸ್ಯಾಃ ಯತ್ ಅಮೇಧ್ಯಮ್** | ಈ ಭೂಮಿಯ ಅಶುದ್ಧವಾದ ಪ್ರದೇಶವು ಯಾವುದೋ |
| **ತತ್ ಅಪ ಹಂತಿ ಏವ** | ಅದನ್ನು ದೂರಮಾಡಿದಂತಾಗಿಯೇ ಆಗುತ್ತದೆ. |

ಜಲಪ್ರೋಕ್ಷಣೆಯ ವಿಧಿ-ಅರ್ಥವಾದ

| | |
|---|---|
| **ಅಪಃ ಅವೋಕ್ಷತಿ ಶಾಂತ್ಯೈ** | ಭೂಮಿಯು ಶಾಂತವಾಗುವುದಕ್ಕಾಗಿ ನೀರಿನಿಂದ ಪ್ರೋಕ್ಷಣವನ್ನು ಮಾಡಬೇಕು. |

---

ಈ ಪ್ರದೇಶದಲ್ಲಿ ನೂರಾರು ಭೀಷ್ಮರ, ಬೇಕಾದಷ್ಟು ಮುನ್ನೂರುಗಟ್ಟಲೆ ದ್ರೋಣರ ದಹನವಾಗಿದೆ. (ಭೀಷ್ಮರಂತಹವರ, ದ್ರೋಣರಂತಹವರ ಎಂದು ತಾತ್ಪರ್ಯ)

ಸಿಕತಾ ನಿವಪತ್ಯೇತದ್ವಾ ಅಗ್ನೇರ್ವೈಶ್ವಾನರಸ್ಯ ರೂಪಗ್ಂ ರೂಪೇಣೈವ ವೈಶ್ವಾನರಮವರುಂಧ ಊಷಾನ್ನಿವಪತಿ ಪುಷ್ಟಿರ್ವಾ ಏಷಾ ಪ್ರಜನನಂ ಯದೂಷಾಃ ಪುಷ್ಟ್ಯಾಮೇವ ಪ್ರಜನನೇಽಗ್ನಿಂ ಚಿನುತೇಽಥೋ ಸಂಜ್ಞಾನ ಏವ

---

ಸಿಕತಾಃ । ನೀತಿ । ವಪತಿ । ಏತತ್ । ವೈ । ಅಗ್ನೇಃ । ವೈಶ್ವಾನರಸ್ಯ । ರೂಪಮ್ । ರೂಪೇಣ । ಏವ । ವೈಶ್ವಾನರಮ್ । ಅವೇತಿ । ರುಂಧೇ । ಊಷಾನ್ । ನೀತಿ । ವಪತಿ । ಪುಷ್ಟಿಃ । ವೈ । ಏಷಾ । ಪ್ರಜನನಮಿತಿ ಪ್ರ-ಜನನಮ್ । ಯತ್ । ಊಷಾಃ । ಪುಷ್ಟ್ಯಾಮ್ । ಏವ । ಪ್ರಜನನ ಇತಿ ಪ್ರ-ಜನನೇ । ಅಗ್ನಿಮ್ । ಚಿನುತೇ । ಅಥೋ ಇತಿ । ಸಂಜ್ಞಾನ ಇತಿ ಸಮ್-ಜ್ಞಾನೇ । ಏವ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಸಿಕತಾನಿವಪನ/ಮರಳನ್ನು ಹಾಕುವ ವಿಧಿ-ಅರ್ಥವಾದ** | |
| **ಸಿಕತಾಃ ನಿವಪತಿ** | ಆ ಭೂಪ್ರದೇಶದಲ್ಲಿ ಮರಳನ್ನು ಹರಡಬೇಕು. |
| **ಏತತ್ ವೈಶ್ವಾನರಸ್ಯ ಅಗ್ನೇಃ ರೂಪಮ್ ವೈ** | ಈ ಮರಳು ವೈಶ್ವಾನರಾಗ್ನಿಯ ರೂಪವೇ ಆಗಿದೆ. |
| **ರೂಪೇಣ ವೈಶ್ವಾನರಮ್ ಅವರುಂಧೇ ಏವ** | (ಮರಳನ್ನು ಹಾಕುವುದರಿಂದ) ಸ್ವರೂಪದಿಂದಲೇ ವೈಶ್ವಾನರಾಗ್ನಿಯನ್ನು ಹೊಂದಿದಂತಾಗುತ್ತದೆ. |
| **ಊಷನಿವಪನ-ಅರ್ಥವಾದ** | |
| **ಊಷಾನ್ ನಿವಪತಿ** | ಚೌಳುಪ್ಪಿನ ಮಣ್ಣನ್ನು 'ಸಂಜ್ಞಾನಮಸಿ' ಎಂಬ ಮಂತ್ರದಿಂದ ಹಾಕಬೇಕು. |
| **ಯತ್ ಊಷಾಃ ಏಷಾ ಪುಷ್ಟಿಃ ಪ್ರಜನನಮ್ ವೈ** | ಈ ಚೌಳುಪ್ಪೆಂಬುದು ಪಶುಗಳಿಗೆ ಪುಷ್ಟಿಯನ್ನೂ, ಪ್ರಜೋತ್ಪತ್ತಿಸಾಮರ್ಥ್ಯವನ್ನೂ ಉಂಟು ಮಾಡುತ್ತದೆ. |
| **ಪುಷ್ಟ್ಯಾಮ್ ಪ್ರಜನನೇ ಅಗ್ನಿಮ್ ಚಿನುತೇ ಏವ** | ಈ ಚೌಳುಪ್ಪನ್ನು ನಿವಪನ ಮಾಡುವುದರಿಂದ ಪುಷ್ಟಿಗೆ ಮತ್ತು ಪ್ರಜೋತ್ಪತ್ತಿಗೆ ಹೇತುವಾದ ಸ್ಥಳದಲ್ಲಿ ಅಗ್ನಿಚಯನವನ್ನು ಮಾಡಿದಂತಾಗುತ್ತದೆ. |
| **ಅಥೋ ಸಂಜ್ಞಾನೇ ಏವ** | ಪಶುಗಳಿಗೆ ಅರಿವನ್ನುಂಟುಮಾಡುವ ಪ್ರದೇಶದಲ್ಲಿ (ಅಗ್ನಿಚಯನವನ್ನು) ಮಾಡಿದಂತಾಗುತ್ತದೆ. |

ಸಂಜ್ಞಾನಗ್ಂ ಹ್ಯೇತ[ಹ್ಯೇತತ್(೧೫)ಪಶೂನಾಂ]ತ್ಪಶೂನಾಂ ಯದೂಷಾ ದ್ಯಾವಾಪೃಥಿವೀ ಸಹಾಽಽಸ್ತಾಂ ತೇ ವಿಯತೀ ಅಬ್ರೂತಾಮಸ್ತ್ವೇವ ನೌ ಸಹ ಯಜ್ಞಿಯಮಿತಿ ಯದಮುಷ್ಯಾ ಯಜ್ಞಿಯಮಾಸೀತ್ತದಸ್ಯಾಮದಧಾತ್ತ ಊಷಾ ಅಭವನ್,

---

ಸಂಜ್ಞಾನಮಿತಿ ಸಮ್–ಜ್ಞಾನಮ್ । ಹಿ । ಏತತ್ । (೧೫) । ಪಶೂನಾಮ್ । ಯತ್ । ಊಷಾಃ । ದ್ಯಾವಾಪೃಥಿವೀ ಇತಿ ದ್ಯಾವಾ–ಪೃಥಿವೀ । ಸಹ । ಆಸ್ತಾಮ್ । ತೇ ಇತಿ । ವಿಯತೀತಿ ವಿ–ಯತೀ । ಅಬ್ರೂತಾಮ್ । ಅಸ್ತು । ಏವ । ನೌ । ಸಹ । ಯಜ್ಞಿಯಮ್ । ಇತಿ । ಯತ್ । ಅಮುಷ್ಯಾಃ । ಯಜ್ಞಿಯಮ್ । ಆಸೀತ್ । ತತ್ । ಅಸ್ಯಾಮ್ । ಅದಧಾತ್ । ತೇ । ಊಷಾಃ । ಅಭವನ್ನ್ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯತ್ ಊಷಾಃ ಪಶೂನಾಮ್ ಏತತ್ ಸಂಜ್ಞಾನಮ್ ಹಿ** | ಈ ಚೌಳುಪ್ಪು ಪಶುಗಳಿಗೆ ಊಷಪ್ರದೇಶದ ಜ್ಞಾನವನ್ನುಂಟುಮಾಡುತ್ತದೆ. |

**ಊಷವನ್ನು ಕುರಿತಾದ ಆಖ್ಯಾನ**

| | |
|---|---|
| **ದ್ಯಾವಾಪೃಥಿವೀ ಸಹ ಆಸ್ತಾಮ್** | ಸೃಷ್ಟಿಯ ಕಾಲದಲ್ಲಿ ದ್ಯಾವಾಪೃಥಿವಿಗಳು ಕೂಡಿಕೊಂಡಿದ್ದವು. |
| **ತೇ ವಿಯತೀ** | ಇವು (ಪ್ರಜಾಪತಿಯ ಅನುಗ್ರಹದಿಂದ) ಬೇರೆಯಾಗುವಾಗ |
| **ನೌ ಯಜ್ಞಿಯಮ್ ಸಹ ಏವ ಅಸ್ತು ಇತಿ ಅಬ್ರೂತಾಮ್** | ನಮ್ಮಲ್ಲಿರುವ ಯಜ್ಞದ ಸಾರವಸ್ತು ನಮ್ಮಲ್ಲಿಯೇ ಇರಲಿ ಎಂದು ಮಾತನಾಡಿಕೊಂಡವು. |
| **ಅಮುಷ್ಯಾಃ ಯತ್ ಯಜ್ಞಿಯಮ್ ಆಸೀತ್** | ದ್ಯುಲೋಕದ ಯಾವ ಯಜ್ಞಸಾರವಿತ್ತೋ |
| **ತತ್ ಅಸ್ಯಾಮ್ ಅದಧಾತ್** | ಅದನ್ನು (ದ್ಯುಲೋಕವು) ಭೂಮಿಯಲ್ಲಿ ಇಟ್ಟಿತು. |
| **ತೇ ಊಷಾಃ ಅಭವನ್** | ಆ ಯಜ್ಞಸಾರಗಳು ಊಷಗಳಾದವು. |

---

ವ್ಯಾಮಮಾತ್ರ (ಮಾರು) ಭೂಮಿಯನ್ನು ಚೌಕಾಕಾರವಾಗಿಯೋ, ಅಥವಾ ಮಂಡಲಾಕಾರವಾಗಿಯೋ ಕೆತ್ತಬೇಕು. ಇದರಿಂದ ಭೂಮಿಯ ಮೇಲ್ಭಾಗವನ್ನು ತುಳಿಯುವಿಕೆ, ಉಗುಳುವಿಕೆ ಮುಂತಾದವುಗಳಿಂದ ಅಶುದ್ಧವಾದುದನ್ನು ಶುದ್ಧಿ ಪಡಿಸಿದಂತಾಗುತ್ತದೆ.

ಯದಸ್ಯಾ ಯಜ್ಞಿಯಮಾಸೀತ್ತದಮುಷ್ಯಾಮದಧಾತ್ತದದಶ್ಚಂದ್ರಮಸಿ ಕೃಷ್ಣ ಮೂಷಾನ್ನಿವಪನ್ನದೋ ಧ್ಯಾಯೇದ್ದ್ಯಾವಾಪೃಥಿವ್ಯೋರೇವ ಯಜ್ಞಿಯೇಽಗ್ನಿಂ ಚಿನುತೇಽಯಗ್ಂ ಸೋ ಅಗ್ನಿರಿತಿ ವಿಶ್ವಾಮಿತ್ರಸ್ಯ [(೧೬)] ಸೂಕ್ತಂ ಭವತ್ಯೇ-

---

ಯತ್ । ಅಸ್ಯಾಃ । ಯಜ್ಞಿಯಮ್ । ಆಸೀತ್ । ತತ್ । ಅಮುಷ್ಯಾಮ್ । ಅದಧಾತ್ । ತತ್ । ಅದಃ । ಚಂದ್ರಮಸಿ । ಕೃಷ್ಣಮ್ । ಊಷಾನ್ । ನಿವಪನ್ನಿತಿ ನಿ-ವಪನ್ । ಅದಃ । ಧ್ಯಾಯೇತ್ । ದ್ಯಾವಾಪೃಥಿವ್ಯೋರಿತಿ ದ್ಯಾವಾ-ಪೃಥಿವ್ಯೋಃ । ಏವ । ಯಜ್ಞಿಯೇ । ಅಗ್ನಿಮ್ । ಚಿನುತೇ । ಅಯಮ್ । ಸಃ । ಅಗ್ನಿಃ । ಇತಿ । ವಿಶ್ವಾಮಿತ್ರಸ್ಯೇತಿ ವಿಶ್ವ-ಮಿತ್ರಸ್ಯ । (೧೬) । ಸೂಕ್ತಮಿತಿ ಸು-ಉಕ್ತಮ್ । ಭವತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯತ್ ಅಸ್ಯಾಃ ಯಜ್ಞಿಯಮ್ ಆಸೀತ್** | ಈ ಭೂಮಿಯ ಯಜ್ಞಾರ್ಹವಾದುದು ಯಾವುದು ಇತ್ತೋ |
| **ತತ್ ಅಮುಷ್ಯಾಮ್ ಅದಧಾತ್** | ಅದನ್ನು (ಭೂಮಿಯು) ದ್ಯುಲೋಕದಲ್ಲಿ ಇಟ್ಟಿತು. |
| **ತತ್ ಚಂದ್ರಮಸಿ ಅದಃ ಕೃಷ್ಣಮ್** | ಅದೇ ಚಂದ್ರನಲ್ಲಿರುವ ಕಪ್ಪು ಚಿಹ್ನೆಯಾಯಿತು. |

**ಚಂದ್ರನ ಚಿಹ್ನೆಯ ಧ್ಯಾನವಿಧಿ-ಅರ್ಥವಾದ**

| | |
|---|---|
| **ಊಷಾನ್ ನಿವಪನ್ ಅದಃ ಧ್ಯಾಯೇತ್** | ಊಷೆಗಳನ್ನು ಹಾಕುವಾಗ ಈ ಚಂದ್ರನ ಚಿಹ್ನೆಯನ್ನು ಧ್ಯಾನಿಸಬೇಕು. |
| **ದ್ಯಾವಾಪೃಥಿವ್ಯೋಃ ಯಜ್ಞಿಯೇ ಏವ ಅಗ್ನಿಮ್ ಚಿನುತೇ** | (ಇದರಿಂದ) ದ್ಯಾವಾಪೃಥಿವಿಗಳ ಯಜ್ಞಸಾರಪ್ರದೇಶದಲ್ಲಿಯೇ ಅಗ್ನಿಚಯನವನ್ನು ಅನುಷ್ಠಿಸಿದಂತಾಗುತ್ತದೆ. |

**ಇಷ್ಟಕೋಪಧಾನ-ಅರ್ಥವಾದ**

| | |
|---|---|
| **ಅಯಗ್ಂ ಸೋ ಅಗ್ನಿಃ ಇತಿ ವಿಶ್ವಾಮಿತ್ರಸ್ಯ ಸೂಕ್ತಮ್ ಭವತಿ** | **'ಅಯಗ್ಂ ಸೋ ಅಗ್ನಿಃ'** ಎಂದು ಆರಂಭವಾಗಿ **'ವರ್ಧಯಾ ರಯಿಮ್'** ಎಂಬಲ್ಲಿಯವರೆಗಿನ ಆರು ಮಂತ್ರಗಳು ಕೂಡಿ ವಿಶ್ವಾಮಿತ್ರಸೂಕ್ತವಾಗಿದೆ. |

ತೇನ ವೈ ವಿಶ್ವಾಮಿತ್ರೋಽಗ್ನೇಃ ಪ್ರಿಯಂ ಧಾಮಾವಾರುಂಧಾಗ್ನೇರೇವೈತೇನ

ಪ್ರಿಯಂ ಧಾಮಾವರುಂಧೇ ಛಂದೋಭಿರ್ವೈ ದೇವಾಸ್ಸುವರ್ಗ

ಲ್ಲೋಕಮಾಯಞ್ಚತಸ್ರಃ ಪ್ರಾಚೀರುಪದಧಾತಿ ಚತ್ವಾರಿ ಛಂದಾಗ್ಂಸಿ

---

ಏತೇನ । ವೈ । ವಿಶ್ವಾಮಿತ್ರ ಇತಿ ವಿಶ್ವ-ಮಿತ್ರಃ । ಅಗ್ನೇಃ । ಪ್ರಿಯಮ್ । ಧಾಮ । ಅವೇತಿ । ಅರುಂಧ । ಅಗ್ನೇಃ । ಏವ ।

ಏತೇನ । ಪ್ರಿಯಮ್ । ಧಾಮ । ಅವೇತಿ । ರುಂಧೇ । ಛಂದೋಭಿರಿತಿ ಛಂದಃ-ಭಿಃ । ವೈ । ದೇವಾಃ । ಸುವರ್ಗಮಿತಿ

ಸುವಃ-ಗಮ್ । ಲೋಕಮ್ । ಆಯನ್ನ್ । ಚತಸ್ರಃ । ಪ್ರಾಚೀಃ । ಉಪೇತಿ । ದಧಾತಿ । ಚತ್ವಾರಿ । ಛಂದಾಗ್ಂಸಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಏತೇನ ವೈ ವಿಶ್ವಾಮಿತ್ರಃ | ಈ ಸೂಕ್ತದಿಂದ ವಿಶ್ವಾಮಿತ್ರನು |
| ಅಗ್ನೇಃ ಪ್ರಿಯಮ್ ಧಾಮ ಅವಾರುಂಧ | ಅಗ್ನಿಯ ಪ್ರಿಯವಾದ ಸ್ಥಾನವನ್ನು ಹೊಂದಿದನು. |
| ಏತೇನ ಅಗ್ನೇಃ ಪ್ರಿಯಮ್ ಧಾಮ ಏವ ಅವ ರುಂಧೇ | ಯಜಮಾನನು ಇವುಗಳಿಂದ ಇಷ್ಟಕೋಪಧಾನವನ್ನು ಮಾಡುವುದರಿಂದ ಅಗ್ನಿಯ ಪ್ರಿಯವಾದ ಸ್ಥಾನವನ್ನೇ ಹೊಂದುವನು. |

ಇಷ್ಟಕೋಪಧಾನ-ಛಂದಸ್ಸುಗಳ ಪ್ರಶಂಸೆ

| | |
|---|---|
| ದೇವಾಃ ಛಂದೋಭಿಃ ವೈ ಸುವರ್ಗಮ್ ಲೋಕಮ್ ಆಯನ್ | ದೇವತೆಗಳು ಗಾಯತ್ರೀ, ತ್ರಿಷ್ಟುಪ್, ಜಗತೀ, ಮತ್ತು ಅನುಷ್ಟುಪ್ ಎಂಬ ನಾಲ್ಕು ಛಂದಸ್ಸುಗಳಿಂದ ಸ್ವರ್ಗ ಲೋಕವನ್ನು ಹೊಂದಿದರು. |
| ಚತಸ್ರಃ ಪ್ರಾಚೀಃ ಉಪದಧಾತಿ | ಮೊದಲು ನಾಲ್ಕು ಛಂದಸ್ಸುಗಳಿಂದ ನಾಲ್ಕು ಇಷ್ಟಕೆಗಳನ್ನು ಪೂರ್ವಾಗ್ರವಾಗಿ ಉಪಧಾನ ಮಾಡಬೇಕು. |
| ಚತ್ವಾರಿ ಛಂದಾಗ್ಂಸಿ | ಗಾಯತ್ರೀ, ತ್ರಿಷ್ಟುಪ್, ಜಗತೀ, ಅನುಷ್ಟುಪ್ ಎಂಬುದಾಗಿ ಛಂದಸ್ಸುಗಳು ನಾಲ್ಕು. |

---

ಜಲಪ್ರೋಕ್ಷಣೆಯನ್ನು ಮಾಡಿ, ಮರಳು ಮತ್ತು ಚೌಳುಪ್ಪನ್ನು ಗಾರ್ಹಪತ್ಯಾಯತನದಲ್ಲಿ ಹಾಕಬೇಕು.

ಚೌಳುಪ್ಪು ಪಶುಗಳಿಗೆ ಜ್ಞಾನಸಾಧನ. ಅವು ಮೂಸಿ ನೋಡಿ ಅಲ್ಲಿ ಹುಲ್ಲನ್ನು ಮೇಯುತ್ತವೆ. ಪುಷ್ಟವಾಗುತ್ತವೆ. ಪಶೂತ್ಪಾದನಸಾಮರ್ಥವಾಗುತ್ತವೆ.

ಚೌಳುಪ್ಪು ಇಲ್ಲಿ ಯಜ್ಞದ ಮೂಲಕವಾಗಿ ಪುಷ್ಟಿ-ಪ್ರಜಾಹೇತುವಾಗಿದೆ.

ಛಂದೋಭಿರೇವ ತದ್ಯಜಮಾನಸ್ಸುವರ್ಗಂ ಲೋಕಮೇತಿ ತೇಷಾಗ್ಂ

ಸುವರ್ಗಂ ಲೋಕಂ ಯತಾಂ ದಿಶಸ್ಸಮವ್ಲೀಯಂತ ತೇ ದ್ವೇ

ಪುರಸ್ತಾತ್ಸಮೀಚೀ ಉಪಾದಧತ ದ್ವೇ [(೧೭)] ಪಶ್ಚಾತ್ಸಮೀಚೀ

---

ಛಂದೋಭಿರಿತಿ ಛಂದಃ-ಭಿಃ । ಏವ । ತತ್ । ಯಜಮಾನಃ । ಸುವರ್ಗಮಿತಿ ಸುವಃ-ಗಮ್ । ಲೋಕಮ್ । ಏತಿ ।

ತೇಷಾಮ್ । ಸುವರ್ಗಮಿತಿ ಸುವಃ-ಗಮ್ । ಲೋಕಮ್ । ಯತಾಮ್ । ದಿಶಃ । ಸಮಿತಿ । ಅವ್ಲೀಯಂತ । ತೇ ।

ದ್ವೇ ಇತಿ । ಪುರಸ್ತಾತ್ । ಸಮೀಚೀ ಇತಿ । ಉಪೇತಿ । ಅದಧತ । ದ್ವೇ ಇತಿ । (೧೭) । ಪಶ್ಚಾತ್ । ಸಮೀಚೀ ಇತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ತತ್ ಛಂದೋಭಿಃ ಏವ ಯಜಮಾನಃ ಸುವರ್ಗಮ್ ಲೋಕಮ್ ಏತಿ** | ಇದರಿಂದ ಯಜಮಾನನು ಛಂದಸ್ಸುಗಳಿಂದಲೇ ಸ್ವರ್ಗಲೋಕವನ್ನು ಹೊಂದಿದವನಾಗುತ್ತಾನೆ. |

ಇಷ್ಟಕೋಪಧಾನವಿಧಿ; ಪ್ರಶಂಸೆ

| | |
|---|---|
| **ಸುವರ್ಗಮ್ ಲೋಕಮ್ ಯತಾಮ್ ತೇಷಾಮ್ ದಿಶಃ ಸಮವ್ಲೀಯಂತ** | (ನಾಲ್ಕು ಇಷ್ಟಕೆಗಳ ಉಪಧಾನವನ್ನು ಮಾಡಿ) ಸ್ವರ್ಗ ಲೋಕಕ್ಕೆ ತೆರಳುತ್ತಿರುವ ಆ ದೇವತೆಗಳಿಗೆ ದಿಕ್ಕುಗಳು ಸಡಿಲವಾದವು./ಅಲ್ಲಿಯ ಪ್ರಜೆಗಳು ಗಡಿಬಿಡಿ ಗೊಂಡರು. |
| **ತೇ ದ್ವೇ ಪುರಸ್ತಾತ್ ಸಮೀಚೀ ಉಪಾದಧತ** | ಆ ದೇವತೆಗಳು ಪೂರ್ವದಲ್ಲಿ ಎರಡು ಇಷ್ಟಕೆಗಳನ್ನು ಉಪಧಾನ ಮಾಡಿದರು. |
| **ದ್ವೇ ಪಶ್ಚಾತ್ ಸಮೀಚೀ** ಉಪಾದಧತ | ಪಶ್ಚಿಮದಿಕ್ಕಿನಲ್ಲಿ ಎರಡು ಇಷ್ಟತೆಗಳನ್ನು ಉಪಧಾನ ಮಾಡಿದರು. |

---

**'ಸಂಯಾವಃ ಪ್ರಿಯಾಃ'** ಎಂಬ **ಮಂತ್ರ**ದಿಂದಸಿಕತವನ್ನೂ, ಊಷಗಳನ್ನೂ ಒಂದಕ್ಕೊಂದು ಸೇರದಂತೆ ಹಾಕಬೇಕು. **'ಅಯಗ್ಂಸೋ ಅಗ್ನಿಃ'** ಎಂಬ ಮಂತ್ರದಿಂದ ಆರಂಭಿಸಿ **'ಪುರೀಷ್ಯಾಸೋ...ಮಹೀಃ'** ಎಂಬ ಮಂತ್ರವನ್ನು ಸೇರಿಸಿ ಕೊಂಡು ನಾಲ್ಕು ಇಷ್ಟಕೆಗಳು. **'ಇಡಾಮಗ್ನೇ...ಅಸ್ಮೇ'** ಮತ್ತು **'ಅಯಂ ತೇ...ರಯಿಮ್'** ಎರಡು ಮಂತ್ರಗಳಿಂದ ಎರಡು ಇಷ್ಟಕೆಗಳು. ಬಳಿಕ **'ಚಿದಸಿ...ಸೀದ' 'ಪರಿಚಿದಸಿ...ಸೀದ'** ಎಂಬ ಎರಡು ಮಂತ್ರಗಳಿಂದ ಎರಡು ಇಷ್ಟಕೆಗಳು.

ತಾಭಿರ್ವೈ ತೇ ದಿಶೋಽದೃಗ್ಂಹನ್, ಯದ್ದ್ವೇ ಪುರಸ್ತಾತ್ಸಮೀಚೀ

ಉಪದಧಾತಿ ದ್ವೇ ಪಶ್ಚಾತ್ಸಮೀಚೀ ದಿಶಾಂ ವಿಧೃತ್ಯಾ ಅಥೋ ಪಶವೋ ವೈ

ಛಂದಾಗ್ಂಸಿ ಪಶೂನೇವಾಸ್ಮೈ ಸಮೀಚೋ ದಧಾತ್ಯಷ್ಟಾವುಪ ದಧಾತ್ಯ–

---

ತಾಭಿಃ। ವೈ। ತೇ। ದಿಶಃ। ಅದೃಗ್ಂಹನ್ನ್। ಯತ್। ದ್ವೇ ಇತಿ। ಪುರಸ್ತಾತ್। ಸಮೀಚೀ ಇತಿ। ಉಪದಧಾತೀತ್ಯುಪ

–ದಧಾತಿ। ದ್ವೇ ಇತಿ। ಪಶ್ಚಾತ್। ಸಮೀಚೀ ಇತಿ। ದಿಶಾಮ್। ವಿಧೃತ್ಯಾ ಇತಿ ವಿ–ಧೃತ್ಯೈ। ಅಥೋ ಇತಿ।

ಪಶವಃ। ವೈ। ಛಂದಾಗ್ಂಸಿ। ಪಶೂನ್। ಏವ। ಅಸ್ಮೈ। ಸಮೀಚಃ। ದಧಾತಿ। ಅಷ್ಟೌ। ಉಪೇತಿ। ದಧಾತಿ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ತಾಭಿಃ ತೇ ದಿಶಃ ಅದೃಗ್ಂಹನ್ ವೈ | ಅವುಗಳಿಂದ ಆ ದೇವತೆಗಳು ದಿಕ್ಕುಗಳನ್ನು ದೃಢಪಡಿಸಿದರು. |
| ದ್ವೇ ಪುರಸ್ತಾತ್ ಸಮೀಚೀ ಯತ್ ಉಪದಧಾತಿ | ಪೂರ್ವದಲ್ಲಿ ಎರಡು ಇಷ್ಟಕೆಗಳನ್ನು ಉಪಧಾನ ಮಾಡುವುದೆಂಬುದು ಯಾವುದೋ ಅದು |
| ದ್ವೇ ಪಶ್ಚಾತ್ ಸಮೀಚೀ | ಪಶ್ಚಿಮದಲ್ಲಿ ಎರಡು ಇಷ್ಟಕೆಗಳನ್ನು ಉಪಧಾನ ಮಾಡುವುದೆಂಬುದು |
| ದಿಶಾಮ್ ವಿಧೃತ್ಯೈ | ದಿಕ್ಕುಗಳ ದಾರ್ಢ್ಯಕ್ಕೆ ಕಾರಣವಾಗುತ್ತದೆ./ದಿಕ್ಕುಗಳನ್ನು ಸ್ಪಷ್ಟವಾಗಿ ತಿಳಿಯುವಂತಾಗುತ್ತದೆ. |

ಇಷ್ಟಕೋಪಧಾನದ ಫಲ–ಪ್ರಶಂಸೆ

| | |
|---|---|
| ಅಥೋ ಪಶವಃ ವೈ ಛಂದಾಗ್ಂಸಿ | ಛಂದಸ್ಸುಗಳಲ್ಲಿ ಚತುಃಸಂಖ್ಯೆ ಇರುವುದರಿಂದ (ನಾಲ್ಕು ಪಾದಗಳ ಸಾಮ್ಯದಿಂದ) ಪಶುಗಳೂ ಛಂದಸ್ಸುಗಳೇ. |
| ಅಸ್ಮೈ ಸಮೀಚಃ ಪಶೂನ್ ದಧಾತಿ ಏವ | (ಛಂದೋಯುಕ್ತವಾದ ಋಕ್ಕುಗಳಿಂದ ಉಪಧಾನ ಮಾಡುವುದು) ಯಜಮಾನನಿಗೆ ಒಳ್ಳೆಯ ಪಶುಗಳನ್ನೇ ಹೊಂದಿಸುತ್ತದೆ. |

ಎಂಟು ಸಂಖ್ಯೆಯ ಇಷ್ಟಕೋಪಧಾನ–ಪ್ರಶಂಸೆ

| | |
|---|---|
| ಅಷ್ಟೌ ಉಪದಧಾತಿ | ಎಂಟು ಇಷ್ಟಕೆಗಳನ್ನು ಉಪಧಾನ ಮಾಡಬೇಕು. |

-ಷ್ಟಾಕ್ಷರಾ ಗಾಯತ್ರೀ ಗಾಯತ್ರೋಽಗ್ನಿರ್ಯಾವಾನೇವಾಗ್ನಿಸ್ತಂ

ಚಿನುತೇಽಷ್ಟಾವುಪ ದಧಾತ್ಯಷ್ಟಾಕ್ಷರಾ ಗಾಯತ್ರೀ ಗಾಯತ್ರೀ ಸುವರ್ಗಂ

ಲೋಕಮಂಜಸಾ ವೇದ ಸುವರ್ಗಸ್ಯ ಲೋಕಸ್ಯ [ಲೋಕಸ್ಯ(೧೮)]ಪ್ರಜ್ಞಾತ್ಯೈ೪

---

ಅಷ್ಟಾಕ್ಷರೇತ್ಯಷ್ಟಾ-ಅಕ್ಷರಾ । ಗಾಯತ್ರೀ । ಗಾಯತ್ರಃ । ಅಗ್ನಿಃ । ಯಾವಾನ್ । ಏವ । ಅಗ್ನಿಃ । ತಮ್ । ಚಿನುತೇ । ಅಷ್ಟೌ । ಉಪೇತಿ । ದಧಾತಿ । ಅಷ್ಟಾಕ್ಷರೇತ್ಯಷ್ಟಾ-ಅಕ್ಷರಾ । ಗಾಯತ್ರೀ । ಗಾಯತ್ರೀ । ಸುವರ್ಗಮಿತಿ ಸುವಃ-ಗಮ್ । ಲೋಕಮ್ । ಅಂಜಸಾ । ವೇದ । ಸುವರ್ಗಸ್ಯೇತಿ ಸುವಃ-ಗಸ್ಯ । ಲೋಕಸ್ಯ । (೧೮) । ಪ್ರಜ್ಞಾತ್ಯಾ ಇತಿ ಪ್ರ-ಜ್ಞಾತ್ಯೈ೪ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಅಷ್ಟಾಕ್ಷರಾ ಗಾಯತ್ರೀ** | ಗಾಯತ್ರೀಛಂದಸ್ಸಿಗೆ ಎಂಟು ಅಕ್ಷರಗಳು. |
| **ಅಗ್ನಿಃ ಗಾಯತ್ರಃ** | ಮುಖದಲ್ಲಿ ಜನಿಸಿದ ಗಾಯತ್ರಿಯಂತೆ ಅಗ್ನಿಯೂ ಗಾಯತ್ರೀಸಂಬಂಧಿಯಾಗಿರುತ್ತಾನೆ.* |
| **ಯಾವಾನ್ ಏವ ಅಗ್ನಿಃ ತಮ್ ಚಿನುತೇ** | ಇದರಿಂದ ಅಗ್ನಿಯನ್ನು ಸಂಪೂರ್ಣವಾಗಿ ಚಯನ ಮಾಡಿದವನಾಗುತ್ತಾನೆ. |
| **ಅಷ್ಟೌ ಉಪದಧಾತಿ** | ಎಂಟು ಇಷ್ಟಕೆಗಳನ್ನು ಉಪಧಾನ ಮಾಡಬೇಕು. |
| **ಅಷ್ಟಾಕ್ಷರಾ ಗಾಯತ್ರೀ** | ಗಾಯತ್ರೀಛಂದಸ್ಸಿಗೆ ಎಂಟು ಅಕ್ಷರಗಳು. |
| **ಗಾಯತ್ರೀ ಸುವರ್ಗಮ್ ಲೋಕಮ್ ಅಂಜಸಾ ವೇದ** | ಗಾಯತ್ರಿಯು ಸ್ವರ್ಗಲೋಕವನ್ನು ನೇರವಾಗಿ ತಿಳಿದು ಕೊಂಡಿದೆ. (ಋಜುಮಾರ್ಗದಿಂದ ತಿಳಿದಿದ್ದಾಳೆ) |
| **ಸುವರ್ಗಸ್ಯ ಲೋಕಸ್ಯ ಪ್ರಜ್ಞಾತ್ಯೈ೪** | ಈ ಉಪಧಾನಕ್ಕೆ ಗಾಯತ್ರಿಯ ಸಂಬಂಧವಿರುವುದರಿಂದ ಸ್ವರ್ಗಲೋಕವನ್ನು ತಿಳಿಯಲು ಸಾಧನವಾಗುತ್ತದೆ/ಸ್ವರ್ಗಲೋಕದ ಜ್ಞಾನವಾಗುತ್ತದೆ. |

---

ಹೀಗೆ ಎಂಟು ಇಷ್ಟಕೆಗಳ ಉಪಧಾನವಾಗುತ್ತದೆ.
ಎಂಟು ಎಂಬ ಸಂಖ್ಯೆಯು ಪ್ರಶಸ್ತವಾದುದು. ಅದರ ಪ್ರಾಶಸ್ತ್ಯವು ಗಾಯತ್ರಿಯ ಮೂಲಕ ಉಂಟಾಗಿದೆ.

---

* ತೈ. ಸಂ. ೭. ೧. ೧

ತ್ರಯೋದಶ ಲೋಕಂಪೃಣಾ ಉಪದಧಾತ್ಯೇಕವಿಗ್ಂಶತಿಸ್ಸಂಪದ್ಯಂತೇ ಪ್ರತಿಷ್ಠಾ ವಾ ಏಕವಿಗ್ಂಶಃ ಪ್ರತಿಷ್ಠಾ ಗಾರ್ಹಪತ್ಯ ಏಕವಿಗ್ಂಶಸ್ಯೈವ ಪ್ರತಿಷ್ಠಾಂ ಗಾರ್ಹಪತ್ಯಮನು ಪ್ರತಿತಿಷ್ಠತಿ

---

ತ್ರಯೋದಶೇತಿ ತ್ರಯಃ–ದಶ । ಲೋಕಂಪೃಣಾ ಇತಿ ಲೋಕಮ್–ಪೃಣಾಃ । ಉಪೇತಿ । ದಧಾತಿ । ಏಕವಿಗ್ಂಶತಿರಿತ್ಯೇಕ–ವಿಗ್ಂಶತಿಃ । ಸಮಿತಿ । ಪದ್ಯಂತೇ । ಪ್ರತಿಷ್ಠೇತಿ ಪ್ರತಿ–ಸ್ಥಾ । ವೈ । ಏಕವಿಗ್ಂಶ ಇತ್ಯೇಕ–ವಿಗ್ಂಶಃ । ಪ್ರತಿಷ್ಠೇತಿ ಪ್ರತಿ–ಸ್ಥಾ । ಗಾರ್ಹಪತ್ಯ ಇತಿ ಗಾರ್ಹ–ಪತ್ಯಃ । ಏಕವಿಗ್ಂಶಸ್ಯೇತ್ಯೇಕ–ವಿಗ್ಂಶಸ್ಯ । ಏವ । ಪ್ರತಿಷ್ಠಾಮಿತಿ ಪ್ರತಿ–ಸ್ಥಾಮ್ । ಗಾರ್ಹಪತ್ಯಮಿತಿ ಗಾರ್ಹ–ಪತ್ಯಮ್ । ಅನು । ಪ್ರತೀತಿ । ತಿಷ್ಠತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|

**ಲೋಕಂಪೃಣೇಷ್ಟಕೋಪಧಾನ–ಪ್ರಶಂಸೆ–ವೇದನ–ಅರ್ಥವಾದ**

| | |
|---|---|
| **ತ್ರಯೋದಶ *ಲೋಕಂಪೃಣಾಃ ಉಪದಧಾತಿ** | ಹದಿಮೂರು ಲೋಕಂಪೃಣೇಷ್ಟಕೆಗಳು. (ಇವುಗಳನ್ನು 'ಲೋಕಂಪೃಣ...ಅಸೀಷದನ್' ಎಂಬ ಮಂತ್ರದಿಂದ ಉಪಧಾನ ಮಾಡಬೇಕು. |
| **ಏಕವಿಗ್ಂಶತಿಃ ಸಂಪದ್ಯಂತೇ** | (ಹಿಂದಿನ ಎಂಟು ಇಷ್ಟಕೆಗಳು ಮತ್ತು ಇವು ಕೂಡಿ) ಇಪ್ಪತ್ತೊಂದು ಇಷ್ಟಕೆಗಳಾಗುತ್ತವೆ. |
| **ಪ್ರತಿಷ್ಠಾ ವೈ ಏಕವಿಗ್ಂಶಃ** | ಇಪ್ಪತ್ತೊಂದು ಸಂಖ್ಯೆಯ ಮಂತ್ರಗಳಿಂದ ಕೂಡಿದ ಸ್ತುತಿ/ಸ್ತೋಮವು ಉಳಿದ ತ್ರಿವೃತ್ ಮುಂತಾದ ಸ್ತೋಮಗಳಿಗೆ ನೆಲೆಯಾಗಿದೆ. |
| **ಗಾರ್ಹಪತ್ಯಃ ಪ್ರತಿಷ್ಠಾ** | ನಿತ್ಯವೂ ಧಾರ್ಯವಾದ ಗಾರ್ಹಪತ್ಯಾಗ್ನಿಯು ಆಹವನೀಯಾದಿಗಳಿಗೆ ನೆಲೆಯಾಗಿದೆ. |
| **ಏಕವಿಗ್ಂಶಸ್ಯ ಪ್ರತಿಷ್ಠಾಮ್ ಗಾರ್ಹಪತ್ಯಮ್ ಅನು ಪ್ರತಿತಿಷ್ಠತಿ ಏವ** | ಸ್ತೋಮದ ಮತ್ತು ಗಾರ್ಹಪತ್ಯದ ಪ್ರತಿಷ್ಠೆಯನ್ನು ಅನು ಸರಿಸಿ ಯಜಮಾನನೂ ಪ್ರತಿಷ್ಠಿತನಾಗಿಯೇ ಆಗುತ್ತಾನೆ. |

---

* **ಲೋಕಮ್=ಸ್ಥಾನಮ್** [ಬೇರೆ ಇಷ್ಟಕೆಗಳಿಂದ ತುಂಬಲ್ಪಡದೆ ಇರುವ ಸ್ಥಾನವನ್ನು] **ಪೃಣಾತಿ=ಪೂರಯತಿ** [ತುಂಬುತ್ತದೆ] **ಇತಿ ಲೋಕಂಪೃಣಾ.**

ಪ್ರತ್ಯಗ್ನಿಂ ಚಿಕ್ಯಾನಸ್ತಿಷ್ಠತಿ ಯ ಏವಂ ವೇದ ಪಂಚಚಿತೀಕಂ ಚಿನ್ವೀತ ಪ್ರಥಮಂ ಚಿನ್ವಾನಃ ಪಾಂಕ್ತೋ ಯಜ್ಞಃ ಪಾಂಕ್ತಾಃ ಪಶವೋ ಯಜ್ಞಮೇವ ಪಶೂನವರುಂಧೇ

---

ಪ್ರತೀತಿ । ಅಗ್ನಿಮ್ । ಚಿಕ್ಯಾನಃ । ತಿಷ್ಠತಿ । ಯಃ । ಏವಮ್ । ವೇದ । ಪಂಚಚಿತೀಕಮಿತಿ ಪಂಚ–ಚಿತೀಕಮ್ । ಚಿನ್ವೀತ । ಪ್ರಥಮಮ್ । ಚಿನ್ವಾನಃ । ಪಾಂಕ್ತಃ । ಯಜ್ಞಃ । ಪಾಂಕ್ತಾಃ । ಪಶವಃ । ಯಜ್ಞಮ್ । ಏವ । ಪಶೂನ್ । ಅವೇತಿ । ರುಂಧೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ಚಿತಿಸಂಖ್ಯಾವಿಧಿ; ಅರ್ಥವಾದ** |
| **ಅಗ್ನಿಮ್ ಚಿಕ್ಯಾನಃ ಪ್ರತಿತಿಷ್ಠತಿ ಯಃ ಏವಮ್ ವೇದ** | ಹೀಗೆ ತಿಳಿದವನು ಅಗ್ನಿಚಯನವನ್ನು ಮಾಡಿ ಪ್ರತಿಷ್ಠಿತನಾಗುವನು. |
| **ಪ್ರಥಮಮ್ ಚಿನ್ವಾನಃ ಪಂಚಚಿತೀಕಮ್ ಚಿನ್ವೀತ** | ಮೊದಲ ಬಾರಿಗೆ ಅಗ್ನಿಚಯನವನ್ನು ಅನುಷ್ಠಿಸುವವನು ಐದು ಚಿತಿಗಳನ್ನು ಹೊಂದಿರುವ ಅಗ್ನಿಯನ್ನು ಚಯನ ಮಾಡಬೇಕು. |
| **ಯಜ್ಞಃ ಪಾಂಕ್ತಃ** | *ಧಾನಾ, ಕರಂಭ, ಪರಿವಾಪ, ಪುರೋಡಾಶ, ಪಯಸ್ಯಗಳೆಂಬ ಐದು ಹವಿಸ್ಸುಗಳಿಂದ ನಿಷ್ಪನ್ನವಾಗುವ ಯಜ್ಞವು ಪಾಂಕ್ತವಾಗಿದೆ. |
| **ಪಶವಃ ಪಾಂಕ್ತಾಃ** | ನಾಲ್ಕು ಕಾಲುಗಳು ಮತ್ತು ಒಂದು ಬಾಲ–ಹೀಗೆ ಪಶುಗಳೂ ಐದು ಅವಯವಗಳಿಂದ ಪಾಂಕ್ತವಾಗಿವೆ. |
| **ಯಜ್ಞಮ್ ಪಶೂನ್ ಏವ ಅವರುಂಧೇ** | ಹೀಗಾಗಿ ಐದು ಚಿತಿಗಳ ಅಗ್ನಿಚಯನವನ್ನು ಮಾಡುವವನು ಸಂಖ್ಯಾಸಾಮ್ಯದಿಂದ ಯಜ್ಞಗಳನ್ನೂ, ಪಶುಗಳನ್ನೂ ಹೊಂದುವನು. |

---

* ಹುರಿದ ಜವೆಗೋಧಿ, ಮೊಸರಿನಲ್ಲಿ ಕಲಸಿದ ಹಿಟ್ಟು (ಹುರಿ ಹಿಟ್ಟು), ಬತ್ತದ ಅರಳು, ಅಕ್ಕಿಯನ್ನು ಹುರಿದು ಮಾಡುವ ಹವಿಸ್ಸು, ಮತ್ತು ಹಾಲಿನಿಂದಾದ ಹವಿಸ್ಸು [ತೈ. ಸಂ. 6. 5. 11].

ತ್ರಿಚಿತೀಕಂ ಚಿನ್ವೀತ ದ್ವಿತೀಯಂ ಚಿನ್ವಾನಸ್ತ್ರಯ ಇಮೇ ಲೋಕಾ ಏಷ್ವೇವ ಲೋಕೇಷು[ಲೋಕೇಷು(೧೯)]ಪ್ರತಿತಿಷ್ಠತ್ಯೇಕಚಿತೀಕಂ ಚಿನ್ವೀತ ತೃತೀಯಂ ಚಿನ್ವಾನ ಏಕಧಾ ವೈ ಸುವರ್ಗೋ ಲೋಕ ಏಕವೃತ್ತೈವ ಸುವರ್ಗಂ ಲೋಕಮೇತಿ

---

ತ್ರಿಚಿತೀಕಮಿತಿ ತ್ರಿ–ಚಿತೀಕಮ್ । ಚಿನ್ವೀತ । ದ್ವಿತೀಯಮ್ । ಚಿನ್ವಾನಃ । ತ್ರಯಃ । ಇಮೇ । ಲೋಕಾಃ । ಏಷು । ಏವ । ಲೋಕೇಷು । (೧೯) । ಪ್ರತೀತಿ । ತಿಷ್ಠತಿ । ಏಕಚಿತೀಕಮಿತ್ಯೇಕ–ಚಿತೀಕಮ್ । ಚಿನ್ವೀತ । ತೃತೀಯಮ್ । ಚಿನ್ವಾನಃ । ಏಕಧೇತ್ಯೇಕ–ಧಾ । ವೈ । ಸುವರ್ಗ ಇತಿ ಸುವಃ–ಗಃ । ಲೋಕಃ । ಏಕವೃತೇತ್ಯೇಕ–ವೃತಾ । ಏವ । ಸುವರ್ಗಮಿತಿ ಸುವಃ–ಗಮ್ । ಲೋಕಮ್ । ಏತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ದ್ವಿತೀಯಚಯನಕರ್ತನಿಗೆ ಸಂಖ್ಯಾವಿಧಿ; ಅರ್ಥವಾದ** | |
| **ದ್ವಿತೀಯಮ್ ಚಿನ್ವಾನಃ** | ಎರಡನೆಯ ಬಾರಿ ಅಗ್ನಿಚಯನವನ್ನು ಅನುಷ್ಠಿಸುವವನು |
| **ತ್ರಿಚಿತೀಕಮ್ ಚಿನ್ವೀತ** | ಮೂರು ಚಿತಿಗಳನ್ನು ಹೊಂದಿರುವ ಅಗ್ನಿಯನ್ನು ಚಯನ ಮಾಡಬೇಕು. |
| **ತ್ರಯಃ ಇಮೇ ಲೋಕಾಃ** | ಈ ಲೋಕಗಳು ಮೂರಾಗಿವೆ. |
| **ಏಷು ಲೋಕೇಷು ಪ್ರತಿ ತಿಷ್ಠತಿ ಏವ** | ಈ ಲೋಕಗಳಲ್ಲಿ ಯಜಮಾನನು ಪ್ರತಿಷ್ಠಿತನಾಗುತ್ತಾನೆ. |
| **ತೃತೀಯಚಯನಕರ್ತನಿಗೆ ಸಂಖ್ಯಾವಿಧಿ** | |
| **ತೃತೀಯಮ್ ಚಿನ್ವಾನಃ ಏಕಚಿತೀಕಮ್ ಚಿನ್ವೀತ** | ಮೂರನೆಯ ಬಾರಿ ಅಗ್ನಿಚಯನವನ್ನು ಅನುಷ್ಠಿಸುವವನು ಒಂದು ಚಿತಿಯನ್ನು ಹೊಂದಿರುವ ಅಗ್ನಿಯನ್ನು ಚಯನ ಮಾಡಬೇಕು. |
| **ಸುವರ್ಗಃ ಲೋಕಃ ಏಕಧಾ ವೈ** | ಸ್ವರ್ಗವು ಏಕಸುಖರೂಪವಾಗಿದೆ. ಪುನರಾವೃತ್ತಿರಹಿತವಾದ ಸ್ವರ್ಗಪ್ರಾಪ್ತಿಯು ಏಕರೂಪವೇ ಆಗಿದೆ. |
| **ಏಕವೃತಾ ಏವ ಸುವರ್ಗಮ್ ಲೋಕಮ್ ಏತಿ** | ಒಮ್ಮೆ ಮಾತ್ರ ಮಾಡಿದ ಅಗ್ನಿಚಯನದಿಂದಲೇ ಯಜಮಾನನು ಸ್ವರ್ಗವನ್ನು ಹೊಂದುವನು. |

ಪುರೀಷೇಣಾಭ್ಯೂಹತಿ ತಸ್ಮಾನ್ಮಾಗ್ಂಸೇನಾಸ್ಥಿ ಛನ್ನಂ ನ ದುಶ್ಚರ್ಮಾ ಭವತಿ
ಯ ಏವಂ ವೇದ ಪಂಚ ಚಿತಯೋ ಭವಂತಿ ಪಂಚಭಿಃ ಪುರೀಷ್ಯೈರಭ್ಯೂಹತಿ
ದಶ ಸಂ ಪದ್ಯಂತೇ ದಶಾಕ್ಷರಾ ವಿರಾ–

---

ಪುರೀಷೇಣ । ಅಭೀತಿ । ಊಹತಿ । ತಸ್ಮಾತ್ । ಮಾಗ್ಂಸೇನ । ಅಸ್ಥಿ । ಛನ್ನಮ್ । ನ । ದುಶ್ಚರ್ಮೇತಿ ದುಃ–ಚರ್ಮಾ । ಭವತಿ । ಯಃ । ಏವಮ್ । ವೇದ । ಪಂಚ । ಚಿತಯಃ । ಭವಂತಿ । ಪಂಚಭಿರಿತಿ ಪಂಚ–ಭಿಃ । ಪುರೀಷ್ಯೈಃ । ಅಭೀತಿ । ಊಹತಿ । ದಶ । ಸಮಿತಿ । ಪದ್ಯಂತೇ । ದಶಾಕ್ಷರೇತಿ ದಶ–ಅಕ್ಷರಾ । ವಿರಾಡಿತಿ ವಿ–ರಾಟ್ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ಪುರೀಷಾಭ್ಯೂಹನ; ಪ್ರಶಂಸೆ** |
| ಪುರೀಷೇಣ ಅಭ್ಯೂಹತಿ | ಇಷ್ಟಕೆಗಳನ್ನು ಮಣ್ಣಿನಿಂದ ಮುಚ್ಚಬೇಕು. |
| ತಸ್ಮಾತ್ ಮಾಗ್ಂಸೇನ ಅಸ್ಥಿ ಛನ್ನಮ್ | [ಇಷ್ಟಕೆಗಳು ಅಸ್ಥಿಯಂತೆ (ಮೂಳೆ) ಕಠಿಣವಾಗಿರುವುದರಿಂದ, ಮೃತ್ತಿಕೆಯು ಮಾಂಸದಂತೆ ಮೃದುವಾಗಿರುವುದರಿಂದ] ಲೋಕದಲ್ಲಿ ಮೂಳೆಯು ಮಾಂಸದಿಂದ ಮುಚ್ಚಲ್ಪಟ್ಟಿದೆ. |
| ಯಃ ಏವಮ್ ವೇದ (ಸಃ) ದುಶ್ಚರ್ಮಾ ನ ಭವತಿ | ಹೀಗೆ ತಿಳಿದವನು ಕಠಿನವಾದ ಚರ್ಮವನ್ನು ಹೊಂದುವುದಿಲ್ಲ. |
| | **ಚಿತಿಗಳ ಮತ್ತು ಪುರೀಷಗಳ ಒಟ್ಟಾದ ಸಂಖ್ಯೆಯ ಪ್ರಶಂಸೆ** |
| ಚಿತಯಃ ಪಂಚ ಭವಂತಿ ಪುರೀಷ್ಯೈಃ ಪಂಚಭಿಃ ಅಭ್ಯೂಹತಿ | (ಚಿತಿಗಳು ಐದು, ಪುರೀಷಗಳೂ ಐದು) ಒಂದು ಚಿತಿಯನ್ನು ಮಾಡಿ ಒಂದು ಪುರೀಷದಿಂದ ಆಚ್ಛಾದನ ಮಾಡಬೇಕು. ಹೀಗೆ ಐದು ಚಿತಿಗಳಿಗೂ ಅನುಷ್ಠಿಸಬೇಕು. |
| ದಶ ಸಂಪದ್ಯಂತೇ | (ಪುರೀಷಗಳೂ ಮತ್ತು ಚಿತಿಗಳೂ ಸೇರಿ) ಹತ್ತಾಗುತ್ತವೆ. |
| ವಿರಾಟ್ ದಶಾಕ್ಷರಾ | ವಿರಾಟ್ ಛಂದಸ್ಸು ಹತ್ತು ಅಕ್ಷರಗಳಿಂದ ಕೂಡಿದೆ. |

–ಡನ್ನಂ ವಿರಾಡ್ವಿರಾಜ್ಯೇವಾನ್ನಾದ್ಯೇ ಪ್ರತಿ ತಿಷ್ಠತಿ ॥ ೨೦–3 ॥

[ಅಧ್ಯವಸಾಯಯತಿ ಹ್ಯೇತದ್ವಿಶ್ವಾಮಿತ್ರಸ್ಯಾದಧತ ದ್ವೇ ಲೋಕಸ್ಯ ಲೋಕೇಷು ಸಪ್ತಚತ್ವಾರಿಗ್ಂಶಚ್ಚ ॥]

---

ಅನ್ನಮ್ । ವಿರಾಡಿತಿ ವಿ–ರಾಟ್ । ವಿರಾಜೀತಿ ವಿ–ರಾಜಿ । ಏವ । ಅನ್ನಾದ್ಯ ಇತ್ಯನ್ನ–ಅದ್ಯೇ । ಪ್ರತೀತಿ । ತಿಷ್ಠತಿ ॥ ೨೦ ॥

---

| ಬ್ರಾಹ್ಮಣಭಾಗ | ವಿವರಣೆ |
| --- | --- |
| **ಅನ್ನಮ್ ವಿರಾಟ್** | ವಿರಾಟ್ ಛಂದಸ್ಸೂ ಅನ್ನರೂಪವಾಗಿದೆ. |
| **ವಿರಾಜಿ ಅನ್ನಾದ್ಯೇ ಏವ ಪ್ರತಿತಿಷ್ಠತಿ** | ಇದರಿಂದ ಯಜಮಾನನು ವಿರಾಟ್ ಸ್ವರೂಪವಾದ ಅನ್ನಾದಿಗಳಲ್ಲಿ ಪ್ರತಿಷ್ಠಿತನಾಗುವನು. |

---

## ವಿನಿಯೋಗಸಂಗ್ರಹ

**ಅಪ್ಪೋದ್ಧಂತಿ ಚಿತಿಸ್ಥಾನಮಗ್ನೇಸ್ತು ಸಿಕತಾ ವಪೇತ್ ।**
**ಸಂಜ್ಞಾನಮೂಷಾನ್ನಿವಪೇತ್ ಸಂ ಯಾಃ ಸಂಸೃಜತೇ ದ್ವಯಮ್ ॥**
**ಅಯಂ ಚತಸೃಭಿಃ ಪ್ರಾಚೀರಿಷ್ಟಕಾ ಆ ದಧಾತಿ ಹಿ ।**
**ಇಡಾಂ ದ್ವಾಭ್ಯಾಂ ಪುರಸ್ತಾತ್ ದ್ವೇ ಚಿದ್ದ್ವಾಭ್ಯಾಮ್ ಪಶ್ಚಿಮೇ ದ್ವಯಮ್ ॥**
**ಲೋಕಂ ಲೋಕಪೃಣಾ ದ್ವಾಭ್ಯಾಮ್ ॥**



## ॥ ಚತುರ್ಥೋಽನುವಾಕಃ ॥

ವಿ ವಾ ಏತೌ ದ್ವಿಷಾತೇ ಯಶ್ಚ ಪುರಾಽಗ್ನಿರ್ಯಶ್ಚೋಖಾಯಾಗ್ಂ ಸಮಿತಮಿತಿ
ಚತಸೃಭಿಸ್ಸಂ ನಿವಪತಿ ಚತ್ವಾರಿ ಛಂದಾಗ್ಂಸಿ

---

ವೀತಿ । ವೈ । ಏತೌ । ದ್ವಿಷಾತೇ ಇತಿ । ಯಃ । ಚ । ಪುರಾ । ಅಗ್ನಿಃ । ಯಃ । ಚ । ಉಖಾಯಾಮ್ । ಸಮಿತಿ । ಇತಮ್ । ಇತಿ । ಚತಸೃಭಿರಿತಿ ಚತಸೃ-ಭಿಃ । ಸಮ್ । ನೀತಿ । ವಪತಿ । ಚತ್ವಾರಿ । ಛಂದಾಗ್ಂಸಿ ।

---

ಗಾರ್ಹಪತ್ಯಚಯನಾನಂತರ ಆಹವನೀಯಚಯನಕ್ಕಾಗಿ ಭೂಮಿಯ ಕರ್ಷಣವು ಹೇಳಲ್ಪಟ್ಟಿದೆ. ಇದರ ಮಂತ್ರಗಳು ಚತುರ್ಥಕಾಂಡದ ದ್ವಿತೀಯಪ್ರಪಾಠಕದ ಐದನೆಯ ಅನುವಾಕದಲ್ಲಿ ಇವೆ.

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ಅಗ್ನಿಗಳ ಸಂಯೋಜನ** |
| **ಯಃ ಚ ಪುರಾ ಅಗ್ನಿಃ ಯಃ ಚ ಉಖಾಯಾಮ್** | ಆಧಾನ ಮಾಡಲ್ಪಟ್ಟು ಮೊದಲೇ ಸಿದ್ಧವಾಗಿರುವ ಗಾರ್ಹಪತ್ಯಾಗ್ನಿ ಮತ್ತು ಉಖೆಯಲ್ಲಿರುವ ಉಖ್ಯಾಗ್ನಿ ಈ ಇಬ್ಬರೂ |
| **ಏತೌ ವಿ ದ್ವಿಷಾತೇ ವೈ** | (ನಾನೇ ಆಹುತಿಗೆ ಆಧಾರವಾಗಿರುವನು, ನಾನೇ ಆಹುತಿಗೆ ಆಧಾರನು) ಎಂಬುದಾಗಿ ಪರಸ್ಪರ ಕಲಹ ವನ್ನು ಮಾಡುತ್ತಾರೆ. |
| **ಸಮಿತಮ್ ಇತಿ ಚತಸೃಭಿಃ ಸಮ್ ನಿವಪತಿ** | ಇದರ ಪರಿಹಾರಕ್ಕಾಗಿ * 'ಸಮಿತಮ್' ಮೊದಲಾದ ನಾಲ್ಕು ಮಂತ್ರಗಳಿಂದ ಅಗ್ನಿಗಳ ಸಂಯೋಜನವನ್ನು ಮಾಡಬೇಕು. |
| **ಚತ್ವಾರಿ ಛಂದಾಗ್ಂಸಿ** | ಗಾಯತ್ರೀ ಮುಂತಾದ ಛಂದಸ್ಸುಗಳು ನಾಲ್ಕು. |

---

* ತೈ. ಸಂ. 4.2.5

ಛಂದಾಗ್ಂಸಿ ಖಲು ವಾ ಅಗ್ನೇಃ ಪ್ರಿಯಾ ತನೂಃ ಪ್ರಿಯಯೈವೈನೌ ತನುವಾ ಸಗ್ಂಶಾಸ್ತಿ ಸಮಿತಮಿತ್ಯಾಹ ತಸ್ಮಾದ್ಬ್ರಹ್ಮಣಾ ಕ್ಷತ್ರಗ್ಂ ಸಮೇತಿ ಯತ್ಸಂನ್ಯುಪ್ಯ ವಿಹರತಿ ತಸ್ಮಾದ್ಬ್ರಹ್ಮಣಾ ಕ್ಷತ್ರಂ ವ್ಯೇತ್ಯೃತುಭಿ[ಋತುಭಿಃ(೨೧)ವಾ]ರ್ವಾ ಏತಂ ದೀಕ್ಷಯಂತಿ

---

ಛಂದಾಗ್ಂಸಿ । ಖಲು । ವೈ । ಅಗ್ನೇಃ । ಪ್ರಿಯಾ । ತನೂಃ । ಪ್ರಿಯಯಾ । ಏವ । ಏನೌ । ತನುವಾ । ಸಮಿತಿ । ಶಾಸ್ತಿ । ಸಮಿತಿ । ಇತಮ್ । ಇತಿ । ಆಹ । ತಸ್ಮಾತ್ । ಬ್ರಹ್ಮಣಾ । ಕ್ಷತ್ರಮ್ । ಸಮಿತಿ । ಏತಿ । ಯತ್ । ಸಂನ್ಯುಪ್ಯೇತಿ ಸಮ್–ನ್ಯುಪ್ಯ । ವಿಹರತೀತಿ ವಿ–ಹರತಿ । ತಸ್ಮಾತ್ । ಬ್ರಹ್ಮಣಾ । ಕ್ಷತ್ರಮ್ । ವೀತಿ । ಏತಿ । ಋತುಭಿರಿತ್ಯೃತು–ಭಿಃ । (೨೧) । ವೈ । ಏತಮ್ । ದೀಕ್ಷಯಂತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಛಂದಾಗ್ಂಸಿ ಖಲು ಅಗ್ನೇಃ ಪ್ರಿಯಾ ತನೂಃ ವೈ** | ಛಂದಸ್ಸುಗಳು ಅಗ್ನಿಗೆ ಪ್ರಿಯವಾದ ಶರೀರವಾಗಿದೆ. |
| **ಪ್ರಿಯಯಾ ತನುವಾ ಏವ ಏನೌ ಸಗ್ಂಶಾಸ್ತಿ** | ಈ ಎರಡು ಅಗ್ನಿಗಳನ್ನೂ ಪ್ರಿಯವಾದ ಶರೀರದಿಂದ ಕೂಡಿಸಿದಂತಾಗುತ್ತದೆ. |
| **ಸಮಿತಮ್ ಇತ್ಯಾಹ** | ಶ್ರುತಿಯು 'ಸಮಿತಮ್' ಎಂದು ಮೊದಲಾಗಿ ಹೇಳುತ್ತದೆ. 'ನೀವು ಒಗ್ಗೂಡಿರಿ' ಎಂದು ಹೇಳುತ್ತದೆ. |
| **ತಸ್ಮಾತ್ ಬ್ರಹ್ಮಣಾ ಕ್ಷತ್ರಮ್ ಸಮೇತಿ** | ಆದುದರಿಂದ ಲೋಕದಲ್ಲಿ ಬ್ರಾಹ್ಮಣ–ಕ್ಷತ್ರಿಯರು ಒಟ್ಟುಗೂಡಿ ಕೆಲಸ ಮಾಡಿದಂತಾಗುತ್ತದೆ. |
| **ಯತ್ ಸಂನ್ಯುಪ್ಯ ವಿಹರತಿ** | ಅಗ್ನಿದ್ವಯವನ್ನು ಸೇರಿಸಿ ಅದರಲ್ಲಿ ಮುಂದಿನ ವಿವಿಧ ಅನುಷ್ಠಾನಗಳನ್ನು ಮಾಡುವುದೆಂಬುದು |
| **ತಸ್ಮಾತ್ ಬ್ರಹ್ಮಣಾ ಕ್ಷತ್ರಮ್ ವ್ಯೇತಿ** | ಪುರೋಹಿತನೊಡನೆ ಕ್ಷತ್ರಿಯನಾದ ರಾಜನು ಸೇರಿದಂತಾಗುತ್ತದೆ. ಅದರಿಂದ ವಿವಿಧವಾದ ಶಾಸ್ತ್ರೀಯ ಕರ್ಮಾನುಷ್ಠಾನವನ್ನು ಮಾಡಿದಂತಾಗುತ್ತದೆ. |

ಉಖ್ಯವಿಮೋಚನೆ; ಔಚಿತ್ಯ

| | |
|---|---|
| **ಏತಮ್ ಋತುಭಿಃ ದೀಕ್ಷಯಂತಿ ವೈ** | ಈ ಯಜಮಾನನನ್ನು ಋತುಗಳಿಂದ ದೀಕ್ಷಾಯುಕ್ತನನ್ನಾಗಿಸುವರಷ್ಟೆ. |

ಸ ಋತುಭಿರೇವ ವಿಮುಚ್ಯೋ ಮಾತೇವ ಪುತ್ರಂ ಪೃಥಿವೀ
ಪುರೀಷ್ಯಮಿತ್ಯಾಹರ್ತುಭಿರೇವೈನಂ ದೀಕ್ಷಯಿತ್ವರ್ತುಭಿರ್ವಿಮುಂಚತಿ
ವೈಶ್ವಾನರ್ಯಾ ಶಿಕ್ಯಮಾ ದತ್ತೇ

---

ಸಃ । ಋತುಭಿರಿತ್ಯೃತು–ಭಿಃ । ಏವ । ವಿಮುಚ್ಯ ಇತಿ ವಿ–ಮುಚ್ಯಃ । ಮಾತಾ । ಇವ । ಪುತ್ರಮ್ । ಪೃಥಿವೀ । ಪುರೀಷ್ಯಮ್ । ಇತಿ । ಆಹ । ಋತುಭಿರಿತ್ಯೃತು–ಭಿಃ । ಏವ । ಏನಮ್ । ದೀಕ್ಷಯಿತ್ವಾ । ಋತುಭಿರಿತ್ಯೃತು–ಭಿಃ । ವೀತಿ । ಮುಂಚತಿ । ವೈಶ್ವಾನರ್ಯಾ । ಶಿಕ್ಯಮ್ । ಏತಿ । ದತ್ತೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಸಃ ಋತುಭಿಃ ಏವ ವಿಮುಚ್ಯಃ | ಆದುದರಿಂದ ಆ ಅಗ್ನಿಯು ಋತುಗಳಿಂದಲೇ ದೀಕ್ಷಾ ವಿಮೋಚನೆಯನ್ನು ಪಡೆಯಲು ಅರ್ಹನು. |
| ಮಾತಾ ಇವ ಪುತ್ರಮ್ ಪೃಥಿವೀ ಪುರೀಷ್ಯಮ್ ಇತಿ ಆಹ | ಈ ಮಂತ್ರಭಾಗವು 'ಹೇಗೆ ತಾಯಿಯು ಮಗನನ್ನು ತನ್ನ ಗರ್ಭದಲ್ಲಿ ಧರಿಸುವಳೋ ಹಾಗೆ ಆ ಉಖೆಯನ್ನು ಧರಿಸಿ ಸೃಷ್ಟಿಕರ್ತನಾದ ಪ್ರಜಾಪತಿಯು ವಿಶ್ವೇದೇವ ಹಾಗೂ ಋತುಗಳೊಡನೆಯೂ ಐಕಮತ್ಯವನ್ನು ಹೊಂದಿದವನಾಗಿ ಶಿಕ್ಯಪಾಶದಿಂದ ಬಿಡಿಸಲಿ' ಎಂದು ಹೇಳುತ್ತದೆ. |
| ಏನಮ್ ಋತುಭಿಃ ಏವ ದೀಕ್ಷಯಿತ್ವಾ ಋತುಭಿಃ ವಿ ಮುಂಚತಿ | ಋತುಗಳಿಂದಲೇ ದೀಕ್ಷೆಗೊಳಿಸಿ ಈ ಅಗ್ನಿಗೆ ಋತುಗಳಿಂದಲೇ ದೀಕ್ಷಾವಿಮೋಚನೆಯನ್ನು ಅಧ್ವರ್ಯುವು ಮಾಡುತ್ತಾನೆ. |

**ಶಿಕ್ಯಪರಿಗ್ರಹ**

| | |
|---|---|
| ವೈಶ್ವಾನರ್ಯಾ ಶಿಕ್ಯಮ್ ಆ ದತ್ತೇ | ವೈಶ್ವಾನರದೇವತಾಕವಾದ ಋಕ್ಕಿನಿಂದ ಶಿಕ್ಯವನ್ನು ತೆಗೆದುಕೊಳ್ಳುವನು. |

---

**ತಾತ್ಪರ್ಯ:–** ಈ ಅಗ್ನಿಸಂಯೋಜನಮಂತ್ರಗಳು ನಾಲ್ಕು ಇವೆ. ಚಯನದ ಅಗ್ನಿಯ ಸಿದ್ಧಿಗಾಗಿ ಬೇಕಾದ ಅಭ್ಯುದಾನ ಮುಂತಾದ ಕರ್ಮಗಳಿಗೆ ಗಾಯತ್ರೀ ಮುಂತಾದ ಛಂದಸ್ಸುಗಳ ಮಂತ್ರಗಳನ್ನು ವಿನಿಯೋಗಿಸುವುದರಿಂದ ಆ ಛಂದಸ್ಸುಗಳು ಅಗ್ನಿಯ ಶರೀರಗಳು. ಹೀಗಾಗಿ ಇಲ್ಲಿಯ ನಾಲ್ಕು ಸಂಖ್ಯೆಯಿಂದ ಗಾಯತ್ರ್ಯಾದಿ ಛಂದಸ್ಸುಗಳು ಬುದ್ಧಿಸ್ಥವಾಗುತ್ತವೆ ಮತ್ತು ಅವು ಪ್ರಿಯವಾದ ಶರೀರವೇ ಆಗುತ್ತವೆ.

ಸ್ವದಯತ್ಯೇವೈನನ್ನೈರ್ಋತೀಃ ಕೃಷ್ಣಾಸ್ತಿಸ್ರಸ್ತುಷಪಕ್ವಾ ಭವಂತಿ ನಿರ್ಋತ್ಯೈ

ವಾ ಏತದ್ಭಾಗಧೇಯಂ ಯತ್ತುಷಾ ನಿರ್ಋತ್ಯೈ ರೂಪಂ ಕೃಷ್ಣಗ್ಂ

ರೂಪೇಣೈವ ನಿರ್ಋತಿಂ ನಿರವದಯತ

---

ಸ್ವದಯತಿ । ಏವ । ಏನತ್ । ನೈರ್ಋತೀರಿತಿ ನೈಃ–ಋತೀಃ । ಕೃಷ್ಣಾಃ । ತಿಸ್ರಃ । ತುಷಪಕ್ವಾ ಇತಿ ತುಷ–ಪಕ್ವಾಃ । ಭವಂತಿ । ನಿರ್ಋತ್ಯಾ ಇತಿ ನಿಃ–ಋತ್ಯೈ । ವೈ । ಏತತ್ । ಭಾಗಧೇಯಮಿತಿ ಭಾಗ–ಧೇಯಮ್ । ಯತ್ । ತುಷಾಃ । ನಿರ್ಋತ್ಯಾ ಇತಿ ನಿಃ–ಋತ್ಯೈ । ರೂಪಮ್ । ಕೃಷ್ಣಮ್ । ರೂಪೇಣ । ಏವ । ನಿರ್ಋತಿಮಿತಿ ನಿಃ–ಋತಿಮ್ । ನಿರವದಯತ ಇತಿ ನಿಃ–ಅವದಯತೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಏನತ್ ಸ್ವದಯತಿ ಏವ | ಈ ಮಂತ್ರದಿಂದ ತೆಗೆದುಕೊಂಡ ಶಿಕ್ಯವು ಮೆಚ್ಚುವಂತಾಗುತ್ತದೆ. |

**ಶಿಕ್ಯಸ್ಥಾಪನ/ಇಷ್ಟಕೆಗಳ ವಿವರಣೆ–ಅರ್ಥವಾದ**

| | |
|---|---|
| ನೈರ್ಋತೀಃ ಕೃಷ್ಣಾಃ ತಿಸ್ರಃ ತುಷಪಕ್ವಾಃ ಭವಂತಿ | ನಿರ್ಋತಿಯು ದೇವತೆಯಾಗಿರುವ ಇಷ್ಟಕೆಗಳು ಮೂರು,. ಕಪ್ಪು ಬಣ್ಣದವುಗಳು. ಬತ್ತದ ಹೊಟ್ಟಿನಿಂದ ಸುಟ್ಟಿರತಕ್ಕವುಗಳಾಗಿರುತ್ತವೆ. |
| ಯತ್ ತುಷಾಃ ಏತತ್ ನಿರ್ಋತ್ಯೈ ಭಾಗಧೇಯಮ್ ವೈ | ಹೊಟ್ಟುಗಳು ನಿರ್ಋತಿದೇವತೆಯ/ರಕ್ಷೋದೇವತೆಯ ಭಾಗವಾಗಿದೆ. |
| ನಿರ್ಋತ್ಯೈ ರೂಪಮ್ ಕೃಷ್ಣಮ್ | ನಿರ್ಋತಿದೇವತೆಯ ರೂಪವು ಕಪ್ಪಾಗಿದೆ. |
| ರೂಪೇಣ ಏವ ನಿರ್ಋತಿಮ್ ನಿರವದಯತೇ | ಇದರಿಂದ (ಕಪ್ಪಾದ ಇಷ್ಟಕೆಗಳಿಂದ) ನಿರ್ಋತಿಗೆ ಅನುಗುಣವಾದ ರೂಪವನ್ನೇ ಕೊಟ್ಟು ರಕ್ಷೋದೇವತೆಯನ್ನು/ನಿರ್ಋತಿಯನ್ನು ದೂರ ಮಾಡಿದಂತಾಗುತ್ತದೆ. |

---

ಅಗ್ನಿಸಂಯೋಜನೆಯನ್ನು ಅನುಷ್ಠಿಸುವಾಗ ಅಧ್ವರ್ಯುವು ಉಖ್ಯಾಗ್ನಿಯನ್ನು ತೆಗೆದುಕೊಳ್ಳಬೇಕು. ಪ್ರತಿ ಸಮೇಧನೀಯವನ್ನು (ಹಿಂದಿನ ಗಾರ್ಹಪತ್ಯಾಗ್ನಿಯನ್ನು) ಪ್ರತಿಪ್ರಸ್ಥಾತನು ತೆಗೆದುಕೊಳ್ಳಬೇಕು. ಅವೆರಡನ್ನೂ ನಾಲ್ಕು ಮಂತ್ರಗಳಿಂದ ಸೇರಿಸಬೇಕು.

ಈ ಅಗ್ನಿಸಂಯೋಜನೆಯು ಬ್ರಾಹ್ಮಣ–ಕ್ಷತ್ರಿಯ ಸಂಯೋಗದಂತೆ.

ಇಮಾಂ ದಿಶಂ ಯಂತ್ಯೇಷಾ [(೨೨)] ವೈ ನಿರ್ಋತ್ಯೈ ದಿಕ್ಸ್ವಾಯಾಮೇವ

ದಿಶಿ ನಿರ್ಋತಿಂ ನಿರವದಯತೇ ಸ್ವಕೃತ ಇರಿಣ ಉಪದಧಾತಿ ಪ್ರದರೇ

ವೈತದ್ವೈ ನಿರ್ಋತ್ಯಾ ಆಯತನಗ್ಂ

---

ಇಮಾಮ್ । ದಿಶಮ್ । ಯಂತಿ । ಏಷಾ । (೨೨) । ವೈ । ನಿರ್ಋತ್ಯಾ ಇತಿ ನಿಃ-ಋತ್ಯೈ । ದಿಕ್ । ಸ್ವಾಯಾಮ್ ।

ಏವ । ದಿಶಿ । ನಿರ್ಋತಿಮಿತಿ ನಿಃ-ಋತಿಮ್ । ನಿರವದಯತ ಇತಿ ನಿಃ-ಅವದಯತೇ । ಸ್ವಕೃತ ಇತಿ ಸ್ವ-ಕೃತೇ ।

ಇರಿಣೇ । ಉಪೇತಿ । ದಧಾತಿ । ಪ್ರದರ ಇತಿ ಪ್ರ-ದರೇ । ವಾ । ಏತತ್ । ವೈ । ನಿರ್ಋತ್ಯಾ ಇತಿ ನಿಃ-ಋತ್ಯಾಃ ।

ಆಯತನಮಿತ್ಯಾ-ಯತನಮ್ ।

---

ಬ್ರಾಹ್ಮಣಭಾಗ | ವಿವರಣೆ

ಅಂಗುಲೀನಿರ್ದೇಶನ

| ಬ್ರಾಹ್ಮಣಭಾಗ | ವಿವರಣೆ |
|---|---|
| **ಇಮಾಮ್ ದಿಶಮ್ ಯಂತಿ** | ನೈರ್ಋತ್ಯದಿಕ್ಕನ್ನು ಕುರಿತು ಹೋಗುತ್ತಾರೆ. |
| **ಏಷಾ ವೈ ನಿರ್ಋತ್ಯೈ ದಿಕ್** | 'ಇಗೋ! ಇದೇ ನಿರ್ಋತಿಯ ದಿಕ್ಕು ಆಗಿದೆ' ಎಂದು ಬೆರಳಿನಿಂದ ನಿರ್ದೇಶಿಸಬೇಕು. |
| **ಸ್ವಾಯಾಮ್ ದಿಶಿ ಏವ ನಿರ್ಋತಿಮ್ ನಿರವದಯತೇ** | ಇದರಿಂದ ನಿರ್ಋತಿಗೆ ತನ್ನ ದಿಕ್ಕಿನಲ್ಲಿಯೇ ಭಾಗವನ್ನಿತ್ತು ದೂರ ಮಾಡಿದಂತಾಗುತ್ತದೆ. |
| **ಸ್ವಕೃತೇ ಇರಿಣೇ ಉಪದಧಾತಿ ಪ್ರದರೇ ವಾ** | ಚೌಳುಪ್ಪಿನ ಪ್ರದೇಶದಲ್ಲಿಯೋ ಅಥವಾ ತಾನಾಗಿಯೇ ಉಂಟಾಗಿರುವ ಭೂಮಿಯ ಹಳ್ಳದಲ್ಲಿಯೋ ಈ ಇಷ್ಟಕೆಗಳ ಉಪಧಾನವನ್ನು ಅನುಷ್ಠಿಸಬೇಕು. |
| **ಏತತ್ ನಿರ್ಋತ್ಯಾಃ ಆಯತನಮ್ ವೈ** | ಈ ಪ್ರದೇಶವು ನಿರ್ಋತಿಯ ಸ್ಥಾನವಾಗಿದೆ. |

---

ಕ್ಷತ್ರಿಯನೊಡಗೂಡಿದ ಬ್ರಾಹ್ಮಣನು ರಾಜನ ಸಂಬಂಧವಿಲ್ಲದ ಬ್ರಾಹ್ಮಣನನ್ನೂ, ಬ್ರಾಹ್ಮಣನಿಂದೊಡಗೂಡಿದ ಕ್ಷತ್ರಿಯನು ಪುರೋಹಿತನ ನಿರ್ದೇಶವನ್ನು ಪಡೆಯಲಾಗದ ಕ್ಷತ್ರಿಯನನ್ನೂ ಮೀರುವನು/ಮೇಲ್ಮೈಯನ್ನು ಪಡೆದಿರುವನು ಎಂದು ಶ್ರುತಿವಚನ. [ತೈ. ಸಂ. 5-1-10]

ಹೀಗಾಗಿ ಅಗ್ನಿಗಳ ಸಂಯೋಗವು ಪ್ರಶಸ್ತ.

ವಿಹರಣವೆಂದರೆ ಒಂದೆಡೆ ಇರುವ ಅಗ್ನಿಯನ್ನು ಇನ್ನೊಂದು ಕಡೆಗೆ ಒಯ್ಯುವದಷ್ಟೆ. ಹೀಗಿರುವಾಗ ಬ್ರಾಹ್ಮಣನ ತೇಜಸ್ಸೇ ಇನ್ನೊಂದೆಡೆ ಅಂದರೆ ಕ್ಷತ್ರಿಯನಲ್ಲಿ ಇದೆಯಷ್ಟೆ. ಎರಡು ತೇಜಸ್ಸೂ ಒಂದೇ. ಹೀಗೆ ಅಗ್ನಿವಿಹರಣದ

ಸ್ವ ಏವಾಯತನೇ ನಿರ್ಋತಿಂ ನಿರವದಯತೇ ಶಿಕ್ಯಮಭ್ಯುಪದಧಾತಿ ನೈರ್ಋತೋ ವೈ ಪಾಶಸ್ಸಾಕ್ಷಾದೇವೈನಂ ನಿರ್ಋತಿಪಾಶಾನ್ಮುಂಚತಿ ತಿಸ್ರ ಉಪದಧಾತಿ ತ್ರೇಧಾವಿಹಿತೋ ವೈ ಪುರುಷೋ

---

ಸ್ವೇ । ಏವ । ಆಯತನ ಇತ್ಯಾ-ಯತನೇ । ನಿರ್ಋತಿಮಿತಿ ನಿಃ-ಋತಿಮ್ । ನಿರವದಯತ ಇತಿ ನಿಃ-ಅವದಯತೇ । ಶಿಕ್ಯಮ್ । ಅಭಿ । ಉಪೇತಿ । ದಧಾತಿ । ನೈರ್ಋತ ಇತಿ ನೈಃ-ಋತಃ । ವೈ । ಪಾಶಃ । ಸಾಕ್ಷಾದಿತಿ ಸ-ಅಕ್ಷಾತ್ । ಏವ । ಏನಮ್ । ನಿರ್ಋತಿಪಾಶಾದಿತಿ ನಿರ್ಋತಿ-ಪಾಶಾತ್ । ಮುಂಚತಿ । ತಿಸ್ರಃ । ಉಪೇತಿ । ದಧಾತಿ । ತ್ರೇಧಾವಿಹಿತ ಇತಿ ತ್ರೇಧಾ-ವಿಹಿತಃ । ವೈ । ಪುರುಷಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಸ್ವೇ ಆಯತನೇ ಏವ ನಿರ್ಋತಿಮ್ ನಿರವದಯತೇ** | ಇಲ್ಲಿ ಇಷ್ಟಕೋಪಧಾನವನ್ನು ಮಾಡುವುದರಿಂದ ದೇವಯಜನಪ್ರದೇಶದಿಂದ ದೂರ ಮಾಡಿ ಅಲ್ಲಿ ನಿರ್ಋತಿಯನ್ನು ಸ್ಥಾಪಿಸಿದಂತಾಗುತ್ತದೆ. |

ಇಷ್ಟಕೋಪಧಾನಸ್ಥಾನನಿರ್ದೇಶ-ಅರ್ಥವಾದ

| | |
|---|---|
| **ಶಿಕ್ಯಮ್ ಅಭ್ಯುಪದಧಾತಿ** | ಶಿಕ್ಯದ ಮೇಲ್ಭಾಗದಲ್ಲಿ ಈ ಇಷ್ಟಕೆಗಳನ್ನು ಉಪಧಾನ ಮಾಡಬೇಕು. |
| **ಪಾಶಃ ನೈರ್ಋತಃ ವೈ** | ಶಿಕ್ಯಪಾಶವು ನಿರ್ಋತಿದೇವತಾಕವಾದುದು. |
| **ಏನಮ್ ನಿರ್ಋತಿಪಾಶಾತ್ ಸಾಕ್ಷಾತ್ ಏವ ಮುಂಚತಿ** | ಇದರಿಂದ ಈ ಯಜಮಾನನನ್ನು ನೇರವಾಗಿ ನಿರ್ಋತಿ ಪಾಶದಿಂದಲೇ ಬಿಡಿಸಿದಂತಾಗುತ್ತದೆ. |

ಇಷ್ಟಕೆಗಳ ಸಂಖ್ಯಾವಿಧಿ; ಅರ್ಥವಾದ

| | |
|---|---|
| **ತಿಸ್ರಃ ಉಪದಧಾತಿ** | ಮೂರು ಇಷ್ಟಕೆಗಳನ್ನು ಉಪಧಾನ ಮಾಡಬೇಕು. |
| **ಪುರುಷಃ ತ್ರೇಧಾವಿಹಿತಃ ವೈ** | ಪುರುಷನು ಮೇಲ್ಭಾಗ,ಮಧ್ಯಭಾಗ ಮತ್ತು ಕೆಳ ಭಾಗದಿಂದ ಕೂಡಿರುವವನು. |

---

ದೃಷ್ಟಾಂತವು ಬ್ರಹ್ಮ-ಕ್ಷತ್ರಿಯರಿಗೆ ಹೊಂದುತ್ತದೆ.

ಹಾಗೆ ನೋಡಿದರೆ ದೀಕ್ಷೆಯನ್ನು ಪಡೆದವನು ಯಜಮಾನನು. ವಿಮೋಚನೆಯನ್ನು ಹೊಂದುವನು ಉಖ್ಯಾಗ್ನಿಯು. ಆದರೂ ಅಗ್ನಿ-ಯಜಮಾನರ ಅಭೇದವನ್ನು ಕಲ್ಪಿಸಿ ಹೀಗೆ ಹೇಳಲಾಗಿದೆ.

ಯಾವಾನೇವ ಪುರುಷಸ್ತಸ್ಮಾನ್ನಿರ್‌ಋತಿಮವ ಯಜತೇ

ಪರಾಚೀರುಪ[(೨೩)ದಧಾತಿ]ದಧಾತಿ ಪರಾಚೀಮೇವಾಸ್ಮಾನ್ನಿರ್‌ಋತಿಂ

ಪ್ರಣುದತೇಽಪ್ರತೀಕ್ಷಮಾಯಂತಿ ನಿರ್‌ಋತ್ಯಾ ಅಂತರ್‌ಹಿತ್ಯೈ ॥

---

ಯಾವಾನ್ । ಏವ । ಪುರುಷಃ । ತಸ್ಮಾತ್ । ನಿರ್‌ಋತಿಮಿತಿ ನಿಃ-ಋತಿಮ್ । ಅವೇತಿ । ಯಜತೇ । ಪರಾಚೀಃ । ಉಪೇತಿ । (೨೩) । ದಧಾತಿ । ಪರಾಚೀಮ್ । ಏವ । ಅಸ್ಮಾತ್ । ನಿರ್‌ಋತಿಮಿತಿ ನಿಃ-ಋತಿಮ್ । ಪ್ರೇತಿ । ನುದತೇ । ಅಪ್ರತೀಕ್ಷಮಿತ್ಯಪ್ರತಿ-ಈಕ್ಷಮ್ । ಏತಿ । ಯಂತಿ । ನಿರ್‌ಋತ್ಯಾ ಇತಿ ನಿಃ-ಋತ್ಯಾಃ । ಅಂತರ್‌ಹಿತ್ಯಾ ಇತ್ಯಂತಃ-ಹಿತ್ಯೈ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯಾವಾನ್ ಏವ ಪುರುಷಃ** | ಪುರುಷನು ಎಷ್ಟುಭಾಗಗಳುಳ್ಳವನಾಗಿರುವನೋ(ಮೂರು) |
| **ತಸ್ಮಾತ್ ನಿರ್‌ಋತಿಮ್ ಅವಯಜತೇ** | ಆ ಮೂರು ಭಾಗಗಳಿಂದಲೂ ನಿರ್‌ಋತಿಯನ್ನು ದೂರ ಮಾಡಿದಂತಾಗುತ್ತದೆ. |

**ಉಪಧಾನದಲ್ಲಿ ವಿಶೇಷವಿಧಿ; ಅರ್ಥವಾದ**

| | |
|---|---|
| **ಪರಾಚೀಃ ಉಪದಧಾತಿ** | ಪರಸ್ಪರಸ್ಪರ್ಶವಿಲ್ಲದಂತೆ ದಕ್ಷಿಣಾಗ್ರವಾಗಿ ಇಷ್ಟಕೆಗಳನ್ನು ಉಪಧಾನ ಮಾಡಬೇಕು. |
| **ಅಸ್ಮಾತ್ ಪರಾಚೀಮ್ ಏವ ನಿರ್‌ಋತಿಮ್ ಪ್ರ ನುದತೇ** | ಇದರಿಂದ ಈ ದೇವಯಜನಕ್ಕೆ ಅಥವಾ ಯಜಮಾನನಿಗೆ ನಿರ್‌ಋತಿಯನ್ನು ಹಿಮ್ಮುಖನನ್ನಾಗಿ ಮಾಡಿ ದೂರ ಮಾಡಿದಂತಾಗುತ್ತದೆ. |

**ಹಿಂದಿರುಗುವ ಕ್ರಮ; ಅರ್ಥವಾದ**

| | |
|---|---|
| **ಅಪ್ರತೀಕ್ಷಮ್ ಆಯಂತಿ** | (ಅಧ್ವರ್ಯು ಮೊದಲಾದವರು)ಹಿಂದಿರುಗಿ ನೋಡದೇ ದೇವಯಜನಕ್ಕೆ ಬರಬೇಕು. |
| **ನಿರ್‌ಋತ್ಯಾಃ ಅಂತರ್‌ಹಿತ್ಯೈ** | ಇದು ನಿರ್‌ಋತಿಯ ಅಂತರ್ಧಾನಕ್ಕೆ ಕಾರಣವಾಗುತ್ತದೆ. |

---

**'ಯದಸ್ಯ ಪಾರೇ'** ಎಂದು ಆರಂಭಗೊಂಡು **'ವೈಶ್ವಾನರಾಯ ಸ್ವಾಹಾ'** ಎಂದು ಮುಕ್ತಾಯವಾಗುವ ಮಂತ್ರದಿಂದ ಶಿಕ್ಯಗ್ರಹಣವನ್ನು ಮಾಡಬೇಕು. **'ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ'** ಎಂಬ ಸ್ಮೃತಿ ವಚನದಂತೆ ಜಾಠರಾಗ್ನಿಯು ವೈಶ್ವಾನರನಾಗಿ ಆಹಾರವನ್ನು ರುಚಿಯನ್ನಾಗಿಸುವಂತೆ ವೈಶ್ವಾನರಮಂತ್ರದಿಂದ ಗೃಹೀತವಾದ ಶಿಕ್ಯವು ಮೆಚ್ಚುವಂತಾಗುತ್ತದೆ.

ಮಾರ್ಜಯಿತ್ವೋಪತಿಷ್ಠಂತೇ ಮೇಧ್ಯತ್ವಾಯ ಗಾರ್ಹಪತ್ಯಮುಪತಿಷ್ಠಂತೇ

ನಿರ್ಋತಿಲೋಕ ಏವ ಚರಿತ್ವಾ ಪೂತಾ ದೇವಲೋಕಮುಪಾವರ್ತಂತ

ಏಕಯೋಪತಿಷ್ಠಂತ ಏಕಧೈವ ಯಜಮಾನೇ ವೀರ್ಯಂ ದಧತಿ

---

ಮಾರ್ಜಯಿತ್ವಾ । ಉಪೇತಿ । ತಿಷ್ಠಂತೇ । ಮೇಧ್ಯತ್ವಾಯೇತಿ ಮೇಧ್ಯ–ತ್ವಾಯ । ಗಾರ್ಹಪತ್ಯಮಿತಿ ಗಾರ್ಹ–ಪತ್ಯಮ್ । ಉಪೇತಿ । ತಿಷ್ಠಂತೇ । ನಿರ್ಋತಿಲೋಕ ಇತಿ ನಿರ್ಋತಿ–ಲೋಕೇ । ಏವ । ಚರಿತ್ವಾ । ಪೂತಾಃ । ದೇವಲೋಕಮಿತಿ ದೇವ–ಲೋಕಮ್ । ಉಪಾವರ್ತಂತ ಇತ್ಯುಪ–ಆವರ್ತಂತೇ । ಏಕಯಾ । ಉಪೇತಿ । ತಿಷ್ಠಂತೇ । ಏಕಧೇತ್ಯೇಕ–ಧಾ । ಏವ । ಯಜಮಾನೇ । ವೀರ್ಯಮ್ । ದಧತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ಮಾರ್ಜನವಿಧಿ;ಅರ್ಥವಾದ** |
| **ಮಾರ್ಜಯಿತ್ವಾ ಉಪತಿಷ್ಠಂತೇ** | 'ಶಂ ನೋ ದೇವೀಃ' ಎಂಬ ಮಂತ್ರದಿಂದ ಮಾರ್ಜನೆಯನ್ನು ಮಾಡಿಕೊಳ್ಳಬೇಕು. ಬಳಿಕ ನಿರ್ಋತಿಯ ಉಪಸ್ಥಾನವನ್ನು ಮಾಡಬೇಕು. |
| **ಮೇಧ್ಯತ್ವಾಯ** | ಇದರಿಂದ ಶುದ್ಧಿಯಾಗುತ್ತದೆ. |
| **ಗಾರ್ಹಪತ್ಯಮ್ ಉಪತಿಷ್ಠಂತೇ** | ಬಳಿಕ ಗಾರ್ಹಪತ್ಯಾಗ್ನಿಯ ಉಪಸ್ಥಾನವನ್ನು ಮಾಡಬೇಕು. |
| **ನಿರ್ಋತಿಲೋಕೇ ಏವ ಚರಿತ್ವಾ** | ನಿರ್ಋತಿದೇವತೆಯ ಸ್ಥಾನದಲ್ಲಿ ಸಂಚರಿಸಿ, |
| **ಪೂತಾಃ ದೇವಲೋಕಮ್ ಉಪಾವರ್ತಂತೇ** | ಮಾರ್ಜನೆಯಿಂದ ಶುದ್ಧರಾಗಿ ಗಾರ್ಹಪತ್ಯಾಗ್ನಿಯ ಸಮೀಪವೆಂಬ ದೇವತೆಗಳ ಸ್ಥಾನಕ್ಕೆ ಬಂದವರಾಗುತ್ತಾರೆ. |
| | **ಉಪಸ್ಥಾನವಿಧಿ; ಪ್ರಶಂಸೆ** |
| **ಏಕಯಾ ಉಪತಿಷ್ಠಂತೇ** | 'ನಿವೇಶನಃ' ಎಂಬ ಒಂದು ಋಕ್ಕಿನಿಂದ ಉಪಸ್ಥಾನ/ಸ್ತುತಿಯನ್ನು ಅನುಷ್ಠಿಸಬೇಕು. |
| **ಯಜಮಾನೇ ಏಕಧಾ ಏವ ವೀರ್ಯಮ್ ದಧತಿ** | ಇದರಿಂದ ಒಂದೇ ಬಾರಿಗೆ ಯಜಮಾನನಲ್ಲಿ ಬಲವನ್ನು ಸ್ಥಾಪಿಸಿದಂತಾಗುತ್ತದೆ. |

---

ಕಲ್ಪಸೂತ್ರದಲ್ಲಿ 'ನೈರ್ಋತೀಃ...ನಿಧಾಯ' ಎಂಬುದಾಗಿ ಇಷ್ಟಕೋಪಧಾನವನ್ನು ಹೇಳಲಾಗಿದೆ. ಇಷ್ಟಕೆಗಳು ಹೊಟ್ಟಿನಿಂದ ಸುಡಲ್ಪಟ್ಟಿರಬೇಕೆಂದು ವಿಧಿಯು ಇದೆ.

ನಿವೇಶನಸ್ಸಂಗಮನೋ ವಸೂನಾಮಿತ್ಯಾಹ ಪ್ರಜಾ ವೈ ಪಶವೋ ವಸು

ಪ್ರಜಯೈವೈನಂ ಪಶುಭಿಸ್ಸಮರ್ಧಯಂತಿ ॥ ೨೪-4 ॥

[ಋತುಭಿರೇಷಾ ಪರಾಚೀರುಪಾಷ್ಟಾಚತ್ವಾರಿಗ್‌ಂಶಚ್ಚ ॥]

---

ನಿವೇಶನ ಇತಿ ನಿ–ವೇಶನಃ । ಸಂಗಮನ ಇತಿ ಸಮ್–ಗಮನಃ । ವಸೂನಾಮ್ । ಇತಿ । ಆಹ । ಪ್ರಜೇತಿ ಪ್ರ–ಜಾ । ವೈ । ಪಶವಃ । ವಸು । ಪ್ರಜಯೇತಿ ಪ್ರ–ಜಯಾ । ಏವ । ಏನಮ್ । ಪಶುಭಿರಿತಿ ಪಶು–ಭಿಃ । ಸಮಿತಿ । ಅರ್ಧಯಂತಿ ॥ ೨೪ ॥

---

| ಬ್ರಾಹ್ಮಣಭಾಗ | ವಿವರಣೆ |
|---|---|
| ನಿವೇಶನಃ ಸಂಗಮನಃ ವಸೂನಾಮ್ ಇತಿ ಆಹ | ಈ ಮಂತ್ರದ ಒಂದು ಭಾಗವು 'ವಸೂನಾಮ್' ಮೊದಲಾಗಿ ಹೇಳುತ್ತದೆ. |
| ಪ್ರಜಾಃ ವೈ ಪಶವಃ ವಸು | ಪ್ರಜೆಗಳು ಮತ್ತು ಪಶುಗಳು ವಸುಗಳೆನಿಸಿಕೊಳ್ಳುತ್ತವೆ. |
| ಏನಮ್ ಪ್ರಜಯಾ ಪಶುಭಿಃ ಏವ ಸಮರ್ಧಯಂತಿ | ಋತ್ವಿಜರು ಈ ಮಂತ್ರಪಾಠ ಮಾಡಿ ಉಪಸ್ಥಾನ ವನ್ನು ಮಾಡುವುದರಿಂದ ಈ ಯಜಮಾನನನ್ನು ಪ್ರಜೆ–ಪಶುಗಳಿಂದ ಸಂಪನ್ನನನ್ನಾಗಿಸುತ್ತಾರೆ. |

---

ಐಷ್ಟಿಕಪ್ರಕರಣದಲ್ಲಿ 'ರಕ್ಷಸಾಂ ಭಾಗೋಽಸೀತ್ಯಾಹ । ತುಷೈರೇವ ರಕ್ಷಾಗ್‌ಂಸಿ ನಿರವದಯತೇ [ತೈ. ಬ್ರಾ. 3.2.5] ಎಂಬುದಾಗಿ ತುಷಗಳನ್ನು ರಕ್ಷೋದೇವತೆಯ ಭಾಗವನ್ನಾಗಿ ಹೇಳಲಾಗಿದೆ.

ಮೂರು ಇಷ್ಟಕೆಗಳನ್ನು ಉಪಧಾನ ಮಾಡುವುದನ್ನು ಬಗೆಬಗೆಯಾಗಿ ಪ್ರಶಂಸಿಸಲಾಗಿದೆ.

ಹಿಂದಿರುಗಿ ನೋಡದೇ ಬರುವುದರಿಂದ ನಿರ್‌ಋತಿಯನ್ನು ನೋಡದಂತೆ ಮಾಡಿ ದೂರಮಾಡಿದಂತಹವನಾಗುತ್ತಾನೆ.

---

## ವಿನಿಯೋಗಸಂಗ್ರಹ

**ಸಂ ಗಾರ್ಹಪತ್ಯ ಉಖ್ಯಾಗ್ನಿಂ ಚತುರ್ಭಿರ್ನಿರ್ವಪೇದಮುಮ್ ।**
**ಮಾತಾ ಶಿಕ್ಯಾದುಖಾಂ ಮುಂಚೇದ್ಯದಾ ಶಿಕ್ಯಪರಿಗ್ರಹಃ ॥**
**ನಮೋ ನೈರ್‌ಋತದೇಶೇ ತಚ್ಛಿಕ್ಯಂ ತ್ಯಕ್ತ್ವಾ ಯದಿತ್ಯತಃ ।**
**ಶಿಕ್ಯಜಾಲೇನ ಯಾಃ ಕೃಷ್ಣಾ ಇಷ್ಟಕಾಃ ಸ್ಥಾಪಯೇದಮೂಃ ॥**
**ಯಸ್ಯಾಸ್ತ್ರಿಭಿಸ್ತಿಸ್ರ ಏತಾಃ ಕೃಷ್ಣಾ ಉಪದಧಾತಿ ಹಿ**
**ನಿವೇಽಗ್ನಿಮುಪತಿಷ್ಠೇತ ॥**

## ॥ ಪಂಚಮೋಽನುವಾಕಃ ॥

ಪುರುಷಮಾತ್ರೇಣ ವಿ ಮಿಮೀತೇ ಯಜ್ಞೇನ ವೈ ಪುರುಷಸ್ಸಂಮಿತೋ
ಯಜ್ಞಪುರುಷೈವೈನಂ ವಿ ಮಿಮೀತೇ ಯಾವಾನ್ಪುರುಷ ಊರ್ಧ್ವಬಾಹು

---

ಪುರುಷಮಾತ್ರೇಣೇತಿ ಪುರುಷ–ಮಾತ್ರೇಣ । ವೀತಿ । ಮಿಮೀತೇ । ಯಜ್ಞೇನ । ವೈ । ಪುರುಷಃ । ಸಂಮಿತ ಇತಿ ಸಮ್–ಮಿತಃ । ಯಜ್ಞಪುರುಷೇತಿ ಯಜ್ಞ–ಪುರುಷಾ । ಏವ । ಏನಮ್ । ವೀತಿ । ಮಿಮೀತೇ । ಯಾವಾನ್ । ಪುರುಷಃ । ಊರ್ಧ್ವಬಾಹುರಿತ್ಯೂರ್ಧ್ವ–ಬಾಹುಃ ।

---

ಈ ಐದನೆಯ ಅನುವಾಕದಲ್ಲಿ ಕ್ಷೇತ್ರಕರ್ಷಣವಿಧಿಯು ಹೇಳಲ್ಪಡುತ್ತದೆ ಅದಕ್ಕೆ ಮೊದಲು ಕ್ಷೇತ್ರ ಮಾನವು ಹೇಳಲ್ಪಡುತ್ತದೆ.

---

| ಬ್ರಾಹ್ಮಣಭಾಗ | ವಿವರಣೆ |
|---|---|
| | ಚಯನಪ್ರದೇಶದ ಮಾನ [ಅಳತೆ]–ವಿಧಿ |
| **ಪುರುಷಮಾತ್ರೇಣ ವಿ ಮಿಮೀತೇ** | ಅಗ್ನಿಚಯನಪ್ರದೇಶವನ್ನು ಪುರುಷಪ್ರಮಾಣದ ಬಿದಿರು ಕೋಲಿನಿಂದ ಅಳತೆ ಮಾಡಬೇಕು. |
| **ಯಜ್ಞೇನ ವೈ ಪುರುಷಃ ಸಂಮಿತಃ** | ಲೌಕಿಕಪುರುಷನು ಯಜ್ಞಾಭಿಮಾನಿದೇವನಿಗೆ ಸಮಾನವಾದ ಪ್ರಮಾಣವುಳ್ಳವನು. |
| **ಏನಮ್ ಯಜ್ಞಪುರುಷಾ ಏವ ವಿಮಿಮೀತೇ** | ಈ ಅಗ್ನಿಚಯನರೂಪವಾದ ಯಜ್ಞಪುರುಷಪ್ರದೇಶವನ್ನು ಯಜ್ಞಪುರುಷಪ್ರಮಾಣದಿಂದಲೇ ಅಳೆದವನಾಗುತ್ತಾನೆ. |
| **ಊರ್ಧ್ವಬಾಹುಃ ಪುರುಷಃ ಯಾವಾನ್** | ಮೇಲಕ್ಕೆ ಎತ್ತಿದ ತೋಳುಗಳುಳ್ಳ ಪುರುಷನು ಎಷ್ಟು ಪ್ರಮಾಣವುಳ್ಳವನೋ, |

---

**ತಾತ್ಪರ್ಯ:–** ಮೇಲಕ್ಕೆ ಎತ್ತಿದ ತೋಳುಳ್ಳ ಪುರುಷನ ಪ್ರಮಾಣದಷ್ಟೇ ಚಯನಪ್ರದೇಶವಿರುತ್ತದೆ.

ಸ್ತಾವಾನ್ಭವತ್ಯೇತಾವದ್ವೈ ಪುರುಷೇ ವೀರ್ಯಂ ವೀರ್ಯೇಣೈವೈನಂ ವಿ ಮಿಮೀತೇ ಪಕ್ಷೀ ಭವತಿ ನ ಹ್ಯಪಕ್ಷಃ ಪತಿತುಮರ್ಹತ್ಯರತ್ನಿನಾ ಪಕ್ಷೌ ದ್ರಾಘೀಯಾಗ್ಂಸೌ ಭವತ ಸ್ತಸ್ಮಾತ್ಪಕ್ಷಪ್ರವಯಾಗ್ಂಸಿ ವಯಾಗ್ಂಸಿ ವ್ಯಾಮಮಾತ್ರೌ ಪಕ್ಷೌ ಚ ಪುಚ್ಛಂ ಚ ಭವ–

---

ತಾವಾನ್ । ಭವತಿ । ಏತಾವತ್ । ವೈ । ಪುರುಷೇ । ವೀರ್ಯಮ್ । ವೀರ್ಯೇಣ । ಏವ । ಏನಮ್ । ವೀತಿ । ಮಿಮೀತೇ । ಪಕ್ಷೀ । ಭವತಿ । ನ । ಹಿ । ಅಪಕ್ಷಃ । ಪತಿತುಮ್ । ಅರ್ಹತಿ । ಅರತ್ನಿನಾ । ಪಕ್ಷೌ । ದ್ರಾಘೀಯಾಗ್ಂಸೌ । ಭವತಃ । ತಸ್ಮಾತ್ । ಪಕ್ಷಪ್ರವಯಾಗ್ಂಸೀತಿ ಪಕ್ಷ–ಪ್ರವಯಾಗ್ಂಸಿ । ವಯಾಗ್ಂಸಿ । ವ್ಯಾಮಮಾತ್ರಾವಿತಿ ವ್ಯಾಮ–ಮಾತ್ರೌ । ಪಕ್ಷೌ । ಚ । ಪುಚ್ಛಮ್ । ಚ । ಭವತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ತಾವಾನ್ ಭವತಿ** | ಈ ಚಯನಾಗ್ನಿಪ್ರದೇಶವೂ ಅಷ್ಟೇ ಪರಿಮಾಣವುಳ್ಳದುದಾಗುತ್ತದೆ. |
| **ಏತಾವತ್ ವೈ ಪುರುಷೇ ವೀರ್ಯಮ್** | ಪುರುಷನಲ್ಲಿ ಕಾರ್ಯಸಾಮರ್ಥ್ಯವು ಇಷ್ಟೇ. |
| **ವೀರ್ಯೇಣ ಏವ ಏನಮ್ ವಿ ಮಿಮೀತೇ** | ಆ ವೀರ್ಯದಿಂದಲೇ/ಕಾರ್ಯಸಾಮರ್ಥ್ಯವನ್ನು ಅನುಸರಿಸಿಯೇ ಅಧ್ವರ್ಯುವು ಚಯನಭೂಮಿಯನ್ನು ಅಳೆದವನಾಗುತ್ತಾನೆ. |

**ಚಯನಭೂಮಿಯ ಆಕಾರ**

| | |
|---|---|
| **ಪಕ್ಷೀ ಭವತಿ** | ಈ ಚಯನಪ್ರದೇಶವು ಪಕ್ಷಿಯ ಆಕಾರವಾಗಿರಬೇಕು. |
| **ಅಪಕ್ಷಃ ಪತಿತುಮ್ ನ ಅರ್ಹತಿ ಹಿ** | ರೆಕ್ಕೆಗಳಿಲ್ಲದ ಪಕ್ಷಿಯು ಹಾರಲಾರದಷ್ಟೆ. |
| **ಪಕ್ಷೌ ಅರತ್ನಿನಾ ದ್ರಾಘೀಯಾಗ್ಂಸೌ ಭವತಃ** | ಎರಡು ರೆಕ್ಕೆಗಳು ಪುರುಷಪ್ರಮಾಣಕ್ಕಿಂತಲೂ ಒಂದೊಂದು ಅರತ್ನಿಯಷ್ಟು [೨೪ ಅಂಗುಲಗಳು] ಹೆಚ್ಚಿರಬೇಕು. |
| **ತಸ್ಮಾತ್ ವಯಾಗ್ಂಸಿ ಪಕ್ಷಪ್ರವಯಾಗ್ಂಸಿ** | ಆದುದರಿಂದ ಪಕ್ಷಿಗಳು ರೆಕ್ಕೆಗಳಿಂದ ವೃದ್ಧಿಯನ್ನು ಹೊಂದತಕ್ಕವುಗಳು. |
| **ವ್ಯಾಮಮಾತ್ರೌ ಪಕ್ಷೌ ಚ ಪುಚ್ಛಮ್ ಚ ಭವತಿ** | ರೆಕ್ಕೆಗಳು ಮತ್ತು ಪುಚ್ಛಭಾಗ [ಹಿಂಭಾಗ]ವೂ ಮಾರುದ್ದವಾಗಿರಬೇಕು. |

–ತ್ಯೇತಾವದ್ವೈ ಪುರುಷೇ ವೀರ್ಯಂ[ವೀರ್ಯಮ್(೨೫)] ವೀರ್ಯಸಮ್ಮಿತೋ ವೇಣುನಾ ವಿಮಿಮೀತ ಆಗ್ನೇಯೋ ವೈ ವೇಣುಸ್ಸಯೋನಿತ್ವಾಯ ಯಜುಷಾ ಯುನಕ್ತಿ ಯಜುಷಾ ಕೃಷತಿ ವ್ಯಾವೃತ್ತ್ಯೈ ೪೮

---

ಏತಾವತ್ । ವೈ । ಪುರುಷೇ । ವೀರ್ಯಮ್ । (೨೫) । ವೀರ್ಯಸಮ್ಮಿತ ಇತಿ ವೀರ್ಯ–ಸಮ್ಮಿತಃ । ವೇಣುನಾ । ವೀತಿ । ಮಿಮೀತೇ । ಆಗ್ನೇಯಃ । ವೈ । ವೇಣುಃ । ಸಯೋನಿತ್ವಾಯೇತಿ ಸಯೋನಿ–ತ್ವಾಯ । ಯಜುಷಾ । ಯುನಕ್ತಿ । ಯಜುಷಾ । ಕೃಷತಿ । ವ್ಯಾವೃತ್ತ್ಯಾ ಇತಿ ವಿ–ಆವೃತ್ತ್ಯೈ ೪೮ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಏತಾವತ್ ವೈ ಪುರುಷೇ ವೀರ್ಯಮ್ | *ಇಷ್ಟೇ ಪುರುಷಸಾಮರ್ಥ್ಯದ ಪರಿಮಿತಿಯಷ್ಟೆ. |
| ವೀರ್ಯಸಮ್ಮಿತಃ | ಪುರುಷನ ಸಾಮರ್ಥ್ಯಕ್ಕೆ ಸಮಾನವಾಗಿಯೇ ಅಳೆಯಲ್ಪಟ್ಟಂತಾಗುತ್ತದೆ. |

**ಮಾನದಂಡವಿಶೇಷ**

| | |
|---|---|
| ವೇಣುನಾ ವಿಮಿಮೀತೇ | ಬಿದಿರಿನ ಕೋಲಿನಿಂದ ಅಳತೆಯನ್ನು ಮಾಡಬೇಕು. |
| ವೇಣುಃ ಆಗ್ನೇಯಃ ವೈ | *1ಬಿದಿರು ಅಗ್ನಿಗೆ ಸಂಬಂಧಿಸಿದುದಷ್ಟೆ. |
| ಸಯೋನಿತ್ವಾಯ | ತನ್ನ ಸ್ಥಾನದಲ್ಲಿಯೇ ಅಗ್ನಿಯ ಸಂಬಂಧಕ್ಕಾಗಿ ಬಿದಿರಿನಿಂದ ಅಳೆದಂತಾಗುತ್ತದೆ. |

**ಉಳುಮೆಯ ವಿಧಿ; ಪ್ರಯೋಜನ**

| | |
|---|---|
| ವ್ಯಾವೃತ್ತ್ಯೈ ೪೮ ಯಜುಷಾ ಯುನಕ್ತಿ | (ಅಧ್ವರ್ಯುವು ಲೌಕಿಕವಾದ ಎತ್ತುಗಳನ್ನು ನೇಗಿಲಿಗೆ ಕಟ್ಟುವಿಕೆ ಮತ್ತು ಉಳುಮೆಗಳ ಭೇದಕ್ಕಾಗಿ) 'ಸೀರಾ ಯುಂಜಂತಿ' 'ಯುನಕ್ತ ಸೀರಾ' ಎಂಬ ಯಜುರ್ಮಂತ್ರಗಳಿಂದ ಎತ್ತುಗಳನ್ನು ನೇಗಿಲಿಗೆ ಕಟ್ಟಬೇಕು. |
| ಯಜುಷಾ ಕೃಷತಿ | 'ಲಾಂಗಲಂ ಪವೀರಮ್' 'ಶುನಂ ನಃ ಫಾಲಾಃ' ಎಂಬ ಯಜುರ್ಮಂತ್ರಗಳಿಂದ ಉಳುಮೆಯನ್ನು ಮಾಡಬೇಕು. |

---

* ಎರಡೂ ಕಡೆಯಲ್ಲಿ ಚಾಚಿರುವ ತೋಳುಗಳ ಪ್ರಮಾಣಕ್ಕಿಂತಲೂ ಪಕ್ಕಕ್ಕಿರುವ ವಸ್ತುವನ್ನು ಪುರುಷನು ಮುಟ್ಟಲಾರನು.

*1 ದೇವತೆಗಳು ಕಾಣದಂತೆ ಅಡಗಿದ ಅಗ್ನಿಯು ಬಿದಿರನ್ನು ಹೊಕ್ಕನು ಎಂದು ಇನ್ನೊಂದೆಡೆ ಶ್ರುತಿಯು ಇದೆ[ತೈ. ಸಂ. 5.1.1]

ಷಡ್ಗವೇನ ಕೃಷತಿ ಷಡ್ವಾ ಋತವ ಋತುಭಿರೇವೈನಂ ಕೃಷತಿ ಯದ್ದ್ವಾದಶಗವೇನ ಸಂವತ್ಸರೇಣೈವೇಯಂ ವಾ ಅಗ್ನೇರತಿದಾಹಾದಬಿಭೇತ್ಸೈತದ್ದ್ವಿಗುಣಮಪಶ್ಯತ್ಕೃಷ್ಟಂ ಚಾಕೃಷ್ಟಂ ಚ

ಷಡ್ಗವೇನೇತಿ ಷಟ್-ಗವೇನ । ಕೃಷತಿ । ಷಟ್ । ವೈ । ಋತವಃ । ಋತುಭಿರಿತ್ಯೃತು-ಭಿಃ । ಏವ । ಏನಮ್ । ಕೃಷತಿ । ಯತ್ । ದ್ವಾದಶಗವೇನೇತಿ ದ್ವಾದಶ-ಗವೇನ । ಸಂವತ್ಸರೇಣೇತಿ ಸಮ್-ವತ್ಸರೇಣ । ಏವ । ಇಯಮ್ । ವೈ । ಅಗ್ನೇಃ । ಅತಿದಾಹಾದಿತ್ಯತಿ-ದಾಹಾತ್ । ಅಬಿಭೇತ್ । ಸಾ । ಏತತ್ । ದ್ವಿಗುಣಮಿತಿ ದ್ವಿ-ಗುಣಮ್ । ಅಪಶ್ಯತ್ । ಕೃಷ್ಟಮ್ । ಚ । ಅಕೃಷ್ಟಮ್ । ಚ ।

| ಬ್ರಾಹ್ಮಣಭಾಗ | ವಿವರಣೆ |
|---|---|
| | **ಎತ್ತುಗಳ ಸಂಖ್ಯೆ** |
| **ಷಡ್ಗವೇನ ಕೃಷತಿ** | ಆರು ಎತ್ತುಗಳನ್ನು ಹೊಂದಿರುವ ನೇಗಿಲಿನಿಂದ ಉಳಬೇಕು. |
| **ಷಟ್ ವೈ ಋತವಃ** | ಋತುಗಳು ಆರಷ್ಟೆ. |
| **ಋತುಭಿಃ ಏವ ಏನಮ್ ಕೃಷತಿ** | ಇದರಿಂದ ಋತುಗಳಿಂದಲೇ ಕರ್ಷಣವನ್ನು ಮಾಡಿದಂತಾಗುತ್ತದೆ. |
| | **ಇನ್ನೊಂದು ಪಕ್ಷ** |
| **ದ್ವಾದಶಗವೇನ ಯತ್** ಕೃಷತಿ | ಹನ್ನೆರಡು ಎತ್ತುಗಳನ್ನು ಕಟ್ಟಿ ಉಳುವುದೆಂಬುದು ಯಾವುದೋ ಅದು |
| **ಸಂವತ್ಸರೇಣ ಏವ** ಏನಮ್ ಕೃಷತಿ | (ಹನ್ನೆರಡು ತಿಂಗಳುಗಳೇ ಸಂವತ್ಸರವಾಗುವುದರಿಂದ) ಸಂವತ್ಸರದಿಂದಲೇ ಕರ್ಷಣ ಮಾಡಿದಂತಾಗುತ್ತದೆ. |
| | **ಕರ್ಷಣದ ಪ್ರಮಾಣ** |
| **ಇಯಮ್ ಅಗ್ನೇಃ ಅತಿದಾಹಾತ್ ಅಬಿಭೇತ್ ವೈ** | (ಚಯನಭೂಮಿಯಲ್ಲಿ ಎಲ್ಲವೂ ಉಳುಮೆ ಮಾಡಲ್ಪಟ್ಟರೆ ಚಯನಾಗ್ನಿಯು ಹೆಚ್ಚು ಸುಟ್ಟೀತೆಂದು)ಭೂಮಿಯು ಅಗ್ನಿಯ ಹೆಚ್ಚಾದ ಸುಡುವಿಕೆಯಿಂದ ಅಂಜಿದಳು. |
| **ಸಾ ಕೃಷ್ಟಮ್ ಚ ಅಕೃಷ್ಟಮ್ ಚ ಏತತ್ ದ್ವಿಗುಣಮ್ ಅಪಶ್ಯತ್** | ಆ ಭೂಮಿಯು ಉತ್ತಿರುವ ಮತ್ತು ಉಳದಿರುವುದೆಂಬ ಈ ಇಬ್ಬಗೆಯ ಭೂಮಿಯನ್ನು (ಸುಡದಿರುವ ಉಪಾಯವನ್ನಾಗಿ) ಕಂಡುಕೊಂಡಳು. |

ತತೋ ವಾ ಇಮಾಂ ನಾತ್ಯದಹದ್ಯತ್ಕೃಷ್ಟಂ ಚಾಕೃಷ್ಟಂ ಚ [ಚ(೨೬)] ಭವತ್ಯಸ್ಯಾ ಅನತಿದಾಹಾಯ ದ್ವಿಗುಣಂ ತ್ವಾ ಅಗ್ನಿಮುದ್ಯಂತುಮರ್ಹತೀತ್ಯಾಹುರ್ಯತ್ಕೃಷ್ಟಂ ಚಾಕೃಷ್ಟಂ ಚ ಭವತ್ಯಗ್ನೇರುದ್ಯತ್ಯಾ

---

ತತಃ । ವೈ । ಇಮಾಮ್ । ನ । ಅತೀತಿ । ಅದಹತ್ । ಯತ್ । ಕೃಷ್ಟಮ್ । ಚ । ಅಕೃಷ್ಟಮ್ । ಚ । (೨೬) । ಭವತಿ । ಅಸ್ಯಾಃ । ಅನತಿದಾಹಾಯೇತ್ಯನತಿ-ದಾಹಾಯ । ದ್ವಿಗುಣಮಿತಿ ದ್ವಿ-ಗುಣಮ್ । ತು । ವೈ । ಅಗ್ನಿಮ್ । ಉದ್ಯಂತುಮಿತ್ಯುತ್-ಯಂತುಮ್ । ಅರ್ಹತಿ । ಇತಿ । ಆಹುಃ । ಯತ್ । ಕೃಷ್ಟಮ್ । ಚ । ಅಕೃಷ್ಟಮ್ । ಚ । ಭವತಿ । ಅಗ್ನೇಃ । ಉದ್ಯತ್ಯಾ ಇತ್ಯುತ್-ಯತ್ಯೈ ॥

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ತತಃ ಇಮಾಮ್ ನ ಅತ್ಯದಹತ್ ವೈ** | ಬಳಿಕ/ಹೀಗಾಗಿ (ಅಗ್ನಿಯು) ಭೂಮಿಯನ್ನು ಹೆಚ್ಚಾಗಿ ಸುಡಲಿಲ್ಲ. |
| **ಯತ್ ಕೃಷ್ಟಮ್ ಚ ಅಕೃಷ್ಟಮ್ ಚ ಭವತಿ** | ಚಯನಭೂಮಿಯಲ್ಲಿ ಕೊಂಚ ಉಳಬೇಕು. ಕೊಂಚ ಉಳಬಾರದು. |
| **ಅಸ್ಯಾಃ ಅನತಿದಾಹಾಯ** | ಇದರಿಂದ ಭೂಮಿಯನ್ನು ಅತಿಯಾಗಿ ಸುಡದಿರುವಂತೆ ಆಗುತ್ತದೆ. |

ಇಬ್ಬಗೆಯ ಭೂಮಿಯ ಪ್ರಶಂಸೆ

| | |
|---|---|
| **ಅಗ್ನಿಮ್ ಉದ್ಯಂತುಮ್ ತು ದ್ವಿಗುಣಮ್ ವೈ ಅರ್ಹತಿ ಇತಿ ಆಹುಃ** | ಬಲ್ಲವರು (ಗಾರ್ಹಪತ್ಯಪ್ರದೇಶದಿಂದ ಉತ್ತರವೇದಿಪ್ರದೇಶಕ್ಕೆ) ಅಗ್ನಿಯನ್ನು ಒಯ್ಯಲು ಇಬ್ಬಗೆಯ ಪಾತ್ರೆಯು ಅರ್ಹವಾಗುತ್ತದೆಯೆಂದು ಹೇಳುತ್ತಾರೆ. |
| **ಯತ್ ಕೃಷ್ಟಮ್ ಚ ಅಕೃಷ್ಟಮ್ ಚ ಭವತಿ** | ಕೊಂಚ ಉಳುಮೆ ಮಾಡಿದ ಮತ್ತು ಉಳುಮೆ ಮಾಡಿರದ ಭೂಮಿಯು ಇರಬೇಕೆಂಬುದು |
| **ಅಗ್ನೇಃ ಉದ್ಯತ್ಯೈ** | ಅಗ್ನಿಯನ್ನು ಮೇಲಕ್ಕೆ ಎರಡು ಭಾಗದಿಂದ ಎತ್ತುವದಕ್ಕಾಗಿರುತ್ತದೆ. |

---

ಎತ್ತಿದ ತೋಳಿಗಿಂತಲೂ ಮೇಲಿರುವ ವಸ್ತುವನ್ನು ಪುರುಷನು ಮುಟ್ಟಲಾರನು. ಅಷ್ಟೇ ಅವನ ಸಾಮರ್ಥ್ಯ. ಅದಕ್ಕೆ ಅನುಗುಣವಾಗಿಯೇ ಯಜ್ಞಚಯನಭೂಮಿಯ ಪ್ರಮಾಣವಿರುತ್ತದೆ.

ಏತಾವಂತೋ ವೈ ಪಶವೋ ದ್ವಿಪಾದಶ್ಚ ಚತುಷ್ಪಾದಶ್ಚ ತಾನ್, ಯತ್ಪ್ರಾಚ ಉತ್ಸೃಜೇದ್ರುದ್ರಾಯಾಪಿ ದಧ್ಯಾದ್ಯದ್ದಕ್ಷಿಣಾ ಪಿತೃಭ್ಯೋ ನಿಧುವೇದ್ಯತ್ಪ್ರತೀಚೋ ರಕ್ಷಾಗ್ಂಸಿ ಹನ್ಯುರುದೀಚ ಉತ್ಸೃಜ-

---

ಏತಾವಂತಃ । ವೈ । ಪಶವಃ । ದ್ವಿಪಾದ ಇತಿ ದ್ವಿ-ಪಾದಃ । ಚ । ಚತುಷ್ಪಾದ ಇತಿ ಚತುಃ-ಪಾದಃ । ಚ । ತಾನ್ । ಯತ್ । ಪ್ರಾಚಃ । ಉತ್ಸೃಜೇದಿತ್ಯುತ್-ಸೃಜೇತ್ । ರುದ್ರಾಯ । ಅಪೀತಿ । ದಧ್ಯಾತ್ । ಯತ್ । ದಕ್ಷಿಣಾ । ಪಿತೃಭ್ಯ ಇತಿ ಪಿತೃ-ಭ್ಯಃ । ನೀತಿ । ಧುವೇತ್ । ಯತ್ । ಪ್ರತೀಚಃ । ರಕ್ಷಾಗ್ಂಸಿ । ಹನ್ಯುಃ । ಉದೀಚಃ । ಉದಿತಿ । ಸೃಜತಿ ।

---

ಬ್ರಾಹ್ಮಣಭಾಗ — ವಿವರಣೆ

### ನೊಗಕ್ಕೆ ಕಟ್ಟಿರುವ ಬಲೀವರ್ದಗಳ (ಎತ್ತುಗಳ) ಉತ್ಸರ್ಜನವಿಧಿ

| | |
|---|---|
| **ದ್ವಿಪಾದಃ ಚ ಚತುಷ್ಪಾದಃ ಚ ಏತಾವಂತಃ ಪಶವಃ ವೈ** | ಎರಡು ಪಾದಗಳುಳ್ಳ ಮಾನವರು, ನಾಲ್ಕು ಕಾಲುಗಳುಳ್ಳ ಗವಾದಿಗಳು-ಹೀಗೆ ಇಷ್ಟೇ ಪಶುಗಳು. |
| **ತಾನ್ ಯತ್ ಪ್ರಾಚಃ ಉತ್ಸೃಜೇತ್** | ಆ ಎತ್ತುಗಳನ್ನು ಪೂರ್ವದ ಕಡೆಗೆ ಬಿಟ್ಟರೆ |
| **ರುದ್ರಾಯ ಅಪಿದಧ್ಯಾತ್** | ರುದ್ರನಿಗಾಗಿ ಯಜಮಾನನು ಅರ್ಪಿಸಿದವನಾಗುತ್ತಾನೆ. /ಮುಚ್ಚಿಟ್ಟವನಾಗುತ್ತಾನೆ. |
| **ಯತ್ ದಕ್ಷಿಣಾ** ಉತ್ಸೃಜೇತ್ | ದಕ್ಷಿಣದಿಕ್ಕಿಗೆ ಅವುಗಳನ್ನು ಬಿಟ್ಟರೆ, |
| **ಪಿತೃಭ್ಯಃ** ನಿಧುವೇತ್ | ಪಿತೃಗಳಿಗೆ ಅರ್ಪಿಸಿದವನಾಗುತ್ತಾನೆ. |
| **ಯತ್ ಪ್ರತೀಚಃ** ಉತ್ಸೃಜೇತ್ | ಪಶ್ಚಿಮದಿಕ್ಕಿಗೆ ಅವುಗಳನ್ನು ಬಿಟ್ಟರೆ |
| **ರಕ್ಷಾಗ್ಂಸಿ** ಯಜ್ಞಗ್ಂ **ಹನ್ಯುಃ** | ರಾಕ್ಷಸರು ಯಜಮಾನನ ಯಜ್ಞವನ್ನು ನಾಶಪಡಿಸಿಯಾರು. |
| **ಉದೀಚಃ ಉತ್ ಸೃಜತಿ** | (ಹೀಗಾಗಿ) ಉತ್ತರದಿಕ್ಕಿಗೆ ಬಿಟ್ಟುಬಿಡಬೇಕು. |

---

ಲೋಕದಲ್ಲಿ ಗಾಯವಾಗಿರುವ ಅವಯವಕ್ಕೆ ಅಗ್ನಿಯು ಸುಡುವಷ್ಟು ಗಾಯವಿಲ್ಲದೆಡೆ ಸುಡುವುದಿಲ್ಲ. ಅಂತೆಯೇ ಕರ್ಷಣ ಮಾಡಿರುವ ಭೂಮಿಯನ್ನು ಚಯನಾಗ್ನಿಯು ಹೆಚ್ಚು ಸುಡುವುದೆಂದು ಕೊಂಚ ಕರ್ಷಣ, ಕೊಂಚ ಕರ್ಷಣರಹಿತವಾದರೆ ಹಾಗಾಗದೆಂದು ವಿಚಾರಿಸಿ, ಇಬ್ಬಗೆಯ ತನ್ನ ಭೂಮಿಯನ್ನೂ ಅಗ್ನಿಯು ಹೆಚ್ಚು ಸುಡದಂತೆ ಉಪಾಯವನ್ನು ಕಂಡಳು.

ತ್ಯೇಷಾ ವೈ ದೇವಮನುಷ್ಯಾಣಾಗ್ಂ ಶಾಂತಾ ದಿಕ್ತಾ [ದಿಕ್(೨೭)ತಾಮೇವೈ..] ಮೇವೈನಾನನೂತ್ಸೃಜತ್ಯಥೋ ಖಲ್ವಿಮಾಂ ದಿಶಮುತ್ಸೃಜತ್ಯಸೌ ವಾ ಆದಿತ್ಯಃ ಪ್ರಾಣಃ ಪ್ರಾಣಮೇವೈನಾನನೂತ್ಸೃಜತಿ ದಕ್ಷಿಣಾ ಪರ್ಯಾವರ್ತಂತೇ

---

ಏಷಾ । ವೈ । ದೇವಮನುಷ್ಯಾಣಾಮಿತಿ ದೇವ–ಮನುಷ್ಯಾಣಾಮ್ । ಶಾಂತಾ । ದಿಕ್ । (೨೭) । ತಾಮ್ । ಏವ । ಏನಾನ್ । ಅನು । ಉದಿತಿ । ಸೃಜತಿ । ಅಥೋ ಇತಿ । ಖಲು । ಇಮಾಮ್ । ದಿಶಮ್ । ಉದಿತಿ । ಸೃಜತಿ । ಅಸೌ । ವೈ । ಆದಿತ್ಯಃ । ಪ್ರಾಣ ಇತಿ ಪ್ರ–ಅನಃ । ಪ್ರಾಣಮಿತಿ ಪ್ರ–ಅನಮ್ । ಏವ । ಏನಾನ್ । ಅನು । ಉದಿತಿ । ಸೃಜತಿ । ದಕ್ಷಿಣಾ । ಪರ್ಯಾವರ್ತಂತ ಇತಿ ಪರಿ–ಆವರ್ತಂತೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಏಷಾ ವೈ ದೇವಮನುಷ್ಯಾಣಾಮ್ ಶಾಂತಾ ದಿಕ್** | ಈ ಉತ್ತರದಿಕ್ಕು ದೇವತೆಗಳಿಗೂ, ಮನುಷ್ಯರಿಗೂ ಶಾಂತವಾದ ದಿಕ್ಕಾಗಿದೆ. |
| **ತಾಮ್ ಏವ ಏನಾನ್ ಅನೂತ್ಸೃಜತಿ** | ಆದುದರಿಂದ ಶಾಂತವಾದ ಈ ಉತ್ತರದಿಕ್ಕಿಗೆ ಎತ್ತುಗಳನ್ನು ಬಿಟ್ಟು ಬಿಡಬೇಕು. |
| **ಅಥೋ ಖಲು ಇಮಾಮ್ ದಿಶಮ್ ಉತ್ಸೃಜತಿ** | ಅಲ್ಲದೆ ಇಂತಹ ಉತ್ತರದಿಕ್ಕಿಗೆ ಎತ್ತುಗಳನ್ನು ಬಿಟ್ಟಂತಾಗುವುದು. |
| **ಅಸೌ ವೈ ಆದಿತ್ಯಃ ಪ್ರಾಣಃ** | ಈ ಆದಿತ್ಯನು ಪ್ರಾಣರೂಪನಾದುದರಿಂದ |
| **ಪ್ರಾಣಮ್ ಏವ ಏನಾನ್ ಅನೂತ್ಸೃಜತಿ** | ಪ್ರಾಣರೂಪ ಆದಿತ್ಯನನ್ನೇ ಉದ್ದೇಶಿಸಿ ಬಿಟ್ಟು ಬಿಟ್ಟಂತೆ ಆಗುತ್ತದೆ. |

**ಆವೃತ್ತಿವಿಧಿ; ಪ್ರಶಂಸೆ**

| | |
|---|---|
| **ದಕ್ಷಿಣಾ ಪರ್ಯಾವರ್ತಂತೇ** | ನೇಗಿಲಿನಿಂದ ಬಿಚ್ಚಿದ ಎತ್ತುಗಳನ್ನು ಪ್ರದಕ್ಷಿಣಾಕಾರವಾಗಿ ಸುತ್ತಿಸಬೇಕು. |

---

ಅಗ್ನಿಯನ್ನು ಒಯ್ಯುವಾಗ ಮರಳಿನಿಂದ ತುಂಬಿದ ಪಾತ್ರೆಯ ಮೇಲೆ ಅಗ್ನಿಯಿರುವ ಪಾತ್ರೆಯು ಇರುತ್ತದೆ. ಇದು ಪಾತ್ರೆಯ ದ್ವೈಗುಣ್ಯ/ಇಬ್ಬಗೆ.

ಆದಿತ್ಯನು ಪ್ರಾಣಗಳಿಗೆ ಸ್ವಾಮಿಯಾದುದರಿಂದ ಪ್ರಾಣರೂಪನು. ತೈತ್ತಿರೀಯಆರಣ್ಯಕದಲ್ಲಿ **'ಯೋಽಸೌ ತಪನ್ನುದೇತಿ । ಸ ಸರ್ವೇಷಾಂ ಭೂತಾನಾಂ ಪ್ರಾಣಾನಾದಾಯೋದೇತಿ'** ಎಂದು ಸೂರ್ಯನು ಉದಯಿಸುವಾಗ

ಸ್ವಮೇವ ವೀರ್ಯಮನು ಪರ್ಯಾವರ್ತಂತೇ ತಸ್ಮಾದ್ದಕ್ಷಿಣೋರ್ಧ ಆತ್ಮನೋ ವೀರ್ಯಾವತ್ತರೋಽಥೋ ಆದಿತ್ಯಸ್ಯೈವಾವೃತಮನು ಪರ್ಯಾವರ್ತಂತೇ ತಸ್ಮಾತ್ಪರಾಂಚಃ ಪಶವೋ ವಿತಿಷ್ಠಂತೇ ಪ್ರತ್ಯಂಚ ಆವರ್ತಂತೇ ತಿಸ್ರಸ್ತಿಸ್ರಸ್ಸೀತಾಃ

[(೨೮)ಕೃಷತಿ] ಕೃಷತಿ

---

ಸ್ವಮ್ ।ಏವ । ವೀರ್ಯಮ್ । ಅನ್ವಿತಿ । ಪರ್ಯಾವರ್ತಂತ ಇತಿ ಪರಿ–ಆವರ್ತಂತೇ । ತಸ್ಮಾತ್ । ದಕ್ಷಿಣಃ । ಅರ್ಧಃ । ಆತ್ಮನಃ । ವೀರ್ಯಾವತ್ತರ ಇತಿ ವೀರ್ಯಾವತ್–ತರಃ । ಅಥೋ ಇತಿ । ಆದಿತ್ಯಸ್ಯ । ಏವ । ಆವೃತಮಿತ್ಯಾ–ವೃತಮ್ । ಅನ್ವಿತಿ । ಪರ್ಯಾವರ್ತಂತ ಇತಿ ಪರಿ–ಆವರ್ತಂತೇ । ತಸ್ಮಾತ್ । ಪರಾಂಚಃ । ಪಶವಃ । ವೀತಿ । ತಿಷ್ಠಂತೇ । ಪ್ರತ್ಯಂಚಃ । ಏತಿ । ವರ್ತಂತೇ । ತಿಸ್ರಸ್ತಿಸ್ರ ಇತಿ ತಿಸ್ರಃ–ತಿಸ್ರಃ । ಸೀತಾಃ । (೨೮) । ಕೃಷತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಸ್ವಮ್ ವೀರ್ಯಮ್ ಏವ ಅನು ಪರ್ಯಾವರ್ತಂತೇ** | (ಪ್ರದಕ್ಷಿಣೆಯಾಗಿ ಸುತ್ತುವುದೆಂದರೆ)ತಮ್ಮ ಸಾಮರ್ಥ್ಯಕ್ಕೆ ಅನುಗುಣವಾಗಿಯೇ ಸುತ್ತಿದಂತಾಗುತ್ತದೆ. |
| **ತಸ್ಮಾತ್ ಆತ್ಮನಃ ದಕ್ಷಿಣಃ ಅರ್ಧಃ ವೀರ್ಯಾವತ್ತರಃ** | ಹೀಗಾಗಿ ಪುರುಷನ ದಕ್ಷಿಣಭಾಗವು ಹೆಚ್ಚು ಬಲಯುತವಾಗಿರುತ್ತದೆ.* |
| **ಅಥೋ ಆದಿತ್ಯಸ್ಯ ಆವೃತಮ್ ಏವ ಅನು ಪರ್ಯಾವರ್ತಂತೇ** | ಪ್ರದಕ್ಷಿಣೆಯಾಗಿ ಸುತ್ತುವುದರಿಂದ ಸೂರ್ಯನು ತನ್ನ ಸ್ಥಾನದಲ್ಲಿಯೇ ಸುತ್ತುವುದನ್ನು ಅವು(ಎತ್ತುಗಳು) ಅನುಸರಿಸಿದಂತಾಗುತ್ತದೆ. |
| **ತಸ್ಮಾತ್ ಪರಾಂಚಃ ಪಶವಃ ವಿತಿಷ್ಠಂತೇ ಪ್ರತ್ಯಂಚಃ ಆ ವರ್ತಂತೇ** | (ಪ್ರದಕ್ಷಿಣೆಯಲ್ಲಿ ಆವೃತ್ತಿ ಇರುವುದರಿಂದ) ಮುಮ್ಮುಖವಾಗಿ ಮೇಯಲು ಹೋದ ಪಶುಗಳು ಮತ್ತೆ ಆವೃತ್ತಿರೂಪದಿಂದ ಹಿಮ್ಮುಖವಾಗಿ ಹಿಂದಿರುಗುತ್ತವೆ. |

**ಕರ್ಷಣದ ವಿಶೇಷ**

| | |
|---|---|
| **ತಿಸ್ರಸ್ತಿಸ್ರಃ ಸೀತಾಃ ಕೃಷತಿ** | ಮೂರು ಮೂರು ಸಾಲುಗಳು ಇರುವಂತೆ ಉಳಬೇಕು. |

---

* ಪ್ರದಕ್ಷಿಣಾಕಾರ್ಯದ ಸಮರ್ಥನೆ.

ತ್ರಿವೃತಮೇವ ಯಜ್ಞಮುಖೇ ವಿ ಯಾತಯತ್ಯೋಷಧೀರ್ವಪತಿ

ಬ್ರಹ್ಮಣಾಽನ್ನಮವರುಂಧೇಽರ್ಕೇಽರ್ಕಶ್ಚೀಯತೇ ಚತುರ್ದಶಭಿರ್ವಪತಿ ಸಪ್ತ

ಗ್ರಾಮ್ಯಾ ಓಷಧಯಸ್ಸಪ್ತಾರಣ್ಯಾ

---

ತ್ರಿವೃತಮಿತಿ ತ್ರಿ–ವೃತಮ್ । ಏವ । ಯಜ್ಞಮುಖ ಇತಿ ಯಜ್ಞ–ಮುಖೇ । ವೀತಿ । ಯಾತಯತಿ । ಓಷಧೀಃ । ವಪತಿ । ಬ್ರಹ್ಮಣಾ । ಅನ್ನಮ್ । ಅವೇತಿ । ರುಂಧೇ । ಅರ್ಕೇ । ಅರ್ಕಃ । ಚೀಯತೇ । ಚತುರ್ದಶಭಿರಿತಿ ಚತುರ್ದಶ–ಭಿಃ । ವಪತಿ । ಸಪ್ತ । ಗ್ರಾಮ್ಯಾಃ । ಓಷಧಯಃ । ಸಪ್ತ । ಆರಣ್ಯಾಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯಜ್ಞಮುಖೇ ತ್ರಿವೃತಮ್ ಏವ ವಿಯಾತಯತಿ** | ಈ ರೀತಿ ಉಳುವಿಕೆಯಿಂದ ಯಜ್ಞಪ್ರಾರಂಭದಲ್ಲಿಯೇ ತ್ರಿವೃತ್ ಸ್ತೋಮವಿರುವಂತಾಗುತ್ತದೆ. |
| ಓಷಧಿವಾಪವಿಧಿ; ಪ್ರಶಂಸೆ | |
| **ಓಷಧೀಃ ವಪತಿ** | (ಉತ್ತ ಸಾಲುಗಳಲ್ಲಿ 'ಯಾ ಜಾತಾಃ' ಎಂದು ಆರಂಭವಾಗುವ ಹದಿನಾಲ್ಕು ಮಂತ್ರಗಳಿಂದ) ಓಷಧಿಧಾನ್ಯಗಳನ್ನು ಬಿತ್ತಬೇಕು. |
| **ಬ್ರಹ್ಮಣಾ ಅನ್ನಮ್ ಅವರುಂಧೇ** | ಮಂತ್ರಸಾಮರ್ಥ್ಯದಿಂದ ಯಜಮಾನನು ಅನ್ನವನ್ನು ಹೊಂದಿದವನಾಗುತ್ತಾನೆ. |
| **ಅರ್ಕೇ ಅರ್ಕಃ ಚೀಯತೇ** | ಮತ್ತು ಮಾನ್ಯ ಮಾಡಬೇಕಾದ ಸ್ಥಾನದಲ್ಲಿ ಅರ್ಚಿಸಬೇಕಾದ ಅಗ್ನಿಯನ್ನು ಗೌರವಿಸಿದಂತಾಗುತ್ತದೆ. |
| ಮಂತ್ರಸಂಖ್ಯಾವಿಧಿ; ಫಲ | |
| **ಚತುರ್ದಶಭಿಃ ವಪತಿ** | ಹದಿನಾಲ್ಕು ಮಂತ್ರಗಳಿಂದ ಓಷಧಿವಾಪವನ್ನು ಮಾಡುತ್ತಾನೆ. |
| **ಸಪ್ತ ಗ್ರಾಮ್ಯಾಃ ಓಷಧಯಃ** | ಗ್ರಾಮ್ಯ ಓಷಧಿಗಳು/ಧಾನ್ಯಗಳು ಏಳು.* |
| **ಆರಣ್ಯಾಃ** ಓಷಧಯಃ **ಸಪ್ತ** | 1*ಆರಣ್ಯಧಾನ್ಯಗಳು ಏಳು. |

---

* ತಿಲ, ಮಾಷ, ವ್ರೀಹಿ, ಯವ, ಪ್ರಿಯಂಗು, ಅಣು, ಗೋಧೂಮ=ಎಳ್ಳು, ಉದ್ದು, ಭತ್ತ, ಜವೆಗೋಧಿ, ನವಣೆ, ಸಣ್ಣಭತ್ತ, ಮತ್ತು ಗೋಧಿ ಇವು ಗ್ರಾಮ್ಯ ಧಾನ್ಯಗಳು.

1* ವೇಣು, ಶ್ಯಾಮಾಕ, ನೀವಾರ, ಮರ್ಕಟಕ, ಜರ್ತಿಲ, ಗವೀಧುಕ ಮತ್ತು ಗಾರ್ಮುತ ಇವು ಆರಣ್ಯಧಾನ್ಯಗಳು.

ಉಭಯೀಷಾಮವರುದ್ಧ್ಯೈ ಅನ್ನಸ್ಯಾನ್ನಸ್ಯ ವಪತ್ಯನ್ನಸ್ಯಾನ್ನಸ್ಯಾವರುಧ್ಯೈ ಕೃಷ್ಟೇ ವಪತಿ ಕೃಷ್ಟೇ ಹ್ಯೋಷಧಯಃ ಪ್ರತಿತಿಷ್ಠಂತ್ಯನುಸೀತಂ ವಪತಿ ಪ್ರಜಾತ್ಯೈ ದ್ವಾದಶಸು ಸೀತಾಸು ವಪತಿ

---

ಉಭಯೀಷಾಮ್ । ಅವರುದ್ಧ್ಯೈ ಇತ್ಯವ-ರುದ್ಧ್ಯೈ । ಅನ್ನಸ್ಯಾನ್ನಸ್ಯೇತ್ಯನ್ನಸ್ಯ-ಅನ್ನಸ್ಯ । ವಪತಿ । ಅನ್ನಸ್ಯಾನ್ನಸ್ಯೇತ್ಯನ್ನಸ್ಯ-ಅನ್ನಸ್ಯ । ಅವರುಧ್ಯಾ ಇತ್ಯವ-ರುಧ್ಯೈ । ಕೃಷ್ಟೇ । ವಪತಿ । ಕೃಷ್ಟೇ । ಹಿ । ಓಷಧಯಃ । ಪ್ರತಿತಿಷ್ಠಂತೀತಿ ಪ್ರತಿ-ತಿಷ್ಠಂತಿ । ಅನುಸೀತಮಿತ್ಯನು-ಸೀತಮ್ । ವಪತಿ । ಪ್ರಜಾತ್ಯಾ ಇತಿ ಪ್ರ-ಜಾತ್ಯೈ । ದ್ವಾದಶಸ್ವಿತಿ ದ್ವಾದಶ-ಸು । ಸೀತಾಸು । ವಪತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಉಭಯೀಷಾಮ್ ಅವರುದ್ಧ್ಯೈ** | ಈ ಎರಡು ಬಗೆಯ ಓಷಧಿಗಳನ್ನೂ/ಧಾನ್ಯಗಳನ್ನೂ ಪಡೆಯುವುದಕ್ಕಾಗಿ ಈ ಓಷಧಿವಾಪವಾಗುತ್ತದೆ. |
| **ಅನ್ನಸ್ಯ ಅನ್ನಸ್ಯ ವಪತಿ** | ಬಗೆಬಗೆಯ ಅನ್ನಹೇತುವಾದ ಧಾನ್ಯವನ್ನು ಬಿತ್ತಬೇಕು. |
| **ಅನ್ನಸ್ಯ ಅನ್ನಸ್ಯ ಅವರುಧ್ಯೈ** | ಇದು ನಾನಾವಿಧವಾದ ಅನ್ನಪ್ರಾಪ್ತಿಗಾಗಿ ಕಾರಣವಾಗುತ್ತದೆ. |

**ಗ್ರಾಮ್ಯಧಾನ್ಯವಾಪದ ಸ್ಥಾನ; ಅರ್ಥವಾದ**

| | |
|---|---|
| **ಕೃಷ್ಟೇ ವಪತಿ** | ಗ್ರಾಮ್ಯಧಾನ್ಯಗಳನ್ನು ಉತ್ತಿದ ಭೂಮಿಯಲ್ಲಿ ಬಿತ್ತಬೇಕು. |
| **ಕೃಷ್ಟೇ ಓಷಧಯಃ ಪ್ರತಿತಿಷ್ಠಂತಿ ಹಿ** | ಉತ್ತ ಭೂಮಿಯಲ್ಲೇ ಓಷಧಿಗಳು ಸರಿಯಾಗಿ ಬೆಳೆಯುತ್ತವೆ. |
| **ಅನುಸೀತಮ್ ವಪತಿ ಪ್ರಜಾತ್ಯೈ** | ಸಾಲಿಗೆ ಸರಿಯಾಗಿ ಬಿತ್ತಬೇಕು. ಇದರಿಂದ ಚೆನ್ನಾಗಿ ಓಷಧಿಗಳು ಬೆಳೆಯುತ್ತವೆ. |
| **ದ್ವಾದಶಸು ಸೀತಾಸು ವಪತಿ** | *ಹನ್ನೆರಡು ಉತ್ತಿದ ಸಾಲುಗಳಲ್ಲಿಯೂ ಬಿತ್ತಬೇಕು. |

---

ಹಿಂದಿನ ದಿನವು ಕಳೆದಿರುವುದರಿಂದ ಆಯುಸ್ಸು ಕ್ಷಯವಾಗಿರುತ್ತದೆ. ಹೀಗಾಗಿ ಸೂರ್ಯನು ಆಯುಃಕ್ಷಯದ ಮೂಲಕ ಪ್ರಾಣವನ್ನು ಒಯ್ಯುವನು. ಹಾಗಾಗದೆ 'ಜೀವಿತಕಾಲವನ್ನು ಕಡಿಮೆ ಮಾಡಿ ಪ್ರಾಣವನ್ನು ಒಯ್ಯದಿರು,'

---

* **'ಯಾ ಜಾತಾಃ'** ಎಂದು ಆರಂಭಿಸಿ ಮೂರು ಮಂತ್ರಗಳಿಂದ ಮೂರು ಸಾಲುಗಳಲ್ಲಿಯೂ; **'ಓಷಧೀಃ'** ಎಂದು ಆರಂಭಿಸಿ ಮೂರು ಮಂತ್ರಗಳಿಂದ ಮೂರು ಸಾಲುಗಳಲ್ಲಿಯೂ, 'ಯದೋಷಧಯಃ' ಎಂದು ಆರಂಭಿಸಿ ಮೂರು ಮಂತ್ರಗಳಿಂದ ಮೂರು ಸಾಲುಗಳಲ್ಲಿಯೂ, **'ಉಚ್ಛುಷ್ಮಾ'** ಎಂದು ಆರಂಭಿಸಿ ಐದು ಮಂತ್ರಗಳಿಂದ ಮೂರು ಸಾಲುಗಳಲ್ಲಿಯೂ ಬಿತ್ತಬೇಕು.

ದ್ವಾದಶ ಮಾಸಾಸ್ಸಂವತ್ಸರಸ್ಸಂವತ್ಸರೇಣೈವಾಸ್ಮಾ ಅನ್ನಂ ಪಚತಿ ಯದಗ್ನಿಚಿ[ದಗ್ನಿಚಿತ್(೨೯)ಅನವರು..]ದನವರುದ್ಧಸ್ಯಾಶ್ನೀಯಾದವರುದ್ಧೇನ ವ್ಯೃಧ್ಯೇತ ಯೇ ವನಸ್ಪತೀನಾಂ ಫಲಗ್ರಹಯಸ್ತಾನಿಧ್ಮೇಽಪಿ ಪ್ರೋಕ್ಷೇದನವರುದ್ಧಸ್ಯಾವರುದ್ಧ್ಯೈ॥೮॥

---

ದ್ವಾದಶ । ಮಾಸಾಃ । ಸಂವತ್ಸರ ಇತಿ ಸಮ್-ವತ್ಸರಃ । ಸಂವತ್ಸರೇಣೇತಿ ಸಮ್-ವತ್ಸರೇಣ । ಏವ । ಅಸ್ಮೈ । ಅನ್ನಮ್ । ಪಚತಿ । ಯತ್ । ಅಗ್ನಿಚಿದಿತ್ಯಗ್ನಿ-ಚಿತ್ । (೨೯) । ಅನವರುದ್ಧಸ್ಯೇತ್ಯನವ-ರುದ್ಧಸ್ಯ । ಅಶ್ನೀಯಾತ್ । ಅವರುದ್ಧೇನೇತ್ಯವ-ರುದ್ಧೇನ । ವೀತಿ । ಋಧ್ಯೇತ । ಯೇ । ವನಸ್ಪತೀನಾಮ್ । ಫಲಗ್ರಹಯ ಇತಿ ಫಲ-ಗ್ರಹಯಃ । ತಾನ್ । ಇಧ್ಮೇ । ಅಪಿ । ಪ್ರೇತಿ । ಉಕ್ಷೇತ್ । ಅನವರುದ್ಧಸ್ಯೇತ್ಯನವ-ರುದ್ಧಸ್ಯ । ಅವರುಧ್ಯಾ ಇತ್ಯವ-ರುದ್ಧ್ಯೈ॥೮॥

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ದ್ವಾದಶ ಮಾಸಾಃ ಸಂವತ್ಸರಃ** | ಹನ್ನೆರಡು ತಿಂಗಳು ಒಂದು ಸಂವತ್ಸರವಾಗುತ್ತದೆ. |
| **ಅಸ್ಮೈ ಸಂವತ್ಸರೇಣ ಏವ ಅನ್ನಮ್ ಪಚತಿ** | (ಈ ರೀತಿ ಅನುಷ್ಠಿಸುವ) ಯಜಮಾನನಿಗೆ ವರ್ಷಕ್ಕೆ ಧಾನ್ಯವು ಪಕ್ವವಾಗುತ್ತದೆ. |

**ವನಸ್ಪತಿಪ್ರೋಕ್ಷಣವಿಧಿ; ಪ್ರಶಂಸೆ**

| | |
|---|---|
| **ಅಗ್ನಿಚಿತ್ ಯತ್ ಅನವರುದ್ಧಸ್ಯ ಅಶ್ನೀಯಾತ್** | ಅಗ್ನಿಚಯನವನ್ನು ಮಾಡುವ ಯಜಮಾನನು ಇಲ್ಲಿ ಬಿತ್ತದಿರುವ ಬೆಳೆಯ ಅನ್ನವನ್ನು ತಿಂದರೆ |
| **ಅವರುದ್ಧೇನ ವ್ಯೃಧ್ಯೇತ** | ಇಲ್ಲಿ ಬಿತ್ತಿದ ಧಾನ್ಯಗಳಿಂದಲೂ ವಂಚಿತನಾಗುವನು. |
| **ಯೇ ವನಸ್ಪತೀನಾಮ್ ಫಲಗ್ರಹಯಃ ತಾನ್ ಇಧ್ಮೇ ಅಪಿ ಪ್ರೋಕ್ಷೇತ್** | (ಇಲ್ಲಿ ಬಿತ್ತದಿರುವ ಧಾನ್ಯಗಳೂ ಬಿತ್ತಿದಂತಾಗ ಬೇಕಾಗುವುದಕ್ಕಾಗಿ)ವನಸ್ಪತಿಗಳ ಪೈಕಿ ಹೂ ಬಿಡದೇ ಹಣ್ಣನ್ನು ನೀಡುವ ಅತ್ತಿ ಮುಂತಾದ ಮರಗಳನ್ನು ತಂದು ಇಧ್ಮದೊಡನೆ ಕಟ್ಟಿ ಪ್ರೋಕ್ಷಿಸಬೇಕು. |
| **ಅನವರುದ್ಧಸ್ಯ ಅವರುದ್ಧ್ಯೈ॥೮॥** | ಇದು ಎಲ್ಲ ಬಗೆಯ ಧಾನ್ಯಗಳನ್ನು ಹೊಂದುವುದಕ್ಕಾಗಿ ಆಗುತ್ತದೆ. |

---

ಎಂಬ ಪ್ರಾರ್ಥನೆಯು ಇಲ್ಲಿದೆ. ಈ ಮಂತ್ರದಲ್ಲಿ ಸೂರ್ಯನು ಪ್ರಾಣಸ್ವಾಮಿಯೆಂದು ತಿಳಿಯುತ್ತದೆ.

ಪ್ರದಕ್ಷಿಣಾಕ್ರಿಯೆಯನ್ನೂ ಅದರ ಪ್ರಶಂಸೆಯನ್ನೂ ಶ್ರುತಿಯು ತಿಳಿಸುತ್ತಾ ಇದೆ.

ದಿಗ್ಭ್ಯೋ ಲೋಷ್ಟಾನ್ಥ್ಸಮಸ್ಯತಿ ದಿಶಾಮೇವ ವೀರ್ಯಮವರುಧ್ಯ ದಿಶಾಂ ವೀರ್ಯೇಽಗ್ನಿಂ ಚಿನುತೇ ಯಂ ದ್ವಿಷ್ಯಾದ್ಯತ್ರ ಸ ಸ್ಯಾತ್ತಸ್ಯೈ ದಿಶೋ ಲೋಷ್ಟಮಾ ಹರೇದಿಷಮೂರ್ಜಮಹಮಿತ ಆ ದದ ಇತೀ–

---

ದಿಗ್ಭ್ಯ ಇತಿ ದಿಕ್–ಭ್ಯಃ । ಲೋಷ್ಟಾನ್ । ಸಮಿತಿ । ಅಸ್ಯತಿ । ದಿಶಾಮ್ । ಏವ । ವೀರ್ಯಮ್ । ಅವರುಧ್ಯೇತ್ಯವ–ರುಧ್ಯ । ದಿಶಾಮ್ । ವೀರ್ಯೇ । ಅಗ್ನಿಮ್ । ಚಿನುತೇ । ಯಮ್ । ದ್ವಿಷ್ಯಾತ್ । ಯತ್ರ । ಸಃ । ಸ್ಯಾತ್ । ತಸ್ಯೈ । ದಿಶಃ । ಲೋಷ್ಟಮ್ । ಏತಿ । ಹರೇತ್ । ಇಷಮ್ । ಊರ್ಜಮ್ । ಅಹಮ್ । ಇತಃ । ಏತಿ । ದದೇ । ಇತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ಕ್ಷೇತ್ರದಲ್ಲಿ ಲೋಷ್ಟಸ್ಥಾಪನ** |
| **ದಿಗ್ಭ್ಯಃ ಲೋಷ್ಟಾನ್ ಸಮಸ್ಯತಿ** | ('ಮಾ ನೋ ಹಿಗ್‌ಂಸೀಜ್ಜನಿತಾ' ಎಂಬ ಮಂತ್ರದಿಂದ) ಉಳುವಾಗ ಹೊರಗೆ ಬಿದ್ದಿರುವ ಮಣ್ಣಿನ ಹೆಂಟೆಗಳನ್ನು ಉತ್ತ ಭೂಮಿಯಲ್ಲಿ ಕಲೆಸಬೇಕು. |
| **ದಿಶಾಮ್ ಏವ ವೀರ್ಯಮ್ ಅವರುಧ್ಯ** | (ಇದರಿಂದ) ದಿಕ್ಕುಗಳ ಸಾಮರ್ಥ್ಯವನ್ನೇ ಹೊಂದಿ |
| **ದಿಶಾಮ್ ವೀರ್ಯೇ ಅಗ್ನಿಮ್ ಚಿನುತೇ** | ದಿಕ್ಕುಗಳ ಶಕ್ತಿಯಲ್ಲಿಯೇ ಚಯನವನ್ನು ಮಾಡಿದವನಾಗುತ್ತಾನೆ. |
| | **ಕಾಮ್ಯವಿಧಿ** |
| **ಯಮ್ ದ್ವಿಷ್ಯಾತ್ ಯತ್ರ ಸಃ ಸ್ಯಾತ್** | ಯಜಮಾನನು ಯಾವನನ್ನು ದ್ವೇಷಿಸುತ್ತಾನೆಯೋ ಅವನು ಯಾವ ದಿಕ್ಕಿನಲ್ಲಿರುತ್ತಾನೆಯೋ, |
| **ಇಷಮ್ ಊರ್ಜಮ್ ಅಹಮ್ ಇತಃ ಆ ದದೇ ಇತಿ ತಸ್ಯೈ ದಿಶಃ ಲೋಷ್ಟಮ್ ಆ ಹರೇತ್** | ಆ ದಿಕ್ಕಿನಿಂದ 'ಇಷಮೂರ್ಜ...ಆದದೇ' ಎಂಬ ಮಂತ್ರದಿಂದ ಮಣ್ಣಿನ ಹೆಂಟೆಯನ್ನು ತೆಗೆದುಕೊಳ್ಳಬೇಕು. |

---

ಪಕ್ಷಿಯ ಆಕಾರದ ಚಯನಭೂಮಿಯನ್ನು ಹೀಗೆ ಉಳಬೇಕು. ಹಿಂಭಾಗದಿಂದ/ಪುಚ್ಛಭಾಗದಿಂದ ಆರಂಭಿಸಿ ತಲೆಯವರೆಗೂ ಮೂರುಸಾಲುಗಳನ್ನು ಉಳಬೇಕು. ಬಲರೆಕ್ಕೆಯಿಂದ ಆರಂಭಿಸಿ ಎಡರೆಕ್ಕೆಯವರೆಗೆ ಮೂರು ಸಾಲುಗಳನ್ನು ಉಳಬೇಕು. ದಕ್ಷಿಣಶ್ರೋಣಿಯ ಭಾಗದಿಂದ ಆರಂಭಿಸಿ ದಕ್ಷಿಣಾಂಸದವರೆಗೆ ಮೂರು ಸಾಲುಗಳು.

–ಷಮೇವೋರ್ಜಂ ತಸ್ಯೈ ದಿಶೋಽವರುಂಧೇ ಕ್ಷೋಧುಕೋ ಭವತಿ ಯಸ್ತಸ್ಯಾಂ ದಿಶಿ ಭವತ್ಯುತ್ತರವೇದಿಮುಪ ವಪತ್ಯುತ್ತರವೇದ್ಯಾಗ್ಂ ಹ್ಯಗ್ನಿಶ್ಚೀಯತೇಽಥೋ ಪಶವೋ ವಾ ಉತ್ತರವೇದಿಃ ಪಶೂನೇವಾವರುಂಧೇ–

---

ಇಷಮ್ । ಏವ । ಊರ್ಜಮ್ । ತಸ್ಯೈ । ದಿಶಃ । ಅವೇತಿ । ರುಂಧೇ । ಕ್ಷೋಧುಕಃ । ಭವತಿ । ಯಃ । ತಸ್ಯಾಮ್ । ದಿಶಿ । ಭವತಿ । ಉತ್ತರವೇದಿಮಿತ್ಯುತ್ತರ–ವೇದಿಮ್ । ಉಪೇತಿ । ವಪತಿ । ಉತ್ತರವೇದ್ಯಾಮಿತ್ಯುತ್ತರ–ವೇದ್ಯಾಮ್ । ಹಿ । ಅಗ್ನಿಃ । ಚೀಯತೇ । ಅಥೋ ಇತಿ । ಪಶವಃ । ವೈ । ಉತ್ತರವೇದಿರಿತ್ಯುತ್ತರ–ವೇದಿಃ । ಪಶೂನ್ । ಏವ । ಅವೇತಿ । ರುಂಧೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ತಸ್ಯೈ ದಿಶಃ ಇಷಮ್ ಊರ್ಜಮ್ ಅವರುಂಧೇ ಏವ | (ಇದರಿಂದ)ಆ ದಿಕ್ಕಿನಲ್ಲಿರುವ ಶತ್ರುವಿನ ಅನ್ನವನ್ನೂ ಬಲವನ್ನೂ ಯಜಮಾನನು ಹೊಂದುವನು. |
| ಯಃ ತಸ್ಯಾಮ್ ದಿಶಿ ಭವತಿ ಕ್ಷೋಧುಕಃ ಭವತಿ | ಆ ದಿಕ್ಕಿನಲ್ಲಿರುವ ಶತ್ರುವು ಅನ್ನದಿಂದಲೂ ಬಲದಿಂದಲೂ ಹೀನನಾಗುವನು. |

### ಉತ್ತರವೇದಿಯ ನಿರ್ಮಾಣ

| | |
|---|---|
| ಉತ್ತರವೇದಿಮ್ ಉಪವಪತಿ | ಉತ್ತರವೇದಿಯನ್ನು ಮಾಡಬೇಕು. |
| ಉತ್ತರವೇದ್ಯಾಮ್ ಹಿ ಅಗ್ನಿಃ ಚೀಯತೇ | ಉತ್ತರವೇದಿಯಲ್ಲಿಯೇ ಅಗ್ನಿಚಯನವನ್ನು ಮಾಡಬೇಕಷ್ಟೇ. |
| ಅಥೋ ಉತ್ತರವೇದಿಃ ಪಶವಃ ವೈ | ಅಲ್ಲದೆ(ಯೂಪವು ಸಮೀಪವಿರುವುದರಿಂದ) ಉತ್ತರವೇದಿಯು ಪಶುಸ್ವರೂಪವಾದುದು. |
| ಪಶೂನ್ ಅವರುಂಧೇ ಏವ | ಇದರಿಂದ ಯಜಮಾನನು ಪಶುಗಳನ್ನು ಪಡೆಯುವನು. |

---

ಉತ್ತರಶ್ರೋಣಿಯ ಭಾಗದಿಂದ ಆರಂಭಿಸಿ ಉತ್ತರಾಂಸದವರೆಗೆ ಮೂರು ಸಾಲುಗಳು. ಹೀಗೆ ಹನ್ನೆರಡು ಸಾಲುಗಳು. (ಶ್ರೋಣಿ= ಸೊಂಟದ ಭಾಗ; ಅಂಸ=ಭುಜಭಾಗ)

ऽಥೋ ಯಜ್ಞಪರುಷೋऽನಂತರಿತ್ಯೈ ॥ ೩೦-5 ॥

[ಚ ಭವತ್ಯೇತಾವದ್ವೈ ಪುರುಷೇ ವೀರ್ಯಂ ಯತ್ಕೃಷ್ಟಂ ಚಾಕೃಷ್ಟಂ ಚ ದಿಕ್ಸೀತಾ ಅಗ್ನಿಚಿದವ

ಪಂಚವಿಗ್ಂಶತಿಶ್ಚ ॥]

---

ಅಥೋ ಇತಿ । ಯಜ್ಞಪರುಷ ಇತಿ ಯಜ್ಞ–ಪರುಷಃ । ಅನಂತರಿತ್ಯಾ ಇತ್ಯನಂತಃ–ಇತ್ಯೈ ॥ ೩೦ ॥

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಅಥೋ ಯಜ್ಞಪರುಷಃ ಅನಂತರಿತ್ಯೈ** | ಮತ್ತು ಇದರಿಂದ ಯಜ್ಞದ ಅವಯವಗಳಿಗೆ ಅಡ್ಡಿ ಯಾಗುವುದಿಲ್ಲ. (ಅದಕ್ಕಾಗಿ ಉತ್ತರವೇದಿಯನ್ನು ನಿರ್ಮಿಸಬೇಕು) |

## ॥ ಷಷ್ಠೋಽನುವಾಕಃ ॥

ಅಗ್ನೇ ತವ ಶ್ರವೋ ವಯ ಇತಿ ಸಿಕತಾ ನಿ ವಪತ್ಯೇತದ್ವಾ ಅಗ್ನೇರ್ವೈಶ್ವಾನರಸ್ಯ ಸೂಕ್ತಗ್ಂ ಸೂಕ್ತೇನೈವ ವೈಶ್ವಾನರಮವರುಂಧೇ ಷಡ್ಭಿರ್ನಿವಪತಿ

---

ಅಗ್ನೇ । ತವ । ಶ್ರವಃ । ವಯಃ । ಇತಿ । ಸಿಕತಾಃ । ನೀತಿ । ವಪತಿ । ಏತತ್ । ವೈ । ಅಗ್ನೇಃ । ವೈಶ್ವಾನರಸ್ಯ । ಸೂಕ್ತಮಿತಿ ಸು–ಉಕ್ತಮ್ । ಸೂಕ್ತೇನೇತಿ ಸು–ಉಕ್ತೇನ । ಏವ । ವೈಶ್ವಾನರಮ್ । ಅವೇತಿ । ರುಂಧೇ । ಷಡ್ಭಿರಿತಿ ಷಟ್–ಭಿಃ । ನೀತಿ । ವಪತಿ ।

---

ಐದನೆಯ ಅನುವಾಕದಲ್ಲಿ ಕ್ಷೇತ್ರಕರ್ಷಣವು ಉಕ್ತವಾಗಿದೆ. ಈ ಆರನೆಯ ಅನುವಾಕದಲ್ಲಿ ಸಿಕತಾನಿವಪನಾದಿಗಳು ಹೇಳಲ್ಪಟ್ಟಿವೆ.

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ಸಿಕತಾನಿವಪನ; ಅರ್ಥವಾದ** |
| **ಅಗ್ನೇ ತವ ಶ್ರವಃ ವಯಃ ಇತಿ ಸಿಕತಾಃ ನಿವಪತಿ** | 'ಅಗ್ನೇ ತವ ಶ್ರವೋ ವಯಃ' ಎಂದು ಆರಂಭಗೊಳ್ಳುವ ಆರು ಋಕ್ಕುಗಳ ಸೂಕ್ತದಿಂದ ಚಯನ ಕ್ಷೇತ್ರದಲ್ಲಿ ಮರಳನ್ನು ಚೆಲ್ಲಬೇಕು. |
| **ಏತತ್ ವೈ ವೈಶ್ವಾನರಸ್ಯ ಅಗ್ನೇಃ ಸೂಕ್ತಮ್** | ಇದೇ ವಿಶ್ವಮಾನವಹಿತನಾದ ವೈಶ್ವಾನರಾಗ್ನಿಯ ಸೂಕ್ತವಾಗಿದೆ. |
| **ಸೂಕ್ತೇನ ಏವ ವೈಶ್ವಾನರಮ್ ಅವ ರುಂಧೇ** | ಈ ಸೂಕ್ತದಿಂದಲೇ ಯಜಮಾನನು ವೈಶ್ವಾನರಾಗ್ನಿಯನ್ನು ಹೊಂದುವನು. |
| | **ಮಂತ್ರಸಂಖ್ಯಾವಿಧಿ; ಪ್ರಶಂಸೆ** |
| **ಷಡ್ಭಿಃ ನಿವಪತಿ** | ಆರು ಮಂತ್ರಗಳಿಂದ ಸಿಕತಾನಿವಪನ (ಮರಳನ್ನು ಚೆಲ್ಲುವಿಕೆ)ಯನ್ನು ಅನುಷ್ಠಿಸಬೇಕು. |

ಷಡ್ವಾ ಋತವಸ್ಸಂವತ್ಸರಸ್ಸಂವತ್ಸರೋಽಗ್ನಿರ್ವೈಶ್ವಾನರಸ್ಸಾಕ್ಷಾದೇವ ವೈಶ್ವಾನರ ಮವರುಂಧೇ ಸಮುದ್ರಂ ವೈ ನಾಮೈತಚ್ಛಂದಃ ಸಮುದ್ರಮನು ಪ್ರಜಾಃ ಪ್ರಜಾಯಂತೇ ಯದೇತೇನ ಸಿಕತಾ ನಿವಪತಿ ಪ್ರಜಾನಾಂ ಪ್ರಜನನಾಯೇಂದ್ರೋ

---

ಷಟ್ । ವೈ । ಋತವಃ । ಸಂವತ್ಸರ ಇತಿ ಸಮ್-ವತ್ಸರಃ । ಸಂವತ್ಸರ ಇತಿ ಸಮ್-ವತ್ಸರಃ । ಅಗ್ನಿಃ । ವೈಶ್ವಾನರಃ । ಸಾಕ್ಷಾದಿತಿ ಸ-ಅಕ್ಷಾತ್ । ಏವ । ವೈಶ್ವಾನರಮ್ । ಅವೇತಿ । ರುಂಧೇ । ಸಮುದ್ರಮ್ । ವೈ । ನಾಮ । ಏತತ್ । ಛಂದಃ । ಸಮುದ್ರಮ್ । ಅನ್ವಿತಿ । ಪ್ರಜಾ ಇತಿ ಪ್ರ-ಜಾಃ । ಪ್ರೇತಿ । ಜಾಯಂತೇ । ಯತ್ । ಏತೇನ । ಸಿಕತಾಃ । ನಿವಪತೀತಿ ನಿ-ವಪತಿ । ಪ್ರಜಾನಾಮಿತಿ ಪ್ರ-ಜಾನಾಮ್ । ಪ್ರಜನನಾಯೇತಿ ಪ್ರ-ಜನನಾಯ । ಇಂದ್ರಃ । (೩೧) ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಷಟ್ ವೈ ಋತವಃ ಸಂವತ್ಸರಃ** | ಆರು ಋತುಗಳು ಒಂದು ಸಂವತ್ಸರವಷ್ಟೆ. |
| **ಸಂವತ್ಸರಃ ಅಗ್ನಿಃ ವೈಶ್ವಾನರಃ** | (ಸಂವತ್ಸರಮ್ ಉಖ್ಯಮ್ ಭೃತ್ವಾ) ಮುಂತಾದ ಕಡೆಗಳಲ್ಲಿ ಅಗ್ನಿಯನ್ನು ಸಂವತ್ಸರರೂಪವಾಗಿ ಹೇಳಿರುವುದರಿಂದ ಸಂವತ್ಸರಾಗ್ನಿಯು ವೈಶ್ವಾನರ ಎನಿಸುವನು. |
| **ಸಾಕ್ಷಾತ್ ವೈಶ್ವಾನರಮ್ ಏವ ಅವರುಂಧೇ** | ಈ ಆರು ಮಂತ್ರಗಳುಳ್ಳ ಸೂಕ್ತದಿಂದ ನಿವಪನವನ್ನು ಮಾಡುವುದರಿಂದ ಸಾಕ್ಷಾತ್ತಾಗಿ ವೈಶ್ವಾನರನನ್ನೇ ಪಡೆದಂತಾಗುತ್ತದೆ. |

### ಛಂದಸ್ಸಿನ ಪ್ರಶಂಸೆ

| | |
|---|---|
| **ಏತತ್ ಛಂದಃ ಸಮುದ್ರಮ್ ನಾಮ ವೈ** | ಈ ಸೂಕ್ತದಲ್ಲಿರುವ ಮಂತ್ರಗಳ ಛಂದಸ್ಸು ಬಗೆಬಗೆಯಾಗಿರುವುದರಿಂದ ವಿಶಾಲವಾಗಿ ಸಮುದ್ರದಂತೆ ಇದೆ. |
| **ಸಮುದ್ರಮ್ ಅನು ಪ್ರಜಾಃ ಪ್ರಜಾಯಂತೇ** | ಸಮುದ್ರವನ್ನು ಅನುಸರಿಸಿ ಪ್ರಜೆಗಳು ಜೀವಿಸುತ್ತಾರೆ. |
| **ಯತ್ ಏತೇನ ಸಿಕತಾಃ ನಿವಪತಿ** | ಚಯನಭೂಮಿಯಲ್ಲಿ ಈ ಸೂಕ್ತದಿಂದ ಮರಳನ್ನು ನಿವಪನ ಮಾಡುವುದೆಂಬುದು |
| **ಪ್ರಜಾನಾಮ್ ಪ್ರಜನನಾಯ** | ಪ್ರಜೆಗಳು ಜನಿಸಲು ಕಾರಣವಾಗುತ್ತದೆ. |

[..ಯೇಂದ್ರಃ(೩೧)] ವೃತ್ರಾಯ ವಜ್ರಂ ಪ್ರಾಹರತ್ಸ ತ್ರೇಧಾ ವ್ಯಭವತ್ಸ್ಫ್ಯಸ್ತೃತೀಯಗ್ಂ ರಥಸ್ತೃತೀಯಂ ಯೂಪಸ್ತೃತೀಯಂ ಯೇಽಂತಶ್ಶರಾ ಅಶೀರ್ಯಂತ ತಾಶ್ಶರ್ಕರಾ ಅಭವನ್ತಚ್ಛರ್ಕರಾಣಾಗ್ಂ ಶರ್ಕರತ್ವಂ ವಜ್ರೋ ವೈ ಶರ್ಕರಾಃ ಪಶುರಗ್ನಿ–

---

ವೃತ್ರಾಯ । ವಜ್ರಮ್ । ಪ್ರೇತಿ । ಅಹರತ್ । ಸಃ । ತ್ರೇಧಾ । ವೀತಿ । ಅಭವತ್ । ಸ್ಫ್ಯಃ । ತೃತೀಯಮ್ । ರಥಃ । ತೃತೀಯಮ್ । ಯೂಪಃ । ತೃತೀಯಮ್ । ಯೇ । ಅಂತಶ್ಶರಾ ಇತ್ಯಂತಃ–ಶರಾಃ । ಅಶೀರ್ಯಂತ । ತಾಃ । ಶರ್ಕರಾಃ । ಅಭವನ್ನ್ । ತತ್ । ಶರ್ಕರಾಣಾಮ್ । ಶರ್ಕರತ್ವಮಿತಿ ಶರ್ಕರ–ತ್ವಮ್ । ವಜ್ರಃ । ವೈ । ಶರ್ಕರಾಃ । ಪಶುಃ । ಅಗ್ನಿಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|

**ಶರ್ಕರಾಸ್ಥಾಪನ–ಉಪಾಖ್ಯಾನ–ಪ್ರಶಂಸೆ**

| | |
|---|---|
| **ಇಂದ್ರಃ ವೃತ್ರಾಯ ವಜ್ರಮ್ ಪ್ರಾಹರತ್** | ಇಂದ್ರನು ವೃತ್ರಾಸುರನ ಮೇಲೆ ಅತಿಕಠಿನವಾದ ತನ್ನ ವಜ್ರಾಯುಧವನ್ನು ಪ್ರಯೋಗಿಸಿದನು. |
| **ಸಃ ತ್ರೇಧಾ ವ್ಯಭವತ್** | ಆ ವಜ್ರಾಯುಧವು ಮೂರು ಭಾಗವಾಗಿ ಸೀಳಿ ಹೋಯಿತು. |
| **ಸ್ಫ್ಯಃ ತೃತೀಯಮ್** | ಮರದ ಕತ್ತಿಯು ಮೂರನೆಯ ಒಂದು ಭಾಗವಾಯಿತು. |
| **ರಥಃ ತೃತೀಯಮ್** | ಮೂರನೆಯ ಒಂದು ಭಾಗವು ರಥವಾಯಿತು. |
| **ಯೂಪಃ ತೃತೀಯಮ್** | ಮತ್ತೊಂದು ಮೂರನೆಯ ಒಂದು ಭಾಗವು ಯೂಪಸ್ತಂಭವಾಯಿತು. |
| **ಯೇ ಅಂತಃಶರಾಃ ಅಶೀರ್ಯಂತ** | ಯಾವ ವಜ್ರಾಯುಧದ ಉಳಿದ ಭಾಗವು ಚೂರು ಚೂರಾಯಿತೋ |
| **ತಾಃ ಶರ್ಕರಾಃ ಅಭವನ್** | ಅವು ಬೆಣಚುಕಲ್ಲಿನ ಚೂರುಚೂರುಗಳಾದವು. |
| **ತತ್ ಶರ್ಕರಾಣಾಮ್ ಶರ್ಕರತ್ವಮ್** | ಹೀಗೆ ಭಾಗಗಳಾದುದರಿಂದ ಶರ್ಕರೆಗಳೆನಿಸಿಕೊಂಡವು. |
| **ವಜ್ರಃ ವೈ ಶರ್ಕರಾಃ** | ಶರ್ಕರೆಗಳು ವಜ್ರದ ಭಾಗಗಳು. |
| **ಅಗ್ನಿಃ ಪಶುಃ** | ಆಹವನೀಯಚಿತಿಯ ಅಗ್ರಭಾಗವು ಪಶುಸಾಧನವಾಗಿ ಪಶುವಾಗಿದೆ. |

-ರ್ಯಚ್ಛರ್ಕರಾಭಿರಗ್ನಿಂ ಪರಿಮಿನೋತಿ ವಜ್ರೇಣೈವಾಸ್ಮೈ ಪಶೂನ್ಪರಿ ಗೃಹ್ಣಾತಿ ತಸ್ಮಾದ್ವಜ್ರೇಣ ಪಶವಃ ಪರಿಗೃಹೀತಾಸ್ತಸ್ಮಾತ್ಸ್ಥೇಯಾನಸ್ಥೇಯಸೋ ನೋಪ ಹರತೇ ತ್ರಿಸಪ್ತಾಭಿಃ ಪಶುಕಾಮಸ್ಯ [..ಕಾಮಸ್ಯ(೩೨)] ಪರಿಮಿನುಯಾ-

---

ಯತ್ । ಶರ್ಕರಾಭಿಃ । ಅಗ್ನಿಮ್ । ಪರಿಮಿನೋತೀತಿ ಪರಿ-ಮಿನೋತಿ । ವಜ್ರೇಣ । ಏವ । ಅಸ್ಮೈ । ಪಶೂನ್ । ಪರೀತಿ । ಗೃಹ್ಣಾತಿ । ತಸ್ಮಾತ್ । ವಜ್ರೇಣ । ಪಶವಃ । ಪರಿಗೃಹೀತಾ ಇತಿ ಪರಿ-ಗೃಹೀತಾಃ । ತಸ್ಮಾತ್ । ಸ್ಥೇಯಾನ್ । ಅಸ್ಥೇಯಸಃ । ನ । ಉಪೇತಿ । ಹರತೇ । ತ್ರಿಸಪ್ತಾಭಿರಿತಿ ತ್ರಿ-ಸಪ್ತಾಭಿಃ । ಪಶುಕಾಮಸ್ಯೇತಿ ಪಶು-ಕಾಮಸ್ಯ । (೩೨) । ಪರೀತಿ । ಮಿನುಯಾತ್ ।

---

ಬ್ರಾಹ್ಮಣಭಾಗ ವಿವರಣೆ

ಕಲ್ಲುಹರಳುಗಳನ್ನು ಆಹವನೀಯಚಿತಿಯ ಮೇಲೆ ಹರಡುವ ವಿಧಿ; ಪರಿಮಾನ/ಅರ್ಥವಾದ

| | |
|---|---|
| **ಯತ್ ಶರ್ಕರಾಭಿಃ ಅಗ್ನಿಮ್ ಪರಿಮಿನೋತಿ** | ಈ ಸಣ್ಣ ನೊರಜು ಕಲ್ಲುಗಳಿಂದ ಆಹವನೀಯಚಿತಿಯ ಮೇಲ್ಭಾಗವನ್ನು ಮುಚ್ಚುವುದು ಯಾವುದುಂಟೋ (ಅದರಿಂದ) |
| **ಅಸ್ಮೈ ವಜ್ರೇಣ ಏವ ಪಶೂನ್ ಪರಿಗೃಹ್ಣಾತಿ** | ವಜ್ರದಿಂದಲೇ ಪಶುಗಳನ್ನು ಈ ಯಜಮಾನನಿಗಾಗಿ ಅಧ್ವರ್ಯುವು ಹೊಂದಿಸಿಕೊಡುತ್ತಾನೆ. |
| **ತಸ್ಮಾತ್ ವಜ್ರೇಣ ಪಶವಃ ಪರಿಗೃಹೀತಾಃ** | ಆದುದರಿಂದ ಲೋಕದಲ್ಲಿ ವಜ್ರದಂತೆ ಕಠಿನವಾದ ಹಗ್ಗ ಮುಂತಾದವುಗಳಿಂದ ಪಶುಗಳು ಕಟ್ಟಲ್ಪಡುತ್ತವೆ. |
| **ತಸ್ಮಾತ್ ಸ್ಥೇಯಾನ್ ಅಸ್ಥೇಯಸಃ ನ ಉಪಹರತೇ** | (ಅಗ್ನಿಗೆ ದೃಢತೆಗಾಗಿ ನೊರಜು ಕಲ್ಲುಗಳ ಅಪೇಕ್ಷೆ ಇರುವುದರಿಂದ) ಲೋಕದಲ್ಲಿ ಪ್ರಬಲನಾದ ಪುರುಷನು ದುರ್ಬಲರನ್ನು ಆಶ್ರಯಿಸುವುದಿಲ್ಲ. |

ಶರ್ಕರಾಪರಿಮಾನ-ಕಾಮ್ಯವಿಧಿ

| | |
|---|---|
| **ಪಶುಕಾಮಸ್ಯ ತ್ರಿಸಪ್ತಾಭಿಃ* ಪರಿಮಿನುಯಾತ್** | ಪಶುಕಾಮನಾದ ಯಜಮಾನನಿಗಾಗಿ ಇಪ್ಪತ್ತೊಂದು ಕಲ್ಲುಗಳನ್ನು ಆಹವನೀಯಚಿತಿಯ ಮೇಲೆ ಹರಡಬೇಕು. |

---

* ತ್ರೀಣಿ ಸಪ್ತಕಾನಿ ಯಾಸಾಂ ತಾಃ=ಏಳು ಕಲ್ಲುಗಳನ್ನೊಳಗೊಂಡ ಮೂರು ಗುಂಪು.

-ತ್ಸಪ್ತ ವೈ ಶೀರ್ಷಣ್ಯಾಃ ಪ್ರಾಣಾಃ ಪ್ರಾಣಾಃ ಪಶವಃ ಪ್ರಾಣೈರೇವಾಸ್ಮೈ ಪಶೂನವರುಂಧೇ ತ್ರಿಣವಾಭಿರ್ಭ್ರಾತೃವ್ಯವತಸ್ತ್ರಿವೃತಮೇವ ವಜ್ರಗ್ಂ ಸಂಭೃತ್ಯ ಭ್ರಾತೃವ್ಯಾಯ ಪ್ರಹರತಿ ಸ್ತೃತ್ಯೈ

---

ಸಪ್ತ । ವೈ । ಶೀರ್ಷಣ್ಯಾಃ । ಪ್ರಾಣಾ ಇತಿ ಪ್ರ-ಅನಾಃ । ಪ್ರಾಣಾ ಇತಿ ಪ್ರ-ಅನಾಃ । ಪಶವಃ । ಪ್ರಾಣೈರಿತಿ ಪ್ರ-ಅನೈಃ । ಏವ । ಅಸ್ಮೈ । ಪಶೂನ್ । ಅವೇತಿ । ರುಂಧೇ । ತ್ರಿಣವಾಭಿರಿತಿ ತ್ರಿ-ನವಾಭಿಃ । ಭ್ರಾತೃವ್ಯವತ ಇತಿ ಭ್ರಾತೃವ್ಯ-ವತಃ । ತ್ರಿವೃತಮಿತಿ ತ್ರಿ-ವೃತಮ್ । ಏವ । ವಜ್ರಮ್ । ಸಂಭೃತ್ಯೇತಿ ಸಮ್-ಭೃತ್ಯ । ಭ್ರಾತೃವ್ಯಾಯ । ಪ್ರೇತಿ । ಹರತಿ । ಸ್ತೃತ್ಯೈ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಶೀರ್ಷಣ್ಯಾಃ ಪ್ರಾಣಾಃ ಸಪ್ತ ವೈ** | ಮುಖಭಾಗದಲ್ಲಿ ಏಳು ಪ್ರಾಣರಂಧ್ರಗಳಿರುತ್ತವೆ. |
| **ಪ್ರಾಣಾಃ ಪಶವಃ** | ಪಶುಗಳು ಇಂತಹ ಪ್ರಾಣಗಳಿಂದ ಕೂಡಿವೆ. |
| **ಪ್ರಾಣೈಃ ಏವ ಅಸ್ಮೈ ಪಶೂನ್ ಅವರುಂಧೇ** | ಅಧ್ವರ್ಯುವು ಯಜಮಾನನಿಗಾಗಿ ಇಂತಹ ಪ್ರಾಣ ಯುಕ್ತವಾದ ಪಶುಗಳನ್ನು ಹೊಂದಿಸುತ್ತಾನೆ. |

**ಇನ್ನೊಂದು ಕಾಮ್ಯವಿಧಿ**

| | |
|---|---|
| **ತ್ರಿಣವಾಭಿಃ ಭ್ರಾತೃವ್ಯವತಃ** ಪರಿಮಿನುಯಾತ್ | ಶತ್ರುಗಳನ್ನು ಹೊಂದಿರುವ ಯಜಮಾನನಿಗಾಗಿ ಅಧ್ವರ್ಯುವು ಇಪ್ಪತ್ತೇಳು ಕಲ್ಲುಗಳನ್ನು ಆಹವನೀಯಾಗ್ನಿಚಯನಪ್ರದೇಶದಲ್ಲಿ ಹರಡಬೇಕು. |
| **ತ್ರಿವೃತಮ್ ವಜ್ರಮ್ ಏವ ಸಂಭೃತ್ಯ** | (ಇದರಿಂದ) ತ್ರಿವೃತ್ಸ್ತೋಮವನ್ನೇ ಮೂರು ಭಾಗಗಳುಳ್ಳ ವಜ್ರಾಯುಧವನ್ನಾಗಿ ಮಾಡಿಕೊಂಡು |
| **ಭ್ರಾತೃವ್ಯಾಯ ಪ್ರಹರತಿ ಸ್ತೃತ್ಯೈ** | ಯಜಮಾನನ ಶತ್ರುವನ್ನು ಹಿಂಸಿಸುವುದಕ್ಕಾಗಿ ಅಧ್ವರ್ಯುವು ಪ್ರಯೋಗಿಸಿದವನಾಗುತ್ತಾನೆ. |

---

* **ತ್ರೀಣಿ ನವಕಾನಿ ಯಾಸಾಂ ತಾಃ**=ಒಂಬತ್ತು ಕಲ್ಲುಗಳನ್ನೊಳಗೊಂಡ ಮೂರು ಗುಂಪು. ತ್ರಿವೃತ್ಸ್ತೋಮವು ಇಪ್ಪತ್ತೇಳು ಸಂಖ್ಯೆಯನ್ನು ಹೊಂದಿದೆ.

ಅಪರಿಮಿತಾಭಿಃ ಪರಿಮಿನುಯಾದಪರಿಮಿತಸ್ಯಾವರುದ್ಧ್ಯೈ ಯಂ ಕಾಮಯೇತಾ-
ಪಶುಸ್ಸ್ಯಾದಿತ್ಯಪರಿಮಿತ್ಯ ತಸ್ಯ ಶರ್ಕರಾಸ್ಸಿಕತಾ ವ್ಯೂಹೇದಪರಿಗೃಹೀತ ಏವಾಸ್ಯ
ವಿಷೂಚೀನಗ್ಂ ರೇತಃ ಪರಾ ಸಿಂಚತ್ಯಪಶುರೇವ ಭವತಿ

---

ಅಪರಿಮಿತಾಭಿರಿತ್ಯಪರಿ–ಮಿತಾಭಿಃ । ಪರೀತಿ । ಮಿನುಯಾತ್ । ಅಪರಿಮಿತಸ್ಯೇತ್ಯಪರಿ–ಮಿತಸ್ಯ । ಅವರುದ್ಧ್ಯಾ ಇತ್ಯವ–ರುದ್ಧ್ಯೈ । ಯಮ್ । ಕಾಮಯೇತ । ಅಪಶುಃ । ಸ್ಯಾತ್ । ಇತಿ । ಅಪರಿಮಿತ್ಯೇತ್ಯಪರಿ–ಮಿತ್ಯ । ತಸ್ಯ । ಶರ್ಕರಾಃ । ಸಿಕತಾಃ । ವೀತಿ । ಊಹೇತ್ । ಅಪರಿಗೃಹೀತ ಇತ್ಯಪರಿ–ಗೃಹೀತೇ । ಏವ । ಅಸ್ಯ । ವಿಷೂಚೀನಮ್ । ರೇತಃ । ಪರೇತಿ । ಸಿಂಚತಿ । ಅಪಶುಃ । ಏವ । ಭವತಿ । (೩೩) ।

---

ಬ್ರಾಹ್ಮಣಭಾಗ — ವಿವರಣೆ

ಇನ್ನೊಂದು ಕಾಮ್ಯವಿಧಿ

| | |
|---|---|
| **ಅಪರಿಮಿತಾಭಿಃ ಪರಿಮಿನುಯಾತ್** | ಲೆಕ್ಕವಿಲ್ಲದಷ್ಟು ಎಷ್ಟಾದರೂ ಕಲ್ಲುಗಳನ್ನು ಚಯನ ಭೂಮಿಯಲ್ಲಿ ಹರಡಬೇಕು. |
| **ಅಪರಿಮಿತಸ್ಯ ಅವರುದ್ಧ್ಯೈ** | ಇದರಿಂದ ಅಪರಿಮಿತವಾದ ಸಂಪತ್ತಿನ ಲಾಭವಾಗುತ್ತದೆ. |

*ಅನ್ವಯ–ವ್ಯತಿರೇಕದಿಂದ ಶರ್ಕರಾ–ಸಿಕತೆಗಳ ವ್ಯೂಹನ (ಹರಡುವಿಕೆ)

| | |
|---|---|
| **ಯಮ್ ಅಪಶುಃ ಸ್ಯಾತ್ ಇತಿ ಕಾಮಯೇತ** | ಅಧ್ವರ್ಯುವು ಯಾವ ಯಜಮಾನನು ಪಶುಹೀನನಾಗ ಬೇಕೆಂದು ಬಯಸುವನೋ |
| **ತಸ್ಯ ಶರ್ಕರಾಃ ಅಪರಿಮಿತ್ಯ** | ಆ ಯಜಮಾನನು ಅನುಷ್ಠಿಸುವ ಚಯನದಲ್ಲಿ ಶರ್ಕರೆ |
| **ಸಿಕತಾಃ ವ್ಯೂಹೇತ್** | ಗಳನ್ನು ಹರಡದೆ ಮೊದಲು ಮರಳನ್ನು ಹಾಕಬೇಕು. |
| **ಅಪರಿಗೃಹೀತೇ ಏವ** | ಆಗ ಕಲ್ಲುಗಳನ್ನು ಹರಡದ ಪ್ರದೇಶದಲ್ಲಿಯೇ |
| **ಅಸ್ಯ ರೇತಃ ವಿಷೂಚೀನಮ್ ಪರಾ ಸಿಂಚತಿ** | ಈ ಯಜಮಾನನ ವೀರ್ಯವು ಹರಡಿಹೋದಂತಾಗುತ್ತದೆ. |
| **ಅಪಶುಃ ಏವ ಭವತಿ** | ಹೀಗೆ ರೇತೋನಾಶದಿಂದ ಯಜಮಾನನು ಪಶುರಹಿತ ನಾಗುತ್ತಾನೆ. |

---

* ಶ್ರುತಿಯಲ್ಲಿ ಕರ್ಮಾನುಷ್ಠಾನವನ್ನು ಬಗೆಬಗೆಯಾಗಿ ತಿಳಿಸಲಾಗಿದೆ. ಈ ರೀತಿಯಲ್ಲಿ ಅನುಷ್ಠಿಸಿದರೆ ಇಂತಹ ಫಲವು ಉಂಟಾಗುತ್ತದೆ ಎಂದು ತಿಳಿಸುವಾಗ ಆ ರೀತಿಯ ಅನುಷ್ಠಾನವು ಲೋಕದಲ್ಲಿ ನಿಂದಿತವಾಗಿರಬಹುದು. ಶ್ರುತಿಗೆ ಆ ನಿಂದಿತಕರ್ಮದ ಬೋಧನೆಯಲ್ಲಿ ತಾತ್ಪರ್ಯವಿಲ್ಲ. ವಿಹಿತಕರ್ಮದ ಬೋಧನೆಯಲ್ಲಿ ತಾತ್ಪರ್ಯವಿರುತ್ತದೆ. ಇದನ್ನು 'ಅನ್ವಯವ್ಯತಿರೇಕವಿಧಾನ' ಎನ್ನುತ್ತಾರೆ. ತಾತ್ಪರ್ಯದ ಗ್ರಹಣವು ಮುಖ್ಯ.

[ಭವತಿ(೩೩)] ಯಂ ಕಾಮಯೇತ ಪಶುಮಾನ್ಸ್ಯಾದಿತಿ ಪರಿಮಿತ್ಯ ತಸ್ಯ ಶರ್ಕರಾಸ್ಸಿಕತಾ ವ್ಯೂಹೇತ್ಪರಿಗೃಹೀತ ಏವಾಸ್ಮೈ ಸಮೀಚೀನಗ್‌ಂ ರೇತಸ್ಸಿಂಚತಿ ಪಶುಮಾನೇವ ಭವತಿ ಸೌಮ್ಯಾ ವ್ಯೂಹತಿ ಸೋಮೋ ವೈ ರೇತೋಧಾ ರೇತ ಏವ ತದ್ದಧಾತಿ

ಯಮ್ । ಕಾಮಯೇತ । ಪಶುಮಾನಿತಿ ಪಶು–ಮಾನ್ । ಸ್ಯಾತ್ । ಇತಿ । ಪರಿಮಿತ್ಯೇತಿ ಪರಿ–ಮಿತ್ಯ । ತಸ್ಯ । ಶರ್ಕರಾಃ । ಸಿಕತಾಃ । ವೀತಿ । ಊಹೇತ್ । ಪರಿಗೃಹೀತ ಇತಿ ಪರಿ–ಗೃಹೀತೇ । ಏವ । ಅಸ್ಮೈ । ಸಮೀಚೀನಮ್ । ರೇತಃ । ಸಿಂಚತಿ । ಪಶುಮಾನಿತಿ ಪಶು–ಮಾನ್ । ಏವ । ಭವತಿ । ಸೌಮ್ಯಾ । ವೀತಿ । ಊಹತಿ । ಸೋಮಃ । ವೈ । ರೇತೋಧಾ ಇತಿ ರೇತಃ–ಧಾಃ । ರೇತ । ಏವ । ತತ್ । ದಧಾತಿ ।

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯಮ್ ಪಶುಮಾನ್ ಸ್ಯಾತ್ ಇತಿ ಕಾಮಯೇತ** | ಅಧ್ವರ್ಯುವು ಯಾವ ಯಜಮಾನನು ಅನೇಕ ಪಶುಗಳುಳ್ಳವನಾಗಬೇಕೆಂಬುದಾಗಿ ಬಯಸುವನೋ |
| **ತಸ್ಯ ಶರ್ಕರಾಃ ಪರಿಮಿತ್ಯ** | ಆ ಯಜಮಾನನು ಅನುಷ್ಠಿಸುವ ಚಯನದಲ್ಲಿ ಶರ್ಕರೆಗಳನ್ನು (ಕಲ್ಲುಗಳನ್ನು) ಹರಡಿ |
| **ಸಿಕತಾಃ ವ್ಯೂಹೇತ್** | (ಆನಂತರ) ಮರಳನ್ನು ಚೆಲ್ಲಬೇಕು. |
| **ಪರಿಗೃಹೀತೇ ಏವ** | ಆಗ ಕಲ್ಲುಗಳನ್ನು ಹರಡಿದ ಪ್ರದೇಶದಲ್ಲಿಯೇ |
| **ಅಸ್ಮೈ ರೇತಃ ಸಮೀಚೀನಮ್ ಸಿಂಚತಿ** | ಈ ಯಜಮಾನನಿಗಾಗಿ ಕಲ್ಲುಗಳನ್ನು ಹರಡಿರುವ ಪ್ರದೇಶದಲ್ಲಿ ಸರಿಯಾಗಿ ರೇತಃಸಿಂಚನವನ್ನು ಮಾಡಿದಂತಾಗುತ್ತದೆ. |
| **ಪಶುಮಾನ್ ಏವ ಭವತಿ** | [ಇದರಿಂದ]ಯಜಮಾನನು ಅನೇಕ ಪಶುಗಳ ಸ್ವಾಮಿಯಾಗುವನು. |

ವ್ಯೂಹನಮಂತ್ರ–ಫಲ

| | |
|---|---|
| **ಸೌಮ್ಯಾ ವ್ಯೂಹತಿ** | ಸೋಮದೇವತಾಕವಾದ ('ಆಪ್ಯಾಯಸ್ವ' ಮತ್ತು 'ಸಂ ತೇ ಪಯಾಗ್‌ಂಸಿ' ಎಂಬ) ಮಂತ್ರಗಳಿಂದ ಮರಳನ್ನು ಚೆಲ್ಲಬೇಕು. |
| **ಸೋಮಃ ರೇತೋಧಾಃ ವೈ** | ಸೋಮದೇವನು ರೇತೋಧಾರಕನು. |
| **ತತ್ ರೇತಃ ದಧಾತಿ ಏವ** | ಆದುದರಿಂದ ರೇತಸ್ಸನ್ನು ಧರಿಸಿದಂತೆಯೇ ಆಗುತ್ತದೆ. |

ಗಾಯತ್ರಿಯಾ ಬ್ರಾಹ್ಮಣಸ್ಯ ಗಾಯತ್ರೋ ಹಿ ಬ್ರಾಹ್ಮಣಸ್ತ್ರಿಷ್ಟುಭಾ ರಾಜನ್ಯಸ್ಯ

ತ್ರೈಷ್ಟುಭೋ ಹಿ ರಾಜನ್ಯಶ್ಶಂಯುಂ ಬಾರ್ಹಸ್ಪತ್ಯಂ ಮೇಧೋ

ನೋಪಾನಮತ್ಸೋಽಗ್ನಿಂ

---

ಗಾಯತ್ರಿಯಾ । ಬ್ರಾಹ್ಮಣಸ್ಯ । ಗಾಯತ್ರಃ । ಹಿ । ಬ್ರಾಹ್ಮಣಃ । ತ್ರಿಷ್ಟುಭಾ । ರಾಜನ್ಯಸ್ಯ । ತ್ರೈಷ್ಟುಭಃ । ಹಿ । ರಾಜನ್ಯಃ । ಶಂಯುಮಿತಿ ಶಮ್-ಯುಮ್ । ಬಾರ್ಹಸ್ಪತ್ಯಮ್ । ಮೇಧಃ । ನ । ಉಪೇತಿ । ಅನಮತ್ । ಸಃ । ಅಗ್ನಿಮ್ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಜಾತಿವಿಶೇಷಕ್ಕೆ ಮಂತ್ರವಿಶೇಷ** | |
| **ಗಾಯತ್ರಿಯಾ ಬ್ರಾಹ್ಮಣಸ್ಯ** ವ್ಯೂಹೇತ್ | (ಯಜಮಾನನು) ಬ್ರಾಹ್ಮಣನಾಗಿದ್ದರೆ (ಅಧ್ವರ್ಯುವು) ಗಾಯತ್ರೀಛಂದಸ್ಸಿನ **'ಆ ಪ್ಯಾಯಸ್ವ'** ಎಂಬ ಮಂತ್ರದಿಂದ ಮರಳನ್ನು ಚೆಲ್ಲಬೇಕು. |
| **ಬ್ರಾಹ್ಮಣಃ ಗಾಯತ್ರಃ ಹಿ** | (ಬ್ರಾಹ್ಮಣನು ಮತ್ತು ಗಾಯತ್ರಿಯು ಪ್ರಜಾಪತಿದೇವನ ಮುಖದಲ್ಲಿ ಜನಿಸಿದವರು) ಹೀಗಾಗಿ ಬ್ರಾಹ್ಮಣನು ಗಾಯತ್ರಿಗೆ ಸಂಬಂಧಿಸಿದವನು. |
| **ತ್ರಿಷ್ಟುಭಾ ರಾಜನ್ಯಸ್ಯ** ವ್ಯೂಹೇತ್ | (ಯಜಮಾನನು) ಕ್ಷತ್ರಿಯನಾದರೆ ಅಧ್ವರ್ಯುವು ತ್ರಿಷ್ಟುಪ್ ಛಂದಸ್ಸಿನ **'ಸಂ ತೇ ಪಯಾಂಸಿ'** ಎಂಬ ಮಂತ್ರದಿಂದ ಮರಳನ್ನು ಚೆಲ್ಲಬೇಕು. |
| **ರಾಜನ್ಯಃ ತ್ರೈಷ್ಟುಭಃ ಹಿ** | (ಕ್ಷತ್ರಿಯನೂ ಮತ್ತು ತ್ರಿಷ್ಟುಪ್ ಛಂದಸ್ಸೂ ಪ್ರಜಾಪತಿ ದೇವನ ಬಾಹುಗಳಲ್ಲಿ ಜನಿಸಿದವರು) ಹೀಗಾಗಿ ಕ್ಷತ್ರಿಯನು ತ್ರಿಷ್ಟುಪ್‌ಛಂದಸ್ಸಿಗೆ ಸಂಬಂಧಿಸಿದವನು. |
| **ಅಶ್ವಾಕ್ರಮಣದ ವಿಧಾನ/ಉಪಾಖ್ಯಾನ/ಅರ್ಥವಾದ** | |
| **ಬಾರ್ಹಸ್ಪತ್ಯಮ್ ಶಂಯುಮ್ ಮೇಧಃ ನ ಉಪಾನಮತ್** | ಒಮ್ಮೆ ಬೃಹಸ್ಪತಿಪುತ್ರನಾದ ಶಂಯುವನ್ನು ಯಜ್ಞಪುರುಷನು ಸಮೀಪಿಸಲಿಲ್ಲ. |
| **ಸಃ ಅಗ್ನಿಮ್** | ಆ ಯಜ್ಞಪುರುಷನು (ಅಡಗುವುದಕ್ಕಾಗಿ) ಅಗ್ನಿಯನ್ನು |

---

ತಾತ್ಪರ್ಯ:- ಚಯನಪ್ರದೇಶದಲ್ಲಿ ಮೊದಲು ಕಲ್ಲುಗಳನ್ನು ಹಾಕಿ ಬಳಿಕ ಮರಳನ್ನು ಚೆಲ್ಲಬೇಕು.

**'ಆ ಪ್ಯಾಯಸ್ವ' 'ಸಂ ತೇ ಪಯಾಂಸಿ'** ಇವು ಸಾಮಾನ್ಯಮಂತ್ರಗಳು. ಜಾತಿವಿಶೇಷಕ್ಕೆ ಮಂತ್ರವಿಶೇಷವು ಮುಂದೆ ಉಕ್ತವಾಗಿದೆ.

ಪ್ರಾವಿಶ[ಪ್ರಾವಿಶತ್(೩೪)ಸೋಽಗ್ನೇಃ]ತ್ಸೋಽಗ್ನೇಃ ಕೃಷ್ಣೋ ರೂಪಂ ಕೃತ್ವೋದಾಯತ ಸೋಽಶ್ವಂ ಪ್ರಾವಿಶತ್ಸೋಽಶ್ವಸ್ಯಾವಂತರಶಫೋಽಭವದ್ಯದಶ್ವಮಾಕ್ರಮಯತಿ ಯ ಏವ ಮೇಧೋಽಶ್ವಂ ಪ್ರಾವಿಶತ್ತಮೇವಾವರುಂಧೇ ಪ್ರಜಾಪತಿನಾಽಗ್ನಿಶ್ಚೇತವ್ಯ ಇತ್ಯಾಹುಃ

---

ಪ್ರೇತಿ । ಅವಿಶತ್ । (೩೪) । ಸಃ । ಅಗ್ನೇಃ । ಕೃಷ್ಣಃ । ರೂಪಮ್ । ಕೃತ್ವಾ । ಉದಿತಿ । ಆಯತ । ಸಃ । ಅಶ್ವಮ್ । ಪ್ರೇತಿ । ಅವಿಶತ್ । ಸಃ । ಅಶ್ವಸ್ಯ । ಅವಾಂತರಶಫ ಇತ್ಯವಾಂತರ-ಶಫಃ । ಅಭವತ್ । ಯತ್ । ಅಶ್ವಮ್ । ಆಕ್ರಮಯತೀತ್ಯಾ-ಕ್ರಮಯತಿ । ಯಃ । ಏವ । ಮೇಧಃ । ಅಶ್ವಮ್ । ಪ್ರೇತಿ । ಅವಿಶತ್ । ತಮ್ । ಏವ । ಅವೇತಿ । ರುಂಧೇ । ಪ್ರಜಾಪತಿನೇತಿ ಪ್ರಜಾ-ಪತಿನಾ । ಅಗ್ನಿಃ । ಚೇತವ್ಯಃ । ಇತಿ । ಆಹುಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಪ್ರ ಅವಿಶತ್ | ಪ್ರವೇಶಿದನು. |
| ಸಃ ಅಗ್ನೇಃ ಕೃಷ್ಣಃ ರೂಪಮ್ ಕೃತ್ವಾ ಉದಾಯತ | (ಶಂಯುವು ಹುಡುಕುತ್ತಾ ಅಲ್ಲಿಗೆ ಬರಲು) ಆ ಯಜ್ಞ ಪುರುಷನು ಕೃಷ್ಣಮೃಗದ ರೂಪವನ್ನು ತಳೆದು ಆ ಅಗ್ನಿಯ ದೆಸೆಯಿಂದ ಓಡಿದನು. |
| ಸಃ ಅಶ್ವಮ್ ಪ್ರಾವಿಶತ್ | (ಓಡಿ) ಕುದುರೆಯನ್ನು ಹೊಕ್ಕನು. |
| ಸಃ ಅಶ್ವಸ್ಯ ಅವಾಂತರಶಫಃ ಅಭವತ್ | ಅವನು ಆ ಯಜ್ಞಪುರುಷನು ಮುಖ್ಯಗೊರಸಿನಲ್ಲಿರುವ ಒಳಗೊರಸಾದನು. |
| ಯತ್ ಅಶ್ವಮ್ ಆಕ್ರಮಯತಿ | ಅಗ್ನಿಚಯನಪ್ರದೇಶದಲ್ಲಿ ಅಶ್ವಾಕ್ರಮಣ(ಕುದುರೆಯ ತಿರುಗಾಟ) ವನ್ನು ಮಾಡಿಸುವುದರಿಂದ |
| ಯಃ ಏವ ಮೇಧಃ ಅಶ್ವಮ್ ಪ್ರಾವಿಶತ್ | ಯಾವ ಯಜ್ಞಪುರುಷನು ಕುದುರೆಯನ್ನು ಪ್ರವೇಶಿಸಿದನೋ, |
| ತಮ್ ಅವರುಂಧೇ ಏವ | ಆ ಯಜ್ಞಪುರುಷನನ್ನೇ ಹೊಂದಿದಂತಾಗುತ್ತದೆ. |

ಇನ್ನೊಂದು ಅರ್ಥವಾದ

| | |
|---|---|
| ಪ್ರಜಾಪತಿನಾ ಅಗ್ನಿಃ ಚೇತವ್ಯಃ ಇತಿ ಆಹುಃ | ಬಲ್ಲವರು ಚಯನವು ಪ್ರಜಾಪತಿಯು ಮಾಡಲು ಅರ್ಹವಾದುದು ಎಂದು ಹೇಳುತ್ತಾರೆ. |

ಪ್ರಾಜಾಪತ್ಯೋಽಶ್ವೋ ಯದಶ್ವಮಾಕ್ರಮಯತಿ ಪ್ರಜಾಪತಿನೈವಾಗ್ನಿಂ ಚಿನುತೇ

ಪುಷ್ಕರಪರ್ಣಮುಪದಧಾತಿ ಯೋನಿರ್ವಾ ಅಗ್ನೇಃ ಪುಷ್ಕರಪರ್ಣಗ್ಂ

ಸಯೋನಿಮೇವಾಗ್ನಿಂ ಚಿನುತೇಽಪಾಂ ಪೃಷ್ಠಮಸೀತ್ಯುಪದಧಾ-

---

ಪ್ರಾಜಾಪತ್ಯ ಇತಿ ಪ್ರಾಜಾ-ಪತ್ಯಃ। ಅಶ್ವಃ। ಯತ್। ಅಶ್ವಮ್। ಆಕ್ರಮಯತೀತ್ಯಾ-ಕ್ರಮಯತಿ। ಪ್ರಜಾಪತಿನೇತಿ ಪ್ರಜಾ-ಪತಿನಾ। ಏವ। ಅಗ್ನಿಮ್। ಚಿನುತೇ। ಪುಷ್ಕರಪರ್ಣಮಿತಿ ಪುಷ್ಕರ-ಪರ್ಣಮ್। ಉಪೇತಿ। ದಧಾತಿ। ಯೋನಿಃ। ವೈ। ಅಗ್ನೇಃ। ಪುಷ್ಕರಪರ್ಣಮಿತಿ ಪುಷ್ಕರ-ಪರ್ಣಮ್। ಸಯೋನಿಮಿತಿ ಸ-ಯೋನಿಮ್। ಏವ। ಅಗ್ನಿಮ್। ಚಿನುತೇ। ಅಪಾಮ್। ಪೃಷ್ಠಮ್। ಅಸಿ। ಇತಿ। ಉಪೇತಿ। ದಧಾತಿ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಅಶ್ವಃ ಪ್ರಾಜಾಪತ್ಯಃ | ಅಶ್ವವು ಪ್ರಜಾಪತಿಸಂಬಂಧಿಯಾದುದಾಗಿದೆ. |
| ಯತ್ ಅಶ್ವಮ್ ಆಕ್ರಮಯತಿ | ಅಶ್ವದ ತಿರುಗಾಟವನ್ನು ಮಾಡಿಸುವುದೆಂಬುದು ಯಾವುದೋ (ಅದು) |
| ಪ್ರಜಾಪತಿನಾ ಏವ ಅಗ್ನಿಮ್ ಚಿನುತೇ | (ಯಜಮಾನನು) ಪ್ರಜಾಪತಿಯಿಂದಲೇ ಚಯನ ಮಾಡಿಸಿದಂತಾಗುತ್ತದೆ. |

**ಪದ್ಮಪತ್ರೋಪಧಾನ; ಪ್ರಶಂಸೆ**

| | |
|---|---|
| ಪುಷ್ಕರಪರ್ಣಮ್ ಉಪದಧಾತಿ | (ಕುದುರೆಯ ಹೆಜ್ಜೆಯಲ್ಲಿ) ತಾವರೆಯ ಎಲೆಯನ್ನು ಇಡಬೇಕು. |
| ಅಗ್ನೇಃ ಯೋನಿಃ ಪುಷ್ಕರಪರ್ಣಮ್ ವೈ | ತಾವರೆಯ ಎಲೆಯು ಅಗ್ನಿಯ ಸ್ಥಾನವಾಗಿದೆಯಷ್ಟೆ. |
| ಸಯೋನಿಮ್ ಏವ ಅಗ್ನಿಮ್ ಚಿನುತೇ | (ಇದರಿಂದ) ಸ್ಥಾನಸಹಿತವಾಗಿಯೇ ಯಜಮಾನನು ಅಗ್ನಿಚಯನವನ್ನು ಮಾಡಿದವನಾಗುತ್ತಾನೆ. |

**ಮಂತ್ರವಿನಿಯೋಗ**

| | |
|---|---|
| ಅಪಾಮ್ ಪೃಷ್ಠಮ್ ಅಸಿ ಇತಿ ಉಪದಧಾತಿ | 'ಅಪಾಂ ಪೃಷ್ಠಮಸಿ' ಎಂದು ಆರಂಭವಾಗುವ ಮಂತ್ರದಿಂದ ಪದ್ಮಪರ್ಣೋಪಧಾನವನ್ನು ಮಾಡಬೇಕು. |

-ತ್ಯಪಾಂ ವಾ ಏತತ್ಪೃಷ್ಠಂ ಯತ್ಪುಷ್ಕರಪರ್ಣಗ್ಂ ರೂಪೇಣೈವೈನದುಪ

ದಧಾತಿ ॥ ೩೫-6 ॥

[ಇಂದ್ರಃ ಪಶುಕಾಮಸ್ಯ ಭವತ್ಯವಿಶತ್ಸಯೋನಿಂ ವಿಗ್ಂಶತಿಶ್ಚ ॥]

---

ಅಪಾಮ್ । ವೈ । ಏತತ್ । ಪೃಷ್ಠಮ್ । ಯತ್ । ಪುಷ್ಕರಪರ್ಣಮಿತಿ ಪುಷ್ಕರ-ಪರ್ಣಮ್ । ರೂಪೇಣ । ಏವ । ಏನತ್ । ಉಪೇತಿ । ದಧಾತಿ ॥ ೩೫ ॥

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯತ್ ಪುಷ್ಕರಪರ್ಣಮ್ ಅಪಾಮ್ ವೈ ಏತತ್ ಪೃಷ್ಠಮ್** | ಪುಷ್ಕರಪರ್ಣವೆಂಬುದು ನೀರಿನ ಮೇಲುಭಾಗದಲ್ಲಿಯೇ ಇರುತ್ತದೆ. |
| **ರೂಪೇಣ ಏವ ಏನತ್ ಉಪದಧಾತಿ** | ಆದುದರಿಂದ ಈ ಮಂತ್ರದಿಂದ ಉಪಧಾನ ಮಾಡುವುದು ಅನುರೂಪವಾಗಿಯೇ ಆಗಿರುತ್ತದೆ. |

---

**'ತ್ವಾಮಗ್ನೇ ಪುಷ್ಕರಾತ್'** ಎಂಬ ಮಂತ್ರವಿದೆ. ಅಗ್ನಿಯ ಸ್ಥಾನವು ಪುಷ್ಕರಪರ್ಣವೆಂದು ಅದರಿಂದ ತಿಳಿಯುತ್ತದೆ. ಇದು ಪುಷ್ಕರಪರ್ಣನಿಧಾನ ವಿಧಿ ಮತ್ತು ಅರ್ಥವಾದ.

## ॥ ಸಪ್ತಮೋಽನುವಾಕಃ ॥

ಬ್ರಹ್ಮ ಜಜ್ಞಾನಮಿತಿ ರುಕ್ಮಮುಪದಧಾತಿ ಬ್ರಹ್ಮಮುಖಾ ವೈ ಪ್ರಜಾಪತಿಃ
ಪ್ರಜಾ ಅಸೃಜತ ಬ್ರಹ್ಮಮುಖಾ ಏವ ತತ್ಪ್ರಜಾ ಯಜಮಾನಸ್ಸೃಜತೇ

---

ಬ್ರಹ್ಮ । ಜಜ್ಞಾನಮ್ । ಇತಿ । ರುಕ್ಮಮ್ । ಉಪೇತಿ । ದಧಾತಿ । ಬ್ರಹ್ಮಮುಖಾ ಇತಿ ಬ್ರಹ್ಮ–ಮುಖಾಃ । ವೈ । ಪ್ರಜಾಪತಿರಿತಿ ಪ್ರಜಾ–ಪತಿಃ । ಪ್ರಜಾ ಇತಿ ಪ್ರ–ಜಾಃ । ಅಸೃಜತ । ಬ್ರಹ್ಮಮುಖಾ ಇತಿ ಬ್ರಹ್ಮ–ಮುಖಾಃ । ಏವ । ತತ್ । ಪ್ರಜಾ ಇತಿ ಪ್ರ–ಜಾಃ । ಯಜಮಾನಃ । ಸೃಜತೇ ।

---

ಈ ಏಳನೆಯ ಅನುವಾಕದಲ್ಲಿ ರುಕ್ಮೋಪಧಾನಾದಿಗಳು ಹೇಳಲ್ಪಟ್ಟಿವೆ.

---

| ಬ್ರಾಹ್ಮಣಭಾಗ | ವಿವರಣೆ |
|---|---|

**ರುಕ್ಮೋಪಧಾನ–ಅರ್ಥವಾದ**

| | |
|---|---|
| ಬ್ರಹ್ಮ ಜಜ್ಞಾನಮ್ ಇತಿ ರುಕ್ಮಮ್ ಉಪ ದಧಾತಿ | 'ಬ್ರಹ್ಮ ಜಜ್ಞಾನಮ್' ಎಂಬ ಮಂತ್ರದಿಂದ (ಪೂರ್ವ ದಿಕ್ಕಿನಲ್ಲಿರುವ ಸೂರ್ಯನಂತೆ ಶೋಭಿಸುವ) ಪ್ರಥಮೋತ್ಪನ್ನವಾದ ಹಿರಣ್ಯವನ್ನು ಪುಷ್ಕರಪರ್ಣ ಗಳಲ್ಲಿ ಉಪಧಾನ ಮಾಡಬೇಕು. |
| ಪ್ರಜಾಪತಿಃ ಬ್ರಹ್ಮಮುಖಾಃ ಪ್ರಜಾಃ ಅಸೃಜತ ವೈ | ಪ್ರಜಾಪತಿದೇವನು ಬ್ರಾಹ್ಮಣನೇ ಮುಖ್ಯನಾಗಿರುವ ಪ್ರಜೆಗಳನ್ನು ಸೃಷ್ಟಿಸಿದನು. |
| ತತ್ ಯಜಮಾನಃ ಬ್ರಹ್ಮಮುಖಾಃ ಪ್ರಜಾಃ ಏವ ಸೃಜತೇ | (ಆದ್ದರಿಂದ) ಬ್ರಾಹ್ಮಣನಂತೆ ಮುಖ್ಯರಾದ ಪ್ರಜೆ ಗಳನ್ನು ಯಜಮಾನನು ಸೃಷ್ಟಿಸುವನು. |

ಬ್ರಹ್ಮ ಜಜ್ಞಾನಮಿತ್ಯಾಹ ತಸ್ಮಾದ್ಬ್ರಾಹ್ಮಣೋ ಮುಖ್ಯೋ ಮುಖ್ಯೋ ಭವತಿ
ಯ ಏವಂ ವೇದ ಬ್ರಹ್ಮವಾದಿನೋ ವದಂತಿ ನ ಪೃಥಿವ್ಯಾಂ ನಾಂತರಿಕ್ಷೇ ನ
ದಿವ್ಯಗ್ನಿಶ್ಚೇತವ್ಯ ಇತಿ ಯತ್ಪೃಥಿವ್ಯಾಂ ಚಿನ್ವೀತ ಪೃಥಿವೀಗ್ಂ
ಶುಚಾಽರ್ಪಯೇನ್ನೌಷಧಯೋ

---

ಬ್ರಹ್ಮ । ಜಜ್ಞಾನಮ್ । ಇತಿ । ಆಹ । ತಸ್ಮಾತ್ । ಬ್ರಾಹ್ಮಣಃ । ಮುಖ್ಯಃ । ಮುಖ್ಯಃ । ಭವತಿ । ಯಃ । ಏವಮ್ । ವೇದ । ಬ್ರಹ್ಮವಾದಿನ ಇತಿ ಬ್ರಹ್ಮ–ವಾದಿನಃ । ವದಂತಿ । ನ । ಪೃಥಿವ್ಯಾಮ್ । ನ । ಅಂತರಿಕ್ಷೇ । ನ । ದಿವಿ । ಅಗ್ನಿಃ । ಚೇತವ್ಯಃ । ಇತಿ । ಯತ್ । ಪೃಥಿವ್ಯಾಮ್ । ಚಿನ್ವೀತ । ಪೃಥಿವೀಮ್ । ಶುಚಾ । ಅರ್ಪಯೇತ್ । ನ । ಓಷಧಯಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಬ್ರಹ್ಮ ಜಜ್ಞಾನಮ್ ಇತಿ ಆಹ** | 'ಬ್ರಹ್ಮ ಜಜ್ಞಾನಮ್' ಎಂದು ಮಂತ್ರವು ಹೇಳುತ್ತದೆ. |
| **ತಸ್ಮಾತ್ ಬ್ರಾಹ್ಮಣಃ ಮುಖ್ಯಃ** | (ಪ್ರಥಮೋತ್ಪತ್ತಿಯನ್ನು ಹೇಳುವುದರಿಂದ) ಬ್ರಾಹ್ಮಣನು ಮುಖ್ಯನಾಗಿರುತ್ತಾನೆ. |
| **ಯಃ ಏವಮ್ ವೇದ ಮುಖ್ಯಃ ಭವತಿ** | ಯಾರು ಈ ರೀತಿ ತಿಳಿಯುವನೋ ಅವನೂ ಮುಖ್ಯನಾಗುವನು. |

### ರುಕ್ಮೋಪಧಾನದ ಪ್ರಶಂಸೆ

| | |
|---|---|
| **ಬ್ರಹ್ಮವಾದಿನಃ** | ಮಂತ್ರಜ್ಞರು |
| **ಅಗ್ನಿಃ ಪೃಥಿವ್ಯಾಮ್ ನ ಚೇತವ್ಯಃ** | ಭೂಮಿಯಲ್ಲಿ ಅಗ್ನಿಯ ಚಯನವನ್ನು ಅನುಷ್ಠಿಸಬಾರದು, |
| **ಅಂತರಿಕ್ಷೇ ನ** ಚೇತವ್ಯಃ | ಅಂತರಿಕ್ಷದಲ್ಲಿ ಅಗ್ನಿಯ ಚಯನವನ್ನು ಮಾಡಬಾರದು, |
| **ದಿವಿ ನ** ಚೇತವ್ಯಃ | ದ್ಯುಲೋಕದಲ್ಲಿ ಅಗ್ನಿಯ ಚಯನವನ್ನು ಮಾಡಬಾರದು, |
| **ಇತಿ ವದಂತಿ** | ಎಂದು ಹೇಳುತ್ತಾರೆ. |
| **ಯತ್ ಪೃಥಿವ್ಯಾಮ್ ಚಿನ್ವೀತ** | ಒಮ್ಮೆ ಭೂಮಿಯಲ್ಲಿ ಚಯನವನ್ನು ಮಾಡಿದರೆ |
| **ಪೃಥಿವೀಮ್ ಶುಚಾ ಅರ್ಪಯೇತ್** | (ಯಜಮಾನನು) ಭೂಮಿಯನ್ನು ತಾಪಯುಕ್ತವನ್ನಾಗಿ ಮಾಡಿದವನಾಗುತ್ತಾನೆ. |
| **ಓಷಧಯಃ ನ ಪ್ರಜಾಯೇರನ್** | (ಆಗ) ಸಸ್ಯಗಳು ಬೆಳೆಯಲಾರವು. |

ನ ವನಸ್ಪತಯಃ [ವನಸ್ಪತಯಃ(೩೭)] ಪ್ರಜಾಯೇರನ್, ಯದಂತರಿಕ್ಷೇ ಚಿನ್ವೀತಾಂತರಿಕ್ಷಗ್ಂ ಶುಚಾಽರ್ಪಯೇನ್ನ ವಯಾಗ್ಂಸಿ ಪ್ರಜಾಯೇರನ್, ಯದ್ದಿವಿ ಚಿನ್ವೀತ ದಿವಗ್ಂ ಶುಚಾಽರ್ಪಯೇನ್ನ ಪರ್ಜನ್ಯೋ ವರ್‌ಷೇದ್ರುಕ್ಮ ಮುಪ ದಧಾತ್ಯಮೃತಂ ವೈ ಹಿರಣ್ಯಮಮೃತ ಏವಾಗ್ನಿಂ ಚಿನುತೇ ಪ್ರಜಾತ್ಯೈ॥

---

ನ । ವನಸ್ಪತಯಃ । (೩೭) । ಪ್ರೇತಿ । ಜಾಯೇರನ್ನ್ । ಯತ್ । ಅಂತರಿಕ್ಷೇ । ಚಿನ್ವೀತ । ಅಂತರಿಕ್ಷಮ್ । ಶುಚಾ । ಅರ್ಪಯೇತ್ । ನ । ವಯಾಗ್ಂಸಿ । ಪ್ರೇತಿ । ಜಾಯೇರನ್ನ್ । ಯತ್ । ದಿವಿ । ಚಿನ್ವೀತ । ದಿವಮ್ । ಶುಚಾ । ಅರ್ಪಯೇತ್ । ನ । ಪರ್ಜನ್ಯಃ । ವರ್‌ಷೇತ್ । ರುಕ್ಮಮ್ । ಉಪೇತಿ । ದಧಾತಿ । ಅಮೃತಮ್ । ವೈ । ಹಿರಣ್ಯಮ್ । ಅಮೃತೇ । ಏವ । ಅಗ್ನಿಮ್ । ಚಿನುತೇ । ಪ್ರಜಾತ್ಯಾ ಇತಿ ಪ್ರ-ಜಾತ್ಯೈ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ವನಸ್ಪತಯಃ ನ ಪ್ರಜಾಯೇರನ್** | ವೃಕ್ಷಗಳೂ ಬೆಳೆಯಲಾರವು. |
| **ಯತ್ ಅಂತರಿಕ್ಷೇ ಚಿನ್ವೀತ** | ಒಮ್ಮೆ ಅಂತರಿಕ್ಷದಲ್ಲಿ ಚಯನವನ್ನು ಮಾಡಿದರೆ |
| **ಅಂತರಿಕ್ಷಮ್ ಶುಚಾ ಅರ್ಪಯೇತ್** | (ಯಜಮಾನನು) ಅಂತರಿಕ್ಷಲೋಕವನ್ನು ಸಂತಾಪ ಯುಕ್ತವನ್ನಾಗಿ ಮಾಡಿದವನಾಗುತ್ತಾನೆ. |
| **ವಯಾಗ್ಂಸಿ ನ ಪ್ರಜಾಯೇರನ್** | (ಆಗ) ಪಕ್ಷಿಗಳು ಹುಟ್ಟುವುದಿಲ್ಲ. |
| **ಯತ್ ದಿವಿ ಚಿನ್ವೀತ** | ಒಮ್ಮೆ ದ್ಯುಲೋಕದಲ್ಲಿ ಚಯನವನ್ನು ಅನುಷ್ಠಿಸಿದರೆ |
| **ದಿವಮ್ ಶುಚಾ ಅರ್ಪಯೇತ್** | (ಯಜಮಾನನು)ದ್ಯುಲೋಕವನ್ನು ತಾಪಯುಕ್ತವನ್ನಾಗಿ ಮಾಡುತ್ತಾನೆ. |
| **ಪರ್ಜನ್ಯಃ ನ ವರ್‌ಷೇತ್** | (ಆಗ) ಮಳೆಯು ಬರುವುದಿಲ್ಲ. |
| **ರುಕ್ಮಮ್ ಉಪದಧಾತಿ** | (ಈ ದೋಷಗಳ ಪರಿಹಾರಕ್ಕಾಗಿ) ಬಂಗಾರವನ್ನು ಅಗ್ನಿಗೆ ಆಧಾರವನ್ನಾಗಿ ಇಡಬೇಕು. |
| **ಹಿರಣ್ಯಮ್ ಅಮೃತಮ್ ವೈ** | ಚಿನ್ನವು ನಾಶರಹಿತವಾದುದಷ್ಟೆ. |
| **ಪ್ರಜಾತ್ಯೈ ಅಮೃತೇ ಏವ ಅಗ್ನಿಮ್ ಚಿನುತೇ** | ಸಸ್ಯಾದಿಗಳ ಪ್ರಕೃಷ್ಟವಾದ ಜನನಕ್ಕಾಗಿ ನಾಶರಹಿತ ವಾದ ಹಿರಣ್ಯದಲ್ಲಿಯೇ ಅಗ್ನಿಯ ಚಯನವನ್ನು ಅನುಷ್ಠಿಸಿದಂತಾಗುತ್ತದೆ. |

ಹಿರಣ್ಮಯಂ ಪುರುಷಮುಪದಧಾತಿ ಯಜಮಾನಲೋಕಸ್ಯ ವಿಧೃತ್ಯೈ ಯದಿಷ್ಟ-
ಕಾಯಾ ಆತೃಣ್ಣಮನೂಪದಧ್ಯಾತ್ಪಶೂನಾಂ ಚ ಯಜಮಾನಸ್ಯ ಚ ಪ್ರಾಣಮಪಿ
ದಧ್ಯಾದ್ದಕ್ಷಿಣತಃ [(೩೭)] ಪ್ರಾಂಚಮುಪ ದಧಾತಿ ದಾಧಾರ ಯಜಮಾನಲೋಕಂ

---

ಹಿರಣ್ಮಯಮ್ । ಪುರುಷಮ್ । ಉಪೇತಿ । ದಧಾತಿ । ಯಜಮಾನಲೋಕಸ್ಯೇತಿ ಯಜಮಾನ-ಲೋಕಸ್ಯ । ವಿಧೃತ್ಯಾ ಇತಿ ವಿ-ಧೃತ್ಯೈ । ಯತ್ । ಇಷ್ಟಕಾಯಾಃ । ಆತೃಣ್ಣಮಿತ್ಯಾ-ತೃಣ್ಣಮ್ । ಅನೂಪದಧ್ಯಾದಿತ್ಯನು-ಉಪದಧ್ಯಾತ್ । ಪಶೂನಾಮ್ । ಚ । ಯಜಮಾನಸ್ಯ । ಚ । ಪ್ರಾಣಮಿತಿ ಪ್ರ-ಅನಮ್ । ಅಪೀತಿ । ದಧ್ಯಾತ್ । ದಕ್ಷಿಣತಃ । (೩೭) । ಪ್ರಾಂಚಮ್ । ಉಪೇತಿ । ದಧಾತಿ । ದಾಧಾರ । ಯಜಮಾನಲೋಕಮಿತಿ ಯಜಮಾನ-ಲೋಕಮ್ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ಹಿರಣ್ಮಯಪುರುಷೋಪಧಾನವಿಧಿ; ಅರ್ಥವಾದ** |
| **ಯಜಮಾನಲೋಕಸ್ಯ ವಿಧೃತ್ಯೈ ಹಿರಣ್ಮಯಮ್ ಪುರುಷಮ್ ಉಪದಧಾತಿ** | ಯಜಮಾನಸ್ಥಾನದ ವಿಶೇಷಧಾರಣಕ್ಕಾಗಿ (**'ಹಿರಣ್ಯಗರ್ಭಃ ಸಮವರ್ತತಾಗ್ರೇ'** ಎಂಬ ಮಂತ್ರದಿಂದ) ಹಿರಣ್ಮಯಪುರುಷನ ಉಪಧಾನವನ್ನು ಮಾಡಬೇಕು. |
| | **ದೇಶವಿಶೇಷದ ವಿಧಾನ; ಫಲ** |
| **ಯತ್ ಇಷ್ಟಕಾಯಾಃ ಆತೃಣ್ಣಮ್ ಅನೂಪದಧ್ಯಾತ್ ಯಜಮಾನಸ್ಯ ಪಶೂನಾಮ್ ಚ ಪ್ರಾಣಮ್ ಚ ಅಪಿದಧ್ಯಾತ್** | ರುಕ್ಮರೂಪವಾಗಿರುವ ಇಷ್ಟಕೆಯ ರಂಧ್ರವನ್ನು ಹಿರಣ್ಮಯಪುರುಷನಿಂದ ಮುಚ್ಚಿದರೆ ಯಜಮಾನನ ಪ್ರಾಣವನ್ನೂ ಪಶುಗಳ ಪ್ರಾಣವನ್ನೂ ಮುಚ್ಚಿಹಾಕಿದಂತಾಗುತ್ತದೆ. |
| **ದಕ್ಷಿಣತಃ ಪ್ರಾಂಚಮ್ ಉಪದಧಾತಿ** | (ಆದ್ದರಿಂದ ರುಕ್ಮರೂಪವಾದ ಇಷ್ಟಕೆಯ) ದಕ್ಷಿಣದಲ್ಲಿ (ಆಹವನೀಯದ ದಕ್ಷಿಣದಲ್ಲಿರುವ ಯಜಮಾನಸ್ಥಾನ ದಲ್ಲಿ) ಪೂರ್ವಮುಖವಾದ ಹಿರಣ್ಮಯಪುರುಷನನ್ನು ಉಪಧಾನ ಮಾಡಬೇಕು. |
| **ಯಜಮಾನಲೋಕಮ್ ದಾಧಾರ** | (ಹೀಗೆ ಮಾಡುವುದರಿಂದ) ಯಜಮಾನನ ಸ್ಥಾನ ವಿಶೇಷದ ಧಾರಣವಾಗುತ್ತದೆ. |

ನ ಪಶೂನಾಂ ಚ ಯಜಮಾನಸ್ಯ ಚ ಪ್ರಾಣಮಪಿ ದಧಾತ್ಯಥೋ ಖಲ್ವಿಷ್ಟಕಾಯಾ ಆತೃಣ್ಣಮನೂಪ ದಧಾತಿ ಪ್ರಾಣಾನಾಮುತ್ಸೃಷ್ಟ್ಯೈ ದ್ರಪ್ಸಶ್ಚಸ್ಕಂದೇತ್ಯಭಿಮೃಶತಿ ಹೋತ್ರಾಸ್ವೇವೈನಂ ಪ್ರತಿಷ್ಠಾಪಯತಿ

---

ನ । ಪಶೂನಾಮ್ । ಚ । ಯಜಮಾನಸ್ಯ । ಚ । ಪ್ರಾಣಮಿತಿ ಪ್ರ-ಅನಮ್ । ಅಪೀತಿ । ದಧಾತಿ । ಅಥೋ ಇತಿ । ಖಲು । ಇಷ್ಟಕಾಯಾಃ । ಆತೃಣ್ಣಮಿತ್ಯಾ-ತೃಣ್ಣಮ್ । ಅನು । ಉಪೇತಿ । ದಧಾತಿ । ಪ್ರಾಣಾನಾಮಿತಿ ಪ್ರ-ಅನಾನಾಮ್ । ಉತ್ಸೃಷ್ಟ್ಯಾ ಇತ್ಯುತ್-ಸೃಷ್ಟ್ಯೈ । ದ್ರಪ್ಸಃ । ಚಸ್ಕಂದ । ಇತಿ । ಅಭೀತಿ । ಮೃಶತಿ । ಹೋತ್ರಾಸು । ಏವ । ಏನಮ್ । ಪ್ರತೀತಿ । ಸ್ಥಾಪಯತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಯಜಮಾನಸ್ಯ ಚ ಪಶೂನಾಮ್ ಚ ಪ್ರಾಣಮ್ ನ ಅಪಿದಧಾತಿ | (ಹೀಗೆ ಅನುಷ್ಠಿಸುವುದರಿಂದ) ಯಜಮಾನನ ಮತ್ತು ಪಶುಗಳ ಶ್ವಾಸವನ್ನು ಮುಚ್ಚಿದಂತಾಗುವುದಿಲ್ಲ. |
| | **ಇನ್ನೊಂದು ಪಕ್ಷ** |
| ಅಥೋ ಖಲು ಇಷ್ಟಕಾಯಾಃ ಆತೃಣ್ಣಮ್ ಅನೂಪದಧಾತಿ | ಅಥವಾ ರುಕ್ಮರೂಪವಾಗಿರುವ ಇಟ್ಟಿಗೆ ರಂಧ್ರವನ್ನು ನೋಡಿಯೇ (ಅದನ್ನು ಲಕ್ಷಿಸಿ) ಪುರುಷೋಪಧಾನವನ್ನು ಮಾಡಬೇಕು. |
| ಪ್ರಾಣಾನಾಮ್ ಉತ್ಸೃಷ್ಟ್ಯೈ | ಇದು ಪ್ರಾಣಗಳ ಸಂಚಾರಕ್ಕೆ ಅವಕಾಶ ಮಾಡಿ ಕೊಟ್ಟಂತಾಗುತ್ತದೆ. |
| | **ಹಿರಣ್ಮಯಪುರುಷಾಭಿಮರ್ಶನ** |
| ದ್ರಪ್ಸಃ ಚಸ್ಕಂದ ಇತಿ ಅಭಿಮೃಶತಿ | 'ದ್ರಪ್ಸಶ್ಚಸ್ಕಂದ' ಎಂಬ ಮಂತ್ರದಿಂದ ಹಿರಣ್ಮಯ ಪುರುಷನ ಅಭಿಮರ್ಶನವನ್ನು ಮಾಡಬೇಕು. |
| ಏನಮ್ ಹೋತ್ರಾಸು ಏವ ಪ್ರತಿ ಸ್ಥಾಪಯತಿ | ಹೀಗೆ ಮಾಡುವುದರಿಂದ ಸಪ್ತಹೋತೃಗಳಲ್ಲಿ/ ಹಿರಣ್ಮಯಪುರುಷನ ಅವಯವಗಳು ಸಿಡಿದು ಉಳಿದ ಏಳು ದಿಕ್ಕುಗಳಲ್ಲಿ ಆ ಪುರುಷನನ್ನು ಪ್ರತಿಷ್ಠೆ ಮಾಡಿದವನಾಗುತ್ತಾನೆ. |

---

**ತಾತ್ಪರ್ಯ:-** ಬಂಗಾರದ ಪುರುಷಾಕಾರವನ್ನು ಮಾಡುವಾಗ ಸಿಡಿದ ಬಂಗಾರದ ಚೂರುಗಳೇ ದ್ರಪ್ಸಗಳು.

ಸ್ರುಚಾವುಪ ದಧಾತ್ಯಾಜ್ಯಸ್ಯ ಪೂರ್ಣಾಂ ಕಾರ್ಷ್ಮರ್ಯಮಯೀಂ ದಧ್ನಃ

ಪೂರ್ಣಾಮೌದುಂಬರೀಮಿಯಂ ವೈ ಕಾರ್ಷ್ಮರ್ಯಮಯ್ಯಸಾವೌದುಂಬರೀಮೇ

ಏವೋಪ ಧತ್ತೇ [(೩೮)] ತೂಷ್ಣೀಮುಪ ದಧಾತಿ

---

ಸ್ರುಚೌ । ಉಪೇತಿ । ದಧಾತಿ । ಆಜ್ಯಸ್ಯ । ಪೂರ್ಣಾಮ್ । ಕಾರ್ಷ್ಮರ್ಯಮಯೀಮಿತಿ ಕಾರ್ಷ್ಮರ್ಯ-ಮಯೀಮ್ ।

ದಧ್ನಃ । ಪೂರ್ಣಾಮ್ । ಔದುಂಬರೀಮ್ । ಇಯಮ್ । ವೈ । ಕಾರ್ಷ್ಮರ್ಯಮಯೀತಿ ಕಾರ್ಷ್ಮರ್ಯ-ಮಯೀ ।

ಅಸೌ । ಔದುಂಬರೀ । ಇಮೇ ಇತಿ । ಏವ । ಉಪೇತಿ । ಧತ್ತೇ । (೩೮) । ತೂಷ್ಣೀಮ್ । ಉಪೇತಿ । ದಧಾತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|

### ಸ್ರುಗುಪಧಾನ

| | |
|---|---|
| **ಸ್ರುಚೌ ಉಪದಧಾತಿ** | ಎರಡು ಸ್ರುಕ್‌ಗಳನ್ನು ಉಪಧಾನ ಮಾಡಬೇಕು. |
| **ಆಜ್ಯಸ್ಯ ಪೂರ್ಣಾಮ್ ಕಾರ್ಷ್ಮರ್ಯಮಯೀಮ್** ಉಪದಧಾತಿ | ತುಪ್ಪದಿಂದ ತುಂಬಿದ ಕಾರ್ಷ್ಮರ್ಯವೃಕ್ಷದಿಂದ ಮಾಡಿದ ಸ್ರುಕ್ಕನ್ನು ಉಪಧಾನ ಮಾಡಬೇಕು. |
| **ದಧ್ನಃ ಪೂರ್ಣಾಮ್ ಔದುಂಬರೀಮ್** ಉಪದಧಾತಿ | ಮೊಸರಿನಿಂದ ತುಂಬಿದ ಅತ್ತಿಯ ಮರದ ಸ್ರುಕ್ ಅನ್ನೂ ಉಪಧಾನ ಮಾಡಬೇಕು. |

### ಸ್ರುಕ್ ಪ್ರಶಂಸೆ

| | |
|---|---|
| **ಇಯಮ್ ವೈ ಕಾರ್ಷ್ಮರ್ಯಮಯೀ** | ಈ ಭೂಲೋಕವು ಕಾರ್ಷರ್ಯಮಯವಾಗಿದೆ. |
| **ಅಸೌ ಔದುಂಬರೀ** | ಔದುಂಬರಿಯು ದ್ಯುಲೋಕರೂಪವಾಗಿದೆ. |
| **ಇಮೇ ಏವ ಉಪ ಧತ್ತೇ** | (ಈ ಸ್ರುಗುಪಧಾನದಿಂದ)ಈ ಎರಡು ಲೋಕಗಳನ್ನೇ ಉಪಧಾನ ಮಾಡಿದಂತಹವನಾಗುತ್ತಾನೆ. |
| **ತೂಷ್ಣೀಮ್ ಉಪದಧಾತಿ** | (ಈ ಸ್ರುಕ್‌ಗಳನ್ನು)ಮಂತ್ರವಿಲ್ಲದೆ ಉಪಧಾನ ಮಾಡಬೇಕು. |

---

ಇವುಗಳನ್ನು-ಯಾವ ದಿಕ್ಕಿನಲ್ಲಿ ಸಿಡಿದಿದೆಯೋ ಅದನ್ನುಳಿದು ಏಳು ದಿಕ್ಕುಗಳಲ್ಲಿ-ಹುತವಾಗಿದೆಯೆಂದು ಭಾವಿಸಬೇಕು. **ಹೋತ್ರಾಃ**=ಹೋತೃ, ಮೈತ್ರಾವರುಣ, ಬ್ರಾಹ್ಮಣಾಚ್ಛಂಸಿ, ನೇಷ್ಟಾ, ಪೋತಾ, ಆಗ್ನೀಧ್ರ ಮತ್ತು ಅಚ್ಛಾವಾಕರೆಂಬ ಯಜ್ಞದ ಋತ್ವಿಜರು/ದ್ರಪ್ಸವು ಸಿಡಿದ ದಿಕ್ಕನ್ನು ಬಿಟ್ಟು ಉಳಿದ ಹೋಮಯೋಗ್ಯವಾದ ಏಳು ದಿಕ್ಕುಗಳು.

ನ ಹೀಮೇ ಯಜುಷಾऽऽಪ್ತುಮರ್ಹತಿ ದಕ್ಷಿಣಾಂ ಕಾಷ್ಮರ್ಯಮಯೀ
ಮುತ್ತರಾಮೌದುಂಬರೀಂ ತಸ್ಮಾದಸ್ಯಾ ಅಸಾವುತ್ತರಾऽऽಜ್ಯಸ್ಯ ಪೂರ್ಣಾಂ
ಕಾಷ್ಮರ್ಯಮಯೀಂ ವಜ್ರೋ ವಾ ಆಜ್ಯಂ ವಜ್ರಃ ಕಾಷ್ಮರ್ಯೋ

---

ನ । ಹಿ । ಇಮೇ ಇತಿ । ಯಜುಷಾ । ಆಪ್ತುಮ್ । ಅರ್ಹತಿ । ದಕ್ಷಿಣಾಮ್ । ಕಾಷ್ಮರ್ಯಮಯೀಮಿತಿ ಕಾಷ್ಮರ್ಯ-ಮಯೀಮ್ । ಉತ್ತರಾಮಿತ್ಯುತ್-ತರಾಮ್ । ಔದುಂಬರೀಮ್ । ತಸ್ಮಾತ್ । ಅಸ್ಯಾಃ । ಅಸೌ । ಉತ್ತರೇತ್ಯುತ್-ತರಾ । ಆಜ್ಯಸ್ಯ । ಪೂರ್ಣಾಮ್ । ಕಾಷ್ಮರ್ಯಮಯೀಮಿತಿ ಕಾಷ್ಮರ್ಯ-ಮಯೀಮ್ । ವಜ್ರಃ । ವೈ । ಆಜ್ಯಮ್ । ವಜ್ರಃ । ಕಾಷ್ಮರ್ಯಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಇಮೇ ಯಜುಷಾ ಆಪ್ತುಮ್ ನ ಹಿ ಅರ್ಹತಿ** | (ಆಮ್ನಾತವಾದ ಮಂತ್ರವಿಲ್ಲದುದರಿಂದ)ಇವುಗಳನ್ನು ಮಂತ್ರದಿಂದ ಉಪಧಾನ ಮಾಡಲಾರನು. |

**ಉಪಧಾನದ ದಿಕ್ಕುಗಳು**

| | |
|---|---|
| **ಕಾಷ್ಮರ್ಯಮಯೀಮ್ ದಕ್ಷಿಣಾಮ್** ಉಪದಧಾತಿ | ಪುರುಷನ ದಕ್ಷಿಣಭಾಗದಲ್ಲಿ ಕಾಷ್ಮರ್ಯವೃಕ್ಷದ ಸ್ರುಕ್ ಅನ್ನು (ಉಪಧಾನ ಮಾಡಬೇಕು) |
| **ಔದುಂಬರೀಮ್ ಉತ್ತರಾಮ್** ಉಪದಧಾತಿ | ಪುರುಷನ ಉತ್ತರಭಾಗದಲ್ಲಿ ಅತ್ತಿಯ ಮರದ ಸ್ರುಕ್ ಅನ್ನು ಉಪಧಾನ ಮಾಡಬೇಕು. |
| **ತಸ್ಮಾತ್ ಅಸ್ಯಾಃ ಅಸೌ ಉತ್ತರಾ** | ಆದುದರಿಂದ ದ್ಯುಲೋಕವು ಭೂಲೋಕಕ್ಕೆ ಉತ್ತರ ಭಾಗದಲ್ಲಿದೆ/ಮೇಲುಭಾಗದಲ್ಲಿದೆ. |

**ತುಂಬಿದ ಸ್ರುಕ್‌ಗಳ ಪ್ರಶಂಸೆ**

| | |
|---|---|
| **ಆಜ್ಯಸ್ಯ ಪೂರ್ಣಾಮ್ ಕಾಷ್ಮರ್ಯ ಮಯೀಮ್ ಉಪದಧಾತಿ** | ತುಪ್ಪದಿಂದ ತುಂಬಿದ ಕಾಷ್ಮರ್ಯವೃಕ್ಷದ ಸ್ರುಕ್ ಅನ್ನು (ಉಪಧಾನ ಮಾಡಬೇಕು) |
| **ಆಜ್ಯಮ್ ವಜ್ರಃ ವೈ** | ಆಜ್ಯವು ವಜ್ರರೂಪವಾಗಿದೆ. |
| **ಕಾಷ್ಮರ್ಯಃ ವಜ್ರಃ** | *ಕಾಷ್ಮರ್ಯಮರವೂ ವಜ್ರರೂಪವಾಗಿದೆ. |

---

* ಶಿವನೆ ಮರ.

ವಜ್ರೇಣೈವ ಯಜ್ಞಸ್ಯ ದಕ್ಷಿಣತೋ ರಕ್ಷಾಗ್ಂಸ್ಯಪಹಂತಿ ದಧ್ನಃ

ಪೂರ್ಣಾಮೌದುಂಬರೀಂ ಪಶವೋ ವೈ ದಧ್ಯೂರ್ಗುದುಂಬರಃ

ಪಶುಷ್ವೇವೋರ್ಜಂ ದಧಾತಿ ಪೂರ್ಣೇ ಉಪದಧಾತಿ ಪೂರ್ಣೇ ಏವೈನ

[ಏವೈನಮ್(೩೯)ಅಮುಷ್ಮಿನ್]ಮಮುಷ್ಮಿಲ್ಲೋಕ ಉಪತಿಷ್ಠೇತೇ

---

ವಜ್ರೇಣ । ಏವ । ಯಜ್ಞಸ್ಯ । ದಕ್ಷಿಣತಃ । ರಕ್ಷಾಗ್ಂಸಿ । ಅಪೇತಿ । ಹಂತಿ । ದಧ್ನಃ । ಪೂರ್ಣಾಮ್ । ಔದುಂಬರೀಮ್ । ಪಶವಃ । ವೈ । ದಧಿ । ಊರ್ಕ್ । ಉದುಂಬರಃ । ಪಶುಷು । ಏವ । ಊರ್ಜಮ್ । ದಧಾತಿ । ಪೂರ್ಣೇ ಇತಿ । ಉಪೇತಿ । ದಧಾತಿ । ಪೂರ್ಣೇ ಇತಿ । ಏವ । ಏನಮ್ । (೩೯) । ಅಮುಷ್ಮಿನ್ನ್ । ಲೋಕೇ । ಉಪೇತಿ । ತಿಷ್ಠೇತೇ ಇತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯಜ್ಞಸ್ಯ ದಕ್ಷಿಣತಃ ರಕ್ಷಾಗ್ಂಸಿ ವಜ್ರೇಣ ಏವ ಅಪಹಂತಿ** | ಯಜ್ಞದ ದಕ್ಷಿಣಭಾಗದಲ್ಲಿರುವ ರಕ್ಷೋಗಣಗಳನ್ನು ವಜ್ರದಿಂದಲೇ ಸಂಹಾರ ಮಾಡಿದಂತಾಗುತ್ತದೆ. |
| **ದಧ್ನಃ ಪೂರ್ಣಾಮ್ ಔದುಂಬರೀಮ್** ಉಪದಧಾತಿ | ಮೊಸರಿನಿಂದ ತುಂಬಿದ ಅತ್ತಿಮರದ ಸ್ರುಕ್ ಅನ್ನು (ಉಪಧಾನ ಮಾಡಬೇಕು) |
| **ಪಶವಃ ದಧಿ ವೈ** | ಪಶುಗಳು ದಧಿಸ್ವರೂಪವಾಗಿವೆ. |
| **ಊರ್ಕ್ ಉದುಂಬರಃ** | ಬಲವು ಉದುಂಬರರೂಪವಾಗಿದೆ. |
| **ಪಶುಷು ಏವ ಊರ್ಜಮ್ ದಧಾತಿ** | (ಇದರಿಂದ) ಪಶುಗಳಲ್ಲಿಯೇ ಬಲವನ್ನು ಸ್ಥಾಪಿಸಿದಂತೆ ಆಗುತ್ತದೆ. |
| **ಪೂರ್ಣೇ ಉಪದಧಾತಿ** | ಸ್ರುಕ್‌ಗಳು ಆಜ್ಯ–ದಧಿಪೂರ್ಣವಾಗಿರಬೇಕು. |
| **ಏನಮ್ ಪೂರ್ಣೇ ಏವ ಅಮುಷ್ಮಿನ್ ಲೋಕೇ ಉಪತಿಷ್ಠೇತೇ** | (ಇದರಿಂದ) ಸ್ವರ್ಗಲೋಕದಲ್ಲಿಯೂ ಅವು ಪೂರ್ಣವಾಗಿಯೇ ಒದಗುತ್ತವೆ. |

---

ಸ್ರುಕ್ಕುಗಳ ಉಪಧಾನದಲ್ಲಿ ದಿಗ್ವಿಶೇಷವೂ, ವೃಕ್ಷವಿಶೇಷವೂ ಮತ್ತು ಸ್ರುಕ್‌ಗಳಲ್ಲಿ ಇರಬೇಕಾದ ವಸ್ತುವಿಶೇಷವೂ ಶ್ರುತಿಯಲ್ಲಿ ಹೇಳಲ್ಪಟ್ಟಿದೆ.

ಆಜ್ಯವು ವಜ್ರವೆಂಬುದಾಗಿ **'ಘೃತಂ ಖಲು ವೈ ದೇವಾ ವಜ್ರಂ ಕೃತ್ವಾ'** ಎಂಬುದಾಗಿ ದೇವತೆಗಳು ಆಜ್ಯವನ್ನೇ ವಜ್ರವನ್ನಾಗಿ ಮಾಡಿಕೊಂಡು ಸೋಮನಿಗೆ ಪ್ರಹಾರ ಮಾಡಿದರು ಎಂದು ಹೇಳಿದೆ.

ವಿರಾಜ್ಯಗ್ನಿಶ್ಚೇತವ್ಯ ಇತ್ಯಾಹುಸ್ಸ್ರುಗ್ವೈ ವಿರಾಡ್ಯತ್ಸ್ರುಚಾವುಪದಧಾತಿ

ವಿರಾಜ್ಯೇವಾಗ್ನಿಂ ಚಿನುತೇ ಯಜ್ಞಮುಖೇಯಜ್ಞಮುಖೇ ವೈ ಕ್ರಿಯಮಾಣೇ

ಯಜ್ಞಗ್ಂ ರಕ್ಷಾಗ್ಂಸಿ ಜಿಘಾಗ್ಂಸಂತಿ ಯಜ್ಞಮುಖಗ್ಂ ರುಕ್ಮೋ

---

ವಿರಾಜೀತಿ ವಿ-ರಾಜಿ । ಅಗ್ನಿಃ । ಚೇತವ್ಯಃ । ಇತಿ । ಆಹುಃ । ಸ್ರುಕ್ । ವೈ । ವಿರಾಡಿತಿ ವಿ-ರಾಟ್ । ಯತ್ । ಸ್ರುಚೌ । ಉಪದಧಾತೀತ್ಯುಪ-ದಧಾತಿ । ವಿರಾಜೀತಿ ವಿ-ರಾಜಿ । ಏವ । ಅಗ್ನಿಮ್ । ಚಿನುತೇ । ಯಜ್ಞಮುಖೇಯಜ್ಞಮುಖ ಇತಿ ಯಜ್ಞಮುಖೇ-ಯಜ್ಞಮುಖೇ । ವೈ । ಕ್ರಿಯಮಾಣೇ । ಯಜ್ಞಮ್ । ರಕ್ಷಾಗ್ಂಸಿ । ಜಿಘಾಗ್ಂಸಂತಿ । ಯಜ್ಞಮುಖಮಿತಿ ಯಜ್ಞ-ಮುಖಮ್ । ರುಕ್ಮಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|

**ಸ್ರುಗುಪಧಾನದ ಪ್ರಶಂಸೆ**

| | |
|---|---|
| **ವಿರಾಜಿ ಅಗ್ನಿಃ ಚೇತವ್ಯಃ ಇತಿ ಆಹುಃ** | ತಿಳಿದವರು ಪ್ರಕಾಶಮಾನವಾಗಿರುವ ಪ್ರದೇಶದಲ್ಲಿಯೇ ಅಗ್ನಿಚಯನವನ್ನು ಮಾಡಬೇಕೆಂದು ಹೇಳುತ್ತಾರೆ. |
| **ಸ್ರುಕ್ ವಿರಾಟ್ ವೈ** | ಸ್ರುಕ್‌ಗಳು ಆಜ್ಯ-ದಧಿಗಳಿಂದ ಪೂರ್ಣವಾಗಿ ಪ್ರಕಾಶಮಾನವಾಗಿವೆ. |
| **ಯತ್ ಸ್ರುಚೌ ಉಪದಧಾತಿ**<br>**ವಿರಾಜಿ ಏವ ಅಗ್ನಿಮ್ ಚಿನುತೇ** | ಸ್ರುಕ್‌ಗಳನ್ನು ಉಪಧಾನ ಮಾಡುವುದೆಂಬುದು ಪ್ರಕಾಶಮಾನವಾಗಿರುವ ಪ್ರದೇಶದಲ್ಲಿಯೇ ಯಜಮಾನನು ಅಗ್ನಿಚಯನವನ್ನು ಮಾಡಿದಂತಾಗುತ್ತದೆ. |

**ರುಕ್ಮದ ಮೇಲೆ ವ್ಯಾಘಾರಣವಿಧಿ; ಅರ್ಥವಾದ**

| | |
|---|---|
| **ಯಜ್ಞಮುಖೇಯಜ್ಞಮುಖೇ**<br>**ಕ್ರಿಯಮಾಣೇ ವೈ** | ಒಂದೊಂದು ಯಜ್ಞಾಂಗದ ಅನುಷ್ಠಾನವು ಮಾಡಲ್ಪಡುತ್ತಿರುವಾಗಲೂ |
| **ರಕ್ಷಾಗ್ಂಸಿ ಯಜ್ಞಮ್ ಜಿಘಾಗ್ಂಸಂತಿ** | ರಕ್ಷೋಗಣಗಳು ಯಜ್ಞವನ್ನು ನಾಶಪಡಿಸಲು ಬಯಸುತ್ತಾರೆ. |
| **ರುಕ್ಮಃ ಯಜ್ಞಮುಖಮ್** | ರುಕ್ಮವನ್ನು ಇಡುವುದೂ ಯಜ್ಞಾಂಗವಾಗಿದೆ. |

ಯದ್ರುಕ್ಮಂ ವ್ಯಾಘಾರಯತಿ ಯಜ್ಞಮುಖಾದೇವ ರಕ್ಷಾಗ್ಂಸ್ಯಪಹಂತಿ

ಪಂಚಭಿರ್ವ್ಯಾಘಾರಯತಿ ಪಾಂಕ್ತೋ ಯಜ್ಞೋ ಯಾವಾನೇವ

ಯಜ್ಞಸ್ತಸ್ಮಾದ್ರಕ್ಷಾಗ್ಂಸ್ಯಪಹಂ–

---

ಯತ್ । ರುಕ್ಮಮ್ । ವ್ಯಾಘಾರಯತೀತಿ ವಿ–ಆಘಾರಯತಿ । ಯಜ್ಞಮುಖಾದಿತಿ ಯಜ್ಞ–ಮುಖಾತ್ । ಏವ । ರಕ್ಷಾಗ್ಂಸಿ । ಅಪೇತಿ । ಹಂತಿ । ಪಂಚಭಿರಿತಿ ಪಂಚ–ಭಿಃ । ವ್ಯಾಘಾರಯತೀತಿ ವಿ–ಆಘಾರಯತಿ । ಪಾಂಕ್ತಃ । ಯಜ್ಞಃ । ಯಾವಾನ್ । ಏವ । ಯಜ್ಞಃ । ತಸ್ಮಾತ್ । ರಕ್ಷಾಗ್ಂಸಿ । ಅಪೇತಿ । ಹಂತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯತ್ ರುಕ್ಮಮ್ ವ್ಯಾಘಾರಯತಿ** | (ಉತ್ತರವೇದಿಯ ದೀರ್ಘವ್ಯಾಘಾರಣದಂತೆ) ರುಕ್ಮದ ಮೇಲೆ ವ್ಯಾಘಾರವನ್ನು (ಧಾರೆಯನ್ನು ಬಿಡುವುದು) ಮಾಡುವುದೆಂಬುದು ಯಾವುದೋ (ಆದರಿಂದ) |
| **ಯಜ್ಞಮುಖಾತ್ ರಕ್ಷಾಗ್ಂಸಿ ಅಪಹಂತಿ ಏವ** | ಯಜಮಾನನು ಯಜ್ಞಾಂಗದ ದೆಸೆಯಿಂದ ರಕ್ಷೋಗಣವನ್ನು ನಾಶಮಾಡುತ್ತಾನೆ. |

ವ್ಯಾಘಾರಣಮಂತ್ರಸಂಖ್ಯೆ

| | |
|---|---|
| **ಪಂಚಭಿಃ ವ್ಯಾಘಾರಯತಿ** | **'ಕೃಣುಷ್ವ ಪಾಜಃ'** ಎಂದು ಆರಂಭಗೊಳ್ಳುವ/'ಸಿಗ್ಂಹೀರಸಿ' ಎಂದು ಆರಂಭಗೊಳ್ಳುವ ಐದು ಮಂತ್ರಗಳಿಂದ ವ್ಯಾಘಾರ ಮಾಡಬೇಕು. |
| **ಯಜ್ಞಃ ಪಾಂಕ್ತಃ** | ಐದು ಹವಿಸ್ಸುಗಳಿಂದ ಯಜ್ಞವು ಪಾಂಕ್ತವಾಗಿದೆ. |
| **ಯಜ್ಞಃ ಯಾವಾನ್ ಏವ** | ಹೀಗಾಗಿ ಯಜ್ಞವು ಎಷ್ಟು ಸಂಖ್ಯಾಪ್ರಮಾಣವುಳ್ಳದ್ದಾಗಿದೆಯೋ |
| **ತಸ್ಮಾತ್ ರಕ್ಷಾಗ್ಂಸಿ ಅಪಹಂತಿ** | ಅದೇ ಸಂಖ್ಯಾಪ್ರಮಾಣವುಳ್ಳ ಮಂತ್ರಗಳಿಂದ ಮಾಡುವ ವ್ಯಾಘಾರಣದಿಂದ ಯಜಮಾನನು ಸಂಪೂರ್ಣವಾಗಿ ರಕ್ಷೋವಿನಾಶವನ್ನು ಮಾಡಿದವನಾಗುತ್ತಾನೆ. |

---

ರಾಕ್ಷಸರನ್ನು ಪ್ರಹರಿಸುವ ಸಾಧನವಾದುದರಿಂದ ಕಾರ್ಷ್ಮರ್ಯವು ವಜ್ರ. **'ತೇ ಕಾರ್ಷ್ಮರ್ಯಮಯಾನ್ ಪರಿಧೀನ್'** ಎಂದು ಕಾರ್ಷ್ಮರ್ಯಮರದಿಂದಾದ ಪರಿಧಿಗಳನ್ನು ಇಟ್ಟರು ಎಂದೂ ಶ್ರುತಿಯಲ್ಲಿ ಇದೆ.

–ತ್ಯಕ್ಷ್ಣಯಾ ವ್ಯಾಘಾರಯತಿ ತಸ್ಮಾದಕ್ಷ್ಣಯಾ ಪಶವೋಽಂಗಾನಿ ಪ್ರಹರಂತಿ

ಪ್ರತಿಷ್ಠಿತ್ಯೈ ॥ ೪೦–7 ॥

[ವನಸ್ಪತಯೋ ದಕ್ಷಿಣತೋ ಧತ್ತ ಏನಂ ತಸ್ಮಾದಕ್ಷ್ಣಯಾ ಪಂಚ ಚ ॥]

---

ಅಕ್ಷ್ಣಯಾ । ವ್ಯಾಘಾರಯತೀತಿ ವಿ–ಆಘಾರಯತಿ । ತಸ್ಮಾತ್ । ಅಕ್ಷ್ಣಯಾ । ಪಶವಃ । ಅಂಗಾನಿ । ಪ್ರೇತಿ । ಹರಂತಿ । ಪ್ರತಿಷ್ಠಿತ್ಯಾ ಇತಿ ಪ್ರತಿ–ಸ್ಥಿತ್ಯೈ ॥ ೪೦ ॥

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ವ್ಯಾಘಾರಣಕ್ರಮ** |
| **ಅಕ್ಷ್ಣಯಾ ವ್ಯಾಘಾರಯತಿ** | ದಕ್ಷಿಣಭುಜದ ಕೋಣದಿಂದ ಉತ್ತರಕೋಣದವರೆಗೂ, ದಕ್ಷಿಣಕೋಣದಿಂದ ಉತ್ತರಭುಜದ ಕೋಣದವರೆಗೂ, ಅಡ್ಡಲಾಗಿ ವ್ಯಾಘಾರ ಮಾಡಬೇಕು. |
| **ತಸ್ಮಾತ್ ಪಶವಃ ಅಕ್ಷ್ಣಯಾ ಅಂಗಾನಿ ಪ್ರಹರಂತಿ ಪ್ರತಿಷ್ಠಿತ್ಯೈ** | ಹೀಗೆಯೇ ಪಶುಗಳು ವಕ್ರವಾಗಿಯೇ (ಬಲಗಾಲನ್ನು ಮುಂದಿಟ್ಟು ಹಿಂದಿನ ಎಡಗಾಲನ್ನು ಮುಂದಿಡುತ್ತವೆ) ಹೆಜ್ಜೆ ಇಡುವುದರಿಂದ ಸ್ಥಿರವಾಗಿ ನಿಲ್ಲುವುದ ಕ್ಕಾಗಿ ಆಗುತ್ತದೆ. |

---

ಯಜ್ಞವು ಧಾನಾ, ಕರಂಭ, ಪರಿವಾಪ, ಪುರೋಡಾಶ ಹಾಗೂ ಪಯಸ್ಯಾ ಎಂಬ ಐದು ಹವಿಸ್ಸುಗಳಿಂದ ಪಾಂಕ್ತವೆನಿಸಿದೆ. [ತೈ. ಸಂ. 6.5.11)

## ॥ ಅಷ್ಟಮೋಽನುವಾಕಃ ॥

ಸ್ವಯಮಾತೃಣ್ಣಾಮುಪ ದಧಾತೀಯಂ ವೈ ಸ್ವಯಮಾತೃಣ್ಣೇಮಾಮೇವೋಪ

ಧತ್ತೇಽಶ್ವಮುಪಘ್ರಾಪಯತಿ

---

ಸ್ವಯಮಾತೃಣ್ಣಾಮಿತಿ ಸ್ವಯಮ್-ಆತೃಣ್ಣಾಮ್ । ಉಪೇತಿ । ದಧಾತಿ । ಇಯಮ್ । ವೈ । ಸ್ವಯಮಾತೃಣ್ಣೇತಿ ಸ್ವಯಮ್-ಆತೃಣ್ಣಾ । ಇಮಾಮ್ । ಏವ । ಉಪೇತಿ । ಧತ್ತೇ । ಅಶ್ವಮ್ । ಉಪೇತಿ । ಘ್ರಾಪಯತಿ ।

---

ಈ ಎಂಟನೆಯ ಅನುವಾಕದಲ್ಲಿ ತಾನೇ ಸ್ವತಃ ರಂಧ್ರವನ್ನು ಹೊಂದಿರುವ ಸ್ವಯಮಾತೃಣ್ಣೆಗಳ (ಕಲ್ಲುಗಳ) ಉಪಧಾನಾದಿಗಳನ್ನು ಹೇಳಲಾಗುತ್ತದೆ.

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ಸ್ವಯಮಾತೃಣ್ಣೇಷ್ಟಕೋಪಧಾನವಿಧಿ** |
| **ಸ್ವಯಮಾತೃಣ್ಣಾಮ್ ಉಪದಧಾತಿ** | (ಅಗ್ನಿಚಯನವನ್ನು ಮಾಡುವ ಯಜಮಾನನು) ಸ್ವಯಮಾತೃಣ್ಣೇಷ್ಟಕೆಯನ್ನು ಉಪಧಾನ ಮಾಡಬೇಕು. |
| **ಇಯಮ್ ವೈ ಸ್ವಯಮಾತೃಣ್ಣಾ** | ಈ ಸ್ವಯಮಾತೃಣ್ಣೇಷ್ಟಕೆಯು ಭೂರೂಪವಾಗಿದೆ. |
| **ಇಮಾಮ್ ಏವ ಉಪಧತ್ತೇ** | (ಇದರಿಂದ)ಯಜಮಾನನು ಭೂಮಿಯನ್ನೇ ಉಪಧಾನ ಮಾಡಿದಂತಹವನಾಗುತ್ತಾನೆ. |
| | **ಅಶ್ವದ ಉಪಘ್ರಾಪಣ** |
| **ಅಶ್ವಮ್ ಉಪಘ್ರಾಪಯತಿ** | ಸ್ವಯಮಾತೃಣ್ಣೇಷ್ಟಕೆಯನ್ನು ಕುದುರೆಯು ಆಘ್ರಾಣಿಸುವಂತೆ ಮಾಡಬೇಕು. |

ಪ್ರಾಣಮೇವಾಸ್ಯಾಂ ದಧಾತ್ಯಥೋ ಪ್ರಾಜಾಪತ್ಯೋ ವಾ ಅಶ್ವಃ
ಪ್ರಜಾಪತಿನೈವಾಗ್ನಿಂ ಚಿನುತೇ ಪ್ರಥಮೇಷ್ಟಕೋಪಧೀಯಮಾನಾ ಪಶೂನಾಂ ಚ
ಯಜಮಾನಸ್ಯ ಚ ಪ್ರಾಣಮಪಿ ದಧಾತಿ ಸ್ವಯಮಾತೃಣ್ಣಾ ಭವತಿ
ಪ್ರಾಣಾನಾಮುತ್ಸೃಷ್ಟ್ಯೈ

---

ಪ್ರಾಣಮಿತಿ ಪ್ರ-ಅನಮ್ । ಏವ । ಅಸ್ಯಾಮ್ । ದಧಾತಿ । ಅಥೋ ಇತಿ । ಪ್ರಾಜಾಪತ್ಯ ಇತಿ ಪ್ರಾಜಾ-ಪತ್ಯಃ । ವೈ । ಅಶ್ವಃ । ಪ್ರಜಾಪತಿನೇತಿ ಪ್ರಜಾ-ಪತಿನಾ । ಏವ । ಅಗ್ನಿಮ್ । ಚಿನುತೇ । ಪ್ರಥಮಾ । ಇಷ್ಟಕಾ । ಉಪಧೀಯಮಾನೇತ್ಯುಪ-ಧೀಯಮಾನಾ । ಪಶೂನಾಮ್ । ಚ । ಯಜಮಾನಸ್ಯ । ಚ । ಪ್ರಾಣಮಿತಿ ಪ್ರ-ಅನಮ್ । ಅಪೀತಿ । ದಧಾತಿ । ಸ್ವಯಮಾತೃಣ್ಣೇತಿ ಸ್ವಯಮ್-ಆತೃಣ್ಣಾ । ಭವತಿ । ಪ್ರಾಣಾನಾಮಿತಿ ಪ್ರ-ಅನಾನಾಮ್ । ಉತ್ಸೃಷ್ಟ್ಯೈ ಇತ್ಯುತ್-ಸೃಷ್ಟ್ಯೈ ॥

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಅಸ್ಯಾಮ್ ಪ್ರಾಣಮ್ ಏವ ದಧಾತಿ** | (ಹೀಗೆ ಮಾಡುವುದರಿಂದ) ಸ್ವಯಮಾತೃಣ್ಣೇಷ್ಟಕೆಯಲ್ಲಿ ಪ್ರಾಣವನ್ನೇ ಸ್ಥಾಪಿಸಿದವನಾಗುತ್ತಾನೆ. |
| **ಅಥೋ ಅಶ್ವಃ ಪ್ರಾಜಾಪತ್ಯಃ ವೈ** | ಮತ್ತು ಅಶ್ವವು ಪ್ರಜಾಪತಿದೇವತಾಕವಾದುದು. |
| **ಪ್ರಜಾಪತಿನಾ ಏವ ಅಗ್ನಿಮ್ ಚಿನುತೇ** | (ಇದರಿಂದ)ಪ್ರಜಾಪತಿಯಿಂದಲೇ ಅಗ್ನಿಚಯನವನ್ನು ಅನುಷ್ಠಿಸಿದವನಾಗುತ್ತಾನೆ. |

ಸ್ವತಃ ಛಿದ್ರವಾಗಿರುವುದರ ಪ್ರಶಂಸೆ

| | |
|---|---|
| **ಉಪಧೀಯಮಾನಾ ಪ್ರಥಮಾ ಇಷ್ಟಕಾ ಪಶೂನಾಮ್ ಚ ಯಜಮಾನಸ್ಯ ಚ ಪ್ರಾಣಮ್ ಅಪಿ ದಧಾತಿ** | ಮೊದಲು ಉಪಧಾನ ಮಾಡಲ್ಪಡುವ ಇಷ್ಟಕೆಯು ಪಶುಗಳ ಮತ್ತು ಯಜಮಾನನ ಪ್ರಾಣವನ್ನು ಮುಚ್ಚಿ ಹಾಕುತ್ತದೆ. |
| **ಪ್ರಾಣಾನಾಮ್ ಉತ್ಸೃಷ್ಟ್ಯೈ ಸ್ವಯಮಾತೃಣ್ಣಾ ಭವತಿ** | ಪ್ರಾಣಗಳ ಬಿಡುಗಡೆಗಾಗಿ (ಸುಗಮಸಂಚಾರಕ್ಕಾಗಿ) ಈ ಸ್ವಯಮಾತೃಣ್ಣೇಷ್ಟಕೆಯು ಇರುತ್ತದೆ. |

ಅಥೋ ಸುವರ್ಗಸ್ಯ ಲೋಕಸ್ಯಾನುಖ್ಯಾತ್ಯಾ ಅಗ್ನಾವಗ್ನಿಶ್ಚೇತವ್ಯ ಇತ್ಯಾಹುರೇಷ ವಾ[ವೈ(೪೧)]ಅಗ್ನಿರ್ವೈಶ್ವಾನರೋ ಯದ್ಬ್ರಾಹ್ಮಣಸ್ತಸ್ಮೈ ಪ್ರಥಮಾಮಿಷ್ಟಕಾಂ ಯಜುಷ್ಕೃತಾಂ ಪ್ರಯಚ್ಛೇತ್ತಾಂ ಬ್ರಾಹ್ಮಣಶ್ಚೋಪದಧ್ಯಾತಾಮಗ್ನಾವೇವ ತದಗ್ನಿಂ ಚಿನುತ

---

ಅಥೋ ಇತಿ । ಸುವರ್ಗಸ್ಯೇತಿ ಸುವಃ-ಗಸ್ಯ । ಲೋಕಸ್ಯ । ಅನುಖ್ಯಾತ್ಯಾ ಇತ್ಯನು-ಖ್ಯಾತ್ಯೈ । ಅಗ್ನೌ । ಅಗ್ನಿಃ । ಚೇತವ್ಯಃ । ಇತಿ । ಆಹುಃ । ಏಷಃ । ವೈ । (೪೧) । ಅಗ್ನಿಃ । ವೈಶ್ವಾನರಃ । ಯತ್ । ಬ್ರಾಹ್ಮಣಃ । ತಸ್ಮೈ । ಪ್ರಥಮಾಮ್ । ಇಷ್ಟಕಾಮ್ । ಯಜುಷ್ಕೃತಾಮಿತಿ ಯಜುಃ-ಕೃತಾಮ್ । ಪ್ರೇತಿ । ಯಚ್ಛೇತ್ । ತಾಮ್ । ಬ್ರಾಹ್ಮಣಃ । ಚ । ಉಪೇತಿ । ದಧ್ಯಾತಾಮ್ । ಅಗ್ನೌ । ಏವ । ತತ್ । ಅಗ್ನಿಮ್ । ಚಿನುತೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಅಥೋ ಸುವರ್ಗಸ್ಯ ಲೋಕಸ್ಯ ಅನುಖ್ಯಾತ್ಯೈ** | ಅಲ್ಲದೆ ಸ್ವರ್ಗಲೋಕದ ಪ್ರಸಿದ್ಧಿಗೂ ಕಾರಣವಾಗುತ್ತದೆ. |

**ಅಗ್ನಿಯಲ್ಲೇ ಅಗ್ನಿಚಯನ/ಉಪಾಯ**

| | |
|---|---|
| **ಅಗ್ನೌ ಅಗ್ನಿಃ ಚೇತವ್ಯಃ ಇತಿ ಆಹುಃ** | ಬಲ್ಲವರು ಅಗ್ನಿಯನ್ನೇ ಆಧಾರವನ್ನಾಗಿಸಿ ಅಗ್ನಿಚಯನವನ್ನು ಅನುಷ್ಠಿಸಬೇಕೆಂದು ಹೇಳುವರು. |
| **ಯತ್ ಬ್ರಾಹ್ಮಣಃ ಏಷಃ ವೈಶ್ವಾನರಃ ಅಗ್ನಿಃ ವೈ** | ಈ ಬ್ರಾಹ್ಮಣನೆಂಬುವನು ವೈಶ್ವಾನರಾಗ್ನಿರೂಪನು. |
| **ತಸ್ಮೈ ಪ್ರಥಮಾಮ್ ಯಜುಷ್ಕೃತಾಮ್ ಇಷ್ಟಕಾಮ್ ಪ್ರಯಚ್ಛೇತ್** | ಅಧ್ವರ್ಯುವು ಆ ಬ್ರಾಹ್ಮಣನಿಗೆ **'ಧ್ರುವಾಸಿ ಧರುಣಾ'** ಎಂಬ ಯಜುರ್ಮಂತ್ರದಿಂದ ಸಂಸ್ಕರಿಸಲ್ಪಟ್ಟ ಸ್ವಯ ಮಾತೃಣ್ಣೇಷ್ಟಕೆಯನ್ನು ಕೊಡಬೇಕು. |
| **ತಾಮ್ ಬ್ರಾಹ್ಮಣಃ ಚ ಉಪದಧ್ಯಾತಾಮ್** | ಬಳಿಕ ಅಧ್ವರ್ಯುವೂ ಆ ಬ್ರಾಹ್ಮಣನೂ ಕೂಡಿ ಆ ಇಷ್ಟಕೆಯನ್ನು ಉಪಧಾನ ಮಾಡಬೇಕು. |
| **ತತ್ ಅಗ್ನೌ ಏವ ಅಗ್ನಿಮ್ ಚಿನುತೇ** | ಆದುದರಿಂದ (ಬ್ರಾಹ್ಮಣನು ಅಗ್ನಿರೂಪನಾದುದರಿಂದ-ಅವನೂ ಉಪಧಾನ ಮಾಡುವುದರಿಂದ)ಅಗ್ನಿಯಲ್ಲಿಯೇ ಅಗ್ನಿಚಯನವನ್ನು ಮಾಡಿದಂತಾಗುತ್ತದೆ. |

ಈಶ್ವರೋ ವಾ ಏಷ ಆರ್ತಿಮಾರ್ತೋರ್ಯೋಽವಿದ್ವಾನಿಷ್ಟಕಾಮುಪ ದಧಾತಿ ತ್ರೀನ್, ವರಾನ್ದದ್ಯಾತ್ತ್ರಯೋ ವೈ ಪ್ರಾಣಾಃ ಪ್ರಾಣಾನಾಗ್ಂ ಸ್ಪೃತ್ಯೈ ದ್ವಾವೇವ ದೇಯೌ ದ್ವೌ ಹಿ ಪ್ರಾಣಾ–

---

ಈಶ್ವರಃ । ವೈ । ಏಷಃ । ಆರ್ತಿಮ್ । ಆರ್ತೋರಿತ್ಯಾ–ಅರ್ತೋಃ । ಯಃ । ಅವಿದ್ವಾನ್ । ಇಷ್ಟಕಾಮ್ । ಉಪದಧಾತೀತ್ಯುಪ–ದಧಾತಿ । ತ್ರೀನ್ । ವರಾನ್ । ದದ್ಯಾತ್ । ತ್ರಯಃ । ವೈ । ಪ್ರಾಣಾ ಇತಿ ಪ್ರ–ಅನಾಃ । ಪ್ರಾಣಾನಾಮಿತಿ ಪ್ರ–ಅನಾನಾಮ್ । ಸ್ಪೃತ್ಯೈ । ದ್ವೌ । ಏವ । ದೇಯೌ । ದ್ವೌ । ಹಿ । ಪ್ರಾಣಾವಿತಿ ಪ್ರ–ಅನೌ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಗೋದಾನರೂಪಪ್ರಾಯಶ್ಚಿತ್ತ** | |
| ಯಃ ಅವಿದ್ವಾನ್ ಇಷ್ಟಕಾಮ್ ಉಪ ದಧಾತಿ | (ಹೀಗೆ) ವಿದ್ವಾಂಸನಲ್ಲದ ಬ್ರಾಹ್ಮಣನು ಇಷ್ಟಕೋಪಧಾನವನ್ನು ಮಾಡಿದರೆ |
| ಏಷಃ ಆರ್ತಿಮ್ ಆರ್ತೋಃ ಈಶ್ವರಃ ವೈ | ಅವನು ಪೀಡೆಯನ್ನು ಹೊಂದುವನು. |
| **ಗೋವುಗಳ ಸಂಖ್ಯೆ** | |
| ತ್ರೀನ್ ವರಾನ್ ದದ್ಯಾತ್* | (ಈ ದೋಷಪರಿಹಾರಕ್ಕಾಗಿ)ಅಧ್ವರ್ಯುವಿಗೆ ಮೂರು ಗೋವುಗಳನ್ನು ಕೊಡಬೇಕು. |
| ಪ್ರಾಣಾಃ ತ್ರಯಃ ವೈ | ಪ್ರಾಣ–ಅಪಾನ–ವ್ಯಾನಗಳೆಂದು ಪ್ರಾಣಗಳು ಮೂರಷ್ಟೆ. |
| ಪ್ರಾಣಾನಾಮ್ ಸ್ಪೃತ್ಯೈ | ಈ ಗೋದಾನವು ಪ್ರಾಣಗಳಿಗೆ ಪ್ರೀತಿಯುಂಟಾಗುವುದಕ್ಕಾಗಿ ಆಗುತ್ತದೆ. |
| ದ್ವೌ ಏವ ದೇಯೌ ದ್ವೌ ಹಿ ಪ್ರಾಣೌ | (ಅಥವಾ) (ವ್ಯಾನವನ್ನು ಈ ಎರಡರಲ್ಲಿಯೇ ಸೇರಿಸಿಕೊಂಡಾಗ) ಪ್ರಾಣ–ಅಪಾನಗಳೆಂದು ಎರಡು ಪ್ರಾಣಗಳು ಮುಖ್ಯವಾದುದರಿಂದ ಎರಡು ಗೋವುಗಳನ್ನೇ ಕೊಡಬೇಕು. |

---

* **ವರಾಃ**=ಚತುರ್ವರ್ಷಾ ಗೌಃ=ನಾಲ್ಕು ವರ್ಷ ವಯಸ್ಸಿನ ಹಸು –**ಭ. ಭಾ. ಭಾ.**
**'ಗೌರ್ವೈ ವರಃ'** ಎಂಬ ಮಂತ್ರವಿದೆ. ಹೀಗಾಗಿ **ವರಶಬ್ದೇನ ಶ್ರೇಷ್ಠತ್ವಾತ್ ಗೌರುಚ್ಯತೇ ।** ಶ್ರೇಷ್ಠವಾದುದರಿಂದ ವರವೆಂದರೆ ಹಸು.–**ಸಾ. ಭಾ.**

–ವೇಕ ಏವ ದೇಯ ಏಕೋ ಹಿ ಪ್ರಾಣಃ ಪಶು [ಪಶುಃ(೪೨)ವಾ]ರ್ವಾ ಏಷ

ಯದಗ್ನಿರ್ನ ಖಲು ವೈ ಪಶವ ಆಯವಸೇ ರಮಂತೇ

ದೂರ್ವೇಷ್ಟಕಾಮುಪದಧಾತಿ ಪಶೂನಾಂ ಧೃತ್ಯೈ ದ್ವಾಭ್ಯಾಂ ಪ್ರತಿಷ್ಠಿತ್ಯೈ

---

ಏಕಃ । ಏವ । ದೇಯಃ । ಏಕಃ । ಹಿ । ಪ್ರಾಣ ಇತಿ ಪ್ರ–ಅನಃ । ಪಶುಃ । (೪೨) । ವೈ । ಏಷಃ । ಯತ್ । ಅಗ್ನಿಃ । ನ । ಖಲು । ವೈ । ಪಶವಃ । ಆಯವಸೇ । ರಮಂತೇ । ದೂರ್ವೇಷ್ಟಕಾಮಿತಿ ದೂರ್ವಾ–ಇಷ್ಟಕಾಮ್ । ಉಪೇತಿ । ದಧಾತಿ । ಪಶೂನಾಮ್ । ಧೃತ್ಯೈ । ದ್ವಾಭ್ಯಾಮ್ । ಪ್ರತಿಷ್ಠಿತ್ಯಾ ಇತಿ ಪ್ರತಿ–ಸ್ಥಿತ್ಯೈ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಏಕಃ ಏವ ದೇಯಃ ಪ್ರಾಣಃ ಏಕಃ ಹಿ** | (ಅಥವಾ) (ವ್ಯಾನ–ಅಪಾನಗಳನ್ನು ಪ್ರಾಣದಲ್ಲಿಯೇ ಒಳಪಡಿಸಿದಾಗ)ಪ್ರಾಣವು ಒಂದೇ. ಹೀಗಾಗಿ ಒಂದೇ ಗೋವನ್ನು ಕೊಡಬೇಕು(ಇದರಿಂದ ಮುಖ್ಯ ಪ್ರಾಣದ ತೃಪ್ತಿಯಾಗುತ್ತದೆ.) |

**ದೂರ್ವೇಷ್ಟಕೋಪಧಾನವಿಧಿ; ಪ್ರಶಂಸೆ**

| | |
|---|---|
| **ಯತ್ ಅಗ್ನಿಃ ಏಷಃ ಪಶುಃ ವೈ** | ಪಶುಪ್ರಾಪ್ತಿಕಾರಣವಾದ ಅಗ್ನಿಯು ಪಶುವೇ ಆಗಿದೆ. |
| **ಪಶವಃ ವೈ ಆಯವಸೇ ನ ರಮಂತೇ ಖಲು** | ಪಶುಗಳು ಸ್ವಲ್ಪವೇ ಹುಲ್ಲಿರುವ ಪ್ರದೇಶವನ್ನು ಅಪೇಕ್ಷಿಸುವುದಿಲ್ಲವಷ್ಟೆ. |
| **ಪಶೂನಾಮ್ ಧೃತ್ಯೈ** | ಪಶುಗಳು ಸ್ಥಿರವಾಗಿ ಇರುವುದಕ್ಕಾಗಿ |
| **ದೂರ್ವೇಷ್ಟಕಾಮ್ ಉಪದಧಾತಿ** | (ಮಣ್ಣು ಹೆಂಟೆಯಿಂದ ಕೂಡಿರುವ ಹಸಿರಾಗಿರುವ ಅಗ್ರವಿರುವ) ಗರಿಕೆಯ ಪೊದೆಯನ್ನು ಉಪಧಾನ ಮಾಡಬೇಕು. |
| **ದ್ವಾಭ್ಯಾಮ್ ಪ್ರತಿಷ್ಠಿತ್ಯೈ** | ('ಕಾಂಡಾತ್ಕಾಂಡಾತ್...ಪರಿ' 'ಏವಾನೋ ದೂರ್ವೇಚ' ಎಂಬ) ಎರಡು ಮಂತ್ರಗಳಿಂದ ದೂರ್ವೇಷ್ಟಕೋಪಧಾನವನ್ನು ಮಾಡಬೇಕು. ಇದರಿಂದ ಪಶುಗಳು ದೃಢವಾಗಿರುವಂತಾಗುತ್ತದೆ. |

ಕಾಂಡಾತ್ಕಾಂಡಾತ್ಪ್ರರೋಹಂತೀತ್ಯಾಹ ಕಾಂಡೇನ ಕಾಂಡೇನ ಹ್ಯೇಷಾ ಪ್ರತಿತಿಷ್ಠತ್ಯೇವಾ ನೋ ದೂರ್ವೇ ಪ್ರತನು ಸಹಸ್ರೇಣ ಶತೇನ ಚೇತ್ಯಾಹ ಸಾಹಸ್ರಃ ಪ್ರಜಾಪತಿಃ ಪ್ರಜಾಪತೇರಾಪ್ತ್ಯೈ೩೮

---

ಕಾಂಡಾತ್ಕಾಂಡಾದಿತಿ ಕಾಂಡಾತ್-ಕಾಂಡಾತ್ । ಪ್ರರೋಹಂತೀತಿ ಪ್ರ-ರೋಹಂತೀ । ಇತಿ । ಆಹ । ಕಾಂಡೇನ ಕಾಂಡೇನೇತಿ ಕಾಂಡೇನ-ಕಾಂಡೇನ । ಹಿ । ಏಷಾ । ಪ್ರತಿತಿಷ್ಠತೀತಿ ಪ್ರತಿ-ತಿಷ್ಠತಿ । ಏವಾ । ನಃ । ದೂರ್ವೇ । ಪ್ರೇತಿ । ತನು । ಸಹಸ್ರೇಣ । ಶತೇನ । ಚ । ಇತಿ । ಆಹ । ಸಾಹಸ್ರಃ । ಪ್ರಜಾಪತಿರಿತಿ ಪ್ರಜಾ-ಪತಿಃ । ಪ್ರಜಾಪತೇರಿತಿ ಪ್ರಜಾ-ಪತೇಃ । ಆಪ್ತ್ಯೈ೩೮ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ಮಂತ್ರದ ವಿವರಣೆ** |
| **ಕಾಂಡಾತ್ಕಾಂಡಾತ್ ಪ್ರರೋಹಂತೀ ಇತಿ ಆಹ** | 'ಕಾಂಡಾತ್ಕಾಂಡಾತ್ ಪ್ರರೋಹಂತೀ' ಎಂಬ ಮಂತ್ರದ ಈ ಭಾಗವು ಹೀಗೆ ಹೇಳುತ್ತದೆ. |
| **ಏಷಾ ಕಾಂಡೇನಕಾಂಡೇನ ಹಿ ಪ್ರತಿತಿಷ್ಠತಿ** | ಕಾಂಡ ಕಾಂಡಗಳಿಂದ ಗರಿಕೆಯು ಬೆಳೆಯುವುದಷ್ಟೆ. |
| **ಏವಾ ನೋ ದೂರ್ವೇ ಪ್ರತನು ಸಹಸ್ರೇಣ ಶತೇನ ಚ ಇತಿ ಆಹ** | 'ಎಲೈ! ದೂರ್ವಾಸ್ತಂಬವೇ! ನೀನು ನೂರರಷ್ಟಾಗಿ, ಸಾವಿರದಷ್ಟಾಗಿ ವೃದ್ಧಿ ಹೊಂದು' ಎಂದು ಈ ಎರಡನೆಯ ಮಂತ್ರವು ಹೇಳುತ್ತದೆ. |
| **ಪ್ರಜಾಪತಿಃ ಸಾಹಸ್ರಃ** | ಸಹಸ್ರಸಹಸ್ರಸಂಖ್ಯಾಕಪ್ರಾಣಿಗಳನ್ನು ಉತ್ಪಾದಿಸುವ ಪ್ರಜಾಪತಿಯು ಸಾಹಸ್ರನಾಗಿರುತ್ತಾನೆ. |
| **ಪ್ರಜಾಪತೇಃ ಆಪ್ತ್ಯೈ೩೮** | ಈ ಮಂತ್ರೋಚ್ಚಾರಣದಿಂದ ಪ್ರಜಾಪತಿದೇವನ ಅನುಗ್ರಹವುಂಟಾಗುತ್ತದೆ. ಆದಕ್ಕಾಗಿ ಈ ಮಂತ್ರವನ್ನು ಹೇಳಬೇಕು. |

---

**ತಾತ್ಪರ್ಯ:**-ಸ್ವಯಮಾತೃಣ್ಣೇಷ್ಟಕೆಯು ಪುರುಷನಿರ್ಮಿತವಲ್ಲದಿದ್ದರೂ ಇಷ್ಟಕೆಯೆಂದು ವ್ಯವಹಾರವಿದೆ. ಮುಖ್ಯವಾದುದರಿಂದ ಉಪಧಾನದ ಅನಂತರ ಶ್ವಾಸನಿರೋಧವನ್ನುಂಟುಮಾಡದಿರುವುದರಿಂದ ಪ್ರಾಥಮ್ಯವಿದೆ.

ದೇವಲಕ್ಷ್ಮಂ ವೈ ತ್ರ್ಯಾಲಿಖಿತಾ ತಾಮುತ್ತರಲಕ್ಷ್ಮಾಣಂ ದೇವಾ

ಉಪಾದಧತಾಧರಲಕ್ಷ್ಮಾಣಮಸುರಾ ಯಂ[ಯಮ್(೪೩)]ಕಾಮಯೇತ

ವಸೀಯಾನ್ಥ್ಸ್ಯಾದಿತ್ಯುತ್ತರಲಕ್ಷ್ಮಾಣಂ ತಸ್ಯೋಪದಧ್ಯಾ-

---

ದೇವಲಕ್ಷ್ಮಮಿತಿ ದೇವ-ಲಕ್ಷ್ಮಮ್ । ವೈ । ತ್ರ್ಯಾಲಿಖಿತೇತಿ ತ್ರಿ-ಆಲಿಖಿತಾ । ತಾಮ್ । ಉತ್ತರಲಕ್ಷ್ಮಾಣ

ಮಿತ್ಯುತ್ತರ-ಲಕ್ಷ್ಮಾಣಮ್ । ದೇವಾಃ । ಉಪೇತಿ । ಅದಧತ । ಅಧರಲಕ್ಷ್ಮಾಣಮಿತ್ಯಧರ-ಲಕ್ಷ್ಮಾಣಮ್ ।

ಅಸುರಾಃ । ಯಮ್ । (೪೩) । ಕಾಮಯೇತ । ವಸೀಯಾನ್ । ಸ್ಯಾತ್ । ಇತಿ । ಉತ್ತರಲಕ್ಷ್ಮಾಣಮಿತ್ಯುತ್ತರ-

ಲಕ್ಷ್ಮಾಣಮ್ । ತಸ್ಯ । ಉಪೇತಿ । ದಧ್ಯಾತ್ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಅಷಾಢೇಷ್ಟಕೋಪಧಾನವಿಧಿ** | |
| **ತ್ರ್ಯಾಲಿಖಿತಾ ದೇವಲಕ್ಷ್ಮಮ್ ವೈ** | (ಇಷ್ಟಕೆಯು ಹಸಿಯಾಗಿರುವಾಗ ತ್ರಿಪುಂಡ್ರದಂತೆ ಮೂರು ರೇಖೆಗಳನ್ನು ಮಾಡಿದ ಇಷ್ಟಕೆಯು ತ್ರ್ಯಾಲಿಖಿತಾ) ಅದರಲ್ಲಿ ಇರುವ ತ್ರಿಪುಂಡ್ರದಂತಿರುವ ರೇಖೆಯನ್ನು ಹೊಂದಿರುವುದು ದೇವತೆಗಳ ಚಿಹ್ನೆ. ಅಂತಹ ಇಷ್ಟಕೆಗೆ 'ಅಷಾಢಾ' ಎಂದು ಹೆಸರು. |
| **ಉತ್ತರಲಕ್ಷ್ಮಾಣಮ್ ತಾಮ್ ದೇವಾಃ ಉಪಾದಧತ** | ತ್ರ್ಯಾಲಿಖಿತವೆಂಬ ಆ ಅಷಾಢೇಷ್ಟಕವನ್ನು ಮೇಲ್ಭಾಗದಲ್ಲಿ ಚಿಹ್ನೆಯು ಇರುವಂತೆ ದೇವತೆಗಳು ಉಪಧಾನ ಮಾಡಿದರು. |
| **ಅಧರಲಕ್ಷ್ಮಾಣಮ್ ಅಸುರಾಃ** ಉಪಾದಧತ | ಅಸುರರು ಕೆಳಭಾಗದಲ್ಲಿ ಚಿಹ್ನೆಯು ಇರುವಂತೆ ಉಪಧಾನವನ್ನು ಮಾಡಿದರು. |
| **ಅಷಾಢೇಷ್ಟಕೆಯ ಪ್ರಶಸ್ತಿಯ ರೂಪ** | |
| **ಯಮ್ ಕಾಮಯೇತ ವಸೀಯಾನ್ ಸ್ಯಾತ್ ಇತಿ** | ಅಧ್ವರ್ಯುವು ಯಾವ ಯಜಮಾನನನ್ನು ಶ್ರೀಮಂತನಾಗಬೇಕೆಂದು ಭಾವಿಸುತ್ತಾನೆಯೋ |
| **ತಸ್ಯ ಉತ್ತರಲಕ್ಷ್ಮಾಣಮ್ ಉಪದಧ್ಯಾತ್** | ಆ ಯಜಮಾನನಿಗಾಗಿ ಮೇಲ್ಭಾಗದಲ್ಲಿ ಚಿಹ್ನೆಯು ಇರುವ ತ್ರ್ಯಾಲಿಖಿತವಾದ ಇಷ್ಟಕೆಯನ್ನು ಉಪಧಾನ ಮಾಡಬೇಕು. |

ದ್ವಸೀಯಾನೇವ ಭವತಿ ಯಂ ಕಾಮಯೇತ ಪಾಪೀಯಾನ್ಥ್ಸ್ಯಾದಿತ್ಯಧರಲಕ್ಷ್ಮಾಣಂ

ತಸ್ಯೋಪದಧ್ಯಾದಸುರಯೋನಿಮೇವೈನಮನು ಪರಾಭಾವಯತಿ

ಪಾಪೀಯಾನ್ಭವತಿ ತ್ರ್ಯಾಲಿಖಿತಾ ಭವತೀಮೇ ವೈ ಲೋಕಾಸ್ತ್ರ್ಯಾಲಿಖಿತೈ-

---

ವಸೀಯಾನ್ । ಏವ । ಭವತಿ । ಯಮ್ । ಕಾಮಯೇತ । ಪಾಪೀಯಾನ್ । ಸ್ಯಾತ್ । ಇತಿ । ಅಧರಲಕ್ಷ್ಮಾಣಮಿತ್ಯಧರ-ಲಕ್ಷ್ಮಾಣಮ್ । ತಸ್ಯ । ಉಪೇತಿ । ದಧ್ಯಾತ್ । ಅಸುರಯೋನಿಮಿತ್ಯಸುರ-ಯೋನಿಮ್ । ಏವ । ಏನಮ್ । ಅನು । ಪರೇತಿ । ಭಾವಯತಿ । ಪಾಪೀಯಾನ್ । ಭವತಿ । ತ್ರ್ಯಾಲಿಖಿತೇತಿ ತ್ರಿ-ಆಲಿಖಿತಾ । ಭವತಿ । ಇಮೇ । ವೈ । ಲೋಕಾಃ । ತ್ರ್ಯಾಲಿಖಿತೇತಿ ತ್ರಿ-ಆಲಿಖಿತಾ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ವಸೀಯಾನ್ ಭವತಿ ಏವ** | (ಇದರಿಂದ) ಆ ಯಜಮಾನನು ಶ್ರೀಮಂತನಾಗುವನು. |
| **ಯಮ್ ಪಾಪೀಯಾನ್ ಸ್ಯಾತ್ ಇತಿ ಕಾಮಯೇತ** | ಅಧ್ವರ್ಯುವು ಯಾವ ಯಜಮಾನನನ್ನು ಪಾಪಾತ್ಮನಾಗಬೇಕೆಂದು ಭಾವಿಸುತ್ತಾನೆಯೋ |
| **ತಸ್ಯ ಅಧರಲಕ್ಷ್ಮಾಣಮ್ ಉಪದಧ್ಯಾತ್** | ಆ ಯಜಮಾನನಿಗಾಗಿ ಕೆಳಗಡೆ ಚಿಹ್ನೆಯು ಇರುವ ತ್ರ್ಯಾಲಿಖಿತೆಯನ್ನು ಉಪಧಾನ ಮಾಡಬೇಕು. |
| **ಅಸುರಯೋನಿಮ್ ಏನಮ್ ಅನು ಪರಾಭಾವಯತಿ ಏವ ಪಾಪೀಯಾನ್ ಭವತಿ** | (ಹೀಗೆ ಮಾಡಿದ ಅಧ್ವರ್ಯುವು) ರಾಕ್ಷಸಜಾತಿಯನ್ನು ಅನುಸರಿಸಿದವನನ್ನಾಗಿ ಮಾಡಿ ಆ ಯಜಮಾನನನ್ನು ಪಾಪಾತ್ಮನನ್ನಾಗಿ ಮಾಡಿ ಸಮೃದ್ಧಿಹೀನನನ್ನಾಗಿಸುತ್ತಾನೆ.* |

## ದೇವಚಿಹ್ನೆಯ ವಿಧಾನ

| | |
|---|---|
| **ತ್ರ್ಯಾಲಿಖಿತಾ ಭವತಿ** | ಇಷ್ಟಕೆಯನ್ನು ಮೂರು ಬೆರಳುಗಳಿಂದ ಗುರುತು ಮಾಡಿರುವಂತೆ ಮಾಡಬೇಕು. |
| **ಇಮೇ ಲೋಕಾಃ ತ್ರ್ಯಾಲಿಖಿತಾ ವೈ** | ಈ ಮೂರು ಲೋಕಗಳೂ ತ್ರ್ಯಾಲಿಖಿತವೇ. |

---

* ಈ ರೀತಿಯ ಶ್ರುತಿವಚನಗಳ ತಾತ್ಪರ್ಯವನ್ನು ಗ್ರಹಿಸಬೇಕು. ಅಧ್ವರ್ಯುವು ಯಜಮಾನನ ಕ್ಷೇಮವನ್ನೇ ಬಯಸಬೇಕೆಂದು ಹೇಳುವುದೇ ತಾತ್ಪರ್ಯ. ಋತ್ವಿಜರು ಯಜಮಾನನ ಹಿತೈಷಿಗಳಷ್ಟೇ!

–ಭ್ಯ ಏವ ಲೋಕೇಭ್ಯೋ ಭ್ರಾತೃವ್ಯಮಂತರೇತ್ಯಂಗಿರಸಸ್ಸುವರ್ಗಂ ಲೋಕಂ

ಯತಃ ಪುರೋಡಾಶಃ ಕೂರ್ಮೋ ಭೂತ್ವಾಽನು ಪ್ರಾಸರ್ಪ[ಪ್ರಾಸರ್ಪತ್(೪೪)]

–ದ್ಯತ್ಕೂರ್ಮಮುಪದಧಾತಿ ಯಥಾ ಕ್ಷೇತ್ರವಿದಂಜಸಾ ನಯತ್ಯೇವಮೇವೈನಂ

ಕೂರ್ಮಸ್ಸುವರ್ಗಂ ಲೋಕಮಂಜಸಾ ನಯತಿ

---

ಏಭ್ಯಃ । ಏವ । ಲೋಕೇಭ್ಯಃ । ಭ್ರಾತೃವ್ಯಮ್ । ಅಂತಃ । ಏತಿ । ಅಂಗಿರಸಃ । ಸುವರ್ಗಮಿತಿ ಸುವಃ–ಗಮ್ ।

ಲೋಕಮ್ । ಯತಃ । ಪುರೋಡಾಶಃ । ಕೂರ್ಮಃ । ಭೂತ್ವಾ । ಅನು । ಪ್ರೇತಿ । ಅಸರ್ಪತ್ । (೪೪) । ಯತ್ ।

ಕೂರ್ಮಮ್ । ಉಪದಧಾತೀತ್ಯುಪ–ದಧಾತಿ । ಯಥಾ । ಕ್ಷೇತ್ರವಿದಿತಿ ಕ್ಷೇತ್ರ–ವಿತ್ । ಅಂಜಸಾ । ನಯತಿ ।

ಏವಮ್ । ಏವ । ಏನಮ್ । ಕೂರ್ಮಃ । ಸುವರ್ಗಮಿತಿ ಸುವಃ–ಗಮ್ । ಲೋಕಮ್ । ಅಂಜಸಾ । ನಯತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಏಭ್ಯಃ ಲೋಕೇಭ್ಯಃ ಏವ ಭ್ರಾತೃವ್ಯಮ್ ಅಂತಃ ಏತಿ** | (ಭೂರಾದಿ ಲೋಕಗಳು ಮೂರು. ಈ ತ್ರಿತ್ವಸಂಖ್ಯೆಯ ಫಲವಾಗಿ)ಯಜಮಾನನು ಈ ಮೂರು ಲೋಕಗ ಳಿಂದಲೂ ಶತ್ರುವನ್ನು ತೊಲಗಿಸುತ್ತಾನೆ. |

**ಕೂರ್ಮೋಪಧಾನವಿಧಿ; ಉಪಾಖ್ಯಾನ**

| | |
|---|---|
| **ಸುವರ್ಗಮ್ ಲೋಕಮ್ ಯತಃ ಅಂಗಿರಸಃ ಪುರೋಡಾಶಃ ಕೂರ್ಮಃ ಭೂತ್ವಾ ಅನು ಪ್ರಾಸರ್ಪತ್** | ಸ್ವರ್ಗಲೋಕಕ್ಕೆ ಹೋಗುತ್ತಿರುವ ಅಂಗಿರಸರನ್ನು ಪುರೋಡಾಶವು ಆಮೆಯ ರೂಪವನ್ನು ಹೊಂದಿ ಹಿಂಬಾ ಲಿಸಿತು. |

**ಕೂರ್ಮೋಪಧಾನದ ಪ್ರಶಂಸೆ**

| | |
|---|---|
| **ಯತ್ ಕೂರ್ಮಮ್ ಉಪದಧಾತಿ** | ಕೂರ್ಮದ ಉಪಧಾನವನ್ನು ಮಾಡುವುದೆಂಬುದರಿಂದ |
| **ಯಥಾ ಕ್ಷೇತ್ರವಿತ್ ಅಂಜಸಾ ನಯತಿ** | ಪ್ರದೇಶವನ್ನು ಬಲ್ಲವನು ಬೇಕಾದ ಕಡೆಗೆ ಶೀಘ್ರವಾಗಿ ಹೇಗೆ ಕರೆದೊಯ್ಯುವನೋ |
| **ಏವಮ್ ಏವ ಏನಮ್ ಕೂರ್ಮಃ ಸುವರ್ಗಮ್ ಲೋಕಮ್ ಅಂಜಸಾ ನಯತಿ** | ಹಾಗೆ ಈ ಸ್ವರ್ಗದ ಮಾರ್ಗವನ್ನು ತಿಳಿದಿರುವ ಕೂರ್ಮವು ಈ ಯಜಮಾನನನ್ನು ಬೇಗನೇ ಸ್ವರ್ಗಲೋಕಕ್ಕೆ ಕರೆ ದೊಯ್ಯುವುದು (ಹೀಗೆ ಕೂರ್ಮೋಪಧಾನವು ಪ್ರಶಸ್ತ) |

**ಮೇಧೋ ವಾ ಏಷ ಪಶೂನಾಂ ಯತ್ಕೂರ್ಮೋ ಯತ್ಕೂರ್ಮಮುಪದಧಾತಿ**

**ಸ್ವಮೇವ ಮೇಧಂ ಪಶ್ಯಂತಃ ಪಶವ ಉಪತಿಷ್ಠಂತೇ ಶ್ಮಶಾನಂ ವಾ**

**ಏತತ್ಕ್ರಿಯತೇ ಯನ್ಮೃತಾನಾಂ ಪಶೂನಾಗ್ಂ ಶೀರ್‌ಷಾಣ್ಯುಪಧೀಯಂತೇ**

---

**ಮೇಧಃ । ವೈ । ಏಷಃ । ಪಶೂನಾಮ್ । ಯತ್ । ಕೂರ್ಮಃ । ಯತ್ । ಕೂರ್ಮಮ್ । ಉಪದಧಾತೀತ್ಯುಪ-ದಧಾತಿ । ಸ್ವಮ್ । ಏವ । ಮೇಧಮ್ । ಪಶ್ಯಂತಃ । ಪಶವಃ । ಉಪೇತಿ । ತಿಷ್ಠಂತೇ । ಶ್ಮಶಾನಮ್ । ವೈ । ಏತತ್ । ಕ್ರಿಯತೇ । ಯತ್ । ಮೃತಾನಾಮ್ । ಪಶೂನಾಮ್ । ಶೀರ್‌ಷಾಣಿ । ಉಪಧೀಯಂತ ಇತ್ಯುಪ-ಧೀಯಂತೇ ।**

---

**ಬ್ರಾಹ್ಮಣಭಾಗ** | **ವಿವರಣೆ**

**ಇನ್ನೊಂದು ಪ್ರಶಂಸೆ**

| | |
|---|---|
| **ಯತ್ ಕೂರ್ಮಃ ಏಷಃ ಪಶೂನಾಮ್ ಮೇಧಃ ವೈ** | ಕೂರ್ಮವೆಂಬುದು ಪಶುಗಳಿಗೆ ಇಷ್ಟಸಾಧನವಾದ ಯಜ್ಞಸಮಾನವಾಗಿದೆ. |
| **ಯತ್ ಕೂರ್ಮಮ್ ಉಪದಧಾತಿ** | ಕೂರ್ಮೋಪಧಾನವನ್ನು ಮಾಡುವುದರಿಂದ (ಕೂರ್ಮವನ್ನು ಉಪಧಾನ ಮಾಡುತ್ತಾನೆಂಬುದರಿಂದ) |
| **ಸ್ವಮ್ ಮೇಧಮ್ ಏವ ಪಶ್ಯಂತಃ ಪಶವಃ ಉಪತಿಷ್ಠಂತೇ** | ತಮ್ಮ ಇಷ್ಟಸಾಧನವಾದ (ಯಜ್ಞಸಮಾನವಾದ) ಕೂರ್ಮವನ್ನು ಅನುಸರಿಸಿ ಪಶುಗಳು ಯಜಮಾನನ ಮನೆಯಲ್ಲಿ ಇರುತ್ತವೆ. (ಹೀಗೆ ಕೂರ್ಮೋಪಧಾನವು ಪ್ರಶಸ್ತ) |

**ಬದುಕಿರುವ ಆಮೆಯ ಉಪಧಾನದ ಪ್ರಶಂಸೆ**

| | |
|---|---|
| **ಮೃತಾನಾಮ್ ಪಶೂನಾಮ್ ಶೀರ್‌ಷಾಣಿ ಉಪಧೀಯಂತೇ ಯತ್ ಏತತ್ ಶ್ಮಶಾನಮ್ ಕ್ರಿಯತೇ ವೈ** | *ಸತ್ತ ಪ್ರಾಣಿಗಳ ತಲೆಗಳನ್ನು ಉಪಧಾನ ಮಾಡುವುದೆಂಬುದರಿಂದ ಆ ಪ್ರದೇಶವು ಶ್ಮಶಾನವಾಗಿ ಮಾಡಲ್ಪಡುತ್ತದೆ. |

---

* ಮುಂದೆ ಈ ರೀತಿಯ ಉಪಧಾನವು ಹೇಳಲ್ಪಟ್ಟಿದೆ.

ಯಜ್ಜೀವಂತಂ ಕೂರ್ಮಮುಪದಧಾತಿ ತೇನಾಶ್ಮಶಾನಚಿದ್ವಾಸ್ತವ್ಯೋ ವಾ ಏಷ

ಯ[ಯತ್(೪೫)ಕೂರ್ಮೋ]ತ್ಕೂರ್ಮೋ ಮಧು ವಾತಾ ಋತಾಯತ ಇತಿ

ದಧ್ನಾ ಮಧುಮಿಶ್ರೇಣಾಭ್ಯನಕ್ತಿ ಸ್ವದಯತ್ಯೇವೈನಂ

---

ಯತ್ । ಜೀವಂತಮ್ । ಕೂರ್ಮಮ್ । ಉಪೇತಿ । ದಧಾತಿ । ತೇನ । ಅಶ್ಮಶಾನಚಿದಿತ್ಯಶ್ಮಶಾನ-ಚಿತ್ । ವಾಸ್ತವ್ಯಃ । ವೈ । ಏಷಃ । ಯತ್ । (೪೫) । ಕೂರ್ಮಃ । ಮಧು । ವಾತಾಃ । ಋತಾಯತ ಇತ್ಯೃತ-ಯತೇ । ಇತಿ । ದಧ್ನಾ । ಮಧುಮಿಶ್ರೇಣೇತಿ ಮಧು-ಮಿಶ್ರೇಣ । ಅಭೀತಿ । ಅನಕ್ತಿ । ಸ್ವದಯತಿ । ಏವ । ಏನಮ್ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯತ್ ಜೀವಂತಮ್ ಕೂರ್ಮಮ್ ಉಪದಧಾತಿ** | (ಹೀಗಾಗಿ) ಬದುಕಿರುವ ಆಮೆಯನ್ನು ಚಯನಪ್ರದೇಶದಲ್ಲಿ ಉಪಧಾನ ಮಾಡುತ್ತಾನೆಂಬುದು |
| **ತೇನ ಅಶ್ಮಶಾನಚಿತ್** | (ಯಾವುದೋ ಅದರಿಂದ) ಯಜಮಾನನು ಅನುಷ್ಠಿಸುವುದು ಶ್ಮಶಾನಚಯನ ಮಾಡಿದುದಾಗುವುದಿಲ್ಲ. |
| **ಯತ್ ಕೂರ್ಮಃ ಏಷಃ ವಾಸ್ತವ್ಯಃ ವೈ** | ಕೂರ್ಮವೆಂಬುದು(ಭೂಮಿಯ)ವಾಸಿಸಲು ಯೋಗ್ಯವಾದುದು*/(ಭೂಮಿಯಲ್ಲಿ)ಸುಖವಾಗಿ ವಾಸಮಾಡಬಲ್ಲುದು. (ಬದುಕಿರುವ ಆಮೆಯು ಉಪಧಾನಕರ್ಮಕ್ಕೆ ಪ್ರಶಸ್ತವಾದುದು) |

**ಅಭ್ಯಂಜನವಿಧಿ; ಪ್ರಶಂಸೆ**

| | |
|---|---|
| **ಮಧು ವಾತಾಃ ಋತಾಯತೇ ಇತಿ** | 'ವಾಯುಗಳು ಯಜಮಾನನಿಗೆ ಮಧುವನ್ನು ಸ್ರವಿಸಲಿ' ಎಂದು ಮೊದಲಾಗಿ ಹೇಳುವ ಮೂರು ಮಂತ್ರಗಳಿಂದ |
| **ಮಧುಮಿಶ್ರೇಣ ದಧ್ನಾ ಅಭ್ಯನಕ್ತಿ** | ಜೇನುತುಪ್ಪದಿಂದ ಮಿಶ್ರವಾದ ಮೊಸರಿನಿಂದ ಕೂರ್ಮವನ್ನು ಸುತ್ತಲೂ ಉಪಧಾನಕ್ಕೆ ಮೊದಲು ಲೇಪಿಸಬೇಕು. |
| **ಏನಮ್ ಸ್ವದಯತಿ ಏವ** | (ಅಧ್ವರ್ಯುವು ಈ ಅಭ್ಯಂಜನದಿಂದ) ಕೂರ್ಮವನ್ನು ರುಚಿಕರವನ್ನಾಗಿ ಮಾಡುತ್ತಾನೆ. (ಅದರಿಂದ ಕೂರ್ಮವು ಜೀವಂತವಾಗಿ ಚಿರಕಾಲ ಬದುಕುವಂತಾಗುತ್ತದೆ. ಕೂರ್ಮವನ್ನು ರುಚಿಕರವನ್ನಾಗಿ ಮಾಡಿದ ಯಜಮಾನನು |

---

* ಕೂರ್ಮವು ಬೆನ್ನಿನಲ್ಲಿ ಭೂಮಿಯನ್ನು ಧರಿಸಿದೆಯಷ್ಟೆ.

ಗ್ರಾಮ್ಯಂ ವಾ ಏತದನ್ನಂ ಯದ್ದಧ್ಯಾರಣ್ಯಂ ಮಧು ಯದ್ದಧ್ನಾ ಮಧುಮಿಶ್ರೇಣಾ

ಭ್ಯನಕ್ತ್ಯುಭಯಸ್ಯಾವರುದ್ಧ್ಯೈ ಮಹೀ ದ್ಯೌಃ ಪೃಥಿವೀ ಚ ನ

ಇತ್ಯಾಹಾಭ್ಯಾಮೇವೈನಮುಭಯತಃ ಪರಿ ಗೃಹ್ಣಾತಿ

---

ಗ್ರಾಮ್ಯಮ್। ವೈ। ಏತತ್। ಅನ್ನಮ್। ಯತ್। ದಧಿ। ಆರಣ್ಯಮ್। ಮಧು। ಯತ್। ದಧ್ನಾ। ಮಧುಮಿಶ್ರೇಣೇತಿ ಮಧು–ಮಿಶ್ರೇಣ। ಅಭ್ಯನಕ್ತೀತ್ಯಭಿ–ಅನಕ್ತಿ। ಉಭಯಸ್ಯ। ಅವರುದ್ಧ್ಯಾ ಇತ್ಯವ–ರುದ್ಧ್ಯೈ। ಮಹೀ। ದ್ಯೌಃ। ಪೃಥಿವೀ। ಚ। ನಃ। ಇತಿ। ಆಹ। ಆಭ್ಯಾಮ್। ಏವ। ಏನಮ್। ಉಭಯತಃ। ಪರೀತಿ। ಗೃಹ್ಣಾತಿ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ದಧಿ–ಮಧುಗಳ ಪ್ರಶಂಸೆ; ಅರ್ಥವಾದ** |
| **ಯತ್ ದಧಿ** | ಮೊಸರೆಂಬುದು ಯಾವುದಿದೆಯೋ |
| **ಏತತ್ ವೈ ಗ್ರಾಮ್ಯಮ್ ಅನ್ನಮ್** | ಇದು ಗ್ರಾಮ್ಯವಾದ ಅನ್ನವಾಗಿದೆ/ಗ್ರಾಮಕ್ಕೆ ಹಿತವಾದ ಅನ್ನವಾಗಿದೆ. |
| **ಮಧು ಆರಣ್ಯಮ್ ವೈ ಅನ್ನಮ್** | ಮಧುವು ಅರಣ್ಯದಲ್ಲಿ ದೊರೆಯುವ ಹಿತವಾದ ಅನ್ನವಾಗಿದೆ. |
| **ಯತ್ ಮಧುಮಿಶ್ರೇಣ ದಧ್ನಾ ಅಭ್ಯನಕ್ತಿ** | ಮಧುಮಿಶ್ರವಾದ ದಧಿಯಿಂದ ಕೂರ್ಮಾಭ್ಯಂಜನವನ್ನು ಮಾಡುವುದೆಂಬುದು |
| **ಉಭಯಸ್ಯ ಅವರುದ್ಧ್ಯೈ** | ಎರಡು ವಿಧವಾದ ಅನ್ನವನ್ನು ಪಡೆಯಲು ಸಾಧನವಾಗುತ್ತದೆ. |
| | **ಮಂತ್ರಾಂಶದ ವಿವರಣೆ** |
| **ಮಹೀ ದ್ಯೌಃ ಪೃಥಿವೀ ಚ ನಃ ಇತಿ ಆಹ** | ಕೂರ್ಮೋಪಧಾನಮಂತ್ರದಲ್ಲಿರುವ **'ಮಹೀ ದ್ಯೌಃ ಪೃಥಿವೀ ಚನ'** ಎಂಬ ಮಂತ್ರಭಾಗವು ಹೀಗೆ ಹೇಳುತ್ತದೆ. |
| **ಆಭ್ಯಾಮ್ ಏವ ಏನಮ್ ಉಭಯತಃ ಪರಿಗೃಹ್ಣಾತಿ** | ಈ ಮಂತ್ರಭಾಗದ ಪಠನದ ಬಲದಿಂದ ಯಜಮಾನನು ಪೃಥಿವೀ ಮತ್ತು ದ್ಯುಲೋಕಗಳಿಂದ ಈ ಯಜ್ಞವನ್ನು ಪರಿಗ್ರಹಿಸಿದವನಾಗುತ್ತಾನೆ. |

ಪ್ರಾಂಚಮುಪ ದಧಾತಿ ಸುವರ್ಗಸ್ಯ ಲೋಕಸ್ಯ ಸಮಷ್ಟ್ಯೈ ಪುರಸ್ತಾತ್ಪ್ರತ್ಯಂಚ ಮುಪ ದಧಾತಿ ತಸ್ಮಾ[ತಸ್ಮಾತ್(೪೬)ಪುರಸ್ತಾತ್]ತ್ಪುರಸ್ತಾತ್ಪ್ರತ್ಯಂಚಃ ಪಶವೋ ಮೇಧಮುಪತಿಷ್ಠಂತೇ ಯೋ ವಾ ಅಪನಾಭಿಮಗ್ನಿಂ ಚಿನುತೇ

---

ಪ್ರಾಂಚಮ್ । ಉಪೇತಿ । ದಧಾತಿ । ಸುವರ್ಗಸ್ಯೇತಿ ಸುವಃ-ಗಸ್ಯ । ಲೋಕಸ್ಯ । ಸಮಷ್ಟ್ಯಾ ಇತಿ ಸಮ್-ಅಷ್ಟ್ಯೈ । ಪುರಸ್ತಾತ್ । ಪ್ರತ್ಯಂಚಮ್ । ಉಪೇತಿ । ದಧಾತಿ । ತಸ್ಮಾತ್ । (೪೬) । ಪುರಸ್ತಾತ್ । ಪ್ರತ್ಯಂಚಃ । ಪಶವಃ । ಮೇಧಮ್ । ಉಪೇತಿ । ತಿಷ್ಠಂತೇ । ಯಃ । ವೈ । ಅಪನಾಭಿಮಿತ್ಯಪ-ನಾಭಿಮ್ । ಅಗ್ನಿಮ್ । ಚಿನುತೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ಕೂರ್ಮೋಪಧಾನದ ಪ್ರದೇಶ** |
| **ಪ್ರಾಂಚಮ್ ಉಪದಧಾತಿ** | ಸ್ವಯಮಾತೃಣ್ಣೇಷ್ಟಕೆಯ ಪೂರ್ವಭಾಗದಲ್ಲಿ ಕೂರ್ಮೋಪಧಾನವನ್ನು ಮಾಡಬೇಕು. |
| **ಸುವರ್ಗಸ್ಯ ಲೋಕಸ್ಯ ಸಮಷ್ಟ್ಯೈ** | ಇದು ಯಜಮಾನನಿಗೆ ಸ್ವರ್ಗಲೋಕಪ್ರಾಪ್ತಿಗೆ ಸಾಧನ ವಾಗುತ್ತದೆ. |
| **ಪುರಸ್ತಾತ್ ಪ್ರತ್ಯಂಚಮ್ ಉಪದಧಾತಿ** | ಸ್ವಯಮಾತೃಣ್ಣೇಷ್ಟಕೆಯ ಪೂರ್ವಭಾಗದಲ್ಲಿ ಪಶ್ಚಿಮಾಭಿಮುಖವಾಗಿ ಕೂರ್ಮೋಪಧಾನವನ್ನು ಮಾಡಬೇಕು. |
| **ತಸ್ಮಾತ್ ಪುರಸ್ತಾತ್ ಪ್ರತ್ಯಂಚಃ ಪಶವಃ ಮೇಧಮ್ ಉಪತಿಷ್ಠಂತೇ** | ಆ ವಿಧವಾದ ಕೂರ್ಮೋಪಧಾನದಿಂದ (ಆಹವನೀಯಾಗ್ನಿಯ) ಪೂರ್ವದಿಗ್ಭಾಗದಲ್ಲಿ (ಯೂಪದಲ್ಲಿ ಕಟ್ಟಲ್ಪಟ್ಟ) ಪಶುಗಳು ಪಶ್ಚಿಮಾಭಿಮುಖವಾಗಿ ಯಜ್ಞವನ್ನು ಸೇರಿಕೊಳ್ಳುತ್ತವೆ. |
| | **ಉಲೂಖಲೋಪಧಾನವಿಧಿ; ಪ್ರಶಂಸೆ** |
| **ಯಃ ಅಪನಾಭಿಮ್ ಅಗ್ನಿಮ್ ಚಿನುತೇ ವೈ** | ಯಾವ ಯಜಮಾನನು ನಾಭಿಯಿಲ್ಲದ ಅಗ್ನಿಯನ್ನು ಚಯನ ಮಾಡುವನೋ |

---

**'ಅಂಗಿರಸಃ'** ಎಂಬ ಬ್ರಾಹ್ಮಣಭಾಗದಿಂದ **'ಉಪತಿಷ್ಠಂತೇ'** ಎಂಬಲ್ಲಿಯವರೆಗೆ ಕೂರ್ಮೋಪಧಾನ ಮತ್ತು ಅದಕ್ಕೆ ಸಂಬಂಧಿಸಿದ ವಿಷಯಗಳು.

ಯಜಮಾನಸ್ಯ ನಾಭಿಮನು ಪ್ರವಿಶತಿ ಸ ಏನಮೀಶ್ವರೋ ಹಿಗ್ಂಸಿತೋರುಲೂ

ಖಲಮುಪ ದಧಾತ್ಯೇಷಾ ವಾ ಅಗ್ನೇರ್ನಾಭಿಸ್ಸನಾಭಿಮೇವಾಗ್ನಿಂ ಚಿನುತೇಽಹಿಗ್ಂ

ಸಾಯಾ ಔದುಂಬರಂ ಭವತ್ಯೂರ್ಗ್ವಾ ಉದುಂಬರ ಊರ್ಜಮೇವಾವರುಂಧೇ

---

ಯಜಮಾನಸ್ಯ । ನಾಭಿಮ್ । ಅನು । ಪ್ರೇತಿ । ವಿಶತಿ । ಸಃ । ಏನಮ್ । ಈಶ್ವರಃ । ಹಿಗ್ಂಸಿತೋಃ । ಉಲೂಖಲಮ್ ।

ಉಪೇತಿ । ದಧಾತಿ । ಏಷಾ । ವೈ । ಅಗ್ನೇಃ । ನಾಭಿಃ । ಸನಾಭಿಮಿತಿ ಸ–ನಾಭಿಮ್ । ಏವ । ಅಗ್ನಿಮ್ । ಚಿನುತೇ ।

ಅಹಿಗ್ಂಸಾಯೈ । ಔದುಂಬರಮ್ । ಭವತಿ । ಊರ್ಕ್ । ವೈ । ಉದುಂಬರಃ । ಊರ್ಜಮ್ । ಏವ । ಅವೇತಿ ।

ರುಂಧೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯಜಮಾನಸ್ಯ ನಾಭಿಮ್ ಅನು ಪ್ರವಿಶತಿ** | (ಆ ಅಗ್ನಿಯು) ಯಜಮಾನನ ನಾಭಿಯನ್ನು ಅನುಸರಿಸಿ ಪ್ರವೇಶಿಸುತ್ತಾನೆ. |
| **ಸಃ ಏನಮ್ ಹಿಗ್ಂಸಿತೋಃ ಈಶ್ವರಃ** | ಆ ಅಗ್ನಿಯು ಈ ಯಜಮಾನನನ್ನು ಹಿಂಸಿಸಲು ಶಕ್ತನು. |
| **ಉಲೂಖಲಮ್ ಉಪದಧಾತಿ** | (ಇದರ ಪರಿಹಾರಕ್ಕಾಗಿ) ಉಲೂಖಲ(ಒರಳು)ವನ್ನು ಉಪಧಾನ ಮಾಡಬೇಕು. |
| **ಏಷಾ ವೈ ಅಗ್ನೇಃ ನಾಭಿಃ** | ಈ ಉಲೂಖಲವು ಅಗ್ನಿಯ ನಾಭಿಯಾಗಿದೆ. |
| **ಸನಾಭಿಮ್ ಏವ ಅಗ್ನಿಮ್ ಚಿನುತೇ** | (ಉಲೂಖಲೋಪಧಾನದಿಂದ) ನಾಭಿಸಹಿತವಾದ ಅಗ್ನಿಚಯನವನ್ನೇ ಯಜಮಾನನು ಮಾಡಿದವನಾಗುತ್ತಾನೆ. |
| **ಅಹಿಗ್ಂಸಾಯೈ** | (ಇದರಿಂದ) ಅಗ್ನಿಯು ಯಜಮಾನನನ್ನು ಹಿಂಸಿಸದಂತಾಗುತ್ತದೆ. |

ಉಲೂಖಲದ ಪ್ರಕೃತಿದ್ರವ್ಯ (ಮೂಲವಸ್ತು)

| | |
|---|---|
| **ಔದುಂಬರಮ್ ಭವತಿ** | ಉಲೂಖಲವು (ಒರಳು) ಅತ್ತಿಯ ಮರದಿಂದ ಮಾಡಿದುದಾಗಿರಬೇಕು. |
| **ಉದುಂಬರಃ ಊರ್ಕ್ ವೈ** | ಅತ್ತಿಯ ಮರವು ಗಟ್ಟಿಯಾದುದಷ್ಟೆ. |
| **ಊರ್ಜಮ್ ಏವ ಅವರುಂಧೇ** | (ಈ ವಿಧವಾದ ಉಲೂಖಲೋಪಧಾನದಿಂದ) ಯಜಮಾನನು ಬಲವನ್ನು ಪಡೆಯುತ್ತಾನೆ. |

ಮಧ್ಯತ ಉಪ ದಧಾತಿ ಮಧ್ಯತ ಏವಾಸ್ಮಾ ಊರ್ಜಂ ದಧಾತಿ ತಸ್ಮಾನ್ಮಧ್ಯತ
ಊರ್ಜಾ ಭುಂಜತ ಇಯದ್ಭವತಿ ಪ್ರಜಾಪತಿನಾ ಯಜ್ಞಮುಖೇನ
ಸಂಮಿತಮವ ಹಂತ್ಯನ್ನಮೇವಾಕ–

---

ಮಧ್ಯತಃ । ಉಪೇತಿ । ದಧಾತಿ । ಮಧ್ಯತಃ । ಏವ । ಅಸ್ಮೈ । ಊರ್ಜಮ್ । ದಧಾತಿ । ತಸ್ಮಾತ್ । ಮಧ್ಯತಃ । ಊರ್ಜಾ । ಭುಂಜತೇ । ಇಯತ್ । ಭವತಿ । ಪ್ರಜಾಪತಿನೇತಿ ಪ್ರಜಾ–ಪತಿನಾ । ಯಜ್ಞಮುಖೇನೇತಿ ಯಜ್ಞ–ಮುಖೇನ । ಸಂಮಿತಮಿತಿ ಸಮ್–ಮಿತಮ್ । ಅವೇತಿ । ಹಂತಿ । ಅನ್ನಮ್ । ಏವ । ಅಕಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಉಲೂಖಲೋಪಧಾನಪ್ರದೇಶವಿಧಿ** | |
| **ಮಧ್ಯತಃ ಉಪದಧಾತಿ** | ಅಗ್ನಿಯ (ಚಯನದ) ಮಧ್ಯದಲ್ಲಿ ಉಲೂಖಲವನ್ನು ಉಪಧಾನ ಮಾಡಬೇಕು. |
| **ಅಸ್ಮೈ ಮಧ್ಯತಃ ಏವ ಊರ್ಜಮ್ ದಧಾತಿ** | (ಅಧ್ವರ್ಯುವು) (ಇದರಿಂದ) ಮಧ್ಯದಲ್ಲಿಯೇ ಈ ಯಜಮಾನನಿಗಾಗಿ ಬಲವನ್ನು ಸ್ಥಾಪಿಸಿದವನಾಗುತ್ತಾನೆ. |
| **ತಸ್ಮಾತ್ ಮಧ್ಯತಃ ಊರ್ಜಾ ಭುಂಜತೇ** | ಆದುದರಿಂದಲೇ ಮಾನವರು ಮಧ್ಯದಲ್ಲಿಯೇ/ ಮಧ್ಯಮವಯಸ್ಸಿನಲ್ಲಿಯೇ ಬಲವನ್ನು ಕೊಡುವ ಅನ್ನವನ್ನು ತಿನ್ನುತ್ತಾರೆ. |
| **ಉಲೂಖಲದ ಪ್ರಮಾಣವಿಧಿ** | |
| **ಯಜ್ಞಮುಖೇನ ಪ್ರಜಾಪತಿನಾ ಸಂಮಿತಮ್ ಇಯತ್ ಭವತಿ** | ಯಜ್ಞದ ಮುಖದಂತಿರುವ ಪ್ರಜಾಪತಿದೇವನಿಗೆ ಸಮಾನವಾದ ಉಲೂಖಲವು ಪ್ರಾದೇಶ (ಗೇಣು) ಪರಿಮಾಣವನ್ನು ಹೊಂದಿರಬೇಕು. |
| **ಅವಘಾತವಿಧಾನ; ಪ್ರಶಂಸೆ** | |
| **ಅವಹಂತಿ ಅನ್ನಮ್ ಏವ ಅಕಃ** | ಉಪಧಾನಕ್ಕೆ ಮೊದಲು ಸರ್ವೌಷಧಿಗಳನ್ನೂ ಒರಳಿನಲ್ಲಿ ಹಾಕಿ ಕುಟ್ಟಬೇಕು. (ಇದರಿಂದ) ಅಧ್ವರ್ಯುವು ಯಜಮಾನನಿಗಾಗಿ ಅನ್ನವನ್ನು ಉತ್ಪಾದನೆ ಮಾಡಿದವನಾಗುತ್ತಾನೆ. |

ವೈಷ್ಣವ್ಯರ್ಚೋಪ ದಧಾತಿ ವಿಷ್ಣುರ್ವೈ ಯಜ್ಞೋ ವೈಷ್ಣವಾ ವನಸ್ಪತಯೋ

ಯಜ್ಞ ಏವ ಯಜ್ಞಂ ಪ್ರತಿಷ್ಠಾಪಯತಿ ॥ ೪೭-8 ॥

[ಏಷ ವೈ ಪಶುರ್ಯಮಸರ್ವದೇಷ ಯತ್ತಸ್ಮಾತ್ತಸ್ಮಾತ್ಸಪ್ತವಿಗ್ಂಶತಿಶ್ಚ ॥]

---

ವೈಷ್ಣವ್ಯಾ । ಋಚಾ । ಉಪೇತಿ । ದಧಾತಿ । ವಿಷ್ಣುಃ । ವೈ । ಯಜ್ಞಃ । ವೈಷ್ಣವಾಃ । ವನಸ್ಪತಯಃ । ಯಜ್ಞೇ । ಏವ ।

ಯಜ್ಞಮ್ । ಪ್ರತೀತಿ । ಸ್ಥಾಪಯತಿ ॥ ೪೭ ॥

---

| ಬ್ರಾಹ್ಮಣಭಾಗ | ವಿವರಣೆ |
|---|---|
| | ಉಲೂಖಲೋಪಧಾನಮಂತ್ರ |
| **ವೈಷ್ಣವ್ಯಾ ಋಚಾ ಉಪ ದಧಾತಿ** | **'ಇದಂ ವಿಷ್ಣುಃ...ಪಾಗ್ಂಸುರೇ'** ಎಂಬ ವಿಷ್ಣುದೇವತಾಕವಾದ ಋಕ್ಕಿನಿಂದ ಉಲೂಖಲವನ್ನು ಉಪಧಾನ ಮಾಡಬೇಕು. |
| **ವಿಷ್ಣುಃ ವೈ ಯಜ್ಞಃ** | ವಿಷ್ಣುವು ಯಜ್ಞಸ್ವರೂಪನು. |
| **ವನಸ್ಪತಯಃ ವೈಷ್ಣವಾಃ** | (ಓಷಧಿಗಳೂ) ವನಸ್ಪತಿಗಳೂ ವಿಷ್ಣುಸಂಬಂಧಿಗಳಾಗಿವೆ. |
| **ಯಜ್ಞೇ ಏವ ಯಜ್ಞಮ್ ಪ್ರತಿಷ್ಠಾಪಯತಿ** | ಇದರಿಂದ ಅಧ್ವರ್ಯುವು ಯಜ್ಞದಲ್ಲಿಯೇ ಯಜ್ಞವನ್ನು ಸ್ಥಾಪಿಸಿದವನಾಗುತ್ತಾನೆ. |

---

**'ಯೋ ವಾ'** ಎಂಬ ಬ್ರಾಹ್ಮಣಭಾಗದಿಂದ **'ಇಯತ್ ಭವತಿ'** ಎಂಬಲ್ಲಿಯವರೆಗೆ ಉಲೂಖಲದ ಉಪಧಾನದ ವಿವರಣೆಯಾಗಿದೆ.

ಉಲೂಖಲವು ವನಸ್ಪತಿಸಂಬಂಧಿಯಾಗಿ ವೈಷ್ಣವವೆನಿಸಿದೆ. ಋಕ್ ವಿಷ್ಣುದೇವತಾಕವಾದುದರಿಂದ ವೈಷ್ಣವವಾಗಿದೆ.

ವಿಷ್ಣುವು ಯಜ್ಞಸ್ವರೂಪನಾದುದರಿಂದ ಅಧ್ವರ್ಯುವು ಯಜ್ಞದಲ್ಲಿಯೇ ಯಜ್ಞವನ್ನಿಟ್ಟಂತಹವನಾಗುತ್ತಾನೆಂದು ತಾತ್ಪರ್ಯ. ಇದಲ್ಲದೆ **'ತದ್ವಿಷ್ಣೋಃ ಪರಮಂ...ಆತತಮ್'** ಎಂಬ ಮಂತ್ರದಿಂದ ಮುಸಲದ (ಒನಕೆ) ಉಪಧಾನವೂ ಶ್ರೌತಸೂತ್ರದಲ್ಲಿ ಹೇಳಲ್ಪಟ್ಟಿದೆ. [ಆಪ. ಶ್ರೌ. ಸೂ. 16.26.4] **'ವೈಷ್ಣವ್ಯರ್ಚಾ ಉಪದಧಾತಿ'** ಎಂಬ ಬ್ರಾಹ್ಮಣದ ಭಾಗವನ್ನು ಇಲ್ಲಿಯೂ ಅನ್ವಯಿಸಿಕೊಳ್ಳಬೇಕು.

## ॥ ನವಮೋಽನುವಾಕಃ ॥

ಏಷಾಂ ವಾ ಏತಲ್ಲೋಕಾನಾಂ ಜ್ಯೋತಿಸ್ಸಂಭೃತಂ ಯದುಖಾ

ಯದುಖಾಮುಪದಧಾತ್ಯೇಭ್ಯ ಏವ ಲೋಕೇಭ್ಯೋ ಜ್ಯೋತಿರವರುಂಧೇ

ಮಧ್ಯತ ಉಪದಧಾತಿ ಮಧ್ಯತ ಏವಾಸ್ಮೈ ।

---

ಏಷಾಮ್ । ವೈ । ಏತತ್ । ಲೋಕಾನಾಮ್ । ಜ್ಯೋತಿಃ । ಸಂಭೃತಮಿತಿ ಸಮ್-ಭೃತಮ್ । ಯತ್ । ಉಖಾ ।

ಯತ್ । ಉಖಾಮ್ । ಉಪದಧಾತೀತ್ಯುಪ-ದಧಾತಿ । ಏಭ್ಯಃ । ಏವ । ಲೋಕೇಭ್ಯಃ । ಜ್ಯೋತಿಃ । ಅವೇತಿ । ರುಂಧೇ ।

ಮಧ್ಯತಃ । ಉಪೇತಿ । ದಧಾತಿ । ಮಧ್ಯತಃ । ಏವ । ಅಸ್ಮೈ ।

---

ಈ ಒಂಬತ್ತನೆಯ ಅನುವಾಕದಲ್ಲಿ ಉಖೋಪಧಾನ ಮುಂತಾದವು ಹೇಳಲ್ಪಟ್ಟಿವೆ.

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ಉಖೋಪಧಾನವಿಧಿ** |
| **ಯತ್ ಉಖಾ** | ಸಂಪಾದಿಸಿದ ಉಖೆಯು ಯಾವುದಿದೆಯೋ |
| **ಏತತ್ ಏಷಾಮ್ ಲೋಕಾನಾಮ್ ಸಂಭೃತಮ್ ಜ್ಯೋತಿಃ ವೈ** | ಅದು ಈ ಪೃಥಿವೀ ಮುಂತಾದ ಲೋಕಗಳ ಜ್ಯೋತಿಸ್ಸೇ ಆಗಿದೆ. |
| **ಯತ್ ಉಖಾಮ್ ಉಪದಧಾತಿ** | ಉಖೋಪಧಾನ ಮಾಡುವುದೆಂಬುದರಿಂದ |
| **ಏಭ್ಯಃ ಲೋಕೇಭ್ಯಃ ಏವ ಜ್ಯೋತಿಃ ಅವರುಂಧೇ** | ಯಜಮಾನನು ಈ ಪೃಥಿವ್ಯಾದಿಲೋಕಗಳಿಂದಲೇ ತೇಜಸ್ಸನ್ನು ಪಡೆದವನಾಗುತ್ತಾನೆ. |
| | **ಉಖೋಪಧಾನಪ್ರದೇಶ** |
| **ಮಧ್ಯತಃ ಉಪದಧಾತಿ** | ಅಗ್ನಿಯ (ಇಷ್ಟಕೆಗಳ) ಮಧ್ಯದಲ್ಲಿ ಉಖೋಪಧಾನವನ್ನು ಮಾಡಬೇಕು. |
| **ಮಧ್ಯತಃ ಏವ ಅಸ್ಮೈ** | ಇದರಿಂದ ಮಧ್ಯದಿಂದಲೇ ಅಧ್ವರ್ಯುವು ಯಜಮಾನನಿಗೆ |

ಜ್ಯೋತಿರ್ದಧಾತಿ ತಸ್ಮಾನ್ಮಧ್ಯತೋ ಜ್ಯೋತಿರುಪಾಸ್ಮಹೇ ಸಿಕತಾಭಿಃ

ಪೂರಯತ್ಯೇತದ್ವಾ ಅಗ್ನೇರ್ವೈಶ್ವಾನರಸ್ಯ ರೂಪಗ್ಂ ರೂಪೇಣೈವ

ವೈಶ್ವಾನರಮವರುಂಧೇ ಯಂ ಕಾಮಯೇತ ಕ್ಷೋಧುಕಃ ಸ್ಯಾದಿ-

---

ಜ್ಯೋತಿಃ । ದಧಾತಿ । ತಸ್ಮಾತ್ । ಮಧ್ಯತಃ । ಜ್ಯೋತಿಃ । ಉಪೇತಿ । ಆಸ್ಮಹೇ । ಸಿಕತಾಭಿಃ । ಪೂರಯತಿ । ಏತತ್ । ವೈ । ಅಗ್ನೇಃ । ವೈಶ್ವಾನರಸ್ಯ । ರೂಪಮ್ । ರೂಪೇಣ । ಏವ । ವೈಶ್ವಾನರಮ್ । ಅವೇತಿ । ರುಂಧೇ । ಯಮ್ । ಕಾಮಯೇತ । ಕ್ಷೋಧುಕಃ । ಸ್ಯಾತ್ । ಇತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಜ್ಯೋತಿಃ ದಧಾತಿ | ತೇಜಸ್ಸನ್ನು ಸಂಪಾದಿಸಿ ಕೊಟ್ಟವನಾಗುತ್ತಾನೆ. |
| ತಸ್ಮಾತ್ ಮಧ್ಯತಃ ಜ್ಯೋತಿಃ ಉಪಾಸ್ಮಹೇ | ಆದುದರಿಂದಲೇ ನಾವು ಉದರಮಧ್ಯದಲ್ಲಿ ಜಠರಾಗ್ನಿ ರೂಪವಾದ ತೇಜಸ್ಸನ್ನು ಅನುಭವಿಸುತ್ತಿರುತ್ತೇವೆ./ ನಾವು ದೇಹಮಧ್ಯದಲ್ಲಿರುವ ಪರಮಾತ್ಮನ ತೇಜಸ್ಸನ್ನು ಉಪಾಸನೆ ಮಾಡುತ್ತೇವೆ. |

**ಸಿಕತಾ(ಮರಳು)ಪೂರಣವಿಧಿ; ಫಲ**

| | |
|---|---|
| ಸಿಕತಾಭಿಃ ಪೂರಯತಿ | (ಉಖೆಯ ಉಪಧಾನವನ್ನು ಮಾಡುವ ಮೊದಲು) ಮರಳಿನಿಂದ ಉಖೆಯನ್ನು ತುಂಬಬೇಕು. |
| ಏತತ್ ವೈಶ್ವಾನರಸ್ಯ ಅಗ್ನೇಃ ರೂಪಮ್ ವೈ | ಇದು ವಿಶ್ವಹಿತನಾದ ವೈಶ್ವಾನರಾಗ್ನಿಯ ರೂಪವಾಗಿದೆ. |
| ರೂಪೇಣ ಏವ ವೈಶ್ವಾನರಮ್ ಅವರುಂಧೇ | (ಹೀಗೆ ಸಿಕತಾಪೂರಣದಿಂದ) ಯಜಮಾನನು ವೈಶ್ವಾನರಾಗ್ನಿಯ ಸ್ವರೂಪದಿಂದಲೇ ವೈಶ್ವಾನರಾಗ್ನಿಯ ಅನುಗ್ರಹವನ್ನು ಪಡೆದವನಾಗುತ್ತಾನೆ. |

**ತುಂಬಿದ ಉಖೆಯ ಪ್ರಶಂಸೆ**

| | |
|---|---|
| ಯಮ್ ಕಾಮಯೇತ ಕ್ಷೋಧುಕಃ ಸ್ಯಾತ್ ಇತಿ | ಅಧ್ವರ್ಯುವು ಯಾವ ಯಜಮಾನನನ್ನು ಅನ್ನರಹಿತನಾಗಬೇಕೆಂದು/ಹಸಿದವನಾಗಿರಬೇಕೆಂದು ಬಯಸುವನೋ |

–ತ್ಯೂನಾಂ ತಸ್ಯೋಪ[(೪೮)ದಧ್ಯಾತ್]ದಧ್ಯಾತ್ಕ್ಷೋಧುಕ ಏವ ಭವತಿ ಯಂ ಕಾಮಯೇತಾನುಪದಸ್ಯದನ್ನಮದ್ಯಾದಿತಿ ಪೂರ್ಣಾಂ ತಸ್ಯೋಪದಧ್ಯಾದನುಪದಸ್ಯ –ದೇವಾನ್ನಮತ್ತಿ ಸಹಸ್ರಂ ವೈ ಪ್ರತಿ ಪುರುಷಃ ಪಶೂನಾಂ ಯಚ್ಛತಿ

---

ಊನಾಮ್ । ತಸ್ಯ । ಉಪೇತಿ । (೪೮) । ದಧ್ಯಾತ್ । ಕ್ಷೋಧುಕಃ । ಏವ । ಭವತಿ । ಯಮ್ । ಕಾಮಯೇತ । ಅನುಪದಸ್ಯದಿತ್ಯನುಪ–ದಸ್ಯತ್ । ಅನ್ನಮ್ । ಅದ್ಯಾತ್ । ಇತಿ । ಪೂರ್ಣಾಮ್ । ತಸ್ಯ । ಉಪೇತಿ । ದಧ್ಯಾತ್ । ಅನುಪದಸ್ಯದಿತ್ಯನುಪ–ದಸ್ಯತ್ । ಏವ । ಅನ್ನಮ್ । ಅತ್ತಿ । ಸಹಸ್ರಮ್ । ವೈ । ಪ್ರತೀತಿ । ಪುರುಷಃ । ಪಶೂನಾಮ್ । ಯಚ್ಛತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ತಸ್ಯ ಊನಾಮ್ ಉಪದಧ್ಯಾತ್** | ಆ ಯಜಮಾನನ ಚಯನದಲ್ಲಿ ಉಖೆಯು ಊನವಾಗಿರುವಂತೆ/ತುಂಬದಿರುವಂತೆ ಮಾಡಿ ಉಪಧಾನವನ್ನು ಮಾಡಬೇಕು. |
| **ಕ್ಷೋಧುಕಃ ಏವ ಭವತಿ** | ಇದರಿಂದ ಯಜಮಾನನು ಅನ್ನರಹಿತನೇ/ಯಾವಾಗಲೂ ಹಸಿವೆಯಿಂದ ಕೂಡಿರುವನೇ ಆಗುತ್ತಾನೆ. |
| **ಯಮ್ ಕಾಮಯೇತ ಅನುಪದಸ್ಯತ್ ಅನ್ನಮ್ ಅದ್ಯಾತ್ ಇತಿ** | ಅಧ್ವರ್ಯುವು ಯಾವ ಯಜಮಾನನು ಅನ್ನಸಂಪನ್ನನಾಗಿ ಅನ್ನವನ್ನು ಸಂಪೂರ್ಣವಾಗಿ ತಿನ್ನುತ್ತಿರಬೇಕೆಂದು ಕೋರುವನೋ |
| **ತಸ್ಯ ಪೂರ್ಣಾಮ್ ಉಪದಧ್ಯಾತ್** | ಆ ಯಜಮಾನನ ಚಯನದಲ್ಲಿ ಉಖೆಯನ್ನು ಮರಳಿನಿಂದ ಸಂಪೂರ್ಣವಾಗಿ ತುಂಬಿ ಉಪಧಾನ ಮಾಡಬೇಕು. |
| **ಅನುಪದಸ್ಯತ್ ಅನ್ನಮ್ ಏವ ಅತ್ತಿ** | ಅಂತಹ ಯಜಮಾನನು ಕೊರತೆಯಿಲ್ಲದವನಾಗಿಯೇ ಅನ್ನವನ್ನು ಭುಂಜಿಸುತ್ತಾನೆ. |

### ಪುರುಷಶೀರ್ಷೋಪಧಾನವಿಧಿ; ಅರ್ಥವಾದ

| | |
|---|---|
| **ಪುರುಷಃ ಪಶೂನಾಮ್ ಸಹಸ್ರಮ್ ಪ್ರತಿ ಯಚ್ಛತಿ ವೈ** | ಉಪಧಾನ ಮಾಡಲ್ಪಡುವ ಪುರುಷನು ಒಬ್ಬನೇ ಸಾವಿರ ಪಶುಗಳನ್ನು ಯಜಮಾನನಿಗೆ ಸಂಪಾದಿಸಿಕೊಡುತ್ತಾನೆ. |

ಸಹಸ್ರಮನ್ಯೇ ಪಶವೋ ಮಧ್ಯೇ ಪುರುಷಶೀರ್‌ಷಮುಪ ದಧಾತಿ ಸವೀರ್ಯತ್ವಾಯೋ

ಖಾಯಾಮಪಿ ದಧಾತಿ ಪ್ರತಿಷ್ಠಾಮೇವೈನದ್ಗಮಯತಿ ವ್ಯೃದ್ಧಂ ವಾ

ಏತತ್ಪ್ರಾಣೈರಮೇಧ್ಯಂ ಯತ್ಪುರುಷಶೀರ್‌ಷಮಮೃತಂ ಖಲು ವೈ ಪ್ರಾಣಾ

---

ಸಹಸ್ರಮ್ । ಅನ್ಯೇ । ಪಶವಃ । ಮಧ್ಯೇ । ಪುರುಷಶೀರ್‌ಷಮಿತಿ ಪುರುಷ-ಶೀರ್‌ಷಮ್ । ಉಪೇತಿ । ದಧಾತಿ । ಸವೀರ್ಯತ್ವಾಯೇತಿ ಸವೀರ್ಯ-ತ್ವಾಯ । ಉಖಾಯಾಮ್ । ಅಪೀತಿ । ದಧಾತಿ । ಪ್ರತಿಷ್ಠಾಮಿತಿ ಪ್ರತಿ-ಸ್ಥಾಮ್ । ಏವ । ಏನತ್ । ಗಮಯತಿ । ವ್ಯೃದ್ಧಮಿತಿ ವಿ-ಋದ್ಧಮ್ । ವೈ । ಏತತ್ । ಪ್ರಾಣೈರಿತಿ ಪ್ರ-ಅನೈಃ । ಅಮೇಧ್ಯಮ್ । ಯತ್ । ಪುರುಷಶೀರ್‌ಷಮಿತಿ ಪುರುಷ-ಶೀರ್‌ಷಮ್ । ಅಮೃತಮ್ । ಖಲು । ವೈ । ಪ್ರಾಣಾ ಇತಿ ಪ್ರ-ಅನಾಃ । (೪೯) ।

---

| ಬ್ರಾಹ್ಮಣಭಾಗ | ವಿವರಣೆ |
| --- | --- |
| **ಅನ್ಯೇ ಸಹಸ್ರಮ್ ಪಶವಃ** ಪ್ರತಿಯಚ್ಛಂತಿ | ಉಪಧಾನ ಮಾಡಲ್ಪಡುವ ಬೇರೆಯ ಪಶುಗಳೆಲ್ಲವೂ ಸೇರಿ ಯಜಮಾನನಿಗೆ ಸಾವಿರ ಪಶುಗಳನ್ನು ಕೊಡುತ್ತವೆ. |
| **ಸವೀರ್ಯತ್ವಾಯ ಮಧ್ಯೇ ಪುರುಷ ಶೀರ್‌ಷಮ್ ಉಪದಧಾತಿ** | ಯಜಮಾನನು/ಅಗ್ನಿಯು ಸಮರ್ಥನಾಗುವುದಕ್ಕಾಗಿ ಅಶ್ವವೇ ಮುಂತಾದ ಪಶುಗಳ ಶಿರಸ್ಸುಗಳ ಮಧ್ಯದಲ್ಲಿ ಪುರುಷನ ಶಿರಸ್ಸನ್ನು ಉಪಧಾನ ಮಾಡಬೇಕು. |
| **ಉಖಾಯಾಮ್ ಅಪಿ ದಧಾತಿ** | ಉಖೆಯ ಸಮೀಪದಲ್ಲಿ ಪುರುಷಶೀರ್ಷವನ್ನು ಮುಚ್ಚುವಂತೆ ಉಪಧಾನ ಮಾಡಬೇಕು. |
| **ಏನತ್ ಪ್ರತಿಷ್ಠಾಮ್ ಗಮಯತಿ ಏವ** | (ಇದರಿಂದ)ಪುರುಷಶೀರ್ಷವನ್ನು ಸ್ಥಿರವಾಗಿ ಇಟ್ಟಂತೆ ಆಗುತ್ತದೆ. |

ಹಿರಣ್ಯಶಕಲಪ್ರಕ್ಷೇಪವಿಧಿ [ಬಂಗಾರದ ಚೂರುಗಳನ್ನು ಹಾಕುವ ವಿಧಿ]ಅರ್ಥವಾದ

| | |
| --- | --- |
| **ಯತ್ ಪುರುಷಶೀರ್‌ಷಮ್** | ಪುರುಷಶೀರ್ಷವೆಂಬುದು (ನರಕಪಾಲ) |
| **ಪ್ರಾಣೈಃ ವ್ಯೃದ್ಧಮ್ ಏತತ್** | ಪ್ರಾಣರಹಿತವಾದ ಇದು |
| **ಅಮೇಧ್ಯಮ್ ವೈ** | ಯಜ್ಞಾರ್ಹವಲ್ಲವಷ್ಟೆ. |
| **ಪ್ರಾಣಾಃ ಅಮೃತಮ್ ಖಲು ವೈ** | ಪ್ರಾಣಗಳು ಅಮೃತವಾಗಿವೆಯಷ್ಟೆ. ಶುಚಿಹೇತುವಾಗಿವೆ. |

[ಪ್ರಾಣಾಃ(೪೯)] ಅಮೃತಗ್ಂ ಹಿರಣ್ಯಂ ಪ್ರಾಣೇಷು ಹಿರಣ್ಯಶಲ್ಕಾನ್ಪ್ರತ್ಯಸ್ಯತಿ ಪ್ರತಿಷ್ಠಾಮೇವೈನದ್ಗಮಯಿತ್ವಾ ಪ್ರಾಣೈಸ್ಸಮರ್ಧಯತಿ ದಧ್ನಾ ಮಧುಮಿಶ್ರೇಣ ಪೂರಯತಿ ಮಧವ್ಯೋಽಸಾನೀತಿ

---

ಅಮೃತಮ್ । ಹಿರಣ್ಯಮ್ । ಪ್ರಾಣೇಷ್ವಿತಿ ಪ್ರ–ಅನೇಷು । ಹಿರಣ್ಯಶಲ್ಕಾನಿತಿ ಹಿರಣ್ಯ–ಶಲ್ಕಾನ್ । ಪ್ರತೀತಿ । ಅಸ್ಯತಿ । ಪ್ರತಿಷ್ಠಾಮಿತಿ ಪ್ರತಿ–ಸ್ಥಾಮ್ । ಏವ । ಏನತ್ । ಗಮಯಿತ್ವಾ । ಪ್ರಾಣೈರಿತಿ ಪ್ರ–ಅನೈಃ । ಸಮಿತಿ । ಅರ್ಧಯತಿ । ದಧ್ನಾ । ಮಧುಮಿಶ್ರೇಣೇತಿ ಮಧು–ಮಿಶ್ರೇಣ । ಪೂರಯತಿ । ಮಧವ್ಯಃ । ಅಸಾನಿ । ಇತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಹಿರಣ್ಯಮ್ ಅಮೃತಮ್** | ಚೆನ್ನಾಗಿ ಕಾಯಿಸಿದರೂ ನಾಶವಾಗದ ಚಿನ್ನವೂ ಅಮೃತವಾಗಿದೆ. |
| **ಪ್ರಾಣೇಷು ಹಿರಣ್ಯಶಲ್ಕಾನ್ ಪ್ರತ್ಯಸ್ಯತಿ** | (ಪುರುಷಶಿರಸ್ಸಿನ) ಮುಖವೇ ಮುಂತಾದ ಪ್ರಾಣ ಸ್ಥಾನಗಳಲ್ಲಿ ಅಧ್ವರ್ಯುವು ಚಿನ್ನದ ಚೂರುಗಳನ್ನು ಹಾಕಬೇಕು. |
| **ಏನತ್ ಪ್ರತಿಷ್ಠಾಮ್ ಏವ ಗಮಯಿತ್ವಾ ಪ್ರಾಣೈಃ ಸಮರ್ಧಯತಿ** | ಇದರಿಂದ ಪುರುಷಶಿರಸ್ಸಿಗೆ ಸ್ಥಿರತೆಯನ್ನುಂಟುಮಾಡಿ ಪ್ರಾಣಗಳಿಂದ ಸಮೃದ್ಧವಾಗುವಂತೆ ಮಾಡುತ್ತಾನೆ/ ಯಜಮಾನನಿಗೆ ಪ್ರಕೃಷ್ಟಸ್ಥಿತಿಯನ್ನುಂಟುಮಾಡಿ ಪ್ರಾಣ ಗಳಿಂದ ಸಮೃದ್ಧನಾಗುವಂತೆ ಮಾಡುತ್ತಾನೆ. |

ದಧಿ–ಮಧುಮಿಶ್ರಣದಿಂದ ಪೂರಣವಿಧಿ; ಪ್ರಶಂಸೆ

| | |
|---|---|
| **ಮಧವ್ಯಃ ಅಸಾನಿ ಇತಿ** | 'ನಾನು ಮಧುರರಸವನ್ನು ಸೇವಿಸಲು ಯೋಗ್ಯನಾಗುವೆನು' ಎಂಬ ಮಂತ್ರದಿಂದ |
| **ಮಧುಮಿಶ್ರೇಣ ದಧ್ನಾ ಪೂರಯತಿ** | ಮಧುಮಿಶ್ರವಾದ ಮೊಸರಿನಿಂದ ಪುರುಷಶಿರಸ್ಸನ್ನು ತುಂಬಬೇಕು. |

---

**ತಾತ್ಪರ್ಯ:–** ಉಖೆಯನ್ನು ಎಚ್ಚರಿಕೆಯಿಂದ ಸಂಪೂರ್ಣವಾಗಿ ತುಂಬಿಯೇ ಉಪಧಾನ ಮಾಡಬೇಕೆಂದು ಇಲ್ಲಿಯ ತಾತ್ಪರ್ಯ. ಉಖೆಯು ಊನವಾದರೆ ಯಜಮಾನನಿಗೆ ದೋಷವುಂಟಾಗುವುದೆಂದು ಹೇಳಿದುದರ ತಾತ್ಪರ್ಯ ವನ್ನು ಗ್ರಹಿಸಬೇಕು.

ಲೋಕದಲ್ಲಿ ಪ್ರಾಣವಿಯೋಗವಾಗುವುದೆಂದರೆ ಶರೀರವು ಪ್ರಾಣರಹಿತವಾಗುತ್ತದೆ. ಪ್ರಾಣಗಳು ಸೂಕ್ಷ್ಮಶರೀರಕ್ಕೆ

# ಶೃತಾತಙ್ಕ್ಯೇನ ಮೇಧ್ಯತ್ವಾಯ ಗ್ರಾಮ್ಯಂ ವಾ ಏತದನ್ನಂ ಯದ್ದಧ್ಯಾರಣ್ಯಂ ಮಧು ಯದ್ದಧ್ನಾ ಮಧುಮಿಶ್ರೇಣ ಪೂರಯತ್ಯುಭಯಸ್ಯಾವರುದ್ಧ್ಯೈ ಪಶುಶೀರ್ಷಾಣ್ಯುಪದಧಾತಿ ಪಶವೋ ವೈ ಪಶುಶೀರ್ಷಾಣಿ

---

ಶೃತಾತಙ್ಕ್ಯೇನೇತಿ ಶೃತ-ಆತಙ್ಕ್ಯೇನ । ಮೇಧ್ಯತ್ವಾಯೇತಿ ಮೇಧ್ಯ-ತ್ವಾಯ । ಗ್ರಾಮ್ಯಮ್ । ವೈ । ಏತತ್ । ಅನ್ನಮ್ । ಯತ್ । ದಧಿ । ಆರಣ್ಯಮ್ । ಮಧು । ಯತ್ । ದಧ್ನಾ । ಮಧುಮಿಶ್ರೇಣೇತಿ ಮಧು-ಮಿಶ್ರೇಣ । ಪೂರಯತಿ । ಉಭಯಸ್ಯ । ಅವರುಧ್ಯಾ ಇತ್ಯವ-ರುದ್ಧ್ಯೈ । ಪಶುಶೀರ್ಷಾಣೀತಿ ಪಶು-ಶೀರ್ಷಾಣಿ । ಉಪೇತಿ । ದಧಾತಿ । ಪಶವಃ । ವೈ । ಪಶುಶೀರ್ಷಾಣೀತಿ ಪಶು-ಶೀರ್ಷಾಣಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಮೇಧ್ಯತ್ವಾಯ ಶೃತಾತಙ್ಕ್ಯೇನ** (ಪೂರಯತಿ) | *ಯಾಗಾರ್ಹವನ್ನಾಗಿ ಮಾಡುವುದಕ್ಕಾಗಿ ಕಾಯಿಸಿದ ಹಾಲಿನಲ್ಲಿ ಹೆಪ್ಪನ್ನು ಹಾಕಿ ಉತ್ಪನ್ನವಾದ ದಧಿಯಿಂದ ಶಿರಸ್ಸನ್ನು ತುಂಬಿಸಬೇಕು. |
| **ಯತ್ ದಧಿ ಏತತ್ ಗ್ರಾಮ್ಯಮ್ ಅನ್ನಮ್ ವೈ** | ಮೊಸರೆಂಬುದು ಗ್ರಾಮ್ಯವಾದ ಅನ್ನವಾಗಿದೆ. |
| ಯತ್ **ಮಧು** ಏತತ್ **ಆರಣ್ಯಮ್** ಅನ್ನಮ್ ವೈ | ಜೇನುತುಪ್ಪವು ಆರಣ್ಯವಾದ ಅನ್ನವಾಗಿದೆ. |
| **ಯತ್ ಮಧುಮಿಶ್ರೇಣ ದಧ್ನಾ ಪೂರಯತಿ** | ಮಧುಮಿಶ್ರವಾದ ದಧಿಯಿಂದ ಪುರುಷಶಿರಸ್ಸನ್ನು ಪೂರಣ ಮಾಡುವುದೆಂಬುದು |
| **ಉಭಯಸ್ಯ ಅವರುದ್ಧ್ಯೈ** | ಉಭಯವಿಧವಾದ ಅನ್ನಪ್ರಾಪ್ತಿಗೆ ಕಾರಣವಾಗುತ್ತದೆ. |

ಪಶುಶೀರ್ಷೋಪಧಾನವಿಧಿ; ಫಲ

| | |
|---|---|
| **ಪಶುಶೀರ್ಷಾಣಿ ಉಪದಧಾತಿ** | ಅಶ್ವಾದಿಪಶುಗಳ ಶಿರಸ್ಸುಗಳನ್ನು ಉಪಧಾನ ಮಾಡಬೇಕು. |
| **ಪಶವಃ ಪಶುಶೀರ್ಷಾಣಿ ವೈ** | ಪಶುಗಳೇ ಪಶುಶಿರಸ್ಸುಗಳಷ್ಟೆ.*೧ |

---

ಸೇರಿದವು. ಅವುಗಳಿಗೆ ಮರಣವಿಲ್ಲ.

---

* ಹಾಲನ್ನು ಮೊಸರು ಮಾಡಲು ಅನೇಕ ವಿಧಾನಗಳು ಇವೆ. ಅದರಲ್ಲಿ ಹೆಪ್ಪು ಹಾಕಿ ಉಂಟಾದ ಮೊಸರು ಪ್ರಶಸ್ತ.

*೧ ಪಶುಗಳು ಪಶುಶಿರಸ್ಸುಗಳಿಗೆ ಸಾಧನಗಳು. ಯಾವ ಸಾಧ್ಯಕ್ಕೆ ಯಾವುದು ಸಾಧನವೋ ಆ ಸಾಧ್ಯವನ್ನು ಆ ಸಾಧನಶಬ್ದದಿಂದಲೇ ಹೇಳುವುದು ಇದೆ. **'ನೇಗಿಲೇ ಜೀವನ' 'ಲಾಂಗಲಂ ಜೀವನಮ್'** ಜೀವನಸಾಧನವಾದ ನೇಗಿಲನ್ನೇ ಸಾಧ್ಯವಾದ **'ಜೀವನ'** ಎನ್ನಲಾಗಿದೆ.

ಪಶೂನೇವಾವರುಂಧೇ ಯಂ ಕಾಮಯೇತಾಪಶುಸ್ಸ್ಯಾದಿತಿ [(೫೦)ವಿಷೂಚೀನಾನಿ] ವಿಷೂಚೀನಾನಿ ತಸ್ಯೋಪದಧ್ಯಾದ್ವಿಷೂಚ ಏವಾಸ್ಮಾತ್ಪಶೂನ್ದಧಾತ್ಯಪಶುರೇವ ಭವತಿ ಯಂ ಕಾಮಯೇತ ಪಶುಮಾನ್ಸ್ಯಾದಿತಿ ಸಮೀಚೀನಾನಿ ತಸ್ಯೋಪ ದಧ್ಯಾ-

---

ಪಶೂನ್ । ಏವ । ಅವೇತಿ । ರುಂಧೇ । ಯಮ್ । ಕಾಮಯೇತ । ಅಪಶುಃ । ಸ್ಯಾತ್ । ಇತಿ । (೫೦) । ವಿಷೂಚೀನಾನಿ । ತಸ್ಯ । ಉಪೇತಿ । ದಧ್ಯಾತ್ । ವಿಷೂಚಃ । ಏವ । ಅಸ್ಮಾತ್ । ಪಶೂನ್ । ದಧಾತಿ । ಅಪಶುಃ । ಏವ । ಭವತಿ । ಯಮ್ । ಕಾಮಯೇತ । ಪಶುಮಾನಿತಿ ಪಶು-ಮಾನ್ । ಸ್ಯಾತ್ । ಇತಿ । ಸಮೀಚೀನಾನಿ । ತಸ್ಯ । ಉಪೇತಿ । ದಧ್ಯಾತ್ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಪಶೂನ್ ಅವರುಂಧೇ ಏವ** | ಯಜಮಾನನು ಪಶುಶೀರ್ಷೋಪಧಾನದಿಂದ ಪಶುಗಳನ್ನು ಹೊಂದುವನು. |

**ಪಶುಶೀರ್ಷೋಪಧಾನದ ವಿಶೇಷವಿಧಿ; ಪ್ರಶಂಸೆ**

| | |
|---|---|
| **ಯಮ್ ಕಾಮಯೇತ ಅಪಶುಃ ಸ್ಯಾತ್ ಇತಿ** | ಅಧ್ವರ್ಯುವು ಯಾವ ಯಜಮಾನನು ಪಶುಹೀನನಾಗಬೇಕೆಂದು ಬಯಸುವನೋ |
| **ತಸ್ಯ ವಿಷೂಚೀನಾನಿ ಉಪದಧ್ಯಾತ್** | ಆ ಯಜಮಾನನ ಚಯನದಲ್ಲಿ ಪುರುಷಶಿರಸ್ಸಿಗೆ ವಿಮುಖವಾಗಿ ಪಶುಶಿರಸ್ಸುಗಳನ್ನು ಉಪಧಾನ ಮಾಡಬೇಕು. |
| **ಅಸ್ಮಾತ್ ಪಶೂನ್ ವಿಷೂಚಃ ಏವ ದಧಾತಿ** | (ಇದರಿಂದ) ಪಶುಗಳನ್ನು ಯಜಮಾನನಿಗೆ ವಿಮುಖವಾಗುವಂತೆ ಮಾಡುತ್ತಾನೆ. |
| **ಅಪಶುಃ ಏವ ಭವತಿ** | ಅಂತಹ ಯಜಮಾನನು ಪಶುರಹಿತನೇ ಆಗುತ್ತಾನೆ. |
| **ಯಮ್ ಪಶುಮಾನ್ ಸ್ಯಾತ್ ಇತಿ ಕಾಮಯೇತ** | ಅಧ್ವರ್ಯುವು ಯಾವ ಯಜಮಾನನನ್ನು ಪಶುಸಂಪನ್ನನಾಗಬೇಕೆಂದು ಅಪೇಕ್ಷಿಸುವನೋ |
| **ತಸ್ಯ ಸಮೀಚೀನಾನಿ ಉಪದಧ್ಯಾತ್** | ಅವನ ಚಯನದಲ್ಲಿ ಪುರುಷಶಿರಸ್ಸಿಗೆ ಅಭಿಮುಖವಾಗಿ ಪಶುಶಿರಸ್ಸುಗಳ ಉಪಧಾನವನ್ನು ಮಾಡಬೇಕು. |

ತ್ಸಮೀಚ ಏವಾಸ್ಮೈ ಪಶೂನ್ದಧಾತಿ ಪಶುಮಾನೇವ ಭವತಿ ಪುರಸ್ತಾತ್ಪ್ರತೀಚೀನ
ಮಶ್ವಸ್ಯೋಪ ದಧಾತಿ ಪಶ್ಚಾತ್ಪ್ರಾಚೀನಮೃಷಭಸ್ಯಾಪಶವೋ ವಾ ಅನ್ಯೇ
ಗೋಅಶ್ವೇಭ್ಯಃ ಪಶವೋ ಗೋಅಶ್ವಾನೇವಾಸ್ಮೈ ಸಮೀಚೋ
ದಧಾತ್ಯೇತಾವಂತೋ ವೈ ಪಶವೋ[ಪಶವಃ (೫೧)]ದ್ವಿಪಾದಶ್ಚ ಚತುಷ್ಪಾದಶ್ಚ

---

ಸಮೀಚಃ । ಏವ । ಅಸ್ಮೈ । ಪಶೂನ್ । ದಧಾತಿ । ಪಶುಮಾನಿತಿ ಪಶು-ಮಾನ್ । ಏವ । ಭವತಿ । ಪುರಸ್ತಾತ್ ।
ಪ್ರತೀಚೀನಮ್ । ಅಶ್ವಸ್ಯ । ಉಪೇತಿ । ದಧಾತಿ । ಪಶ್ಚಾತ್ । ಪ್ರಾಚೀನಮ್ । ಋಷಭಸ್ಯ । ಅಪಶವಃ । ವೈ । ಅನ್ಯೇ ।
ಗೋಅಶ್ವೇಭ್ಯ ಇತಿ ಗೋ-ಅಶ್ವೇಭ್ಯಃ । ಪಶವಃ । ಗೋಅಶ್ವಾನಿತಿ ಗೋ-ಅಶ್ವಾನ್ । ಏವ । ಅಸ್ಮೈ । ಸಮೀಚಃ । ದಧಾತಿ ।
ಏತಾವಂತಃ । ವೈ । ಪಶವಃ । (೫೧) । ದ್ವಿಪಾದ ಇತಿ ದ್ವಿ-ಪಾದಃ । ಚ । ಚತುಷ್ಪಾದ ಇತಿ ಚತುಃ-ಪಾದಃ । ಚ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಅಸ್ಮೈ ಸಮೀಚಃ ಪಶೂನ್ ಏವ ದಧಾತಿ** | (ಇದರಿಂದ)ಈ ಯಜಮಾನನಿಗೆ ಪಶುಗಳು ಅಭಿಮುಖ ವಾಗುವಂತೆ ಮಾಡುತ್ತಾನೆ. |
| **ಪಶುಮಾನ್ ಏವ ಭವತಿ** | ಇದರಿಂದ ಯಜಮಾನನು ಪಶುಮಂತನಾಗುವನು. |

ಮತ್ತೊಂದು ವಿಶೇಷವಿಧಿ

| | |
|---|---|
| **ಪುರಸ್ತಾತ್ ಪ್ರತೀಚೀನಮ್ ಅಶ್ವಸ್ಯ ಉಪದಧಾತಿ** | ಪುರುಷಶಿರಸ್ಸಿನ ಪೂರ್ವಭಾಗದಲ್ಲಿ ಪಶ್ಚಿಮಾಭಿಮುಖ ವಾಗಿ ಅಶ್ವಶಿರಸ್ಸನ್ನು ಉಪಧಾನ ಮಾಡಬೇಕು. |
| **ಪಶ್ಚಾತ್ ಪ್ರಾಚೀನಮ್ ಋಷಭಸ್ಯ** ಉಪದಧಾತಿ | ಪುರುಷಶಿರಸ್ಸಿನ ಪಶ್ಚಿಮಭಾಗದಲ್ಲಿ ಪೂರ್ವಾಭಿಮುಖ ವಾಗಿ ಋಷಭದ ಶಿರಸ್ಸನ್ನು ಉಪಧಾನ ಮಾಡಬೇಕು. |
| **ಗೋ ಅಶ್ವೇಭ್ಯಃ ಅನ್ಯೇ ಪಶವಃ ಅಪಶವಃ ವೈ** | ಗೋವು ಮತ್ತು ಅಶ್ವ ಇವೆರಡಕ್ಕಿಂತಲೂ ಇತರ ಪಶು ಗಳು ಕುರಿ ಮುಂತಾದವುಗಳು ಅಪ್ರಶಸ್ತವಾದವುಗಳು. |
| **ಅಸ್ಮೈ ಗೋಅಶ್ವಾನ್ ಏವ ಸಮೀಚಃ ದಧಾತಿ** | ಇತರ ಪಶುಗಳ ಶಿರಸ್ಸುಗಳನ್ನು ಗೋ-ಅಶ್ವಗಳ ಶಿರಸ್ಸು ಗಳಿಗೆ ಅಭಿಮುಖವಾಗಿ ಉಪಧಾನ ಮಾಡಬೇಕು. |
| **ದ್ವಿಪಾದಃ ಚ ಚತುಷ್ಪಾದಃ ಚ ಪಶವಃ ಏತಾವಂತಃ ವೈ** | ಎರಡು ಕಾಲಿನ ಪ್ರಾಣಿಗಳೂ ನಾಲ್ಕು ಕಾಲಿನ ಪ್ರಾಣಿ ಗಳೂ ಇಷ್ಟೇ ಆಗಿವೆ. |

ತಾನ್, ವಾ ಏತದಗ್ನೌ ಪ್ರದಧಾತಿ ಯತ್ಪಶುಶೀರ್‍ಷಾಣ್ಯುಪದಧಾತ್ಯಮುಮಾರಣ್ಯ ಮನು ತೇ ದಿಶಾಮೀತ್ಯಾಹ ಗ್ರಾಮ್ಯೇಭ್ಯ ಏವ ಪಶುಭ್ಯ ಆರಣ್ಯಾನ್ಪಶೂಞ್ಛುಚ ಮನೂತ್ಸೃಜತಿ ತಸ್ಮಾತ್ಸಮಾವತ್ಪಶೂನಾಂ ಪ್ರಜಾಯಮಾನಾನಾಮಾರಣ್ಯಾಃ ಪಶವಃ ಕನೀಯಾಗ್ಂಸಶ್ಶುಚಾ ಹ್ಯೃತಾ

---

ತಾನ್ । ವೈ । ಏತತ್ । ಅಗ್ನೌ । ಪ್ರೇತಿ । ದಧಾತಿ । ಯತ್ । ಪಶುಶೀರ್‍ಷಾಣೀತಿ ಪಶು-ಶೀರ್‍ಷಾಣಿ । ಉಪದಧಾತೀತ್ಯುಪ-ದಧಾತಿ । ಅಮುಮ್ । ಆರಣ್ಯಮ್ । ಅನ್ವಿತಿ । ತೇ । ದಿಶಾಮಿ । ಇತಿ । ಆಹ । ಗ್ರಾಮ್ಯೇಭ್ಯಃ । ಏವ । ಪಶುಭ್ಯ ಇತಿ ಪಶು-ಭ್ಯಃ । ಆರಣ್ಯಾನ್ । ಪಶೂನ್ । ಶುಚಮ್ । ಅನು । ಉದಿತಿ । ಸೃಜತಿ । ತಸ್ಮಾತ್ । ಸಮಾವತ್ । ಪಶೂನಾಮ್ । ಪ್ರಜಾಯಮಾನಾನಾಮಿತಿ ಪ್ರ-ಜಾಯಮಾನಾನಾಮ್ । ಆರಣ್ಯಾಃ । ಪಶವಃ । ಕನೀಯಾಗ್ಂಸಃ । ಶುಚಾ । ಹಿ । ಋತಾಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯತ್ ಪಶುಶೀರ್‍ಷಾಣಿ ಉಪದಧಾತಿ** | ಪಶುಶೀರ್ಷೋಽಪಧಾನವೆಂಬುದು ಯಾವುದುಂಟೋ |
| **ತಾನ್ ವೈ ಏತತ್ ಅಗ್ನೌ ಪ್ರದಧಾತಿ** | (ಆದರಿಂದ) ಆ ಪಶುಗಳನ್ನು ಅಗ್ನಿಯಲ್ಲಿ ಹಾಕಿದಂತಾಗುತ್ತದೆ. |
| **ಅಮುಮ್ ಆರಣ್ಯಮ್ ಅನು ತೇ ದಿಶಾಮಿ ಇತಿ ಆಹ** | 'ಅಗ್ನಿಯೇ! ನಿನಗೆ ಈ ಆರಣ್ಯಪಶುವನ್ನು ಅನುಸರಿಸಿ ಕೊಡುತ್ತಿದ್ದೇನೆ' ಎಂದು ಈ ಮಂತ್ರಭಾಗವು ಹೇಳುತ್ತದೆ. |
| **ಗ್ರಾಮ್ಯೇಭ್ಯಃ ಏವ ಪಶುಭ್ಯಃ ಆರಣ್ಯಾನ್ ಪಶೂನ್ ಶುಚಮ್ ಅನು ಉತ್ ಸೃಜತಿ** | ಇದರಿಂದ ಅಧ್ವರ್ಯುವು ಗ್ರಾಮ್ಯಪಶುಗಳಿಂದ (ತಾಪವನ್ನು ಬೇರ್ಪಡಿಸಿ) ಆರಣ್ಯಪಶುಗಳತ್ತ ಶೋಕವನ್ನಿಡುವಂತಾಗುತ್ತಾನೆ. |
| **ತಸ್ಮಾತ್ ಸಮಾವತ್ ಪ್ರಜಾಯಮಾನಾನಾಮ್ ಪಶೂನಾಮ್ ಆರಣ್ಯಾಃ ಪಶವಃ** | ಆದುದರಿಂದ ಸಮಾನವಾಗಿ ಜನಿಸುವ ಪ್ರಾಣಿಗಳಲ್ಲಿ ಆರಣ್ಯಪಶುಗಳು |
| **ಶುಚಾ ಋತಾಃ ಹಿ** | ಅಗ್ನಿತಾಪಕ್ಕೆ ಗುರಿಯಾಗುತ್ತವೆ/ಶೋಕಕ್ಕೆ ಒಳಗಾಗುತ್ತವೆ. |
| **ಕನೀಯಾಗ್ಂಸಃ** | ಮತ್ತು ಕಡಿಮೆ ಇವೆ/ಕಡಿಮೆ ಮೂಲ್ಯದವಾಗಿವೆ. |

ಸ್ಸರ್ಪಶೀರ್ಷಮುಪ ದಧಾತಿ ಯ್ಯೈವ ಸರ್ಪೇ ತ್ವಿಷಿಸ್ತಾಮೇವಾವರುಂಧೇ [ರುಂಧೇ(೫೨)]ಯತ್ಸಮೀಚೀನಂ ಪಶುಶೀರ್ಷೈರುಪದಧ್ಯಾದ್ಗ್ರಾಮ್ಯಾನ್ಪಶೂನ್ದಗ್ಂಶುಕಾಸ್ಸ್ಯುರ್ಯದ್ವಿಷೂಚೀನಮಾರಣ್ಯಾನ್,

ಸರ್ಪಶೀರ್ಷಮಿತಿ ಸರ್ಪ-ಶೀರ್ಷಮ್ । ಉಪೇತಿ । ದಧಾತಿ । ಯಾ । ಏವ । ಸರ್ಪೇ । ತ್ವಿಷಿಃ । ತಾಮ್ । ಏವ । ಅವೇತಿ । ರುಂಧೇ । (೫೨) । ಯತ್ । ಸಮೀಚೀನಮ್ । ಪಶುಶೀರ್ಷೈರಿತಿ ಪಶು-ಶೀರ್ಷೈಃ । ಉಪದಧ್ಯಾದಿತ್ಯುಪ-ದಧ್ಯಾತ್ । ಗ್ರಾಮ್ಯಾನ್ । ಪಶೂನ್ । ದಗ್ಂಶುಕಾಃ । ಸ್ಯುಃ । ಯತ್ । ವಿಷೂಚೀನಮ್ । ಆರಣ್ಯಾನ್ ।

| ಬ್ರಾಹ್ಮಣಭಾಗ | ವಿವರಣೆ |
|---|---|

**ಸರ್ಪಶೀರ್ಷೋಪಧಾನವಿಧಿ; ಅರ್ಥವಾದ**

| | |
|---|---|
| **ಸರ್ಪಶೀರ್ಷಮ್ ಉಪದಧಾತಿ** | ಸರ್ಪಶಿರಸ್ಸನ್ನು ಅಗ್ನಿಯಲ್ಲಿ ಉಪಧಾನ ಮಾಡಬೇಕು. |
| **ಸರ್ಪೇ ಯಾ ಏವ ತ್ವಿಷಿಃ ತಾಮ್ ಅವರುಂಧೇ ಏವ** | ಇದರಿಂದ ಸರ್ಪದಲ್ಲಿ ಯಾವ ಕಾಂತಿಯಿದೆಯೋ ಅದನ್ನು ಯಜಮಾನನು ಹೊಂದುತ್ತಾನೆ. |

**ಮಂತ್ರಪಾಠದ ಪಕ್ಷ**

| | |
|---|---|
| **ಯತ್ ಪಶುಶೀರ್ಷೈಃ ಸಮೀಚೀನಮ್ ಉಪದಧ್ಯಾತ್** | ಪಶುಶೀರ್ಷಗಳ ಅಭಿಮುಖವಾಗಿ ಸರ್ಪಶೀರ್ಷೋಪಧಾನವನ್ನು ಮಾಡಿದರೆ |
| **ಗ್ರಾಮ್ಯಾನ್ ಪಶೂನ್ ದಗ್ಂಶುಕಾಃ ಸ್ಯುಃ** | ಗ್ರಾಮ್ಯಪಶುಗಳನ್ನು ಸರ್ಪಗಳು ಕಚ್ಚಿ ಹಿಂಸೆಪಡಿಸುತ್ತವೆ. |
| **ಯತ್** ಪಶುಶೀರ್ಷೈಃ **ವಿಷೂಚೀನಮ್** ಉಪದಧ್ಯಾತ್ | ಪಶುಶೀರ್ಷಗಳಿಗೆ ವಿಮುಖವಾಗಿ ಸರ್ಪಶೀರ್ಷೋಪಧಾನವನ್ನು ಮಾಡಿದರೆ |
| **ಆರಣ್ಯಾನ್** ಪಶೂನ್ ದಗ್ಂಶುಕಾಃ ಸ್ಯುಃ | ಆರಣ್ಯಪಶುಗಳನ್ನು ಸರ್ಪಗಳು ಕಚ್ಚಿ ಹಿಂಸಿಸುತ್ತವೆ. |

ಈ ಸರ್ಪಶೀರ್ಷೋಪಧಾನದಲ್ಲಿ **'ನಮೋ ಅಸ್ತು ಸರ್ಪೇಭ್ಯಃ'** ಎಂದು ಆರಂಭವಾಗುವ ಮೂರು ಮಂತ್ರಗಳು ವಿನಿಯುಕ್ತವಾಗಿವೆ.

ಯಜುರೇವ ವದೇದವ ತಾಂ ತ್ವಿಷಿಗ್ಂ ರುಂಧೇ ಯಾ ಸರ್ಪೇ ನ ಗ್ರಾಮ್ಯಾನ್ಪಶೂನ್, ಹಿನಸ್ತಿ ನಾರಣ್ಯಾನಥೋ ಖಲೂಪಧೇಯಮೇವ ಯದುಪದಧಾತಿ ತೇನ ತಾಂ ತ್ವಿಷಿಮವರುಂಧೇ ಯಾ ಸರ್ಪೇ

---

ಯಜುಃ । ಏವ । ವದೇತ್ । ಅವೇತಿ । ತಾಮ್ । ತ್ವಿಷಿಮ್ । ರುಂಧೇ । ಯಾ । ಸರ್ಪೇ । ನ । ಗ್ರಾಮ್ಯಾನ್ । ಪಶೂನ್ । ಹಿನಸ್ತಿ । ನ । ಆರಣ್ಯಾನ್ । ಅಥೋ ಇತಿ । ಖಲು । ಉಪಧೇಯಮಿತ್ಯುಪ-ಧೇಯಮ್ । ಏವ । ಯತ್ । ಉಪದಧಾತೀತ್ಯುಪ-ದಧಾತಿ । ತೇನ । ತಾಮ್ । ತ್ವಿಷಿಮ್ । ಅವೇತಿ । ರುಂಧೇ । ಯಾ । ಸರ್ಪೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯಜುಃ ಏವ ವದೇತ್** | ಆದುದರಿಂದ ಯಜುಸ್ಸನ್ನೇ (ಉಪಧಾನಮಂತ್ರ) ಹೇಳಬೇಕು. |
| **ಯಾ ಸರ್ಪೇ** | (ಅದರಿಂದ)ಸರ್ಪದಲ್ಲಿ ಯಾವ ಕಾಂತಿಯು ಇದೆಯೋ |
| **ತಾಮ್ ತ್ವಿಷಿಮ್ ಅವರುಂಧೇ** | ಅದನ್ನು ಯಜಮಾನನು ಹೊಂದುವನು. |
| **ಗ್ರಾಮ್ಯಾನ್ ಪಶೂನ್ ನ ಹಿನಸ್ತಿ** | (ಸರ್ಪವು) ಗ್ರಾಮ್ಯಪಶುಗಳನ್ನೂ ಹಿಂಸಿಸುವುದಿಲ್ಲ. |
| **ಆರಣ್ಯಾನ್** ಪಶೂನ್ ನ ಹಿನಸ್ತಿ | ಆರಣ್ಯಪಶುಗಳನ್ನೂ ಹಿಂಸಿಸುವುದಿಲ್ಲ. |

ಉಪಧಾನಪಕ್ಷ:

| | |
|---|---|
| **ಅಥೋ ಖಲು ಉಪಧೇಯಮ್ ಏವ** | ಅಥವಾ ಸರ್ಪಶೀರ್ಷೋಪಧಾನವನ್ನೇ ಮಾಡಬೇಕು. ಉಪಧಾನವನ್ನು ಮಾಡುವುದೆಂಬುದು ಯಾವುದೋ |
| **ಯತ್ ಉಪದಧಾತಿ** | ಅದರಿಂದ (ಉಪಧಾನದಿಂದ) ಸರ್ಪದಲ್ಲಿ ಯಾವ |
| **ತೇನ ಸರ್ಪೇ ಯಾ** ತ್ವಿಷಿಃ | ಕಾಂತಿಯು ಇದೆಯೋ |
| **ತಾಮ್ ತ್ವಿಷಿಮ್ ಅವರುಂಧೇ** | ಆ ಕಾಂತಿಯನ್ನು (ಯಜಮಾನನು) ಹೊಂದುವನು |

---

ಸರ್ಪಶೀರ್ಷೋಪಧಾನದಲ್ಲಿ ಎರಡು ಪಕ್ಷಗಳು. ಸರ್ಪಶೀರ್ಷೋಪಧಾನವನ್ನು ಮಾಡದೆ ಕೇವಲ ಮಂತ್ರಪಾಠವನ್ನು ಮಾಡಬೇಕೆಂಬ ಪಕ್ಷ, ಇದರಿಂದ ಪಶುಹಿಂಸೆ ಇರುವುದಿಲ್ಲ. ಅಥವಾ ಸರ್ಪಶೀರ್ಷೋಪಧಾನವನ್ನು ಮಾಡಬೇಕು. ಸರ್ಪಕಾಂತಿಯು ಲಭಿಸುತ್ತದೆ. ಈ ಶೀರ್ಷೋಪಧಾನಪಕ್ಷದಲ್ಲಿ ಮಂತ್ರಪಾಠದ ಬಲದಿಂದ ಸರ್ಪಶಿರಸ್ಸು ಶಾಂತವಾಗುವುದರಿಂದ ಪಶುಹಿಂಸೆಯು ಉಂಟಾಗುವುದಿಲ್ಲವೆಂಬ ಇನ್ನೊಂದು ಪಕ್ಷ.

## ಯದ್ಯಜುರ್ವದತಿ ತೇನ ಶಾಂತಮ್ ॥ ೫೩-9 ॥

[ಊನಾಂ ತಸ್ಯೋಪ ಪ್ರಾಣಾಸ್ಸ್ಯಾದಿತಿ ವೈ ಪಶವೋ ರುಂಧೇ ಚತುಶ್ಚತ್ವಾರಿಗ್‌ಂಶಚ್ಚ ॥]

---

ಯತ್ । ಯಜುಃ । ವದತಿ । ತೇನ । ಶಾಂತಮ್ ॥ ೫೩ ॥

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯತ್ ಯಜುಃ ವದತಿ ತೇನ ಶಾಂತಮ್** | ಯಜುಸ್ಸನ್ನು ಹೇಳುವುದರಿಂದ ಆ ಮಂತ್ರಪಾಠದ ಪ್ರಭಾವದಿಂದ ಯಾವ ಹಿಂಸೆಯೂ ಸಂಭವಿಸದೆ ಎಲ್ಲವೂ ಶಾಂತವಾಗಿರುತ್ತದೆ. |

---

ಈ ಸರ್ಪಶೀರ್ಷೋಪಧಾನದ ಕಾಲದ ಬಗ್ಗೆ ಶ್ರುತಿಯಲ್ಲಿ ಮಂತ್ರಪಾಠವು ಆಗಿರುವಂತೆ ಯಾವ ಮಂತ್ರದ ಬಳಿಕ ಈ ಸರ್ಪಶೀರ್ಷೋಪಧಾನದ ಮಂತ್ರಗಳ ಪಾಠವು ಇದೆಯೋ ಅದರಂತೆ ಅನುಷ್ಠಿಸಬೇಕೆಂದು ಮಂತ್ರಾಮ್ನಾನಾನುಸಾರಿಗಳು ಹೇಳುತ್ತಾರೆ. **'ನಮೋ ಅಸ್ತು ಸರ್ಪೇಭ್ಯಃ'** ಎಂಬ ಮಂತ್ರವು **'ಅಭ್ಯಸ್ಥಾತ್'** [ತೈ. ಸಂ. 4. 2. 8] ಎಂಬ ಅನುವಾಕದಲ್ಲಿ **'ಹಿರಣ್ಯಗರ್ಭಃ...ವಿಧೇಮ'** ಎಂಬ ಮಂತ್ರ ಮತ್ತು ಅದಕ್ಕೆ ಸಂಬಂಧಿಸಿದ **'ದ್ರಪ್ಸಶ್ಚಸ್ಕಂದ... ಹೋತ್ರಾಃ'** ಎಂಬ ಮಂತ್ರಗಳ ಬಳಿಕ ಪಠಿತವಾಗಿರುವುದರಿಂದ ಹಿರಣ್ಮಯಪುರುಷೋಪಧಾನದ ಬಳಿಕ ಸರ್ಪಶೀರ್ಷೋಪಧಾನವನ್ನು ಅನುಷ್ಠಿಸಬೇಕೆಂದು ಹೇಳುತ್ತಾರೆ.

ಸರ್ಪಶೀರ್ಷೋಪಧಾನದ ಕಾಲದ ಬಗ್ಗೆ ಶ್ರುತಿಯಲ್ಲಿ ಬ್ರಾಹ್ಮಣಭಾಗದ ಪಾಠವು ಆಗಿರುವಂತೆ ಯಾವ ಬ್ರಾಹ್ಮಣಭಾಗದ ಬಳಿಕ ಈ ಸರ್ಪಶೀರ್ಷೋಪಧಾನದ ಬ್ರಾಹ್ಮಣಭಾಗದ ಪಾಠವು ಇದೆಯೋ ಅದರಂತೆ ಅನುಷ್ಠಿಸಬೇಕೆಂದು ಬ್ರಾಹ್ಮಣಾನುಸಾರಿಗಳು ಹೇಳುತ್ತಾರೆ. **'ಪಶುಶೀರ್‌ಷಾಣ್ಯುಪದಧಾತಿ'** ಎಂಬ ಬ್ರಾಹ್ಮಣಭಾಗದ ಪಾಠದ ಬಳಿಕ [ತೈ. ಸಂ. 5. 2. 9] **"ಸರ್ಪಶೀರ್‌ಷಮುಪದಧಾತಿ"** ಎಂಬ ಬ್ರಾಹ್ಮಣಭಾಗದ ಪಾಠವಿರುವುದರಿಂದ ಪಶುಶೀರ್ಷೋಪಧಾನದ ಬಳಿಕ ಸರ್ಪಶೀರ್ಷೋಪಧಾನವನ್ನು ಅನುಷ್ಠಿಸಬೇಕೆಂದು ಅವರು ಹೇಳುತ್ತಾರೆ. ಭಟ್ಟಭಾಸ್ಕರಭಾಷ್ಯದಲ್ಲಿ ಈ ವಿಷಯವನ್ನು ತಿಳಿಸಿದ್ದಾರೆ.

## ॥ ದಶಮೋಽನುವಾಕಃ ॥

ಪಶುರ್ವಾ ಏಷ ಯದಗ್ನಿರ್ಯೋನಿಃ ಖಲು ವಾ ಏಷಾ ಪಶೋರ್ವಿಕ್ರಿಯತೇ
ಯತ್ಪ್ರಾಚೀನಮೈಷ್ಟಕಾದ್ಯಜುಃ ಕ್ರಿಯತೇ ರೇತೋಽಪಸ್ಯಾ ಅಪಸ್ಯಾ ಉಪದಧಾತಿ

---

ಪಶುಃ । ವೈ । ಏಷಃ । ಯತ್ । ಅಗ್ನಿಃ । ಯೋನಿಃ । ಖಲು । ವೈ । ಏಷಾ । ಪಶೋಃ । ವೀತಿ । ಕ್ರಿಯತೇ । ಯತ್ ।
ಪ್ರಾಚೀನಮ್ । ಐಷ್ಟಕಾತ್ । ಯಜುಃ । ಕ್ರಿಯತೇ । ರೇತಃ । ಅಪಸ್ಯಾಃ । ಅಪಸ್ಯಾಃ । ಉಪೇತಿ । ದಧಾತಿ ।

---

ಈ ಹತ್ತನೆಯ ಅನುವಾಕದಲ್ಲಿ ಅಪಸ್ಯೋಪಧಾನವು ಹೇಳಲ್ಪಟ್ಟಿದೆ. ಇದು ಪ್ರಥಮಚಿತಿಗೆ ಸಂಬಂಧಿಸಿದುದು.

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ಅಪಸ್ಯೇಷ್ಟಕೋಪಧಾನ** |
| **ಯತ್ ಅಗ್ನಿಃ ಏಷಃ ಪಶುಃ ವೈ** | ಯಾವ ಅಗ್ನಿಯಿದೆಯೋ ಅದು ಪಶುಸಾಧನವಾದುದರಿಂದ ಪಶುವೇ ಆಗಿದೆ. |
| **ಪಶೋಃ ಏಷಾ ಯೋನಿಃ ಖಲು ವಿಕ್ರಿಯತೇ ವೈ ಐಷ್ಟಕಾತ್ ಪ್ರಾಚೀನಮ್ ಯತ್ ಯಜುಃ ಕ್ರಿಯತೇ** | ಇಷ್ಟಕೋಪಧಾನಕ್ಕೆ ಮೊದಲು ಮಾಡುವ ಕರ್ಮಜಾತವು (ಋತುಕಾಲದಲ್ಲಿ) ಪಶುವಿನ ಯೋನಿಯು ವಿಕಾರ ಹೊಂದುವಂತೆ ಆಗುವುದಷ್ಟೆ. |
| **ರೇತಃ ಅಪಸ್ಯಾಃ** | ('ಅಪಾಂ ತ್ವೇಮನ್' ಮುಂತಾದ ಮಂತ್ರಗಳಿಂದ ಉಪಧಾನ ಮಾಡುವ ಇಷ್ಟಕೆಗಳು ಅಪಸ್ಯೆಗಳು) ಇವು ರೇತಃಸ್ಥಾನೀಯವಾಗಿವೆ. |
| **ಅಪಸ್ಯಾಃ ಉಪದಧಾತಿ** | ಅಪಸ್ಯೇಷ್ಟಕೆಗಳನ್ನು ಉಪಧಾನ ಮಾಡಬೇಕು. |

ಯೋನಾವೇವ ರೇತೋ ದಧಾತಿ ಪಂಚೋಪದಧಾತಿ ಪಾಂಕ್ತಾಃ ಪಶವಃ
ಪಶೂನೇವಾಸ್ಮೈ ಪ್ರಜನಯತಿ ಪಂಚ ದಕ್ಷಿಣತೋ ವಜ್ರೋ ವಾ ಅಪಸ್ಯಾ
ವಜ್ರೇಣೈವ ಯಜ್ಞಸ್ಯ ದಕ್ಷಿಣತೋ ರಕ್ಷಾಗ್ಂಸ್ಯಪಹಂತಿ

---

ಯೋನೌ । ಏವ । ರೇತಃ । ದಧಾತಿ । ಪಂಚ । ಉಪೇತಿ । ದಧಾತಿ । ಪಾಂಕ್ತಾಃ । ಪಶವಃ । ಪಶೂನ್ । ಏವ । ಅಸ್ಮೈ । ಪ್ರೇತಿ । ಜನಯತಿ । ಪಂಚ । ದಕ್ಷಿಣತಃ । ವಜ್ರಃ । ವೈ । ಅಪಸ್ಯಾಃ । ವಜ್ರೇಣ । ಏವ । ಯಜ್ಞಸ್ಯ । ದಕ್ಷಿಣತಃ । ರಕ್ಷಾಗ್ಂಸಿ । ಅಪೇತಿ । ಹಂತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯೋನೌ ಏವ ರೇತಃ ದಧಾತಿ** | (ಇವುಗಳನ್ನು ಉಪಧಾನ ಮಾಡುವುದರಿಂದ) ಯೋನಿಯಲ್ಲಿ ರೇತಸ್ಸನ್ನು ಧಾರಣೆ ಮಾಡಿಸಿದವನಾಗುತ್ತಾನೆ. |
| | **ಅಪಸ್ಯೇಷ್ಟಕೆಗಳ ಸಂಖ್ಯೆ–ಸ್ಥಾನ–ಪ್ರಥಮಪಂಚಕದ ದೇಶ** |
| **ಪಂಚ ಉಪದಧಾತಿ** | ಪೂರ್ವಭಾಗದಲ್ಲಿ ಐದು ಅಪಸ್ಯೆಗಳನ್ನು ಉಪಧಾನ ಮಾಡಬೇಕು. |
| **ಪಶವಃ ಪಾಂಕ್ತಾಃ** | ನಾಲ್ಕು ಕಾಲುಗಳು ಮತ್ತು ಬಾಲದಿಂದ ಕೂಡಿದ ಪಶುಗಳು ಪಾಂಕ್ತವೆನಿಸಿವೆ. |
| **ಅಸ್ಮೈ ಪಶೂನ್ ಏವ ಪ್ರಜನಯತಿ** | ಈ ಉಪಧಾನದಿಂದ ಈ ಯಜಮಾನನಿಗಾಗಿ ಅಧ್ವರ್ಯುವು ಪಶುಗಳನ್ನು ಉತ್ಪತ್ತಿ ಮಾಡಿದವನಾಗುತ್ತಾನೆ. |
| | **ದ್ವಿತೀಯಪಂಚಕದ ದೇಶ** |
| **ಪಂಚ ದಕ್ಷಿಣತಃ** ಉಪದಧಾತಿ | ದಕ್ಷಿಣಭಾಗದಲ್ಲಿ ಐದು ಅಪಸ್ಯೆಗಳ ಉಪಧಾನವನ್ನು ಮಾಡಬೇಕು. |
| **ಅಪಸ್ಯಾಃ ವಜ್ರಃ ವೈ** | ಅಪಸ್ಯೆಗಳು ವಜ್ರರೂಪವಾಗಿವೆ. |
| **ಯಜ್ಞಸ್ಯ ದಕ್ಷಿಣತಃ ವಜ್ರೇಣ ಏವ ರಕ್ಷಾಗ್ಂಸಿ ಅಪಹಂತಿ** | ಇದರಿಂದ (ದಕ್ಷಿಣದಲ್ಲಿ ಉಪಧಾನ ಮಾಡಿದ ಅಪಸ್ಯೆ ಗಳು) ಯಜ್ಞದ ದಕ್ಷಿಣಭಾಗದಲ್ಲಿ ರಕ್ಷೋಗಣಗಳನ್ನು ವಜ್ರದಿಂದಲೇ ನಾಶ ಮಾಡಿದಂತಾಗುತ್ತದೆ/ನಾಶ ಮಾಡುತ್ತವೆ. |

ಪಂಚ ಪಶ್ಚಾ[ಪಶ್ಚಾತ್(ಖಿಳ)ಪ್ರಾಚೀ]ತ್ಪ್ರಾಚೀರುಪದಧಾತಿ ಪಶ್ಚಾದ್ವೈ ಪ್ರಾಚೀನಗ್ಂ ರೇತೋ ಧೀಯತೇ ಪಶ್ಚಾದೇವಾಸ್ಮೈ ಪ್ರಾಚೀನಗ್ಂ ರೇತೋ ದಧಾತಿ ಪಂಚ ಪುರಸ್ತಾತ್ಪ್ರತೀಚೀರುಪದಧಾತಿ ಪಂಚ ಪಶ್ಚಾತ್ಪ್ರಾಚೀ-

---

ಪಂಚ । ಪಶ್ಚಾತ್ । (ಖಿಳ) । ಪ್ರಾಚೀಃ । ಉಪೇತಿ । ದಧಾತಿ । ಪಶ್ಚಾತ್ । ವೈ । ಪ್ರಾಚೀನಮ್ । ರೇತಃ । ಧೀಯತೇ । ಪಶ್ಚಾತ್ । ಏವ । ಅಸ್ಮೈ । ಪ್ರಾಚೀನಮ್ । ರೇತಃ । ದಧಾತಿ । ಪಂಚ । ಪುರಸ್ತಾತ್ । ಪ್ರತೀಚೀಃ । ಉಪೇತಿ । ದಧಾತಿ । ಪಂಚ । ಪಶ್ಚಾತ್ । ಪ್ರಾಚೀಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ತೃತೀಯಪಂಚಕದ ದೇಶ** |
| **ಪಂಚ ಪ್ರಾಚೀಃ ಪಶ್ಚಾತ್ ಉಪದಧಾತಿ** | ಐದು ಅಪಸ್ಯೇಷ್ಟಕೆಗಳನ್ನು ಪಶ್ಚಿಮದಿಕ್ಕಿನಲ್ಲಿ ಪ್ರಾಙ್ಮುಖವಾಗಿ ಉಪಧಾನ ಮಾಡಬೇಕು. |
| **ಪಶ್ಚಾತ್ ಪ್ರಾಚೀನಮ್ ವೈ ರೇತಃ ಧೀಯತೇ** | ಲೋಕದಲ್ಲಿ ಪಶ್ಚಿಮದಿಕ್ಕಿನಲ್ಲಿ ಪ್ರಾಙ್ಮುಖನಾದ ಪುರುಷನಿಂದ ಯೋನಿಯಲ್ಲಿ ರೇತಸ್ಸು ಇಡಲ್ಪಡುತ್ತದೆ. |
| **ಅಸ್ಮೈ ಪ್ರಾಚೀನಮ್ ಪಶ್ಚಾತ್ ಏವ ರೇತಃ ದಧಾತಿ** | ಈ ಉಪಧಾನದಿಂದ ಅಧ್ವರ್ಯುವು ಈ ಯಜಮಾನನಿಗಾಗಿ ಪ್ರಾಙ್ಮುಖವಾಗಿ ರೇತಸ್ಸನ್ನು ಸ್ಥಾಪಿಸಿದಂತಾಗುತ್ತದೆ. |
| | **ಪೂರ್ವ-ಪಶ್ಚಿಮದಿಕ್ಕಿನ ಇಷ್ಟಕೆಗಳ ಉಪಧಾನದ ಪ್ರಶಂಸೆ** |
| **ಪುರಸ್ತಾತ್ ಪ್ರತೀಚೀಃ ಪಂಚ ಉಪದಧಾತಿ** | ಪೂರ್ವದಿಕ್ಕಿನಲ್ಲಿ ಆರಂಭಿಸಿ ಅದರ ಪಶ್ಚಿಮಕ್ಕೆ ಒಂದು ಇಷ್ಟಕೋಪಧಾನದಂತೆ ಕ್ರಮವಾಗಿ ಐದು ಇಷ್ಟಕೆಗಳು ಪಶ್ಚಿಮಕ್ಕೆ ಉಪಧಾನ ಮಾಡಲ್ಪಡುತ್ತವೆ. |
| **ಪಶ್ಚಾತ್ ಪ್ರಾಚೀಃ ಪಂಚ** ಉಪದಧಾತಿ | ಪಶ್ಚಿಮದಿಕ್ಕಿನಲ್ಲಿ ಆರಂಭಿಸಿ ಅದರ ಪೂರ್ವಕ್ಕೆ ಒಂದು ಇಷ್ಟಕೋಪಧಾನದಂತೆ ಕ್ರಮವಾಗಿ ಐದು ಇಷ್ಟಕೆಗಳು ಪೂರ್ವಕ್ಕೆ ಉಪಧಾನ ಮಾಡಲ್ಪಡುತ್ತವೆ. |

ಸ್ತಸ್ಮಾತ್ಪ್ರಾಚೀನಗ್ಂ ರೇತೋ ಧೀಯತೇ ಪ್ರತೀಚೀಃ ಪ್ರಜಾ ಜಾಯಂತೇ

ಪಂಚೋತ್ತರತಶ್ಛಂದಸ್ಯಾಃ ಪಶವೋ ವೈ ಛಂದಸ್ಯಾಃ ಪಶೂನೇವ

ಪ್ರಜಾತಾನ್ತ್ಸ್ವಮಾಯತನಮಭಿ ಪರ್ಯೂಹತ

---

ತಸ್ಮಾತ್ । ಪ್ರಾಚೀನಮ್ । ರೇತಃ । ಧೀಯತೇ । ಪ್ರತೀಚೀಃ । ಪ್ರಜಾ ಇತಿ ಪ್ರ-ಜಾಃ । ಜಾಯಂತೇ । ಪಂಚ । ಉತ್ತರತ ಇತ್ಯುತ್-ತರತಃ । ಛಂದಸ್ಯಾಃ । ಪಶವಃ । ವೈ । ಛಂದಸ್ಯಾಃ । ಪಶೂನ್ । ಏವ । ಪ್ರಜಾತಾನಿತಿ ಪ್ರ-ಜಾತಾನ್ । ಸ್ವಮ್ । ಆಯತನಮಿತ್ಯಾ-ಯತನಮ್ । ಅಭಿ । ಪರೀತಿ । ಊಹತೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ತಸ್ಮಾತ್ ಪ್ರಾಚೀನಮ್ ರೇತಃ ಧೀಯತೇ ಪ್ರಜಾಃ ಪ್ರತೀಚೀಃ ಜಾಯಂತೇ** | ಆದುದರಿಂದ ಪೂರ್ವಾಭಿಮುಖನಾದ ಪುರುಷನಿಂದ ರೇತಸ್ಸು ಇಡಲ್ಪಡುತ್ತದೆ. ಪ್ರತ್ಯಙ್ಮುಖವಾಗಿ ಪ್ರಜೆಗಳು ಹುಟ್ಟುತ್ತಾರೆ. |

**ಚತುರ್ಥಪಂಚಕದ ಸ್ಥಾನ**

| | |
|---|---|
| **ಛಂದಸ್ಯಾಃ ಪಂಚ ಉತ್ತರತಃ** ಉಪದಧಾತಿ | ಗಾಯತ್ರೀ ಮುಂತಾದ ಛಂದಸ್ಸುಗಳು ದೇವತೆಯಾಗಿರುವ ಐದು ಇಷ್ಟಕೆಗಳನ್ನು ಚಿತಿಯ ಉತ್ತರದಿಕ್ಕಿನಲ್ಲಿ ಉಪಧಾನ ಮಾಡಬೇಕು. |
| **ಪಶವಃ ಛಂದಸ್ಯಾಃ ವೈ** | ಛಂದಸ್ಯೇಷ್ಟಕೆಗಳು ಪಶುಪ್ರಾಪ್ತಿನಿಮಿತ್ತವಾದುದರಿಂದ ಅವು ಪಶುಗಳೇ. |
| **ಪ್ರಜಾತಾನ್ ಪಶೂನ್ ಸ್ವಮ್ ಆಯತನಮ್ ಏವ ಅಭಿ ಪರ್ಯೂಹತೇ*** | ಈ ಛಂದಸ್ಯೇಷ್ಟಕೆಗಳ ಉಪಧಾನದಿಂದ ಅಧ್ವರ್ಯುವು ಅಪಸ್ಯೇಷ್ಟಕೋಪಧಾನದಿಂದ ಹುಟ್ಟಿದ ಪಶುಗಳನ್ನು ತಮ್ಮ ಸ್ಥಾನಕ್ಕೆ ಸೇರಿಸಿದವನಾಗುತ್ತಾನೆ. |

---

* '**ಪಂಚೋಪದಧಾತಿ**' ಎಂದು ಆರಂಭಿಸಿ...**ಪರ್ಯೂಹತೇ,** ಎಂಬಲ್ಲಿಯವರೆಗೆ ನಾಲ್ಕು ಇಷ್ಟಕಾಪಂಚಕದ ಉಪಧಾನವು ಹೇಳಲ್ಪಟ್ಟಿದೆ. ಅದರ ಅರ್ಥವಾದವೂ ಇಲ್ಲಿದೆ.

ಇಯಂ ವಾ ಅಗ್ನೇರತಿದಾಹಾದಬಿಭೇತ್ಸೈತಾ [..ತ್ಸೈತಾಃ(೫೫)ಅಪಸ್ಯಾ]

ಅಪಸ್ಯಾ ಅಪಶ್ಯತ್ತಾ ಉಪಾಧತ್ತ ತತೋ ವಾ ಇಮಾಂ ನಾತ್ಯದಹದ್ಯದಪಸ್ಯಾ

ಉಪದಧಾತ್ಯಸ್ಯಾ ಅನತಿದಾಹಾಯೋವಾಚ ಹೇಯಮದದಿತ್ಸ ಬ್ರಹ್ಮಣಾಽನ್ನಂ

ಯಸ್ಯೈತಾ ಉಪಧೀಯಾಂತೈ

---

ಇಯಮ್ । ವೈ । ಅಗ್ನೇಃ । ಅತಿದಾಹಾದಿತ್ಯತಿ-ದಾಹಾತ್ । ಅಬಿಭೇತ್ । ಸಾ । ಏತಾಃ । (೫೫) । ಅಪಸ್ಯಾಃ ।

ಅಪಶ್ಯತ್ । ತಾಃ । ಉಪೇತಿ । ಅಧತ್ತ । ತತಃ । ವೈ । ಇಮಾಮ್ । ನ । ಅತೀತಿ । ಅದಹತ್ । ಯತ್ । ಅಪಸ್ಯಾಃ ।

ಉಪದಧಾತೀತ್ಯುಪ-ದಧಾತಿ । ಅಸ್ಯಾಃ । ಅನತಿದಾಹಾಯೇತ್ಯನತಿ-ದಾಹಾಯ । ಉವಾಚ । ಹ । ಇಯಮ್ ।

ಅದತ್ । ಇತ್ । ಸಃ । ಬ್ರಹ್ಮಣಾ । ಅನ್ನಮ್ । ಯಸ್ಯ । ಏತಾಃ । ಉಪಧೀಯಾಂತಾ ಇತ್ಯುಪ-ಧೀಯಾಂತೈ ।

---

**ಬ್ರಾಹ್ಮಣಭಾಗ** **ವಿವರಣೆ**

**ಇನ್ನೊಂದು ರೀತಿಯಲ್ಲಿ ಅಪಸ್ಯೇಷ್ಟಕೆಯ ಪ್ರಶಂಸೆ**

| | |
|---|---|
| **ಇಯಮ್ ಅಗ್ನೇಃ ಅತಿದಾಹಾತ್ ಅಬಿಭೇತ್ ವೈ** | ಈ ಭೂಮಿಯು ಅಗ್ನಿಯು ತನ್ನನ್ನು ಅತಿಯಾಗಿ ಸುಡಬಹುದೆಂದು ಹೆದರಿದಳು. |
| **ಸಾ ಏತಾಃ ಅಪಸ್ಯಾಃ ಅಪಶ್ಯತ್** | ಆ ಭೂಮಿಯು ಅದರ ಪರಿಹಾರಕ್ಕಾಗಿ ಅಪಸ್ಯೇಷ್ಟಕೆಗಳನ್ನು ಆಲೋಚಿಸಿ ತಿಳಿದುಕೊಂಡಳು. |
| **ತಾಃ ಉಪಾಧತ್ತ** | ಅನಂತರ ಅವುಗಳನ್ನು ಉಪಧಾನ ಮಾಡಿದಳು. |
| **ತತಃ ವೈ ಇಮಾಮ್ ನ ಅತಿ ಅದಹತ್** | ಬಳಿಕ ಅಗ್ನಿಯು ಭೂಮಿಯನ್ನು ಅತಿಯಾಗಿ ಸುಡಲಿಲ್ಲ. |
| **ಯತ್ ಅಪಸ್ಯಾಃ ಉಪದಧಾತಿ ಅಸ್ಯಾಃ ಅನತಿದಾಹಾಯ** | ಅಪಸ್ಯೇಷ್ಟಕೆಗಳನ್ನು ಉಪಧಾನ ಮಾಡುವುದೆಂಬುದು ಭೂಮಿಯ ದಾಹಶಾಂತಿಗೆ ನಿಮಿತ್ತವಾಗುತ್ತದೆ. |

**ಅಪಸ್ಯೇಷ್ಟಕೆಯ ಪ್ರಶಂಸೆ; ಇನ್ನೊಂದು ರೀತಿ**

| | |
|---|---|
| **ಇಯಮ್ ಯಸ್ಯ ಏತಾಃ ಉಪಧೀಯಾಂತೈ** | ಈ ಭೂಮಿಯು 'ಯಾವ ಯಜಮಾನನ ನಿಮಿತ್ತವಾಗಿ ಈ ಅಪಸ್ಯೇಷ್ಟಕೆಗಳು ಉಪಧಾನ ಮಾಡಲ್ಪಡುತ್ತವೆಯೋ |

ಯ ಉ ಚೈನಾ ಏವಂ ವೇದದಿತಿ ಪ್ರಾಣಭೃತ ಉಪ ದಧಾತಿ ರೇತಸ್ಯೇವ ಪ್ರಾಣಾನ್ದಧಾತಿ ತಸ್ಮಾದ್ವದನ್ಪ್ರಾಣನ್ಪಶ್ಯಞ್ಛೃಣ್ವನ್ಪಶುರ್ಜಾಯತೇಽಯಂ ಪುರೋ [ಪುರಃ(೫೬)]ಭುವ ಇತಿ ಪುರಸ್ತಾದುಪದಧಾತಿ

---

ಯಃ । ಉ । ಚ । ಏನಾಃ । ಏವಮ್ । ವೇದತ್ । ಇತಿ । ಪ್ರಾಣಭೃತ ಇತಿ ಪ್ರಾಣ-ಭೃತಃ । ಉಪೇತಿ । ದಧಾತಿ । ರೇತಸಿ । ಏವ । ಪ್ರಾಣಾನಿತಿ ಪ್ರ-ಅನಾನ್ । ದಧಾತಿ । ತಸ್ಮಾತ್ । ವದನ್ । ಪ್ರಾಣನ್ನಿತಿ ಪ್ರ-ಅನನ್ । ಪಶ್ಯನ್ । ಶೃಣ್ವನ್ । ಪಶುಃ । ಜಾಯತೇ । ಅಯಮ್ । ಪುರಃ । (೫೬) । ಭುವಃ । ಇತಿ । ಪುರಸ್ತಾತ್ । ಉಪೇತಿ । ದಧಾತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯಃ ಉ ಚ ಏನಾಃ ಏವಮ್ ವೇದತ್** | ಯಾವ ಯಜಮಾನನು ಈ ಇಷ್ಟಕೆಗಳನ್ನು ಈ ರೀತಿಯಾಗಿ ತಿಳಿದಿರುವನೋ |
| **ಸಃ ಬ್ರಹ್ಮಣಾ ಇತ್ ಅನ್ನಮ್ ಅದತ್ ಇತಿ ಉವಾಚ ಹ** | ಅವನು ಮುಖ್ಯವೃತ್ತಿಯಿಂದಲೇ ಅನ್ನವನ್ನು ತಿನ್ನುತ್ತಾನೆ, ಎಂದು ಹೇಳಿದಳು. |

ಪ್ರಾಣಭೃದಿಷ್ಟಕೋಪಧಾನವಿಧಿ; ಅರ್ಥವಾದ

| | |
|---|---|
| **ಪ್ರಾಣಭೃತಃ ಉಪದಧಾತಿ** | **'ಅಯಂ ಪುರಃ'** ಮೊದಲಾದ ಮಂತ್ರಗಳಿಂದ **'ಪ್ರಾಣಭೃತ್'** ನಾಮಕವಾದ ಇಷ್ಟಕೆಗಳನ್ನು ಉಪಧಾನ ಮಾಡಬೇಕು. |
| **ರೇತಸಿ ಏವ ಪ್ರಾಣಾನ್ ದಧಾತಿ** | ಇದರಿಂದ ಅಧ್ವರ್ಯುವು ಅಪಸ್ಯೇಷ್ಟಕೆಯಿಂದ ಇಡಲ್ಪಟ್ಟ ರೇತಸ್ಸಿನಲ್ಲಿಯೇ ಪ್ರಾಣಗಳನ್ನು ಸ್ಥಾಪಿಸಿದವನಾಗುತ್ತಾನೆ. |
| **ತಸ್ಮಾತ್ ವದನ್ ಪ್ರಾಣನ್ ಪಶ್ಯನ್ ಶೃಣ್ವನ್ ಪಶುಃ ಜಾಯತೇ** | ಆದುದರಿಂದ ಪಶುವು ಮಾತನಾಡುತ್ತಾ(ವಾಗ್ವ್ಯಾಪಾರವುಳ್ಳದ್ದಾಗಿ) ಉಸಿರಾಡುತ್ತಲೂ, ನೋಡುತ್ತಲೂ, ಕೇಳುತ್ತಲೂ, ಹುಟ್ಟುತ್ತದೆ. |
| **ಅಯಮ್ ಪುರಃ ಭುವಃ ಇತಿ ಪುರಸ್ತಾತ್ ಉಪದಧಾತಿ** | **'ಅಯಮ್ ಪುರೋ ಭುವಃ'** ಎಂಬ ಮಂತ್ರದಿಂದ ಪೂರ್ವದಿಕ್ಕಿನಲ್ಲಿ ಪ್ರಾಣಭೃದಿಷ್ಟಕೆಗಳನ್ನು ಉಪಧಾನ ಮಾಡಬೇಕು. |

ಪ್ರಾಣಮೇವೈತಾಭಿರ್ದಾಧಾರಾಯಂ ದಕ್ಷಿಣಾ ವಿಶ್ವಕರ್ಮೇತಿ ದಕ್ಷಿಣತೋ ಮನ ಏವೈತಾಭಿರ್ದಾಧಾರಾಯಂ ಪಶ್ಚಾದ್ವಿಶ್ವವ್ಯಚಾ ಇತಿ ಪಶ್ಚಾಚ್ಚಕ್ಷುರೇವೈತಾಭಿರ್ದಾಧಾರೇದಮುತ್ತರಾತ್ಸುವರಿತ್ಯುತ್ತರತಃ ಶ್ರೋತ್ರಮೇವೈತಾಭಿರ್ದಾಧಾರೇ

---

ಪ್ರಾಣಮಿತಿ ಪ್ರ-ಅನಮ್ । ಏವ । ಏತಾಭಿಃ । ದಾಧಾರ । ಅಯಮ್ । ದಕ್ಷಿಣಾ । ವಿಶ್ವಕರ್ಮೇತಿ ವಿಶ್ವ-ಕರ್ಮಾ । ಇತಿ । ದಕ್ಷಿಣತಃ । ಮನಃ । ಏವ । ಏತಾಭಿಃ । ದಾಧಾರ । ಅಯಮ್ । ಪಶ್ಚಾತ್ । ವಿಶ್ವವ್ಯಚಾ ಇತಿ ವಿಶ್ವ-ವ್ಯಚಾಃ । ಇತಿ । ಪಶ್ಚಾತ್ । ಚಕ್ಷುಃ । ಏವ । ಏತಾಭಿಃ । ದಾಧಾರ । ಇದಮ್ । ಉತ್ತರಾದಿತ್ಯುತ್-ತರಾತ್ । ಸುವಃ । ಇತಿ । ಉತ್ತರತ ಇತ್ಯುತ್-ತರತಃ । ಶ್ರೋತ್ರಮ್ । ಏವ । ಏತಾಭಿಃ । ದಾಧಾರ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಏತಾಭಿಃ ಪ್ರಾಣಮ್ ಏವ ದಾಧಾರ** | ಈ ಇಷ್ಟಕೆಗಳ ಉಪಧಾನದಿಂದ ಈ ಚಿತ್ಯಾಗ್ನಿಯು/ಯಜಮಾನನು ಪ್ರಾಣವನ್ನು ಧರಿಸಿದವನಾಗುತ್ತಾನೆ. |
| **ಅಯಮ್ ದಕ್ಷಿಣಾ ವಿಶ್ವಕರ್ಮಾ ಇತಿ ದಕ್ಷಿಣತಃ** ಉಪದಧಾತಿ | **'ಅಯಂ ದಕ್ಷಿಣಾ ವಿಶ್ವಕರ್ಮಾ'** ಎಂಬ ಮಂತ್ರದಿಂದ ದಕ್ಷಿಣದಿಕ್ಕಿನಲ್ಲಿ ಪ್ರಾಣಭೃದಿಷ್ಟಕೆಗಳನ್ನು ಉಪಧಾನ ಮಾಡಬೇಕು. |
| **ಏತಾಭಿಃ ಮನಃ ಏವ ದಾಧಾರ** | ಈ ಇಷ್ಟಕೆಗಳಿಂದ ಚಿತ್ಯಾಗ್ನಿಯು/ಯಜಮಾನನು ಮನಸ್ಸನ್ನೇ ಧರಿಸಿದವನಾಗುತ್ತಾನೆ. |
| **ಅಯಮ್ ಪಶ್ಚಾತ್ ವಿಶ್ವವ್ಯಚಾಃ ಇತಿ ಪಶ್ಚಾತ್** ಉಪದಧಾತಿ | **'ಅಯಂ ಪಶ್ಚಾತ್ ವಿಶ್ವವ್ಯಚಾಃ'** ಎಂಬ ಮಂತ್ರದಿಂದ ಪಶ್ಚಿಮ ದಿಕ್ಕಿನಲ್ಲಿ ಪ್ರಾಣಭೃದಿಷ್ಟಕೆಗಳನ್ನು ಉಪಧಾನ ಮಾಡಬೇಕು. |
| **ಏತಾಭಿಃ ಚಕ್ಷುಃ ಏವ ದಾಧಾರ** | ಈ ಇಷ್ಟಕೆಗಳ ಉಪಧಾನದಿಂದ ಚಿತ್ಯಾಗ್ನಿಯು/ಯಜಮಾನನು ಕಣ್ಣನ್ನು ಧರಿಸಿದವನಾಗುತ್ತಾನೆ. |
| **ಇದಮ್ ಉತ್ತರಾತ್ ಸುವಃ ಇತಿ ಉತ್ತರತಃ** ಉಪದಧಾತಿ | **'ಇದಮುತ್ತರಾತ್ ಸುವಃ'** ಎಂಬ ಮಂತ್ರದಿಂದ ಉತ್ತರ ದಿಕ್ಕಿನಲ್ಲಿ ಪ್ರಾಣಭೃದಿಷ್ಟಕೆಗಳನ್ನು ಉಪಧಾನ ಮಾಡಬೇಕು. |
| **ಏತಾಭಿಃ ಶ್ರೋತ್ರಮ್ ಏವ ದಾಧಾರ** | ಇವುಗಳಿಂದ ಚಿತ್ಯಾಗ್ನಿಯು/ಯಜಮಾನನು ಶ್ರೋತ್ರೇಂದ್ರಿಯವನ್ನೇ ಧಾರಣ ಮಾಡಿದವನಾಗುತ್ತಾನೆ. |

–ಯಮುಪರಿ ಮತಿರಿತ್ಯುಪರಿಷ್ಟಾದ್ವಾಚಮೇವೈತಾಭಿರ್ದಾಧಾರ ದಶದಶೋಪ

ದಧಾತಿ ಸವೀರ್ಯತ್ವಾಯಾಕ್ಷ್ಣಯೋ[ಅಕ್ಷ್ಣಯಾ(೫೭)ಉಪ]ಪದಧಾತಿ

ತಸ್ಮಾದಕ್ಷ್ಣಯಾ ಪಶವೋಽಂಗಾನಿ ಪ್ರಹರಂತಿ

---

ಇಯಮ್ । ಉಪರಿ । ಮತಿಃ । ಇತಿ । ಉಪರಿಷ್ಟಾತ್ । ವಾಚಮ್ । ಏವ । ಏತಾಭಿಃ । ದಾಧಾರ । ದಶದಶೇತಿ ದಶ–ದಶ । ಉಪೇತಿ । ದಧಾತಿ । ಸವೀರ್ಯತ್ವಾಯೇತಿ ಸವೀರ್ಯ–ತ್ವಾಯ । ಅಕ್ಷ್ಣಯಾ । (೫೭) । ಉಪೇತಿ । ದಧಾತಿ । ತಸ್ಮಾತ್ । ಅಕ್ಷ್ಣಯಾ । ಪಶವಃ । ಅಂಗಾನಿ । ಪ್ರೇತಿ । ಹರಂತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಇಯಮ್ ಉಪರಿ ಮತಿಃ ಇತಿ ಉಪರಿಷ್ಟಾತ್** ಉಪದಧಾತಿ | 'ಇಯಮ್ ಉಪರಿ ಮತಿಃ' ಎಂಬ ಮಂತ್ರದಿಂದ ಮೇಲ್ಭಾಗದಲ್ಲಿ ಪ್ರಾಣಭೃದಿಷ್ಟಕೆಗಳನ್ನು ಉಪಧಾನ ಮಾಡಬೇಕು. |
| **ಏತಾಭಿಃ ವಾಚಮ್ ಏವ ದಾಧಾರ** | ಇವುಗಳಿಂದ ಚಿತ್ಯಾಗ್ನಿಯು/ಯಜಮಾನನು ವಾಗಿಂದ್ರಿಯವನ್ನು ಧರಿಸಿದವನಾಗುತ್ತಾನೆ. |

**ಒಂದೊಂದು ದಿಕ್ಕಿನ ಇಷ್ಟಕೆಗಳ ಸಂಖ್ಯೆ**

| | |
|---|---|
| **ದಶದಶ ಉಪದಧಾತಿ** | 'ಅಯಂ ಪುರಃ' ಮುಂತಾದ ಆಯಾ ದಿಕ್ಕಿನ ಮಂತ್ರಗಳನ್ನು ಹತ್ತು ಬಾರಿ ಆವರ್ತನೆ ಮಾಡಿ 'ತಯಾ ದೇವತಯಾಂಗಿರಸ್ವದ್ಧ್ರುವಾ ಸೀದ' ಎಂದು ಹೇಳಿ ಒಂದೊಂದು ಮಂತ್ರಕ್ಕೆ ಒಂದೊಂದು ಇಷ್ಟಕೆಯಂತೆ ಪ್ರತಿದಿಕ್ಕಿನಲ್ಲಿ ಹತ್ತು ಇಷ್ಟಕೆಗಳನ್ನು ಉಪಧಾನ ಮಾಡಬೇಕು. |
| **ಸವೀರ್ಯತ್ವಾಯ** | ಇದು ಚಿತ್ಯಾಗ್ನಿಯ ದಾರ್ಢ್ಯಕ್ಕೆ ಕಾರಣವಾಗುತ್ತದೆ. |

ಉಪಧಾನಕ್ರಮ

| | |
|---|---|
| **ಅಕ್ಷ್ಣಯಾ ಉಪದಧಾತಿ** | ನೈರ್ಋತ್ಯದಿಂದ ಆರಂಭಿಸಿ ಈಶಾನ್ಯಪರ್ಯಂತವಾಗಿ ವಕ್ರವಾಗಿ ಉಪಧಾನವನ್ನು ಮಾಡಬೇಕು. |
| **ತಸ್ಮಾತ್ ಪಶವಃ ಅಂಗಾನಿ ಅಕ್ಷ್ಣಯಾ ಪ್ರಹರಂತಿ** | ಆದುದರಿಂದಲೇ ಪಶುಗಳು ವಕ್ರವಾಗಿ ತಮ್ಮ ಪಾದಗಳನ್ನು ಇಡುತ್ತವೆ. |

ಪ್ರತಿಷ್ಠಿತ್ಯೈ ಯಾಃ ಪ್ರಾಚೀಸ್ತಾಭಿರ್ವಸಿಷ್ಠ ಆರ್ಧ್ನೋದ್ಯಾ ದಕ್ಷಿಣಾ

ತಾಭಿರ್ಭರದ್ವಾಜೋ ಯಾಃ ಪ್ರತೀಚೀಸ್ತಾಭಿರ್ವಿಶ್ವಾಮಿತ್ರೋ ಯಾ

ಉದೀಚೀಸ್ತಾಭಿರ್ಜಮದಗ್ನಿರ್ಯಾ ಊರ್ಧ್ವಾಸ್ತಾಭಿರ್ವಿಶ್ವಕರ್ಮಾ

---

ಪ್ರತಿಷ್ಠಿತ್ಯಾ ಇತಿ ಪ್ರತಿ-ಸ್ಥಿತ್ಯೈ । ಯಾಃ । ಪ್ರಾಚೀಃ । ತಾಭಿಃ । ವಸಿಷ್ಠಃ । ಆರ್ಧ್ನೋತ್ । ಯಾಃ । ದಕ್ಷಿಣಾ । ತಾಭಿಃ । ಭರದ್ವಾಜಃ । ಯಾಃ । ಪ್ರತೀಚೀಃ । ತಾಭಿಃ । ವಿಶ್ವಾಮಿತ್ರ ಇತಿ ವಿಶ್ವ-ಮಿತ್ರಃ । ಯಾಃ । ಉದೀಚೀಃ । ತಾಭಿಃ । ಜಮದಗ್ನಿಃ । ಯಾಃ । ಊರ್ಧ್ವಾಃ । ತಾಭಿಃ । ವಿಶ್ವಕರ್ಮೇತಿ ವಿಶ್ವ-ಕರ್ಮಾ ।

---

| ಬ್ರಾಹ್ಮಣಭಾಗ | ವಿವರಣೆ |
|---|---|

**ಆಯಾ ದಿಕ್ಕಿನ ಇಷ್ಟಕೆಗಳ-ಋಷಿಗಳ ಪ್ರಶಂಸೆ**

| | |
|---|---|
| **ಪ್ರತಿಷ್ಠಿತ್ಯೈ** | ಇದು ಯಜಮಾನನ ಪ್ರಕೃಷ್ಟಸ್ಥಿತಿಗೆ ಕಾರಣವಾಗುತ್ತದೆ. |
| **ಯಾಃ ಪ್ರಾಚೀಃ ತಾಭಿಃ ವಸಿಷ್ಠಃ ಆರ್ಧ್ನೋತ್** | ಅಧ್ವರ್ಯುವು ಪೂರ್ವದಿಕ್ಕಿನಲ್ಲಿ ಯಾವ ಇಷ್ಟಕೆಗಳನ್ನು ಉಪಧಾನ ಮಾಡಿದನೋ ಆ ಇಷ್ಟಕೆಗಳಿಂದ ವಸಿಷ್ಠಮಹರ್ಷಿಯು ವೃದ್ಧಿ ಹೊಂದಿದನು. |
| **ಯಾಃ ದಕ್ಷಿಣಾ ತಾಭಿಃ ಭರದ್ವಾಜಃ** ಆರ್ಧ್ನೋತ್ | ದಕ್ಷಿಣದಿಕ್ಕಿನಲ್ಲಿ ಯಾವ ಇಷ್ಟಕೆಗಳನ್ನು ಉಪಧಾನ ಮಾಡಿದನೋ ಆ ಇಷ್ಟಕೆಗಳಿಂದ ಭರದ್ವಾಜ ಮಹರ್ಷಿಯು ವೃದ್ಧಿ ಹೊಂದಿದನು. |
| **ಯಾಃ ಪ್ರತೀಚೀಃ ತಾಭಿಃ ವಿಶ್ವಾಮಿತ್ರಃ** ಆರ್ಧ್ನೋತ್ | ಅಧ್ವರ್ಯುವು ಪಶ್ಚಿಮದಿಕ್ಕಿಗೆ ಸಂಬಂಧಿಸಿದಂತೆ ಯಾವ ಇಷ್ಟಕೆಗಳನ್ನು ಉಪಧಾನ ಮಾಡಿದನೋ ಆ ಇಷ್ಟಕೆಗಳಿಂದ ವಿಶ್ವಾಮಿತ್ರಮಹರ್ಷಿಯು ವೃದ್ಧಿಯನ್ನು ಹೊಂದಿದನು. |
| **ಯಾಃ ಉದೀಚೀಃ ತಾಭಿಃ ಜಮದಗ್ನಿಃ** ಆರ್ಧ್ನೋತ್ | ಅಧ್ವರ್ಯುವು ಉತ್ತರದಿಕ್ಕಿಗೆ ಸಂಬಂಧಿಸಿದಂತೆ ಉಪಧಾನ ಮಾಡಿದ ಇಷ್ಟಕೆಗಳಿಂದ ಜಮದಗ್ನಿ ಮಹರ್ಷಿಯು ವೃದ್ಧಿಯನ್ನು ಹೊಂದಿದನು. |
| **ಯಾಃ ಊರ್ಧ್ವಾಃ ತಾಭಿಃ ವಿಶ್ವಕರ್ಮಾ** ಆರ್ಧ್ನೋತ್ | ಅಧ್ವರ್ಯುವು ಮೇಲ್ಭಾಗದಲ್ಲಿ ಮಾಡಿದ ಇಷ್ಟಕೆಗಳ ಉಪಧಾನದಿಂದ ವಿಶ್ವಕರ್ಮನು ವೃದ್ಧಿಯನ್ನು ಹೊಂದಿದನು. |

ಯ ಏವಮೇತಾಸಾಮೃದ್ಧಿಂ ವೇದರ್ಧ್ನೋತ್ಯೇವ ಯ ಆಸಾಮೇವಂ ಬಂಧುತಾಂ ವೇದ ಬಂಧುಮಾನ್ಭವತಿ ಯ ಆಸಾಮೇವಂ ಕ್ಲೃಪ್ತಿಂ ವೇದ ಕಲ್ಪತೇ[ಕಲ್ಪತೇ (೫೮)ಅಸ್ಮೈ]ಽಸ್ಮೈ ಯ ಆಸಾಮೇವಮಾಯತನಂ ವೇದಾಯತನವಾನ್ಭವತಿ

---

ಯಃ । ಏವಮ್ । ಏತಾಸಾಮ್ । ಋದ್ಧಿಮ್ । ವೇದ । ಋಧ್ನೋತಿ । ಏವ । ಯಃ । ಆಸಾಮ್ । ಏವಮ್ । ಬಂಧುತಾಮ್ । ವೇದ । ಬಂಧುಮಾನಿತಿ ಬಂಧು-ಮಾನ್ । ಭವತಿ । ಯಃ । ಆಸಾಮ್ । ಏವಮ್ । ಕ್ಲೃಪ್ತಿಮ್ । ವೇದ । ಕಲ್ಪತೇ । (೫೮) । ಅಸ್ಮೈ । ಯಃ । ಆಸಾಮ್ । ಏವಮ್ । ಆಯತನಮಿತ್ಯಾ-ಯತನಮ್ । ವೇದ । ಆಯತನವಾನಿತ್ಯಾಯತನ-ವಾನ್ । ಭವತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯಃ ಏವಮ್ ಏತಾಸಾಮ್ ಋದ್ಧಿಮ್ ವೇದ** | ಯಾವ ಯಜಮಾನನು ಈ ಇಷ್ಟಕೆಗಳು ಋದ್ಧಿಯ ಕಾರಣವಾಗಿರುವುದನ್ನು ಅರಿತಿರುವನೋ, |
| **ಋಧ್ನೋತಿ ಏವ** | ಆತನು ನಿಶ್ಚಯವಾಗಿಯೂ ಸಮೃದ್ಧಿಯನ್ನು ಹೊಂದುವನು. |
| **ಯಃ ಆಸಾಮ್ ಏವಮ್ ಬಂಧುತಾಮ್ ವೇದ** | ಯಾವ ಯಜಮಾನನು ಈ ಇಷ್ಟಕೆಗಳ ದೇಶವಿಶೇಷ ರೂಪವಾದ ಬಂಧುಸಮೂಹವನ್ನು ತಿಳಿದಿರುವನೋ |
| **ಬಂಧುಮಾನ್ ಭವತಿ** | ಅವನು ಬಂಧುಸಮೂಹವನ್ನು ಹೊಂದುತ್ತಾನೆ. |
| **ಯಃ ಆಸಾಮ್ ಏವಮ್ ಕ್ಲೃಪ್ತಿಮ್ ವೇದ** | ಯಾವ ಯಜಮಾನನು ಈ ಇಷ್ಟಕೆಗಳ ವಕ್ರತ್ವಕಲ್ಪನೆಯನ್ನು/ಸಮೃದ್ಧಿಗೆ ಕಾರಣವಾಗುವ ಸಾಮರ್ಥ್ಯವನ್ನು ಅರಿತಿರುವನೋ |
| **ಅಸ್ಮೈ ಕಲ್ಪತೇ** | ಅವನು ಕಲ್ಪನೆಯನ್ನು/ಅವನಿಗೆ ಇಷ್ಟಕೆಗಳು ಋದ್ಧಿಯನ್ನು ಉಂಟುಮಾಡುವಂತಹವುಗಳಾಗುತ್ತವೆ./ಹೊಂದುತ್ತಾನೆ. |
| **ಯಃ ಆಸಾಮ್ ಏವಮ್ ಆಯತನಮ್ ವೇದ** | ಯಾವ ಯಜಮಾನನು ಈ ಇಷ್ಟಕೆಗಳ ಈ ರೀತಿಯ ಪೂರ್ವವೇ ಮೊದಲಾದ ಸ್ಥಾನವನ್ನು ತಿಳಿದಿರುವನೋ |
| **ಆಯತನವಾನ್ ಭವತಿ** | ಅವನು ಸ್ಥಾನವಂತನೇ ಆಗುತ್ತಾನೆ/ಪ್ರಶಸ್ತಸ್ಥಾನವನ್ನೇ ಹೊಂದುವನು. |

ಯ ಆಸಾಮೇವಂ ಪ್ರತಿಷ್ಠಾಂ ವೇದ ಪ್ರತ್ಯೇವ ತಿಷ್ಠತಿ ಪ್ರಾಣಭೃತ ಉಪಧಾಯ ಸಂಯತ ಉಪದಧಾತಿ ಪ್ರಾಣಾನೇವಾಸ್ಮಿನ್ಧಿತ್ವಾ ಸಂಯದ್ಭಿಸ್ಸಂಯಚ್ಛತಿ

---

ಯಃ । ಆಸಾಮ್ । ಏವಮ್ । ಪ್ರತಿಷ್ಠಾಮಿತಿ ಪ್ರತಿ–ಸ್ಥಾಮ್ । ವೇದ । ಪ್ರತೀತಿ । ಏವ । ತಿಷ್ಠತಿ । ಪ್ರಾಣಭೃತ ಇತಿ ಪ್ರಾಣ–ಭೃತಃ । ಉಪಧಾಯೇತ್ಯುಪ–ಧಾಯ । ಸಂಯತ ಇತಿ ಸಮ್–ಯತಃ । ಉಪೇತಿ । ದಧಾತಿ । ಪ್ರಾಣಾನಿತಿ ಪ್ರ–ಅನಾನ್ । ಏವ । ಅಸ್ಮಿನ್ನ್ । ಧಿತ್ವಾ । ಸಂಯದ್ಭಿರಿತಿ ಸಂಯತ್–ಭಿಃ । ಸಮಿತಿ । ಯಚ್ಛತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯಃ ಆಸಾಮ್ ಏವಮ್ ಪ್ರತಿಷ್ಠಾಮ್ ವೇದ** | ಯಾವ ಯಜಮಾನನು ಈ ಇಷ್ಟಕೆಗಳ ಪ್ರಕೃಷ್ಟಸ್ಥಿತಿಯನ್ನು ಅರಿತಿರುವನೋ |
| **ಪ್ರತಿ ತಿಷ್ಠತಿ ಏವ** | ಅವನು ಪ್ರತಿಷ್ಠಾವಂತನೇ/ಉತ್ತಮ ಸ್ಥಿತಿವಂತನೇ ಆಗುವನು. |

ಸಂಯದಿಷ್ಟಕೋಪಧಾನ/ಅಪಾನಭೃದಿಷ್ಟಕೋಪಧಾನ

| | |
|---|---|
| **ಪ್ರಾಣಭೃತಃ ಉಪಧಾಯ*** | ಅಂತರ್ದೇಶದಲ್ಲಿ ಪ್ರಾಣಭೃದಿಷ್ಟಕೆಗಳನ್ನು ಉಪಧಾನ ಮಾಡಿ |
| **ಸಂಯತಃ ಉಪದಧಾತಿ** | ಹೊರಭಾಗದಲ್ಲಿ/ಬಹಿರ್ದೇಶದಲ್ಲಿ ಸಂಯದಿಷ್ಟಕೆಗಳನ್ನು ಉಪಧಾನ ಮಾಡಬೇಕು. ಇವೇ ಅಪಾನಭೃದಿಷ್ಟಕೆಗಳು. |
| **ಅಸ್ಮಿನ್ ಪ್ರಾಣಾನ್ ಧಿತ್ವಾ** | ಅಗ್ನಿಯಲ್ಲಿ ಪ್ರಾಣಗಳನ್ನು ಸ್ಥಾಪಿಸಿಯೇ |
| **ಏವ ಸಂಯದ್ಭಿಃ ಸಂಯಚ್ಛತಿ** | ಸಂಯದಿಷ್ಟಕೆಗಳಿಂದ ದೃಢಪಡಿಸುತ್ತಾನೆ. |

---

**ತಾತ್ಪರ್ಯ:–** ಪ್ರಾಣಭೃದಿಷ್ಟಕೆಗಳನ್ನು ಕುರಿತು ವಿವಿಧವಾದ ಅರಿವು ವಿವಿಧಫಲಗಳನ್ನು ನೀಡುವುದರಿಂದ ಅದರ ಅರಿವು/ವೇದನವು ಪ್ರಶಸ್ತ ಎಂದು ತಾತ್ಪರ್ಯ.

---

* **'ಪ್ರಾಣಭೃತಃ ಉಪದಧಾತಿ'** ಎಂಬಲ್ಲಿ **'ಛತ್ರಿಣೋ ಯಾಂತಿ'** ಎಂಬ ವಾಕ್ಯದಲ್ಲಿ ಛತ್ರಿಯನ್ನು ಹಿಡಿಯದಿದ್ದವರೂ **'ಛತ್ರೀ'** ಎಂಬ ಹೆಸರನ್ನು ಹೊಂದುವಂತೆ ಸಾಹಚರ್ಯದಿಂದ ಪ್ರಾಣಭೃತ್‌ಗಳಲ್ಲದ (ಪ್ರಾಣ ಎಂಬ ಶಬ್ದವು ಇಲ್ಲದ) ಮಂತ್ರಗಳೂ **'ಪ್ರಾಣಭೃತ್'** ಎನಿಸಿಕೊಳ್ಳುತ್ತವೆ. ಇಷ್ಟಕೆಗಳೂ **ಪ್ರಾಣಭೃತ್**‌ಗಳೇ.

ತತ್ಸಂಯತಾಗ್ಂ ಸಂಯತ್ತ್ವಮಥೋ ಪ್ರಾಣ ಏವಾಪಾನಂ ದಧಾತಿ
ತಸ್ಮಾತ್ಪ್ರಾಣಾಪಾನೌ ಸಂಚರತೋ ವಿಷೂಚೀರುಪದಧಾತಿ ತಸ್ಮಾದ್ವಿಷ್ವಂಚೌ
ಪ್ರಾಣಾಪಾನೌ ಯದ್ವಾ ಅಗ್ನೇರಸಂಯತಮ[ಅಸಂಯತಮ್(೫೯)

---

ತತ್ । ಸಂಯತಾಮಿತಿ ಸಮ್-ಯತಾಮ್ । ಸಂಯತ್ತ್ವಮಿತಿ ಸಂಯತ್-ತ್ವಮ್ । ಅಥೋ ಇತಿ । ಪ್ರಾಣ ಇತಿ ಪ್ರ-ಅನೇ । ಏವ । ಅಪಾನಮಿತ್ಯಪ-ಅನಮ್ । ದಧಾತಿ । ತಸ್ಮಾತ್ । ಪ್ರಾಣಾಪಾನಾವಿತಿ ಪ್ರಾಣ-ಅಪಾನೌ । ಸಮಿತಿ । ಚರತಃ । ವಿಷೂಚೀಃ । ಉಪೇತಿ । ದಧಾತಿ । ತಸ್ಮಾತ್ । ವಿಷ್ವಂಚೌ । ಪ್ರಾಣಾಪಾನಾವಿತಿ ಪ್ರಾಣ-ಅಪಾನೌ । ಯತ್ । ವೈ । ಅಗ್ನೇಃ । ಅಸಂಯತಮಿತ್ಯಸಮ್-ಯತಮ್ । (೫೯) ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ತತ್ ಸಂಯತಾಮ್ ಸಂಯತ್ತ್ವಮ್** | ದೃಢಪಡಿಸುವುದೇ ಸಂಯದಿಷ್ಟಕೆಗಳ ಸಂಯತ್ತ್ವ. |
| **ಅಥೋ ಪ್ರಾಣೇ ಏವ ಅಪಾನಮ್ ದಧಾತಿ** | ಈ ಸಂಯದಿಷ್ಟಕೆಗಳ ಉಪಧಾನದಿಂದ ಬಹಿಸ್ಸಂಚಾರ ರೂಪವಾದ ಪ್ರಾಣದಲ್ಲಿ ಅಂತಃಸಂಚಾರರೂಪವಾದ ಅಪಾನವನ್ನು ಅಧ್ವರ್ಯುವು ಸ್ಥಾಪಿಸಿದವನಾಗುತ್ತಾನೆ. |
| **ತಸ್ಮಾತ್ ಪ್ರಾಣಾಪಾನೌ ಸಂಚರತಃ** | ಆದುದರಿಂದ ಲೋಕದಲ್ಲಿ ಪ್ರಾಣ-ಅಪಾನಗಳು ಜೊತೆಯಾಗಿ ಸಂಚರಿಸುತ್ತವೆ. |
| **ವಿಷೂಚೀಃ ಉಪದಧಾತಿ ತಸ್ಮಾತ್ ವಿಷ್ವಂಚೌ ಪ್ರಾಣಾಪಾನೌ** | ಪ್ರಾಣಭೃದಿಷ್ಟಕೆಗಳಿಗೆ ವಿಪರೀತಕ್ರಮದಲ್ಲಿ/ವಿರುದ್ಧವಾದ ರೀತಿಯಲ್ಲಿ ಅಪಾನಭೃದಿಷ್ಟಕೆಗಳನ್ನು ಉಪಧಾನ ಮಾಡಬೇಕು. ಅದ್ದರಿಂದ ಪ್ರಾಣ-ಅಪಾನಗಳು ವಿಪರೀತಕ್ರಮ/ವಿರುದ್ಧಕ್ರಮವುಳ್ಳವುಗಳು. |

ಸಂಯದಿಷ್ಟಕೋಪಧಾನದ ಪ್ರಶಂಸೆ

| | |
|---|---|
| **ಅಗ್ನೇಃ ಯತ್ ಅಸಂಯತಮ್ ವೈ** | ಅಗ್ನಿಯ ಯಾವ ಅಂಗವು ನಿಯಮಿತವಲ್ಲವೋ |

---

ಬಹಿಃಸಂಚಾರ ಮಾಡುವ ವಾಯುವು ಪ್ರಾಣ. ಅಂತಃಸಂಚಾರ ಮಾಡುವ ವಾಯುವು ಅಪಾನ. ಇದಕ್ಕೆ ಅನುಗುಣವಾಗಿ ಇಷ್ಟಕೆಗಳ ಸ್ಥಾನ. **'ಸಂಯಚ್ಛತಿ ಏತಾಭಿಃ'** ಎಂಬ ವ್ಯುತ್ಪತ್ತಿಯಿಂದ ಪ್ರಾಣಭೃದಿಷ್ಟಕೆಗಳನ್ನು ದೃಢಪಡಿಸುವುದರಿಂದ ಸಂಯದಿಷ್ಟಕೆಗಳೆನಿಸಿವೆ. ಅವುಗಳಿಗೆ ಅನ್ವರ್ಥವಾದ ಹೆಸರು ಇದೆ.

ಅಸುವರ್ಗ್ಯಮಸ್ಯ]ಸುವರ್ಗ್ಯಮಸ್ಯ ತತ್ಸುವರ್ಗ್ಯೋಽಗ್ನಿರ್ಯತ್ಸಂಯತ ಉಪದಧಾತಿ ಸಮೇವೈನಂ ಯಚ್ಛತಿ ಸುವರ್ಗ್ಯಮೇವಾಕಸ್ತ್ರ್ಯವಿರ್ವಯಃ ಕೃತಮಯಾನಾಮಿತ್ಯಾಹ ವಯೋಭಿರೇವಾಯಾನವರುಂಧೇಽಯ್ಯೈರ್ವಯಾಗ್ಂಸಿ

---

ಅಸುವರ್ಗ್ಯಮಿತ್ಯಸುವಃ-ಗ್ಯಮ್ । ಅಸ್ಯ । ತತ್ । ಸುವರ್ಗ್ಯ ಇತಿ ಸುವಃ-ಗ್ಯಃ । ಅಗ್ನಿಃ । ಯತ್ । ಸಂಯತ ಇತಿ ಸಮ್-ಯತಃ । ಉಪದಧಾತೀತ್ಯುಪ-ದಧಾತಿ । ಸಮಿತಿ । ಏವ । ಏನಮ್ । ಯಚ್ಛತಿ । ಸುವರ್ಗ್ಯಮಿತಿ ಸುವಃ-ಗ್ಯಮ್ । ಏವ । ಅಕಃ । ತ್ರ್ಯವಿರಿತಿ ತ್ರಿ-ಅವಿಃ । ವಯಃ । ಕೃತಮ್ । ಅಯಾನಾಮ್ । ಇತಿ । ಆಹ । ವಯೋಭಿರಿತಿ ವಯಃ-ಭಿಃ । ಏವ । ಅಯಾನ್ । ಅವೇತಿ । ರುಂಧೇ । ಅಯ್ಯೈಃ । ವಯಾಗ್ಂಸಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ತತ್ ಅಸ್ಯ ಅಸುವರ್ಗ್ಯಮ್** | ಅದು ಈ ಯಜಮಾನನಿಗೆ ಸ್ವರ್ಗಹಿತವಾಗುವುದಿಲ್ಲ. |
| **ಅಗ್ನಿಃ ಸುವರ್ಗ್ಯಃ** | ಸ್ವರ್ಗಹಿತನಾಗುವುದಕ್ಕಾಗಿಯೇ ಅಗ್ನಿಚಯನವನ್ನು ಅನುಷ್ಠಿಸುತ್ತೇವೆ. |
| **ಯತ್ ಸಂಯತಃ ಉಪದಧಾತಿ** | ಸಂಯದಿಷ್ಟಕೆಗಳನ್ನು ಉಪಧಾನ ಮಾಡುವುದೆಂಬುದು ಯಾವುದೋ ಅದು |
| **ಏನಮ್ ಸಮ್ ಯಚ್ಛತಿ ಏವ** | ಈ ಅಗ್ನಿಯ ನಿಯಮನವನ್ನು ಮಾಡುತ್ತದೆ. |
| **ಸುವರ್ಗ್ಯಮ್ ಏವ ಅಕಃ** | (ಅಧ್ವರ್ಯುವು ಸಂಯದಿಷ್ಟಕೋಪಧಾನವನ್ನು ಮಾಡಿ) ಅಗ್ನಿಯನ್ನು ಸ್ವರ್ಗಕ್ಕೆ ಹಿತನನ್ನಾಗಿ ಮಾಡುತ್ತಾನೆ. |

ಸಂಯದಿಷ್ಟಕೆಗಳ ಪ್ರಥಮಮಂತ್ರಾಂಶದ ತಾತ್ಪರ್ಯ

| | |
|---|---|
| **ತ್ರ್ಯವಿಃ ವಯಃ ಕೃತಮ್ ಅಯಾನಾಮ್ ಇತಿ ಆಹ ವಯೋಭಿಃ ಏವ ಅಯಾನ್ ಅವರುಂಧೇ ಅಯ್ಯೈಃ ವಯಾಗ್ಂಸಿ** ಅವರುಂಧೇ | 'ಎಲೈ! ಇಷ್ಟಕೆಯೇ! ನೀನು ಸಾರ್ಧಸಂವತ್ಸರರೂಪವಾದ ವಯಸ್ಸಿನಿಂದ ಕೃತಾದಿಯುಗಗಳನ್ನು ಹೊಂದುವೆ /ಕೃತಾದಿಯುಗಗಳಿಂದ ಸಾರ್ಧಸಂವತ್ಸರರೂಪವಾದ ವಯಸ್ಸನ್ನು ಹೊಂದುತ್ತೀಯೆ' ಎಂದು ಈ ಮಂತ್ರಾಂಶವು ಹೇಳುತ್ತದೆ. |

---

ಪ್ರಾಣವು ಹೊರಕ್ಕೆ ಹೋಗುತ್ತದೆ. ಅಪಾನವು ಒಳಕ್ಕೆ ಹೋಗುತ್ತದೆ. ಹೀಗೆ ವಿಪರೀತಕ್ರಮವುಳ್ಳವುಗಳು ಪ್ರಾಣ-ಅಪಾನಗಳು.

ಸರ್ವತೋ ವಾಯುಮತೀರ್ಭವಂತಿ ತಸ್ಮಾದಯಗ್ಂ

ಸರ್ವತಃ ಪವತೇ ॥ ೬೦–10 ॥

[ಪಶ್ಚಾದೇತಾಃ ಪುರೋಽಕ್ಷ್ಣಯಾ ಕಲ್ಪತೇಽಸಂಯತಂ ಪಂಚತ್ರಿಗ್ಂಶಚ್ಚ ॥]

---

ಸರ್ವತಃ । ವಾಯುಮತೀರಿತಿ ವಾಯು–ಮತೀಃ । ಭವಂತಿ । ತಸ್ಮಾತ್ । ಅಯಮ್ । ಸರ್ವತಃ । ಪವತೇ ॥ ೬೦ ॥

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಸರ್ವತಃ ವಾಯುಮತೀಃ ಭವಂತಿ** | ಎಲ್ಲ ದಿಕ್ಕುಗಳಲ್ಲಿ ಉಪಧಾನ ಮಾಡುವ ಇಷ್ಟಕೆಗಳು ವಾಯುವಾಚಕಶಬ್ದಗಳಿಂದ ಕೂಡಿವೆ. |
| **ತಸ್ಮಾತ್ ಅಯಮ್ ಸರ್ವತಃ ಪವತೇ** | ಆದುದರಿಂದ ಈ ವಾಯುವು ಎಲ್ಲೆಲ್ಲಿಯೂ ಬೀಸುತ್ತದೆ. |

---

ವಯಸ್ಸು ಯುಗಗಳನ್ನೂ ಯುಗಗಳು ವಯಸ್ಸನ್ನೂ ಸಂಬಂಧಿಸಿವೆ. ಮಹಾಪ್ರಳಯಕಾಲದಲ್ಲಿ ಜನ್ಮರಹಿತವಾದವನಿಗೆ ವಯಸ್ಸಿಲ್ಲದಿರುವಾಗ ಯುಗದ ವಿವಕ್ಷೆ ಇರುವುದಿಲ್ಲ. ವಯೋವಿಶೇಷವೂ ಇರುವುದಿಲ್ಲ. ಕೃತಯುಗಾದಿ ರೂಪವಾದ ಕಾಲವೇ ಇಲ್ಲದಿರುವಾಗ ವಯೋವಿಶೇಷವಿರುವುದಿಲ್ಲ ಹೀಗೆ ಯುಗ–ವಯಸ್ಸುಗಳು ಪರಸ್ಪರ ಸಂಬಂಧಪಟ್ಟಿರುವುದರಿಂದ ಎರಡನ್ನೂ ಶ್ರುತಿಯು ತಿಳಿಸಿ, ವಯಸ್ಸಿನಿಂದ **'ಅಯ'**ಗಳನ್ನೂ **'ಅಯ'**ಗಳಿಂದ ವಯಸ್ಸನ್ನೂ ಯಜಮಾನನು ಹೊಂದುವನು ಎಂದು ಹೇಳಿದೆ.

**'ವಾಯುಮತೀ'** ಎಂದರೆ ಮಂತ್ರಗಳಲ್ಲಿ **'ಪುರೋವಾತಃ' 'ದಕ್ಷಿಣಾದ್ವಾತಃ'** ಮುಂತಾದ ವಾಯುವಾಚಕಶಬ್ದವಿದೆ ಎಂದರ್ಥ.

ಐ❀ಐಐ❀ಐ

## ॥ ಏಕಾದಶೋಽನುವಾಕಃ ॥

ಗಾಯತ್ರೀ ತ್ರಿಷ್ಟುಬ್ಜಗತ್ಯನುಷ್ಟುಕ್ಪಂಕ್ತ್ಯಾ ಸಹ ।
ಬೃಹತ್ಯುಷ್ಣಿಹಾ ಕಕುಥ್ಸೂಚೀಭಿಶ್ಶಿಮ್ಯಂತು ತ್ವಾ ॥

---

ಗಾಯತ್ರೀ । ತ್ರಿಷ್ಟುಪ್ । ಜಗತೀ । ಅನುಷ್ಟುಗಿತ್ಯನು-ಸ್ತುಕ್ । ಪಂಕ್ತ್ಯಾ । ಸಹ ॥ ಬೃಹತೀ । ಉಷ್ಣಿಹಾ । ಕಕುತ್ । ಸೂಚೀಭಿಃ । ಶಿಮ್ಯಂತು । ತ್ವಾ ॥

---

ಈ ಪ್ರಶ್ನದ ಹನ್ನೊಂದನೆಯ ಮತ್ತು ಹನ್ನೆರಡನೆಯ ಅನುವಾಕಗಳು ಅಶ್ವಮೇಧಕ್ಕೆ ಸಂಬಂಧಿಸಿದವುಗಳು. ಇವು ವೈಶ್ವದೇವಕಾಂಡಕ್ಕೆ ಸೇರಿವೆ.

ಈ ಅಶ್ವಮೇಧಯಾಗವನ್ನು ರಾಜರು ಅನುಷ್ಠಿಸಬೇಕು. ರಾಜಪತ್ನಿಯರು ಮೂರು ಬಗೆಯಾಗಿ ಇರುತ್ತಾರೆ. ಉತ್ತಮರು, ಮಧ್ಯಮರು ಹಾಗೂ ಅಧಮರು. ಅವರಿಗೆ ಮಹಿಷೀ, ವಾವಾತಾ, ಪರಿವೃಕ್ತೀ ಎಂದು ಹೆಸರು. ಅವರು ಕ್ರಮವಾಗಿ ಚಿನ್ನ, ಬೆಳ್ಳಿ, ಲೋಹಗಳಿಂದ ಮಾಡಲ್ಪಟ್ಟ ಸೂಜಿಗಳಿಂದ-ವಿಶಸನ ಮಾಡಲ್ಪಟ್ಟ (ಮೃತವಾದ) ಕುದುರೆಯನ್ನು ಕತ್ತಿಯಿಂದ ಕತ್ತರಿಸಲು ಅನುಕೂಲವಾಗುವುದಕ್ಕಾಗಿ ಆಯಾ ಸ್ಥಾನಗಳಲ್ಲಿ-ರೇಖೆಗಳನ್ನು ಮಾಡಬೇಕು. ಇದರಿಂದ ಅಶ್ವದ ಅವಯವವನ್ನು ಗುರುತಿಸಿದಂತಾಗುತ್ತದೆ.

---

| ಮಂತ್ರ | ವಿನಿಯೋಗ |
|---|---|
| **ಗಾಯತ್ರೀ...ಶಿಮ್ಯಂತು ತ್ವಾ ॥** | ಮಹಿಷಿಯು ಅಸಿಪಥವನ್ನು ಕಲ್ಪಿಸಲು ಪ್ರಥಮಮಂತ್ರ. |

---

**ಪದಶಃ ಅರ್ಥ:-** (ಎಲೈ! ಅಶ್ವವೇ!) **ಗಾಯತ್ರೀ**=ಗಾಯತ್ರೀಛಂದೋದೇವತೆಯೂ; **ತ್ರಿಷ್ಟುಪ್**=ತ್ರಿಷ್ಟುಚ್ಛಂದೋದೇವತೆಯೂ; **ಜಗತೀ**=ಜಗತೀಛಂದೋದೇವತೆಯೂ; **ಅನುಷ್ಟುಕ್**=ಅನುಷ್ಟುಪ್ಛಂದೋದೇವತೆಯೂ; **ಬೃಹತೀ**=ಬೃಹತೀಛಂದೋದೇವತೆಯೂ; **ಉಷ್ಣಿಹಾ**=ಉಷ್ಣಿಕ್ಛಂದೋದೇವತೆಯೂ; **ಕಕುತ್**=ಕಕುಚ್ಛಂದೋದೇವತೆಯೂ; **ಪಂಕ್ತ್ಯಾ ಸಹ**=ಪಂಕ್ತಿಛಂದಸ್ಸಿನೊಡನೆ;(ಸೇರಿ) **ಸೂಚೀಭಿಃ**=ಚಿನ್ನದ ಸೂಜಿಗಳಿಂದ; **ತ್ವಾ**=ನಿನ್ನನ್ನು **ಶಿಮ್ಯಂತು**=ಕತ್ತಿಯಿಂದ ಕತ್ತರಿಸಲು ಅನುಕೂಲ ಮಾಡಲಿ (ನಿನ್ನ ಮೇಲೆ) ರೇಖೆಗಳನ್ನು ಮಾಡಿ ಅಸಿಪಥವನ್ನು ಕಲ್ಪಿಸಲಿ.

**ದ್ವಿಪದಾ ಯಾ ಚತುಷ್ಪದಾ ತ್ರಿಪದಾ ಯಾ ಚ ಷಟ್ಪದಾ । ಸಛಂದಾ ಯಾ ಚ ವಿಛಂದಾಸ್ಸೂಚೀಭಿಶ್ಶಿಮ್ಯಂತು ತ್ವಾ ॥ ಮಹಾನಾಮ್ನೀ ರೇವತಯೋ ವಿಶ್ವಾ ಆಶಾಃ ಪ್ರಸೂವರೀಃ । ಮೇಘ್ಯಾ ವಿದ್ಯುತೋ ವಾಚಸ್ಸೂಚೀಭಿಶ್ಶಿಮ್ಯಂತು ತ್ವಾ ॥**

---

ದ್ವಿಪದೇತಿ ದ್ವಿ–ಪದಾ । ಯಾ । ಚತುಷ್ಪದೇತಿ ಚತುಃ–ಪದಾ । ತ್ರಿಪದೇತಿ ತ್ರಿ–ಪದಾ । ಯಾ । ಚ । ಷಟ್ಪದೇತಿ ಷಟ್–ಪದಾ । ಸಛಂದಾ ಇತಿ ಸ–ಛಂದಾಃ । ಯಾ । ಚ । ವಿಛಂದಾ ಇತಿ ವಿ–ಛಂದಾಃ । ಸೂಚೀಭಿಃ । ಶಿಮ್ಯಂತು । ತ್ವಾ । ಮಹಾನಾಮ್ನೀರಿತಿ ಮಹಾ–ನಾಮ್ನೀಃ । ರೇವತಯಃ । ವಿಶ್ವಾಃ । ಆಶಾಃ । ಪ್ರಸೂವರೀರಿತಿ ಪ್ರ–ಸೂವರೀಃ । ಮೇಘ್ಯಾಃ । ವಿದ್ಯುತ ಇತಿ ವಿ–ದ್ಯುತಃ । ವಾಚಃ । ಸೂಚೀಭಿಃ । ಶಿಮ್ಯಂತು । ತ್ವಾ ।

---

| ಮಂತ್ರ | ವಿನಿಯೋಗ |
|---|---|
| **ದ್ವಿಪದಾ ಯಾ...ತ್ವಾ ॥** | ಮಹಿಷಿಯು ಅಸಿಪಥವನ್ನು ಕಲ್ಪಿಸಲು ಎರಡನೆಯ ಮತ್ತು ಕೊನೆಯ ಮಂತ್ರ. |
| ಮಹಾನಾಮ್ನೀ...ತ್ವಾ ॥ | ವಾವಾತೆಯು ಅಸಿಪಥವನ್ನು ಕಲ್ಪಿಸಲು ಪ್ರಥಮಮಂತ್ರ. |

---

▲ (ಓ! ಅಶ್ವವೇ!) **ಯಾ**=ಯಾವ; **ದ್ವಿಪದಾ**=ದ್ವಿಪದಾತ್ಮಕಮಂತ್ರಾಭಿಮಾನಿದೇವತೆಯೋ; **ಚತುಷ್ಪದಾ**=ನಾಲ್ಕು ಪದಗಳ ಮಂತ್ರಾಭಿಮಾನಿದೇವತೆಯೋ; **ತ್ರಿಪದಾ**=ತ್ರಿಪದಾತ್ಮಕಮಂತ್ರಾಭಿಮಾನಿದೇವತೆಯೋ; **ಚ**=ಮತ್ತು; **ಷಟ್ಪದಾ ಯಾ**=ಯಾವ ಷಟ್ಪದಾತ್ಮಕಮಂತ್ರಾಭಿಮಾನಿಯಾದ ದೇವತೆಯು ಇದೆಯೋ; **ಯಾ ಸಛಂದಾಃ**=ಛಂದೋಯುಕ್ತವಾದ ಮಂತ್ರದ ಅಭಿಮಾನಿದೇವತೆಯೂ; **ಯಾ ಚ ವಿಛಂದಾಃ**=ಛಂದೋರಹಿತಮಂತ್ರಾಭಿಮಾನಿದೇವತೆಯೂ; **ಸೂಚೀಭಿಃ**=ಚಿನ್ನದ ಸೂಜಿಗಳಿಂದ; **ತ್ವಾ**=ನಿನ್ನನ್ನು; **ಶಿಮ್ಯಂತು**=ಕತ್ತಿಯಿಂದ ಕತ್ತರಿಸಲು ಅನುಕೂಲ ಮಾಡಲಿ/(ನಿನ್ನ ಮೇಲೆ) ರೇಖೆಗಳನ್ನು ಮಾಡಿ ಅಸಿಪಥವನ್ನು ಕಲ್ಪಿಸಲಿ. ▲ (ಓ! ಅಶ್ವವೇ!)**ಮಹಾನಾಮ್ನೀಃ**=ದೇವತೆಗಳಲ್ಲಿ ಪ್ರಸಿದ್ಧವಾದ ಹೆಸರನ್ನು ಹೊಂದಿರುವ ಮಹಾನಾಮ್ನಿ ಎಂಬ ಹೆಸರಿನ ದೇವತೆಗಳೂ; **ರೇವತಯಃ**=ಧನವತಿಯರಾದ/ ರೇವತಿ ಎಂಬ ಹೆಸರಿನ ದೇವತೆಗಳೂ; **ಪ್ರಸೂವರೀಃ**=ಸರ್ವಪ್ರಸವ(ಉತ್ಪತ್ತಿ)ಕಾರಣರಾದ; **ವಿಶ್ವಾಃ**=ಎಲ್ಲ; **ಆಶಾಃ**=ದಿಗ್ದೇವತೆಗಳೂ; **ಮೇಘ್ಯಾಃ**=ಮೇಘಗಳಲ್ಲಿ ಉಂಟಾಗುವ; **ವಿದ್ಯುತಃ**=ವಿದ್ಯುದಭಿಮಾನಿದೇವತೆಗಳೂ; **ವಾಚಃ**=(ಮೇಘಗಳಲ್ಲಿ ಉಂಟಾಗುವ) ಗರ್ಜನೆಯ (ಗುಡುಗಿನ) ಅಭಿಮಾನಿದೇವತೆಗಳೂ; **ಸೂಚೀಭಿಃ**=ಬೆಳ್ಳಿಯ ಸೂಜಿಗಳಿಂದ; **ತ್ವಾ**=ನಿನ್ನನ್ನು; **ಶಿಮ್ಯಂತು**=ಕತ್ತಿಯಿಂದ ಕತ್ತರಿಸಲು ಅನುಕೂಲ ಮಾಡಲಿ/(ನಿನ್ನ ಮೇಲೆ) ರೇಖೆಗಳನ್ನು ಮಾಡಿ ಅಸಿಪಥವನ್ನು ಕಲ್ಪಿಸಲಿ.

ರಜತಾ ಹರಿಣೀಸ್ಸೀಸಾ ಯುಜೋ ಯುಜ್ಯಂತೇ ಕರ್ಮಭಿಃ । ಅಶ್ವಸ್ಯ ವಾಜಿನಸ್ತ್ವಚಿ ಸೂಚೀಭಿಶ್ಶಿಮ್ಯಂತು ತ್ವಾ ॥ ನಾರೀ[ನಾರೀಃ(೬೧)ತೇ]ಸ್ತೇ ಪತ್ನಯೋ ಲೋಮ ವಿ ಚಿನ್ವಂತು ಮನೀಷಯಾ ।

---

ರಜತಾಃ । ಹರಿಣೀಃ । ಸೀಸಾಃ । ಯುಜಃ । ಯುಜ್ಯಂತೇ । ಕರ್ಮಭಿರಿತಿ ಕರ್ಮ–ಭಿಃ । ಅಶ್ವಸ್ಯ । ವಾಜಿನಃ । ತ್ವಚಿ । ಸೂಚೀಭಿಃ । ಶಿಮ್ಯಂತು । ತ್ವಾ । ನಾರೀಃ । (೬೧) । ತೇ । ಪತ್ನಯಃ । ಲೋಮ । ವೀತಿ । ಚಿನ್ವಂತು । ಮನೀಷಯಾ ।

---

| ಮಂತ್ರ | ವಿನಿಯೋಗ |
|---|---|
| **ರಜತಾಃ...ತ್ವಾ ॥** | ವಾವಾತೆಯು ಅಸಿಪಥವನ್ನು ಕಲ್ಪಿಸಲು ಎರಡನೆಯ ಮತ್ತು ಕೊನೆಯ ಮಂತ್ರ. |
| **ನಾರೀಸ್ತೇ...ತ್ವಾ ॥** | ಪರಿವೃಕ್ತಿಯು ಅಸಿಪಥವನ್ನು ಕಲ್ಪಿಸಲು ಪ್ರಥಮಮಂತ್ರ. |

---

▲ (ಓ! ಅಶ್ವವೇ!) **ರಜತಾಃ**=ಬೆಳ್ಳಿಯಿಂದ ನಿರ್ಮಿತವಾದ; **ಹರಿಣೀಃ**=ಬಂಗಾರದಿಂದ ನಿರ್ಮಿತವಾಗಿರುವ; **ಸೀಸಾಃ**=ಲೋಹಗಳಿಂದ ನಿರ್ಮಿತವಾಗಿರುವ/ಕಬ್ಬಿಣದಿಂದ ನಿರ್ಮಿತವಾಗಿರುವ; **ಯುಜಃ**=ಲೇಖನಕರ್ಮಯೋಗ್ಯವಾದ ಸೂಜಿಗಳು; **ವಾಜಿನಃ**=(ಇವು) ಅನ್ನಹೇತುವಾದ; **ಅಶ್ವಸ್ಯ**=ಅಶ್ವದ; **ತ್ವಚಿ**=ಚರ್ಮದಲ್ಲಿ; **ಕರ್ಮಭಿಃ**=ಲೇಖನವೇ ಮುಂತಾದ ಕ್ರಿಯೆಗಳಿಂದ (ಅಸಿಪಥಕಲ್ಪನೆಯಿಂದ) **ಯುಜ್ಯಂತೇ**=ಯುಕ್ತವಾಗಿರುತ್ತವೆ. **ಸೂಚೀಭಿಃ**=(ಲೇಖನಕುಶಲರಾದ ದೇವತೆಗಳು) ಪೂರ್ವೋಕ್ತವಾದ ಸೂಜಿಗಳಿಂದ; **ತ್ವಾ**=ನಿನ್ನನ್ನು; **ಶಿಮ್ಯಂತು**=ಕತ್ತಿಯಿಂದ ಕತ್ತರಿಸಲು ಅನುಕೂಲ ಮಾಡಲಿ/(ನಿನ್ನ ಮೇಲೆ) ರೇಖೆಗಳನ್ನು ಮಾಡಿ ಅಸಿಪಥವನ್ನು ಕಲ್ಪಿಸಲಿ. ▲ (ಎಲೈ! ಅಶ್ವವೇ!); **ನಾರೀಃ**=ಮಹಿಷಿಯೇ ಮುಂತಾದ ಸ್ತ್ರೀಯರಾದ; **ಪತ್ನಯಃ**=ರಾಜಪತ್ನಿಯರು; **ಮನೀಷಯಾ**=ಬುದ್ಧಿಯಿಂದ ಆಲೋಚಿಸಿ; **ತೇ**=ನಿನ್ನ; **ಲೋಮ**=ರೋಮ ಸಮೂಹವನ್ನು; **ವಿಚಿನ್ವಂತು**=ಹುಡುಕಿ ಭೇದಿಸಲಿ./ಅಸಿಪಥದಿಂದ ದೂರಮಾಡಲಿ.

---

**ತಾತ್ಪರ್ಯ:**–ಮಹಿಷಿಯು ಕತ್ತಿಯ ಮಾರ್ಗವನ್ನು ಗುರುತಿಸುವ ಮೊದಲನೆಯ ಮಂತ್ರವಿದು.

ಹೇ! ಅಶ್ವವೇ! ಗಾಯತ್ರೀ ಮುಂತಾದ ಛಂದೋದೇವತೆಗಳೂ ದ್ವಿಪದಾತ್ಮಕವೇ ಮುಂತಾದ ಮಂತ್ರಾಭಿಮಾನಿ ದೇವತೆಗಳೂ, ಛಂದೋಯುಕ್ತ–ಛಂದೋರಹಿತ ಮಂತ್ರಾಭಿಮಾನಿದೇವತೆಗಳೂ ಚಿನ್ನದ ಸೂಜಿಗಳಿಂದ ನಿನ್ನಲ್ಲಿ ಕತ್ತಿಯ ಮಾರ್ಗವನ್ನು ಗುರುತಿಸಲಿ.

ಮಹಾನಾಮ್ನಿಯರಾದ ದೇವತೆಗಳೂ, ರೇವತಿಯರೆಂಬ ದೇವತೆಯರೂ, ದಿಗ್ದೇವತೆಯರೂ, ಮೋಡಗಳಿಗೆ ಸಂಬಂಧಿಸಿದ ದೇವತೆಗಳೂ ಬೆಳ್ಳಿಯ ಸೂಜಿಗಳಿಂದ ಕತ್ತಿಯ ಮಾರ್ಗವನ್ನು ಗುರುತಿಸಲಿ.

ಲೋಹಗಳಿಂದ ನಿರ್ಮಿತವಾದ ಸೂಜಿಗಳು ಲೇಖನಾದಿವ್ಯಾಪಾರದಲ್ಲಿ ಯುಕ್ತವಾಗುತ್ತವೆ. ಅಂತಹ ಸೂಜಿಗಳು ನಿನ್ನಲ್ಲಿ ಅಸಿಪಥವನ್ನು ಕಲ್ಪಿಸಲಿ.

ದೇವಾನಾಂ ಪತ್ನೀರ್ದಿಶಸ್ಸೂಚೀಭಿಶ್ಶಿಮ್ಯಂತು ತ್ವಾ ॥ ಕುವಿದಂಗ ಯವಮಂತೋ ಯವಂ ಚಿದ್ಯಥಾ ದಾಂತ್ಯನುಪೂರ್ವಂ ವಿಯೂಯ । ಇಹೇಹೈಷಾಂ ಕೃಣುತ ಭೋಜನಾನಿ ಯೇ ಬರ್ಹಿಷೋ ನಮೋವೃಕ್ತಿಂ ನ ಜಗ್ಮುಃ ॥ ೬೨–11 ॥

[ನಾರೀಸ್ತ್ರಿಗ್‌ಂಶಚ್ಚ ॥]

---

ದೇವಾನಾಮ್ । ಪತ್ನೀಃ । ದಿಶಃ । ಸೂಚೀಭಿಃ । ಶಿಮ್ಯಂತು । ತ್ವಾ ॥ ಕುವಿತ್ । ಅಂಗ । ಯವಮಂತ ಇತಿ–ಯವ–ಮಂತಃ । ಯವಮ್ । ಚಿತ್ । ಯಥಾ । ದಾಂತಿ । ಅನುಪೂರ್ವಮಿತ್ಯನು–ಪೂರ್ವಮ್ । ವಿಯೂಯೇತಿ ವಿ–ಯೂಯ ॥ ಇಹೇಹೇತೀಹ–ಇಹ । ಏಷಾಮ್ । ಕೃಣುತ । ಭೋಜನಾನಿ । ಯೇ । ಬರ್ಹಿಷಃ । ನಮೋವೃಕ್ತಿಮಿತಿ ನಮಃ–ವೃಕ್ತಿಮ್ । ನ । ಜಗ್ಮುಃ ॥ (೬೨) ॥

---

| ಮಂತ್ರ | ವಿನಿಯೋಗ |
|---|---|
| ಕುವಿದಂಗ...ನ ಜಗ್ಮುಃ ॥ | ಪರಿವೃಕ್ತಿಯು ಅಸಿಪಥವನ್ನು ಕಲ್ಪಿಸಲು ಎರಡನೆಯ ಮತ್ತು ಕೊನೆಯ ಮಂತ್ರ. |

---

**ದೇವಾನಾಮ್**=ದೇವತೆಗಳ; **ಪತ್ನೀಃ**=ಪತ್ನಿಯರೂ; **ದಿಶಃ**=ದಿಗ್ದೇವತೆಗಳೂ; **ತ್ವಾ**=ನಿನ್ನನ್ನು; **ಸೂಚೀಭಿಃ** =ಲೋಹದಿಂದ ಮಾಡಿದ ಸೂಜಿಗಳಿಂದ; **ಶಿಮ್ಯಂತು**=ಅಸಿಪಥಗಳನ್ನು/ಅಶ್ವಚ್ಛೇದನಮಾರ್ಗಗಳನ್ನು ಗುರುತಿಸಲಿ. ▲ **ಅಂಗ**=ಅಶ್ವಮೇಧದ ಹವಿಸ್ಸಿಗೆ ಪಾತ್ರರಾದ ಪ್ರಿಯರಾದ ದೇವತೆಗಳೇ! (ಲೋಕದಲ್ಲಿ) **ಕುವಿತ್**=ಅನೇಕ ಬಗೆಯ/ಹೆಚ್ಚಿನ; **ಚಿತ್**=ಪರಸ್ಪರ ಬೆರೆತಿರುವ; **ಯವಮ್**=ಯವವೇ (ಮುಂತಾದ ಧಾನ್ಯವನ್ನು) **ಯಥಾ**=ಹೇಗೆ; **ಅನುಪೂರ್ವಮ್**=ಅವುಗಳ ಪಾಕಾನುಸಾರಿಯಾಗಿ/ಪಕ್ವತೆಯನ್ನು ನೋಡಿ; **ವಿಯೂಯ**=ಬೇರ್ಪಡಿಸಿ; **ಯವಮಂತಃ**=ಯವವೇ ಮುಂತಾದ ಧಾನ್ಯಗಳನ್ನು ಹೊಂದಿರುವ ರೈತರು; **ದಾಂತಿ**=ಕೊಯ್ಯುತ್ತಾರೆಯೋ; (ಹಾಗೆ) **ಯೇ**=ಯಾವ ಆಸ್ತಿಕರು; **ಬರ್ಹಿಷಃ**=ಯಾಗಕ್ಕೆ ಸಂಬಂಧಿಸಿದ; **ನಮೋವೃಕ್ತಿಮ್**=ನಮಸ್ಕಾರದಿಂದ ಬೇರೆಯಾಗುವಿಕೆಯನ್ನು; (ನಮಸ್ಕಾರವಿಲ್ಲದಿರುವುದನ್ನು/ನಾಸ್ತಿಕತೆಯನ್ನು) **ನ ಜಗ್ಮುಃ**=ಹೊಂದಿಲ್ಲವೋ/ಅಸ್ತಿಕರಾಗಿ ಇರುವರೋ **ಏಷಾಮ್**=ಈ ರೀತಿಯವರ/ಶ್ರದ್ಧಾಲುಗಳಾದ ಇವರ; **ಭೋಜನಾನಿ**=ಹವಿಸ್ಸುಗಳನ್ನು; **ಇಹ ಇಹ**=ಆಯಾ ಯಾಗದಲ್ಲಿಯೇ/ಇಲ್ಲಿಯೇ: **ಕೃಣುತ** =ಸ್ವೀಕರಿಸಿರಿ.

ಹೇ! ಅಶ್ವವೇ! ಸ್ತ್ರೀಯರಾದ ರಾಜಪತ್ನಿಯರು ನಿನ್ನ ಶರೀರದಲ್ಲಿ ರೋಮಸಮೂಹವನ್ನು ಜಾಣತನದಿಂದ ಬೇರ್ಪಡಿಸಿ ಅಸಿಪಥವನ್ನು ಗುರುತಿಸಲಿ. ಹಾಗೆಯೇ **'ಸೇನೇಂದ್ರಸ್ಯ'** [ತೈ. ಆ. 3. 9. 1] ಎಂಬ ಅನುವಾಕದಲ್ಲಿ ಶ್ರುತಿಯು ಹೇಳುವ ದೇವಪತ್ನಿಯರೂ, ದಿಗ್ದೇವತೆಯರೂ ನಿನ್ನಲ್ಲಿ ಕತ್ತಿಯು ಸಂಚರಿಸಬೇಕಾದ ಮಾರ್ಗವನ್ನು ಹುಡುಕಿ ಗುರುತಿಸಲಿ.

ಅಶ್ವಮೇಧದ ಹವಿಸ್ಸಿಗೆ ಅರ್ಹರಾದ ದೇವತೆಗಳೇ! ನೀವು ನಮಗೆ ಪ್ರಿಯರು. ಲೋಕದಲ್ಲಿ ಕೃಷಿಕರು ಯವವೇ ಮುಂತಾದ ಧಾನ್ಯಗಳನ್ನು ಒಟ್ಟಿಗೆ ಬೆಳೆದಾಗ ಅವುಗಳಲ್ಲಿ ಕೊಯ್ಲಿಗೆ ಅರ್ಹವಾದುದನ್ನು ಗುರುತಿಸಿ ಕಟಾವು ಮಾಡುವಂತೆ ನೀವು ಯಜ್ಞದಲ್ಲಿ ಶ್ರದ್ಧಾಪೂರ್ಣರಾದ ಆಸ್ತಿಕರ ಅನೇಕ ಯಾಗಗಳಲ್ಲಿ ಹವಿಸ್ಸನ್ನು ಸ್ವೀಕರಿಸಿರಿ. ಆಸ್ತಿಕ–ನಾಸ್ತಿಕರನ್ನು ಬೇರ್ಪಡಿಸಿರಿ.

---

## ಅನುವಾಕದ ವಿಶೇಷವಿಷಯಗಳು

### ಅ) ಛಂದಸ್ಸು

| ಮಂತ್ರ | ಛಂದಸ್ಸು |
|---|---|
| ಗಾಯತ್ರೀ...ಶಿಮ್ಯಂತು ತ್ವಾ ॥ | ಅನುಷ್ಟುಪ್ |
| ದ್ವಿಪದಾ ಯಾ...ತ್ವಾ ॥ | ಅನುಷ್ಟುಪ್ |
| ಮಹಾನಾಮ್ನೀ...ತ್ವಾ ॥ | ಅನುಷ್ಟುಪ್ |
| ರಜತಾಃ...ತ್ವಾ ॥ | ಅನುಷ್ಟುಪ್ |
| ನಾರೀಸ್ತೇ...ತ್ವಾ ॥ | ಅನುಷ್ಟುಪ್ |
| ಕುವಿದಂಗ...ನ ಜಗ್ಮುಃ ॥ | ತ್ರಿಷ್ಟುಪ್ |

## ॥ ದ್ವಾದಶೋಽನುವಾಕಃ ॥

**ಕಸ್ತ್ವಾ ಛ್ಯತಿ ಕಸ್ತ್ವಾ ವಿ ಶಾಸ್ತಿ ಕಸ್ತೇ ಗಾತ್ರಾಣಿ ಶಿಮ್ಯತಿ । ಕ ಉ ತೇ ಶಮಿತಾ ಕವಿಃ ॥ ಋತವಸ್ತ ಋತುಧಾ ಪರುಶ್ಶಮಿತಾರೋ ವಿ ಶಾಸತು ।**

---

ಕಃ । ತ್ವಾ । ಛ್ಯತಿ । ಕಃ । ತ್ವಾ । ವೀತಿ । ಶಾಸ್ತಿ । ಕಃ । ತೇ । ಗಾತ್ರಾಣಿ । ಶಿಮ್ಯತಿ ॥ ಕಃ । ಉ । ತೇ । ಶಮಿತಾ । ಕವಿಃ ॥ ಋತವಃ । ತೇ । ಋತುಧೇತ್ಯೃತು–ಧಾ । ಪರುಃ । ಶಮಿತಾರಃ । ವೀತಿ । ಶಾಸತು ॥

---

| ಮಂತ್ರ | ವಿನಿಯೋಗ |
|---|---|
| **ಕಸ್ತ್ವಾ...ಕವಿಃ ॥** | ಅಧ್ವರ್ಯುವು ಅಶ್ವದ ಚರ್ಮವನ್ನು ಭೇದಿಸಲು ಪ್ರಥಮಮಂತ್ರ. |
| **ಋತವಸ್ತ...ತ್ವಾ ॥** | ಅಶ್ವವಿಶಸನದ ಎರಡನೆಯ ಮಂತ್ರ. |

---

ಈ ಹನ್ನೆರಡನೆಯ ಅನುವಾಕದಲ್ಲಿ ವಿಶಸನವನ್ನು ಹೇಳಲಾಗಿದೆ. ಅಸಿಪಥವನ್ನು ಕಲ್ಪಿಸಿದ ಅನಂತರ ಈ ಚರ್ಮಭೇದನ.

---

ಪದಶಃ ಅರ್ಥ:–🔔 [ಹೇ! ಅಶ್ವವೇ!] **ಕಃ**=ಪ್ರಜಾಪತಿಯು; **ತ್ವಾ**=ನಿನ್ನನ್ನು; **ಛ್ಯತಿ**=ಭೇದಿಸುತ್ತಾನೆ. **ಕಃ**=ಪ್ರಜಾಪತಿಯೇ; **ತ್ವಾ**=ನಿನ್ನನ್ನು (ನಿನ್ನ ಅವಯುವಗಳನ್ನು); **ವಿ ಶಾಸ್ತಿ**=ವಿಭಾಗ ಮಾಡಿ ಸರಿಯಾಗಿ ಇಡುತ್ತಾನೆ; **ಕಃ**=ಪ್ರಜಾಪತಿಯೇ; (ಅವಯುವಗಳನ್ನು ವಿಭಾಗಿಸಿ ಇಟ್ಟ ಬಳಿಕ) **ತೇ**=ನಿನ್ನ; **ಗಾತ್ರಾಣಿ**=ಅವಯುವಗಳನ್ನು; **ಶಿಮ್ಯತಿ**=ಸುರಕ್ಷಿತವಾಗಿ ಮಾಡುತ್ತಾನೆ; **ಕವಿಃ**=ಭೇದನವನ್ನು ಚೆನ್ನಾಗಿ ಬಲ್ಲವನಾದ; **ಕಃ ಉ**=ಪ್ರಜಾಪತಿದೇವನೇ; **ತೇ**=ನಿನ್ನ; **ಶಮಿತಾ**=ಅವಯುವಗಳನ್ನು ಭೇದಿಸಿ ಇಡುವ ಶಮಿತೃವೂ (ಆಗಿದ್ದಾನೆ). 🔔 (ಎಲೈ! ಅಶ್ವವೇ!) **ಋತವಃ**=ವಸಂತಾದಿ ಋತುಗಳು/ಋತ್ವಭಿಮಾನಿಗಳಾದ ದೇವತೆಗಳು; **ಶಮಿತಾರಃ**=ಶಮಿತಾರರಾಗಿ; **ಋತುಧಾ**=ಆಯಾ ಋತುಗಳ ಕಾಲದಲ್ಲಿ; **ತೇ**=ನಿನ್ನ; **ಪರುಃ**=ಪರ್ವಾಂಗಗಳನ್ನು (ಗೆಣ್ಣುಳ್ಳ ಅವಯುವವನ್ನು) **ವಿ ಶಾಸತು**=ಭೇದಿಸಿ ಸ್ಥಾಪಿಸಲಿ.

**ಸಂವಥ್ಸರಸ್ಯ ಧಾಯಸಾ ಶಿಮೀಭಿಶ್ಶಿಮ್ಯಂತು ತ್ವಾ ॥ ದೈವ್ಯಾ ಅಧ್ವರ್ಯವಸ್ತ್ವಾವ ಛ್ಯಂತು ವಿ ಚ ಶಾಸತು । ಗಾತ್ರಾಣಿ ಪರ್ವಶಸ್ತೇ ಶಿಮಾಃ ಕೃಣ್ವಂತು ಶಿಮ್ಯಂತಃ ॥ ಅರ್ಧಮಾಸಾಃ ಪರೂಗ್ಂಷಿ ತೇ ಮಾಸಾಶ್ಛ್ಯಂತು ಶಿಮ್ಯಂತಃ । ಅಹೋರಾತ್ರಾಣಿ ಮರುತೋ ವಿಲಿಷ್ಟಗ್ಂ[ವಿಲಿಷ್ಟಮ್(೬೩)ಸೂದಯಂತು ತೇ ।]ಸೂದಯಂತು ತೇ ॥**

---

ಸಂವಥ್ಸರಸ್ಯೇತಿ ಸಮ್–ವಥ್ಸರಸ್ಯ । ಧಾಯಸಾ । ಶಿಮೀಭಿಃ । ಶಿಮ್ಯಂತು । ತ್ವಾ ॥ ದೈವ್ಯಾಃ । ಅಧ್ವರ್ಯವಃ । ತ್ವಾ । ಛ್ಯಂತು । ವೀತಿ । ಚ । ಶಾಸತು ॥ ಗಾತ್ರಾಣಿ । ಪರ್ವಶ ಇತಿ ಪರ್ವ–ಶಃ । ತೇ । ಶಿಮಾಃ । ಕೃಣ್ವಂತು । ಶಿಮ್ಯಂತಃ ॥ ಅರ್ಧಮಾಸಾ ಇತ್ಯರ್ಧ–ಮಾಸಾಃ । ಪರೂಗ್ಂಷಿ । ತೇ । ಮಾಸಾಃ । ಛ್ಯಂತು । ಶಿಮ್ಯಂತಃ ॥ ಅಹೋರಾತ್ರಾಣೀತ್ಯಹಃ–ರಾತ್ರಾಣಿ । ಮರುತಃ । ವಿಲಿಷ್ಟಮಿತಿ ವಿ–ಲಿಷ್ಟಮ್ । (೬೩) । ಸೂದಯಂತು । ತೇ ॥

---

| ಮಂತ್ರ | ವಿನಿಯೋಗ |
|---|---|
| ದೈವ್ಯಾಃ...ಶಿಮ್ಯಂತಃ ॥ | ಅಶ್ವವಿಶಸನದ ಮೂರನೆಯ ಮಂತ್ರ. |
| ಅರ್ಧಮಾಸಾಃ...ತೇ ॥ | ಅಶ್ವವಿಶಸನದ ನಾಲ್ಕನೆಯ ಮಂತ್ರ. |

---

**ಸಂವಥ್ಸರಸ್ಯ**=ಸಂವತ್ಸರದ; **ಧಾಯಸಾ**=ಧಾರಣೆಯಿಂದ; **ಶಿಮೀಭಿಃ**=ವಿಶಸನ ಮಾಡುವ ಕ್ರಿಯೆಗಳಿಂದ; **ತ್ವಾ**=ನಿನ್ನನ್ನು; **ಶಿಮ್ಯಂತು**=ವಿಶಸನಗೊಳ್ಳುವಂತೆ ಮಾಡಲಿ. ▲ (ಎಲೈ! ಅಶ್ವವೇ!) **ದೈವ್ಯಾಃ**= ದೇವತೆಗಳಲ್ಲಿ ಇರುವ; **ಅಧ್ವರ್ಯವಃ**=ಅಧ್ವರ್ಯುಗಳು; **ತ್ವಾ**=ನಿನ್ನನ್ನು; **ಛ್ಯಂತು**=ಛೇದಿಸಲಿ; **ಚ**= ಮತ್ತು; **ವಿ ಶಾಸತು**=ವಿವಿಧವಾಗಿ ವಿಭಾಗಿಸಿ ಇಡಲಿ; **ಶಿಮಾಃ**=(ನಿನ್ನ) ಶಮನಹೇತುಗಳಾಗಿ; **ತೇ**=ನಿನ್ನ; **ಗಾತ್ರಾಣಿ**=ಅವಯವಗಳನ್ನು; **ಪರ್ವಶಃ**=ಗಿಣ್ಣುಗಿಣ್ಣಾಗಿ; **ಶಿಮ್ಯಂತಃ**=ವಿಭಜಿಸಿ, (ರಕ್ಷಿಸುವವರಾಗಿ) **ಕೃಣ್ವಂತು**=ಯೋಗ್ಯವಾದ ಕ್ರಿಯೆಗಳನ್ನು ಮಾಡಲಿ/ದೇವಯೋಗ್ಯವನ್ನಾಗಿ ಮಾಡಲಿ.▲ (ಎಲೈ! ಅಶ್ವವೇ!) **ಅರ್ಧಮಾಸಾಃ**=ಅರ್ಧಮಾಸಾಭಿಮಾನಿದೇವತೆಗಳೂ; **ಮಾಸಾಃ**=ಮಾಸಾಭಿಮಾನಿದೇವತೆಗಳೂ; **ತೇ**= ನಿನ್ನ; **ಪರೂಗ್ಂಷಿ**=ಎಲ್ಲ ಗಿಣ್ಣುಗಳನ್ನೂ; **ಶಿಮ್ಯಂತಃ**=ಶಮನ ಮಾಡುವವರಾಗಿ/ರಕ್ಷಿಸುವವರಾಗಿ; **ಛ್ಯಂತು**=ಕತ್ತರಿಸಲಿ; **ಅಹೋರಾತ್ರಾಣಿ**=ಅಹೋರಾತ್ರಾಭಿಮಾನಿಗಳಾದ ದೇವತೆಗಳೂ; **ಮರುತಃ**= ಮರುದ್ದೇವತೆಗಳೂ; **ತೇ**=ನಿನಗೆ ಸಂಬಂಧಿಸಿದ; **ವಿಲಿಷ್ಟಮ್**=ನಾಶವಾದ ಅವಯವಗಳನ್ನು; **ಸೂದಯಂತು**=ರುಚಿಕರವನ್ನಾಗಿ ಮಾಡಲಿ.

ಪೃಥಿವೀ ತೇಽಂತರಿಕ್ಷೇಣ ವಾಯುಶ್ಛಿದ್ರಂ ಭಿಷಜ್ಯತು। ದ್ಯೌಸ್ತೇ ನಕ್ಷತ್ರೈಸ್ಸಹ ರೂಪಂ ಕೃಣೋತು ಸಾಧುಯಾ॥ ಶಂ ತೇ ಪರೇಭ್ಯೋ ಗಾತ್ರೇಭ್ಯಶ್ಶಮಸ್ತ್ವವರೇಭ್ಯಃ।

---

ಪೃಥಿವೀ। ತೇ। ಅಂತರಿಕ್ಷೇಣ। ವಾಯುಃ। ಛಿದ್ರಮ್। ಭಿಷಜ್ಯತು॥ ದ್ಯೌಃ। ತೇ। ನಕ್ಷತ್ರೈಃ। ಸಹ। ರೂಪಮ್। ಕೃಣೋತು। ಸಾಧುಯಾ॥ ಶಮ್। ತೇ। ಪರೇಭ್ಯಃ। ಗಾತ್ರೇಭ್ಯಃ। ಶಮ್। ಅಸ್ತು। ಅವರೇಭ್ಯಃ॥

---

| ಮಂತ್ರ | ವಿನಿಯೋಗ |
|---|---|
| **ಪೃಥಿವೀ ತೇ...ಸಾಧುಯಾ॥** | ಅಶ್ವವಿಶಸನದ ಐದನೆಯ ಮಂತ್ರ. |
| **ಶಂ ತೇ...ಭುವತ್॥** | ಅಶ್ವವಿಶಸನದ ಆರನೆಯ ಮತ್ತು ಕಡೆಯ ಮಂತ್ರ. |

---

(ಎಲೈ! ಅಶ್ವವೇ!) **ತೇ**=ನಿನ್ನ; **ಛಿದ್ರಮ್**=ಛಿನ್ನವಾದ ಅಂಗವನ್ನು; **ಅಂತರಿಕ್ಷೇಣ**=ಅಂತರಿಕ್ಷಸಹಿತವಾದ; **ಪೃಥಿವೀ**=ಪೃಥಿವಿಯು; **ಭಿಷಜ್ಯತು**=ಚಿಕಿತ್ಸೆ ಮಾಡಿ ಸರಿಪಡಿಸಲಿ. **ವಾಯುಃ**=ವಾಯುದೇವನೂ; ಭಿಷಜ್ಯತು=ಸರಿಪಡಿಸಲಿ; **ತೇ**=ನಿನ್ನ; **ರೂಪಮ್**=ನಿನ್ನ ಸ್ವರೂಪವಾದ ಹವಿಸ್ಸನ್ನು; **ದ್ಯೌಃ**=ದ್ಯುಲೋಕವು; **ನಕ್ಷತ್ರೈಃ ಸಹ**=ನಕ್ಷತ್ರಗಳ ಜೊತೆಗೂಡಿ; **ಸಾಧುಯಾ**=ಚೆನ್ನಾಗಿರುವಂತೆ; **ಕೃಣೋತು**=ಮಾಡಲಿ.

(ಎಲೈ! ಅಶ್ವವೇ!) **ತೇ**=ನಿನ್ನ; **ಪರೇಭ್ಯಃ**=ಉತ್ಕೃಷ್ಟವಾದ (ಹವಿರ್ಯೋಗ್ಯವಾದ) **ಗಾತ್ರೇಭ್ಯಃ**=ಅವಯವಗಳಿಗೆ; **ಶಮ್ ಅಸ್ತು**=ಸುಖವು ಉಂಟಾಗಲಿ; (ಮತ್ತು) **ಅವರೇಭ್ಯಃ**=ನಿಕೃಷ್ಟವಾದ (ಹವಿರ್ಯೋಗ್ಯವಲ್ಲದ) ಗಾತ್ರೇಭ್ಯಃ=ಅವಯವಗಳಿಗೆ;

---

ತಾತ್ಪರ್ಯ:-ರಾಜಪತ್ನಿಯರು ಅಸಿಪಥವನ್ನು ಕಲ್ಪಿಸಿದ ಬಳಿಕ ಅಧ್ವರ್ಯುವು ಅಶ್ವವನ್ನು ಛೇದಿಸುತ್ತಾನೆ.

ಇತರ ಪಶುಗಳನ್ನು ಛೇದಿಸುವ ಮನುಷ್ಯರಂತೆ ಅಶ್ವವನ್ನು ಛೇದಿಸುವ ಶಮಿತೃವೆಂಬ ಋತ್ವಿಜನು ಸಾಮಾನ್ಯನಲ್ಲ. ಸಾಕ್ಷಾತ್ ಪ್ರಜಾಪತಿದೇವನೇ ಈ ಯಾಗದ ಶಮಿತೃವಾಗಿರುವನೆಂದು ಅಶ್ವಮೇಧದ ಪ್ರಶಸ್ತಿಯು ಇದಾಗಿದೆ. ಅಂತಹ ಪ್ರಜಾಪತಿಯು ವಿಶಸನವನ್ನು ಮಾಡಲಿ ಎಂದು ತಾತ್ಪರ್ಯ.

ಎಲೈ! ಅಶ್ವವೇ! ಸಂವತ್ಸರವನ್ನು ಧರಿಸುವ ವಸಂತಾದಿ ಋತುಗಳ ಅಭಿಮಾನಿಗಳಾದ ದೇವತೆಗಳೇ ನಿನ್ನ ಶಮಿತಾರರಾಗಿ ಅವಯವಗಳನ್ನು ಆಯಾ ಕಾಲಕ್ಕೆ ಯೋಗ್ಯವಾದ ಕ್ರಿಯೆಗಳಿಂದ ಬೇರ್ಪಡಿಸಿ ನಿನ್ನನ್ನು ದೇವಯೋಗ್ಯವಾಗುವಂತೆ ಮಾಡಲಿ.

ಎಲೈ! ಅಶ್ವವೇ! **'ದ್ಯೌರಧ್ವರ್ಯುಃ' 'ಅಶ್ವಿನಾಧ್ವರ್ಯೂ' 'ಸತ್ಯಹವಿರಧ್ವರ್ಯುಃ'** ಮೊದಲಾಗಿ ಹೇಳಲ್ಪಟ್ಟಿರುವ ದೇವತೆಗಳ ಅಧ್ವರ್ಯುಗಳು ನಿನ್ನನ್ನು ಛೇದಿಸಲಿ.

ವಿವಿಧವಾಗಿ ವಿಭಾಗಿಸಿ ಪರ್ವಕ್ಕೆ (ಪೌರ್ಣಮಾಸ್ಯಾದಿಗಳಿಗೆ) ತಕ್ಕಂತೆ ಇಡಲಿ. ನಿನ್ನ ಶಮನಹೇತುಗಳಾಗಿ ನಿನ್ನ ಅವಯವಗಳನ್ನು ದೇವಯೋಗ್ಯಗಳನ್ನಾಗಿ ಮಾಡಲಿ.

ಶಮಸ್ಥಭ್ಯೋ ಮಜ್ಜಭ್ಯಶ್ಶಮು ತೇ ತನುವೇ ಭುವತ್ ॥ ೬೪–12 ॥

[ವಿಲಿಷ್ಟಂ ತ್ರಿಗ್ಂಶಚ್ಚ ॥]

---

ಶಮ್ । ಅಸ್ಥಭ್ಯ ಇತ್ಯಸ್ಥ–ಭ್ಯಃ । ಮಜ್ಜಭ್ಯ ಇತಿ ಮಜ್ಜ–ಭ್ಯಃ । ಶಮ್ । ಉ । ತೇ । ತನುವೇ । ಭುವತ್ ॥ (೬೪) ॥

---

**ಶಮ್** ಅಸ್ತು=ಸುಖವು ಉಂಟಾಗಲಿ; ತೇ=ನಿನ್ನ; **ಅಸ್ಥಭ್ಯಃ**=ಶರೀರದ (ಮೂಳೆಗಳಿಗೂ) **ಶಮ್** ಅಸ್ತು=ಸುಖವಾಗಲಿ; ತೇ=ನಿನ್ನ; **ಮಜ್ಜಭ್ಯಃ**=ಮೂಳೆಗಳಲ್ಲಿರುವ ದ್ರವಕ್ಕೂ; ಶಮ್ ಅಸ್ತು=ಸುಖವಾಗಲಿ; **ತೇ**=ನಿನ್ನ; **ತನುವೇ**=ಶರೀರಕ್ಕೆ; **ಶಮ್ ಉ ಭುವತ್**=ಸುಖವೇ ಉಂಟಾಗಲಿ.

---

ಹೇ! ಅಶ್ವವೇ! ಅರ್ಧಮಾಸ–ಮಾಸಾಭಿಮಾನಿದೇವತೆಗಳು ನಿನ್ನ ಅವಯವವನ್ನು ಕಾಪಾಡಲಿ. ಅಹೋರಾತ್ರಗಳ ಅಭಿಮಾನಿದೇವತೆಗಳೂ, ಮರುದ್ದೇವತೆಗಳೂ ನಷ್ಟವಾದ ನಿನ್ನ ಅವಯವಗಳನ್ನು ರುಚಿಗೊಳಿಸಲಿ.

ಹೇ! ಅಶ್ವವೇ! ನಿನ್ನ ನಷ್ಟವಾದ ಅವಯವಗಳನ್ನು ಅಂತರಿಕ್ಷ–ಪೃಥಿವೀ–ವಾಯುದೇವತೆಗಳೂ, ನಕ್ಷತ್ರಾಭಿಮಾನಿ ದೇವತೆಗಳೂ, ದ್ಯುಲೋಕವೂ ಸರಿಪಡಿಸಲಿ. ರುಚಿಕರವಾಗಿಸಲಿ.

ಎಲೈ! ಅಶ್ವವೇ! ನಿನ್ನ ಎಲ್ಲ ರೀತಿಯ ಅವಯವಗಳಿಗೂ, ನಿನ್ನ ಶರೀರದ ಮೂಳೆಗಳಿಗೂ, ಮೂಳೆಗಳಲ್ಲಿರುವ ದ್ರವಕ್ಕೂ ಸುಖವಾಗಲಿ. ಅಂತೂ ನಿನ್ನ ಇಡೀ ಶರೀರವು ಸುಖವನ್ನು ಪಡೆಯಲಿ.

---

## ಅನುವಾಕದ ವಿಶೇಷವಿಷಯಗಳು

### ಅ) ಛಂದಸ್ಸು

| ಮಂತ್ರ | ಛಂದಸ್ಸು |
|---|---|
| ಕಸ್ತ್ವಾ...ಕವಿಃ ॥ | ಗಾಯತ್ರೀ |
| ಋತವಸ್ತ...ತ್ವಾ ॥ | ಅನುಷ್ಟುಪ್ |
| ದೈವ್ಯಾಃ...ಶಿಮ್ಯಂತಃ ॥ | ಅನುಷ್ಟುಪ್ |

ಅರ್ಧಮಾಸಾಃ...ತೇ ॥ ಅನುಷ್ಟುಪ್

ಪೃಥಿವೀ ತೇ...ಸಾಧುಯಾ ॥ ಅನುಷ್ಟುಪ್

ಶಂ ತೇ...ಭುವತ್ ॥ ಅನುಷ್ಟುಪ್

---

ವಿಷ್ಣುಮುಖಾ ಅನ್ನಪತೇ ಯಾವತೀ ವಿ ವೈ ಪುರುಷಮಾತ್ರೇಣಾಗ್ನೇ ತವ ಶ್ರವೋ ವಯೋ ಬ್ರಹ್ಮಜಜ್ಞಾನಗ್ಗ್ಂ ಸ್ವಯಮಾತೃಣ್ಣಾಮೇಷಾಂ ವೈ ಪಶುರ್ಗಾಯತ್ರೀ ಕಸ್ತ್ವಾ ದ್ವಾದಶ ॥ ೧೨ ॥

ವಿಷ್ಣುಮುಖಾ ಅಪಚಿತಿಮಾನ್, ವಿವಾ ಏತಾವಗ್ನೇ ತವ ಸ್ವಯಮಾತೃಣ್ಣಾಂ ವಿಷೂಚೀನಾನಿ ಗಾಯತ್ರೀ ಚತುಷ್ಷಷ್ಟಿಃ ॥ ೬೪ ॥

॥ ವಿಷ್ಣುಮುಖಾಸ್ತನುವೇ ಭುವತ್ ॥

ಹರಿಃ ಓಮ್ ॥

ಶ್ರೀ ಕೃಷ್ಣಾರ್ಪಣಮಸ್ತು ॥

ಇತಿ ಪಂಚಮಕಾಂಡೇ ದ್ವಿತೀಯಃ ಪ್ರಶ್ನಃ

# ತೈತ್ತಿರೀಯ ಸಂಹಿತಾ

## ಪಂಚಮಃ ಕಾಂಡಃ ತೃತೀಯಃ ಪ್ರಶ್ನಃ

## ॥ ಪ್ರಥಮೋಽನುವಾಕಃ ॥

ಉತ್ಸನ್ನಯಜ್ಞೋ ವಾ ಏಷ ಯದಗ್ನಿಃ

---

ಉತ್ಸನ್ನಯಜ್ಞ ಇತ್ಯುತ್ಸನ್ನ-ಯಜ್ಞಃ । ವೈ । ಏಷಃ । ಯತ್ । ಅಗ್ನಿಃ ।

---

ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಮ್ ॥ ೧ ॥

ಚಿತಿರಾದ್ಯಾ ದ್ವಿತೀಯೇ ಸ್ಯಾತ್ತೃತೀಯೇ ತು ಚತುಷ್ಟಯಮ್ ।
ದ್ವಾದಶಾತ್ರಾನುವಾಕಾಃ ಸ್ಯುಃ ಪ್ರಥಮೇ ತ್ವಿಷ್ಟಕಾ ಇಮಾಃ ॥ ೨ ॥

ಆಶ್ವಿನ್ಯಶ್ಚ ತಥರ್ತವ್ಯಾಃ ಪ್ರಾಣಭೃತ್ಸಂಜ್ಞಕಾಸ್ತಥಾ ।
ಅಪಸ್ಯಾಶ್ಚ ವಯಸ್ಯಾಶ್ಚ ದ್ವಿತೀಯಸ್ಯಾಂ ಚಿತೌ ಶ್ರುತಾಃ ॥ ೩ ॥

ದ್ವಿತೀಯೇ ಸ್ವಯಮಾತೃಣ್ಣಾ ದಿಶ್ಯಾಃ ಪ್ರಾಣಭೃತಸ್ತಥಾ ।
ಬೃಹತ್ಯೋ ವಾಲಖಿಲ್ಯಾಶ್ಚ ತೃತೀಯಸ್ಯಾಂ ಚಿತಾವಿಮಾಃ ॥ ೪ ॥

ತೃತೀಯಚತುರ್ಥಯೋರಕ್ಷ್ಣಯಾಸ್ತೋಮೀಯಾಶ್ಚ ಸೃಷ್ಟಯಃ ।
ವ್ಯುಷ್ಟಯಶ್ಚೇಷ್ಟಕಾಃ ಪ್ರೋಕ್ತಾಶ್ಚತುರ್ಥ್ಯಾಂ ಚ ಚಿತಾವಿಮಾಃ ॥ ೫ ॥

ಪಂಚಮೇ ತ್ವಸಪತ್ನಾಖ್ಯಾ ವಿರಾಡಾಖ್ಯಾಶ್ಚ ವರ್ಣಿತಾಃ ।
ಷಷ್ಠೇ ತು ಸ್ತೋಮಭಾಗಾಖ್ಯಾಃ ನಾಕಸತ್ಸಂಜ್ಞಕಾಸ್ತು ಯಾಃ ॥ ೬ ॥

---

ಈ ಪ್ರಪಾಠಕದಲ್ಲಿ ಎರಡನೆಯ ಚಿತಿಯು ಹೇಳಲ್ಪಟ್ಟಿದೆ. ಆಶ್ವಿನ್ಯಾದಿ ಇಷ್ಟಕೆಗಳ ಉಪಧಾನವು ಹೇಳಲ್ಪಟ್ಟಿದೆ.

---

| ಬ್ರಾಹ್ಮಣಭಾಗ | ವಿವರಣೆ |
| --- | --- |

ಆಶ್ವಿನೀಷ್ಟಕೋಪಧಾನ; ಪ್ರಶಂಸೆ

| | |
| --- | --- |
| **ಯತ್ ಅಗ್ನಿಃ ಏಷಃ** | ಚಯನ ಮಾಡಲ್ಪಡುವ ಈ ಅಗ್ನಿಯು |
| **ಉತ್ಸನ್ನಯಜ್ಞಃ ವೈ** | ನಷ್ಟವಾದ ಯಜ್ಞಾಂಗವುಳ್ಳದುದೇ ಆಗಿರುತ್ತದೆ. |

ಕಿಂ ವಾಽಹೈತಸ್ಯ ಕ್ರಿಯತೇ ಕಿಂ ವಾ ನ ಯದ್ವೈ ಯಜ್ಞಸ್ಯ ಕ್ರಿಯಮಾಣಸ್ಯಾಂತರ್ಯಂತಿ ಪೂಯತಿ ವಾ ಅಸ್ಯ ತದಾಶ್ವಿನೀರುಪ ದಧಾತ್ಯಶ್ವಿನೌ ವೈ ದೇವಾನಾಂ ಭಿಷಜೌ

---

ಕಿಮ್ । ವಾ । ಅಹ । ಏತಸ್ಯ । ಕ್ರಿಯತೇ । ಕಿಮ್ । ವಾ । ನ । ಯತ್ । ವೈ । ಯಜ್ಞಸ್ಯ । ಕ್ರಿಯಮಾಣಸ್ಯ । ಅಂತರ್ಯಂತೀತ್ಯಂತಃ-ಯಂತಿ । ಪೂಯತಿ । ವೈ । ಅಸ್ಯ । ತತ್ । ಆಶ್ವಿನೀಃ । ಉಪೇತಿ । ದಧಾತಿ । ಅಶ್ವಿನೌ । ವೈ । ದೇವಾನಾಮ್ । ಭಿಷಜೌ ।

---

ಚೋಡಾಖ್ಯಾ ಸ್ವಯಮಾತೃಣ್ಣಾ ವಿಕರ್ಣೀ ತಾಶ್ಚ ಸಪ್ತಮೇ ।
ಛಂದೋಭಿಧಾ ಅಷ್ಟಮೇ ಸ್ಯುಃ ಪಂಚಮ್ಯಾಂ ತು ಚಿತಾವಿಮಾಃ ॥ ೭ ॥

ಅಥಾವಶಿಷ್ಟಾಃ ಕಥ್ಯಂತೇ ತಾ ವಿಜ್ಞೇಯಾ ಯಥಾಚಿತಿ ।
ಸಯುಜೋ ಮಂಡಲಾಖ್ಯಾಶ್ಚ ವಿಶ್ವಜ್ಯೋತಿಷ ಇತ್ಯಮೂಃ ॥ ೮ ॥

ದಶಮೇ ವೃಷ್ಟಿಸನಿಸಂಯಾನಿಕಾಭಿಧಾಃ ।
ಆದಿತ್ಯಾಖ್ಯಾ ಘೃತಾಖ್ಯಾಶ್ಚ ಯಶೋದಾಶ್ಚೇತಿ ವರ್ಣಿತಾಃ ॥ ೯ ॥

ಏಕಾದಶೇ ತು ಭೂಯಸ್ಕೃದಗ್ನಿರೂಪಾಭಿಧಾ ಅಪಿ ।
ದ್ರವಿಣೋದಾಸ್ತಥಾಽಽಯುಷ್ಯಾಃ ಸ್ಯಾದಗ್ನಿಹೃದಯಾಭಿಧಾ ॥ ೧೦ ॥

ಋತವ್ಯಾಶ್ಚೇತ್ಯೇವಮೇತಾಃ ಕ್ರಮಾದಿಹ ಸಮೀರಿತಾಃ ।
ದ್ವಾದಶೇ ತ್ವಶ್ವಮೇಧಸ್ಯ ವಿಧಿರಿತ್ಯತ್ರ ನಿರ್ಣಯಃ ॥ ೧೧ ॥

---

| | |
|---|---|
| **ಏತಸ್ಯ ಕಿಮ್ ವಾ ಕ್ರಿಯತೇ** | ಈ ಚಯನದ ಯಾವ ಅಂಗವು ಅನುಷ್ಠಿಸಲ್ಪಟ್ಟಿದೆ |
| **ಕಿಮ್ ವಾ** ನ ಕ್ರಿಯತೇ | ಯಾವ ಅಂಗವು ಅನುಷ್ಠಿಸಲ್ಪಟ್ಟಿಲ್ಲವೆಂಬುದನ್ನು |
| **ಅಹ** | (ಯಾರೂ ತಿಳಿಯಲು) ಸಾಧ್ಯವಿಲ್ಲ. |
| **ಯತ್ ಕ್ರಿಯಮಾಣಸ್ಯ ಯಜ್ಞಸ್ಯ** | ಅನುಷ್ಠಿಸಲ್ಪಡುವ ಯಜ್ಞದ ಯಾವ ಅಂಗವನ್ನು |
| **ಅಂತರ್ಯಂತಿ ವೈ** | ಬಿಟ್ಟಿರುವರೋ |
| **ಅಸ್ಯ ತತ್ ಪೂಯತಿ ವೈ** | ಯಜ್ಞದ ಆ ಅಂಗವನ್ನು ನಾಶಪಡಿಸಿದಂತೆಯೇ/ಕೆಡಿಸಿದಂತೆಯೇ ಸರಿ./ಅಂಗವು ಕೆಟ್ಟಂತೆಯೇ ಸರಿ. |
| **ಆಶ್ವಿನೀಃ ಉಪದಧಾತಿ** | (ಆ ದೋಷಪರಿಹಾರಕ್ಕಾಗಿ) ಆಶ್ವಿನೀಷ್ಟಕೆಗಳನ್ನು ಉಪಧಾನ ಮಾಡಬೇಕು. |
| **ಅಶ್ವಿನೌ ವೈ ದೇವಾನಾಮ್ ಭಿಷಜೌ** | ಅಶ್ವಿನೀದೇವತೆಗಳು ದೇವವೈದ್ಯರಷ್ಟೆ. |

ತಾಭ್ಯಾಮೇವಾಸ್ಮೈ ಭೇಷಜಂ ಕರೋತಿ ಪಂಚೋಪದಧಾತಿ ಪಾಂಕ್ತೋ

ಯಜ್ಞೋ ಯಾವಾನೇವ ಯಜ್ಞಸ್ತಸ್ಮೈ ಭೇಷಜಂ ಕರೋತ್ಯೃತವ್ಯಾ

ಉಪದಧಾತ್ಯೃತೂನಾಂ ಕ್ಲೃಪ್ತ್ಯೈ [ಕ್ಲೃಪ್ತ್ಯೈ(೧)]

---

ತಾಭ್ಯಾಮ್ । ಏವ । ಅಸ್ಮೈ । ಭೇಷಜಮ್ । ಕರೋತಿ । ಪಂಚ । ಉಪೇತಿ । ದಧಾತಿ । ಪಾಂಕ್ತಃ । ಯಜ್ಞಃ ।

ಯಾವಾನ್ । ಏವ । ಯಜ್ಞಃ । ತಸ್ಮೈ । ಭೇಷಜಮ್ । ಕರೋತಿ । ಋತವ್ಯಾಃ । ಉಪೇತಿ । ದಧಾತಿ । ಋತೂನಾಮ್ ।

ಕ್ಲೃಪ್ತ್ಯೈ । (೧) ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ತಾಭ್ಯಾಮ್ ಏವ ಅಸ್ಮೈ ಭೇಷಜಮ್ ಕರೋತಿ** | ಆ ಅಶ್ವಿನೀದೇವತೆಗಳಿಂದಲೇ ಈ ಯಜ್ಞಕ್ಕೆ/ಯಜಮಾನನಿಗೆ ಚಿಕಿತ್ಸೆಯನ್ನು ಅಧ್ವರ್ಯುವು ಆಶ್ವಿನೀಷ್ಟಕೋಪಧಾನದಿಂದ ಮಾಡುತ್ತಾನೆ. |
| | **ಸಂಖ್ಯಾವಿಧಿ** |
| **ಪಂಚ ಉಪದಧಾತಿ** | ಐದು ಆಶ್ವಿನೀಷ್ಟಕೆಗಳನ್ನು ಉಪಧಾನ ಮಾಡಬೇಕು. |
| **ಯಜ್ಞಃ ಪಾಂಕ್ತಃ** | ಯಜ್ಞವು ಪಂಚತ್ವಸಂಖ್ಯೆಯಿಂದ ಕೂಡಿದೆ. |
| **ಯಾವಾನ್ ಏವ ಯಜ್ಞಃ ತಸ್ಮೈ ಭೇಷಜಮ್ ಕರೋತಿ** | ಯಜ್ಞವು ಎಷ್ಟು ಪರಿಮಾಣವುಳ್ಳದ್ದಾಗಿದೆಯೋ ಅದಕ್ಕೆ ಭೇಷಜವನ್ನು ಮಾಡಿ ಅಧ್ವರ್ಯುವು ಸಂಪೂರ್ಣಯಜ್ಞಕ್ಕೂ ದೋಷಪರಿಹಾರವನ್ನು ಮಾಡಿದವನಾಗುತ್ತಾನೆ. |
| | **ಋತವ್ಯೇಷ್ಟಕೋಪಧಾನ** |
| **ಋತವ್ಯಾಃ ಉಪದಧಾತಿ** | ಋತವ್ಯೇಷ್ಟಕೆಗಳನ್ನು ಉಪಧಾನ ಮಾಡಬೇಕು. |
| **ಋತೂನಾಮ್ ಕ್ಲೃಪ್ತ್ಯೈ** | ಇದು ಋತುಗಳೆಷ್ಟಿವೆಯೋ ಅವೆಲ್ಲವನ್ನೂ ತಮ್ಮ ಕಾರ್ಯದಲ್ಲಿ ಸಮರ್ಥರನ್ನಾಗಿ ಮಾಡುವುದಕ್ಕಾಗುತ್ತದೆ. |

---

**ತಾತ್ಪರ್ಯ:**–ಅಗ್ನಿಚಯನವು ಬಹಳ ಅಂಗಗಳಿಂದ ಕೂಡಿರುವ ಯಜ್ಞವಾಗಿದೆ. ಅದರ ಅನುಷ್ಠಾನದಲ್ಲಿ ಭ್ರಮ–ಪ್ರಮಾದಾದಿಗಳಿಂದ ಯಜ್ಞಾಂಗವು ನಷ್ಟವೇ ಆಗುತ್ತದೆ. ಆ ಕೆಟ್ಟು ಹೋದ ಅಂಗವನ್ನು ಫಲಿಸುವಂತೆ ಮಾಡಿಸಲು ಈ ಆಶ್ವಿನೀಷ್ಟಕೋಪಧಾನವನ್ನು ಶ್ರುತಿಯು ಹೇಳಿದೆ.

ಪಂಚೋಪದಧಾತಿ ಪಂಚ ವಾ ಋತವೋ ಯಾವಂತ ಏವರ್ತವಸ್ತಾನ್ಕಲ್ಪಯತಿ

ಸಮಾನಪ್ರಭೃತಯೋ ಭವಂತಿ ಸಮಾನೋದರ್ಕಾಸ್ತಸ್ಮಾಥ್ಸಮಾನಾ ಋತವ

ಏಕೇನ ಪದೇನ ವ್ಯಾವರ್ತಂತೇ

---

ಪಂಚ । ಉಪೇತಿ । ದಧಾತಿ । ಪಂಚ । ವೈ । ಋತವಃ । ಯಾವಂತಃ । ಏವ । ಋತವಃ । ತಾನ್ । ಕಲ್ಪಯತಿ । ಸಮಾನಪ್ರಭೃತಯ ಇತಿ ಸಮಾನ–ಪ್ರಭೃತಯಃ । ಭವಂತಿ । ಸಮಾನೋದರ್ಕಾ ಇತಿ ಸಮಾನ–ಉದರ್ಕಾಃ । ತಸ್ಮಾತ್ । ಸಮಾನಾಃ । ಋತವಃ । ಏಕೇನ । ಪದೇನ । ವ್ಯಾವರ್ತಂತ ಇತಿ ವಿ–ಆವರ್ತಂತೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಪಂಚ ಉಪದಧಾತಿ** | ಐದು ಋತವ್ಯೇಷ್ಟಕೆಗಳನ್ನು ಉಪಧಾನ ಮಾಡಬೇಕು. |
| **ಋತವಃ ಪಂಚ ವೈ** | *ಋತುಗಳು ಐದಷ್ಟೆ. |
| **ಯಾವಂತಃ ಋತವಃ ಏವ** | ಋತುಗಳು ಎಷ್ಟು ಇವೆಯೋ (ಆ ಎಲ್ಲ) |
| **ತಾನ್ ಕಲ್ಪಯತಿ** | ಋತುಗಳನ್ನೂ ಅವುಗಳ ವ್ಯಾಪಾರದಲ್ಲಿ ಸಮರ್ಥಗಳನ್ನಾಗಿ ಮಾಡುತ್ತಾನೆ. |
| **ಸಮಾನಪ್ರಭೃತಯಃ ಭವಂತಿ** | (ಋತವ್ಯೇಷ್ಟಕೆಗಳನ್ನು ಉಪಧಾನ ಮಾಡುವ ಮಂತ್ರಗಳು) ಸಮಾನವಾದ ಆರಂಭವುಳ್ಳವುಗಳು. |
| **ಸಮಾನೋದರ್ಕಾಃ** ಭವಂತಿ | ಸಮಾನವಾದ ಅಂತ್ಯವನ್ನು ಹೊಂದಿದವುಗಳಾಗಿರುತ್ತವೆ. |
| **ತಸ್ಮಾತ್ ಋತವಃ ಸಮಾನಾಃ** | ಆದುದರಿಂದ ಋತುಗಳೆಲ್ಲವೂ(ಎರಡು ತಿಂಗಳಿನಿಂದ ಕೂಡಿ) ಸಮಾನವಾಗಿವೆ. |
| **ಏಕೇನ ಪದೇನ ವ್ಯಾವರ್ತಂತೇ** | ಉಪಧಾನ ಮಾಡಲು ಹೇಳುವ ಐದು ಮಂತ್ರಗಳೂ 'ವಸುಭಿಃ' ಮುಂತಾದ ಒಂದು ಪದದಿಂದ ಭಿನ್ನವಾಗಿವೆ. |

---

'ಧ್ರುವಕ್ಷಿತಿಃ' ಎಂದು ಆರಂಭಗೊಂಡು **'ಅಶ್ವಿನಾಧ್ವರ್ಯೂ ಸಾದಯತಾಮಿಹ ತ್ವಾ'** ಎಂದು ಮುಗಿಯುವ ಮಂತ್ರಗಳಿಂದ ಉಪಧಾನ ಮಾಡಲ್ಪಡುವ ಇಷ್ಟಕೆಗಳು ಆಶ್ವಿನೀಷ್ಟಕೆಗಳು. [ತೈ. ಸಂ. 4.3.4]

---

* ಹೇಮಂತ–ಶಿಶಿರ ಋತುಗಳನ್ನು ಒಗ್ಗೂಡಿಸಿ ಒಂದೆಂಬ ಗಣನೆಯು ಇದೆ.

ತಸ್ಮಾದೃತವೋ ವ್ಯಾವರ್ತಂತೇ ಪ್ರಾಣಭೃತ ಉಪದಧಾತ್ಯೃತುಷ್ವೇವ
ಪ್ರಾಣಾನ್ದಧಾತಿ ತಸ್ಮಾಥ್ಸಮಾನಾಸ್ಸಂತ ಋತವೋ ನ ಜೀರ್ಯಂತ್ಯಥೋ
ಪ್ರಜನಯತ್ಯೇವೈನಾನೇಷ ವೈ ವಾಯುರ್ಯತ್ಪ್ರಾಣೋ

---

ತಸ್ಮಾತ್ । ಋತವಃ । ವ್ಯಾವರ್ತಂತ ಇತಿ ವಿ-ಆವರ್ತಂತೇ । ಪ್ರಾಣಭೃತ ಇತಿ ಪ್ರಾಣ-ಭೃತಃ । ಉಪೇತಿ । ದಧಾತಿ । ಋತುಷು । ಏವ । ಪ್ರಾಣಾನಿತಿ ಪ್ರ-ಅನಾನ್ । ದಧಾತಿ । ತಸ್ಮಾತ್ । ಸಮಾನಾಃ । ಸಂತಃ । ಋತವಃ । ನ । ಜೀರ್ಯಂತಿ । ಅಥೋ ಇತಿ । ಪ್ರೇತಿ । ಜನಯತಿ । ಏವ । ಏನಾನ್ । ಏಷಃ । ವೈ । ವಾಯುಃ । ಯತ್ । ಪ್ರಾಣ ಇತಿ ಪ್ರ-ಅನಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ತಸ್ಮಾತ್ ಋತವಃ ವ್ಯಾವರ್ತಂತೇ | (ಮಾಸದ್ವಯದಿಂದ ಕೂಡಿ ಸಮಾನವಾಗಿದ್ದರೂ ಋತುಗಳು) ವಸಂತ, ಗ್ರೀಷ್ಮ ಮುಂತಾದ ಶಬ್ದದಿಂದ ಭಿನ್ನವಾಗಿವೆ. |

ಪ್ರಾಣಭೃದಿಷ್ಟಕೋಪಧಾನ

| | |
|---|---|
| ಪ್ರಾಣಭೃತಃ ಉಪದಧಾತಿ | 'ಪ್ರಾಣಭೃತ್' ಎಂಬ ಹೆಸರಿನ ಇಷ್ಟಕೆಗಳನ್ನು ಉಪಧಾನ ಮಾಡಬೇಕು. |
| ಋತುಷು ಏವ ಪ್ರಾಣಾನ್ ದಧಾತಿ | ಇದರಿಂದ ಋತುಗಳಲ್ಲಿ ಪ್ರಾಣವನ್ನು ತುಂಬಿದವನಾಗುತ್ತಾನೆ. |
| ತಸ್ಮಾತ್ ಸಮಾನಾಃ ಸಂತಃ ಋತವಃ ನ ಜೀರ್ಯಂತಿ | ಹೀಗೆ ಋತುಗಳಲ್ಲಿ ಪ್ರಾಣಸ್ಥಾಪನೆಯನ್ನು ಮಾಡಿರುವುದರಿಂದ ಋತುಗಳು ಸಮಾನವಾಗಿ ಆವೃತ್ತಿಯಾಗುತ್ತಿದ್ದರೂ ಸಮಾನವಾಗಿಯೇ ಇರುತ್ತವೆ. ಕಳೆ ಗುಂದುವುದಿಲ್ಲ. |
| ಅಥೋ ಏನಾನ್ ಪ್ರಜನಯತಿ ಏವ | ಪ್ರಾಣಸ್ಥಾಪನೆಯಿಂದ ಮತ್ತೆ ಮತ್ತೆ ಇವುಗಳನ್ನು ಉತ್ಪತ್ತಿ ಮಾಡಿದಂತೆಯೇ ಆಗುತ್ತದೆ. |

ಪ್ರಾಣಭೃದಿಷ್ಟಕೆಗಳ ಪ್ರಶಂಸೆ-ಇನ್ನೊಂದು ಬಗೆ

| | |
|---|---|
| ಏಷಃ ವೈ ವಾಯುಃ ಯತ್ ಪ್ರಾಣಃ | ಪ್ರಾಣವು ವಾಯುಸ್ವರೂಪವಾಗಿದೆ. |

---

**'ಸಜೂರ್ ಋತುಭಿಃ'** ಎಂದು ಪ್ರಾರಂಭವಾಗುವ ಐದು ಮಂತ್ರಗಳಿಂದ ಋತವ್ಯೇಷ್ಟಕೆಗಳನ್ನು ಉಪಧಾನ ಮಾಡಬೇಕು. ಇವು ಅನುಷಂಗದಿಂದ ಕೂಡಿವೆ. **'ಸಜೂರ್ ಋತುಭಿಃ'** ಇದು ಪೂರ್ವಭಾಗ.

ಯದೃತವ್ಯಾ ಉಪಧಾಯ ಪ್ರಾಣಭೃತ [ಪ್ರಾಣಭೃತಃ(೨)ಉಪದಧಾತಿ]

ಉಪದಧಾತಿ ತಸ್ಮಾಥ್ಸರ್ವಾನ್ನೃತೂನನು ವಾಯುರಾವರೀವರ್ತಿ

ವೃಷ್ಟಿಸನೀರುಪದಧಾತಿ ವೃಷ್ಟಿಮೇವಾವರುಂಧೇ

---

ಯತ್ । ಋತವ್ಯಾಃ । ಉಪಧಾಯೇತ್ಯುಪ-ಧಾಯ । ಪ್ರಾಣಭೃತ ಇತಿ ಪ್ರಾಣ-ಭೃತಃ । (೨) । ಉಪದಧಾತೀತ್ಯುಪ-ದಧಾತಿ । ತಸ್ಮಾತ್ । ಸರ್ವಾನ್ । ಋತೂನ್ । ಅನ್ವಿತಿ । ವಾಯುಃ । ಏತಿ । ವರೀವರ್ತಿ । ವೃಷ್ಟಿಸನೀರಿತಿ ವೃಷ್ಟಿ-ಸನೀಃ । ಉಪೇತಿ । ದಧಾತಿ । ವೃಷ್ಟಿಮ್ । ಏವ । ಅವೇತಿ । ರುಂಧೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಯತ್ ಋತವ್ಯಾಃ ಉಪಧಾಯ ಪ್ರಾಣಭೃತಃ ಉಪದಧಾತಿ | ಋತವ್ಯೇಷ್ಟಕೆಗಳ ಉಪಧಾನ ಮಾಡಿದ ಅನಂತರ ಪ್ರಾಣಭೃದಿಷ್ಟಕೆಗಳನ್ನು ಉಪಧಾನ ಮಾಡುವುದೆಂಬುದರಿಂದ |
| ತಸ್ಮಾತ್ ಸರ್ವಾನ್ ಋತೂನ್ ಅನು ವಾಯುಃ ಆವರೀವರ್ತಿ | (ಆದರಿಂದ) ಸರ್ವ ಋತುಗಳನ್ನೂ ಅನುಸರಿಸಿ ವಾಯುವು ಮತ್ತೆ ಮತ್ತೆ ಆವರ್ತಿಸುತ್ತಲೇ ಇರುತ್ತದೆ. |

**ವೃಷ್ಟಿಸನೀಷ್ಟಕೋಪಧಾನ-ಪ್ರಶಂಸೆ**

| | |
|---|---|
| ವೃಷ್ಟಿಸನೀಃ ಉಪದಧಾತಿ | ಪ್ರಾಣಭೃದಿಷ್ಟಕೋಪಧಾನದ ಬಳಿಕ (**'ಅಪಸ್ಪಿನ್ವ'** ಮುಂತಾದ ಮಂತ್ರಗಳಿಂದ) ವೃಷ್ಟಿಸನೀಷ್ಟಕೆಗಳನ್ನು ಉಪಧಾನ ಮಾಡಬೇಕು. |
| ವೃಷ್ಟಿಮ್ ಅವರುಂಧೇ ಏವ | ಇದರಿಂದ ಯಜಮಾನನು ವೃಷ್ಟಿಯನ್ನು ಪಡೆಯುತ್ತಾನೆ. |

---

**'ಸಜೂರ್ದೇವೈರ್ವಯೋನಾಧೈಃ...ಇಹ ತ್ವಾ'** ಇದು ಉತ್ತರಭಾಗ. ೧) ಸಜೂರ್ವಸುಭಿಃ ೨) ಸಜೂ ರುದ್ರೈಃ ೩) ಸಜೂರಾದಿತ್ಯೈಃ ೪) ಸಜೂರ್ವಿಶ್ವೈರ್ದೇವೈಃ ೫) ಸಜೂರ್ದೇವೈಃ ಹೀಗೆ ಮಧ್ಯದಲ್ಲಿ ಸೇರಿ ಐದು ಮಂತ್ರಗಳಾಗುತ್ತವೆ. ಈ ದೇವತೆಗಳು ಆಯುಸ್ಸನ್ನು ನೀಡಲಿ ಎಂದು ತಾತ್ಪರ್ಯ. ಈ ಎಲ್ಲ ಮಂತ್ರಗಳೂ ಸಮಾನವಾಗಿವೆ. 'ವಸುಭಿಃ' ಮಂತಾದ ಒಂದು ಪದದಿಂದ ಭಿನ್ನವಾಗಿವೆ.

ಯದೇಕಧೋಪದಧ್ಯಾದೇಕಮೃತುಂ ವರ್ಷೇದನುಪರಿಹಾರಗ್ಂ ಸಾದಯತಿ ತಸ್ಮಾಥ್ಸರ್ವಾನೃತೂನ್ ವರ್ಷತಿ ಯತ್ಪ್ರಾಣಭೃತ ಉಪಧಾಯ ವೃಷ್ಟಿಸನೀರುಪ ದಧಾತಿ ತಸ್ಮಾದ್ವಾಯುಪ್ರಚ್ಯುತಾ ದಿವೋ ವೃಷ್ಟಿರೀರ್ತೇ

---

ಯತ್ । ಏಕಧೇತ್ಯೇಕ-ಧಾ । ಉಪದಧ್ಯಾದಿತ್ಯುಪ -ದಧ್ಯಾತ್ । ಏಕಮ್ । ಋತುಮ್ । ವರ್ಷೇತ್ । ಅನುಪರಿಹಾರಮಿತ್ಯನು-ಪರಿಹಾರಮ್ । ಸಾದಯತಿ । ತಸ್ಮಾತ್ । ಸರ್ವಾನ್ । ಋತೂನ್ । ವರ್ಷತಿ । ಯತ್ । ಪ್ರಾಣಭೃತ ಇತಿ ಪ್ರಾಣ-ಭೃತಃ । ಉಪಧಾಯೇತ್ಯುಪ-ಧಾಯ । ವೃಷ್ಟಿಸನೀರಿತಿ ವೃಷ್ಟಿ-ಸನೀಃ । ಉಪದಧಾತೀತ್ಯುಪ-ದಧಾತಿ । ತಸ್ಮಾತ್ । ವಾಯುಪ್ರಚ್ಯುತೇತಿ ವಾಯು-ಪ್ರಚ್ಯುತಾ । ದಿವಃ । ವೃಷ್ಟಿಃ । ಈರ್ತೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಯತ್ ಏಕಧಾ ಉಪದಧ್ಯಾತ್ | ಈ ವೃಷ್ಟಿಸನೀಷ್ಟಕೆಗಳನ್ನು ಒಂದೇ ಸಲ ಒಟ್ಟಿಗೆ ಉಪಧಾನವನ್ನು ಮಾಡಿದರೆ |
| ಏಕಮ್ ಋತುಮ್ ವರ್ಷೇತ್ | ಒಂದೇ ಋತುವಿನಲ್ಲಿ ಮಳೆಯಾಗುತ್ತದೆ. (ಇತರ ಋತುಗಳಲ್ಲಿ ಮಳೆಯು ಆಗುವುದಿಲ್ಲ) |
| ಅನುಪರಿಹಾರಮ್ ಸಾದಯತಿ | (ಆದ್ದರಿಂದ) ಅನುಕ್ರಮವಾಗಿ ಸುತ್ತಲೂ ಉಪಧಾನ ವನ್ನು ಮಾಡಬೇಕು. |
| ತಸ್ಮಾತ್ ಸರ್ವಾನ್ ಋತೂನ್ ವರ್ಷತಿ | ಇದರಿಂದ ಎಲ್ಲ ಋತುಗಳಲ್ಲಿಯೂ ಮಳೆಯು ಆಗು ತ್ತದೆ. |

ಪ್ರಾಣಭೃತ್-ವೃಷ್ಟಿಸನೀಷ್ಟಕೆಗಳ ಪೂರ್ವೋತ್ತರಭಾವದ ಪ್ರಶಂಸೆ

| | |
|---|---|
| ಯತ್ ಪ್ರಾಣಭೃತಃ ಉಪಧಾಯ ವೃಷ್ಟಿಸನೀಃ ಉಪದಧಾತಿ ತಸ್ಮಾತ್ ವಾಯುಪ್ರಚ್ಯುತಾ ವೃಷ್ಟಿಃ ದಿವಃ ಈರ್ತೇ | ಪ್ರಾಣಭೃದಿಷ್ಟಕೆಗಳ ಉಪಧಾನವನ್ನು ಮಾಡಿ ವೃಷ್ಟಿ ಸನೀಷ್ಟಕೆಗಳನ್ನು ಉಪಧಾನ ಮಾಡುತ್ತಾನಾದುದರಿಂದ ಆದುದರಿಂದ ವಾಯುವಿನಿಂದ ಪ್ರೇರಿತವಾಗಿ ಆಕಾಶ ದಿಂದ ಮಳೆಯು ಸುರಿಯುತ್ತದೆ. |

---

ಎಲ್ಲ ಋತುಗಳೂ ಕಾಲಾವಧಿಯಿಂದ ಸಮಾನಗಳು. ವಸಂತ ಮುಂತಾದ ಶಬ್ದಗಳಿಂದ ಭಿನ್ನಗಳು ಎಂದು ತಾತ್ಪರ್ಯ.

ಪಶವೋ ವೈ ವಯಸ್ಯಾ ನಾನಾಮನಸಃ ಖಲು ವೈ ಪಶವೋ ನಾನಾವ್ರತಾಸ್ತೇಽಪ

ಏವಾಭಿ ಸಮನಸೋ[ಸಮನಸಃ(೩)]ಯಂ ಕಾಮಯೇತಾಪಶುಃ ಸ್ಯಾದಿತಿ

ವಯಸ್ಯಾಸ್ತಸ್ಯೋಪಧಾಯಾಪಸ್ಯಾ ಉಪದಧ್ಯಾ-

---

ಪಶವಃ । ವೈ । ವಯಸ್ಯಾಃ । ನಾನಾಮನಸ ಇತಿ ನಾನಾ-ಮನಸಃ । ಖಲು । ವೈ । ಪಶವಃ । ನಾನಾವ್ರತಾ ಇತಿ ನಾನಾ-ವ್ರತಾಃ । ತೇ । ಅಪಃ । ಏವ । ಅಭೀತಿ । ಸಮನಸ ಇತಿ ಸ-ಮನಸಃ । (೩) । ಯಮ್ । ಕಾಮಯೇತ । ಅಪಶುಃ । ಸ್ಯಾತ್ । ಇತಿ । ವಯಸ್ಯಾಃ । ತಸ್ಯ । ಉಪಧಾಯೇತ್ಯುಪ-ಧಾಯ । ಅಪಸ್ಯಾಃ । ಉಪೇತಿ । ದಧ್ಯಾತ್ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ಅಪಸ್ಯೆ-ವಯಸ್ಯೆಗಳ ಇಷ್ಟಕಾಪೌರ್ವಾಪರ್ಯ** |
| ವಯಸ್ಯಾಃ ಪಶವಃ ವೈ | ವಯಸ್ಯೆಗಳೆಂಬ ಇಷ್ಟಕೆಗಳು ಪಶುಸಾಧನಗಳಾದುದರಿಂದ ಪಶುಗಳೇ ಆಗಿವೆ. |
| ಪಶವಃ ನಾನಾಮನಸಃ ಖಲು ವೈ | ಪಶುಗಳು ಬಗೆಬಗೆಯಾದ ಮನಸ್ಸುಳ್ಳವುಗಳು. |
| ನಾನಾವ್ರತಾಃ ಭವಂತಿ | ಬೇರೆ ಬೇರೆಯ ಕೆಲಸವುಳ್ಳವುಗಳಾಗಿವೆ. |
| ತೇ ಅಪಃ ಅಭಿ ಸಮನಸಃ ಏವ | ಆದರೆ ನೀರಿನ ವಿಷಯದಲ್ಲಿ ಸಮಾನವಾದ ಮನಸ್ಸನ್ನು ಹೊಂದಿದವುಗಳು. |
| ಯಮ್ ಅಪಶುಃ ಸ್ಯಾತ್ ಇತಿ ಕಾಮಯೇತ | ಅಧ್ವರ್ಯುವು ಯಾವ ಯಜಮಾನನನ್ನು ಪಶುರಹಿತನಾಗಬೇಕೆಂದು ಬಯಸುವನೋ |
| ತಸ್ಯ ವಯಸ್ಯಾಃ ಉಪಧಾಯ<br>ಅಪಸ್ಯಾಃ ಉಪ ದಧ್ಯಾತ್ | ಅವನ ಚಯನಯಾಗದಲ್ಲಿ ಮೊದಲು ವಯಸ್ಯೇಷ್ಟಕೆಗಳನ್ನು ಉಪಧಾನ ಮಾಡಿ ಬಳಿಕ ಅಪಸ್ಯೇಷ್ಟಕೋಪಧಾನ ಮಾಡಬೇಕು. |

---

**'ಪ್ರಾಣಂ ಮೇ ಪಾಹಿ'** ಮುಂತಾದ ಮಂತ್ರಗಳಿಂದ ಉಪಧಾನ ಮಾಡುವ ಇಷ್ಟಕೆಗಳು ಪ್ರಾಣಭೃದಿಷ್ಟಕೆಗಳು. ಇದರಿಂದ ಯಜಮಾನನು ಋತುಗಳಲ್ಲಿ ಪ್ರಾಣವನ್ನು ಧರಿಸಿದವನಾಗುತ್ತಾನೆ. ಋತುಗಳು ಪ್ರಾಣಬಲವನ್ನು ಪಡೆಯುತ್ತವೆ. ಋತುಗಳನ್ನು ಪುನಃ ಪುನಃ ಉತ್ಪತ್ತಿ ಮಾಡಿದಂತೆಯೇ ಆಗುತ್ತದೆ.

ಪ್ರಾಣಭೃದಿಷ್ಟಕೆಗಳ ಬಳಿಕ **'ಅಪಸ್ಪಿನ್ವ'** ಮುಂತಾದ ಮಂತ್ರಗಳಿಂದ ವೃಷ್ಟಿಸನೀಷ್ಟಕೆಗಳನ್ನು ಉಪಧಾನ ಮಾಡಬೇಕು. ಇವುಗಳನ್ನು ಮೊದಲು ಪೂರ್ವದಲ್ಲಿ ಅನಂತರ ದಕ್ಷಿಣದಲ್ಲಿ ಬಳಿಕ ಪಶ್ಚಿಮದಲ್ಲಿ ತದನಂತರ ಉತ್ತರದಲ್ಲಿ ಕಡೆಗೆ ಮಧ್ಯದಲ್ಲಿ ಉಪಧಾನ ಮಾಡಬೇಕು. ಹೀಗೆ ಮಾಡುವುದರಿಂದ ಎಲ್ಲ ಋತುಗಳಲ್ಲಿಯೂ ಮಳೆಯು

–ದಸಂಜ್ಞಾನಮೇವಾಸ್ಮೈ ಪಶುಭಿಃ ಕರೋತ್ಯಪಶುರೇವ ಭವತಿ ಯಂ ಕಾಮಯೇತ ಪಶುಮಾನ್ತ್ಸ್ಯಾದಿತ್ಯಪಸ್ಯಾಸ್ತಸ್ಯೋಪಧಾಯ ವಯಸ್ಯಾ ಉಪದಧ್ಯಾತ್ಸಂಜ್ಞಾನಮೇವಾಸ್ಮೈ ಪಶುಭಿಃ ಕರೋತಿ ಪಶುಮಾನೇವ ಭವತಿ

---

ಅಸಂಜ್ಞಾನಮಿತ್ಯಸಮ್–ಜ್ಞಾನಮ್ । ಏವ । ಅಸ್ಮೈ । ಪಶುಭಿರಿತಿ ಪಶು–ಭಿಃ । ಕರೋತಿ । ಅಪಶುಃ । ಏವ । ಭವತಿ । ಯಮ್ । ಕಾಮಯೇತ । ಪಶುಮಾನಿತಿ ಪಶು–ಮಾನ್ । ಸ್ಯಾತ್ । ಇತಿ । ಅಪಸ್ಯಾಃ । ತಸ್ಯ । ಉಪಧಾಯೇತ್ಯುಪ–ಧಾಯ । ವಯಸ್ಯಾಃ । ಉಪೇತಿ । ದಧ್ಯಾತ್ । ಸಂಜ್ಞಾನಮಿತಿ ಸಮ್–ಜ್ಞಾನಮ್ । ಏವ । ಅಸ್ಮೈ । ಪಶುಭಿರಿತಿ ಪಶು–ಭಿಃ । ಕರೋತಿ । ಪಶುಮಾನಿತಿ ಪಶು–ಮಾನ್ । ಏವ । ಭವತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಅಸ್ಮೈ ಪಶುಭಿಃ ಅಸಂಜ್ಞಾನಮ್ ಏವ ಕರೋತಿ | ಇದರಿಂದ ಈ ಯಜಮಾನನಿಗೆ ಪಶುಗಳಿಂದ ಪ್ರಸಿದ್ಧನಾಗದಂತೆ/ಪ್ರಕಾಶಿತನಾಗದಂತೆ ಅಧ್ವರ್ಯುವು ಮಾಡುತ್ತಾನೆ. |
| ಅಪಶುಃ ಏವ ಭವತಿ | ಇದರಿಂದ ಯಜಮಾನನು ಪಶುರಹಿತನಾಗುವನು. |
| ಯಮ್ ಪಶುಮಾನ್ ಸ್ಯಾತ್ ಇತಿ ಕಾಮಯೇತ | ಅಧ್ವರ್ಯುವು ಯಾವ ಯಜಮಾನನನ್ನು ಪಶುಮಂತನಾಗಬೇಕೆಂದು ಬಯಸುವನೋ |
| ತಸ್ಯ ಅಪಸ್ಯಾಃ ಉಪಧಾಯ ವಯಸ್ಯಾಃ ಉಪದಧ್ಯಾತ್ | ಅವನ ಚಯನಯಾಗದಲ್ಲಿ ಅಪಸ್ಯೇಷ್ಟಕೆಗಳನ್ನು ಉಪಧಾನ ಮಾಡಿ ಬಳಿಕ ವಯಸ್ಯೇಷ್ಟಕೋಪಧಾನವನ್ನು ಅನುಷ್ಠಿಸಬೇಕು. |
| ಅಸ್ಮೈ ಪಶುಭಿಃ ಸಂಜ್ಞಾನಮ್ ಏವ ಕರೋತಿ | ಇದರಿಂದ ಈ ಯಜಮಾನನು ಪಶುಗಳಿಂದ ಪ್ರಸಿದ್ಧನಾಗುವಂತೆ ಅಧ್ವರ್ಯುವು ಮಾಡುತ್ತಾನೆ. |
| ಪಶುಮಾನ್ ಏವ ಭವತಿ | ಯಜಮಾನನು ಪಶುಮಂತನಾಗುತ್ತಾನೆ. |

---

ಬರುವಂತಾಗುತ್ತದೆ.

ವಯಸ್ಯೇಷ್ಟಕೆಗಳು ಪಶುಪ್ರಾಪ್ತಿಗೆ ಸಾಧನಗಳು. ಪಶುಗಳು ಬಗೆ ಬಗೆಯ ಸ್ವಭಾವವುಳ್ಳವುಗಳು. ಒಂದು ಹಸುವಿಗೆ ಇಷ್ಟವೆನಿಸುವುದು ಇನ್ನೊಂದು ಹಸುವಿಗೂ ಹಿಡಿಸಬೇಕೆಂಬ ನಿಯಮವಿಲ್ಲ. ಒಂದು ಪಶುವು ಆಘ್ರಾಣಿಸಿ ಬಿಟ್ಟ ಹುಲ್ಲನ್ನು ಇನ್ನೊಂದು ಹಸುವು ತಿನ್ನುವುದು ಇದೆ. ಅವುಗಳ ಕಾರ್ಯವೂ ಬೇರೆ ಬೇರೆಯೇ. ಕೆಲವು ಭಾರವನ್ನು

ಚತಸ್ರಃ ಪುರಸ್ತಾದುಪದಧಾತಿ ತಸ್ಮಾಚ್ಚತ್ವಾರಿ ಚಕ್ಷುಷೋ ರೂಪಾಣಿ ದ್ವೇ ಶುಕ್ಲೇ ದ್ವೇ ಕೃಷ್ಣೇ [(೪)ಮೂರ್ಧನ್ವತೀರ್ಭವಂತಿ] ಮೂರ್ಧನ್ವತೀರ್ಭವಂತಿ ತಸ್ಮಾತ್ಪುರಸ್ತಾನ್ಮೂರ್ಧಾ ಪಂಚ ದಕ್ಷಿಣಾಯಾಗ್ಂ ಶ್ರೋಣ್ಯಾಮುಪದಧಾತಿ

---

ಚತಸ್ರಃ । ಪುರಸ್ತಾತ್ । ಉಪೇತಿ । ದಧಾತಿ । ತಸ್ಮಾತ್ । ಚತ್ವಾರಿ । ಚಕ್ಷುಷಃ । ರೂಪಾಣಿ । ದ್ವೇ ಇತಿ । ಶುಕ್ಲೇ ಇತಿ । ದ್ವೇ ಇತಿ । ಕೃಷ್ಣೇ ಇತಿ । (೪) । ಮೂರ್ಧನ್ವತೀರಿತಿ ಮೂರ್ಧನ್ನ್-ವತೀಃ । ಭವಂತಿ । ತಸ್ಮಾತ್ । ಪುರಸ್ತಾತ್ । ಮೂರ್ಧಾ । ಪಂಚ । ದಕ್ಷಿಣಾಯಾಮ್ । ಶ್ರೋಣ್ಯಾಮ್ । ಉಪೇತಿ । ದಧಾತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಚತಸ್ರಃ ಪುರಸ್ತಾತ್ ಉಪದಧಾತಿ | ನಾಲ್ಕು ವಯಸ್ಯೇಷ್ಟಕೆಗಳನ್ನು ಪೂರ್ವಭಾಗದಲ್ಲಿ ಉಪಧಾನ ಮಾಡಬೇಕು. |
| ತಸ್ಮಾತ್ ಚತ್ವಾರಿ ಚಕ್ಷುಷಃ ರೂಪಾಣಿ | ಆದುದರಿಂದ ಕಣ್ಣಿಗೆ ಸಂಬಂಧಿಸಿದ ರೂಪಗಳು ನಾಲ್ಕು. |
| ದ್ವೇ ಶುಕ್ಲೇ ದ್ವೇ ಕೃಷ್ಣೇ | ಎರಡು ಬಿಳಿಯ ದೊಡ್ಡ ಗುಡ್ಡೆಗಳು (ಅವೆರಡರ ಮಧ್ಯೆ) ಎರಡು ಕರಿಯ ಗುಡ್ಡೆಗಳು. |

**ಮೂರ್ಧಾಶಬ್ದದ ಪ್ರಶಂಸೆ**

| | |
|---|---|
| ಮೂರ್ಧನ್ವತೀಃ ಭವಂತಿ | ಆ ಇಷ್ಟಕೆಗಳು 'ಮೂರ್ಧನ್ವತಿ'ಗಳಾಗಿರುತ್ತವೆ. (ಅವುಗಳಲ್ಲಿ ಒಂದು ಮಂತ್ರದಲ್ಲಿ **ಮೂರ್ಧನ್** ಶಬ್ದವು ಇದೆ) |
| ತಸ್ಮಾತ್ ಮೂರ್ಧಾ ಪುರಸ್ತಾತ್ | ಅದರಿಂದ ಚಯನ ಮಾಡುವ (ಪಕ್ಷಿರೂಪದ) ಅಗ್ನಿಯ ತಲೆಯು ಪೂರ್ವದಿಕ್ಕಿನಲ್ಲಿರುತ್ತದೆ. |
| ದಕ್ಷಿಣಾಯಾಮ್ ಶ್ರೋಣ್ಯಾಮ್ ಪಂಚ ಉಪದಧಾತಿ | **'ತ್ರ್ಯವಿರ್ವಯಃ'** ಮೊದಲಾದ ಮಂತ್ರಗಳಿಂದ ಬಲಭಾಗದ ಶ್ರೋಣಿಯ ಸ್ಥಾನದಲ್ಲಿ ಐದು ಇಷ್ಟಕೆಗಳನ್ನು ಉಪಧಾನ ಮಾಡಬೇಕು. |

---

ಹೊತ್ತರೆ, ಕೆಲವು ನೇಗಿಲನ್ನು ಎಳೆಯುತ್ತವೆ. ಕೆಲವು ಗಾಡಿಯನ್ನು ಎಳೆಯುತ್ತವೆ. ಆದರೆ ನೀರನ್ನು ಎಲ್ಲವೂ ಸಮಾನವಾಗಿ ಬಯಸುತ್ತವೆ. ಇದು ನೀರಿನ ಇಷ್ಟಕೆಗಳಾದ ಅಪಸ್ಯೆಗಳ ಪೂರ್ವೋಪಧಾನದ ಪೀಠಿಕೆ.

ಪಂಚೋತ್ತರಸ್ಯಾಂ ತಸ್ಮಾತ್ಪಶ್ಚಾದ್ವರ್‌ಷೀಯಾನ್ಪುರಸ್ತಾತ್ಪ್ರವಣಃ ಪಶುರ್ಬಸ್ತೋ ವಯ ಇತಿ ದಕ್ಷಿಣೇಽಗ್ಂಸ ಉಪದಧಾತಿ ವೃಷ್ಣಿರ್ವಯ ಇತ್ಯುತ್ತರೇಽಗ್ಂಸಾವೇವ ಪ್ರತಿದಧಾತಿ

---

ಪಂಚ । ಉತ್ತರಸ್ಯಾಮಿತ್ಯುತ್-ತರಸ್ಯಾಮ್ । ತಸ್ಮಾತ್ । ಪಶ್ಚಾತ್ । ವರ್‌ಷೀಯಾನ್ । ಪುರಸ್ತಾತ್ಪ್ರವಣ ಇತಿ ಪುರಸ್ತಾತ್-ಪ್ರವಣಃ । ಪಶುಃ । ಬಸ್ತಃ । ವಯಃ । ಇತಿ । ದಕ್ಷಿಣೇ । ಅಗ್ಂಸೇ । ಉಪೇತಿ । ದಧಾತಿ । ವೃಷ್ಣಿಃ । ವಯಃ । ಇತಿ । ಉತ್ತರ ಇತ್ಯುತ್-ತರೇ । ಅಗ್ಂಸೌ । ಏವ । ಪ್ರತೀತಿ । ದಧಾತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| | ಇಷ್ಟಕಾಸ್ಥಾನನಿರ್ದೇಶ |
| **ಉತ್ತರಸ್ಯಾಮ್** ಶ್ರೋಣ್ಯಾಮ್ **ಪಂಚ** ಉಪದಧಾತಿ | **'ಪಷ್ಠವಾದ್ವಯಃ'** ಮೊದಲಾದ ಐದು ಮಂತ್ರಗಳಿಂದ ಉತ್ತರಶ್ರೋಣಿಭಾಗದಲ್ಲಿ ಐದು ಇಷ್ಟಕೆಗಳನ್ನು ಉಪಧಾನ ಮಾಡಬೇಕು. |
| **ತಸ್ಮಾತ್ ಪಶುಃ ಪಶ್ಚಾತ್ ವರ್‌ಷೀಯಾನ್ ಪುರಸ್ತಾತ್ಪ್ರವಣಃ** | (ಎರಡು ಶ್ರೋಣಿಗಳಲ್ಲಿ ಹೆಚ್ಚಿನ ಇಷ್ಟಕೆಗಳು ಇರುವುದರಿಂದ ಚಿತಿಯ ಮುಂಭಾಗವು ತಗ್ಗಾಗಿರುತ್ತದೆ) ಆದುದರಿಂದ ಪಶುಗಳ ಶ್ರೋಣಿಗಿಂತ ಹಿಂಭಾಗವು ಎತ್ತರವಾಗಿಯೂ, ಮುಂಭಾಗವು ತಗ್ಗಾಗಿಯೂ ಇರುತ್ತದೆ) |
| **ಬಸ್ತೋ ವಯಃ ಇತಿ ದಕ್ಷಿಣೇ ಅಗ್ಂಸೇ ಉಪದಧಾತಿ** | **'ಬಸ್ತೋ ವಯಃ'** ಎಂಬ ಮಂತ್ರದಿಂದ ಚಿತಿಯ ಬಲಭುಜದ ಸ್ಥಾನದಲ್ಲಿ ಒಂದು ಇಷ್ಟಕೆಯನ್ನು ಉಪಧಾನ ಮಾಡಬೇಕು. |
| **ವೃಷ್ಣಿರ್ವಯಃ ಇತಿ ಉತ್ತರೇ** ಅಗ್ಂಸೇ ಉಪದಧಾತಿ | 'ವೃಷ್ಣಿರ್ವಯಃ' ಎಂಬ ಮಂತ್ರದಿಂದ ಚಿತಿಯ ಎಡಭುಜದ ಸ್ಥಾನದಲ್ಲಿ ಒಂದು ಇಷ್ಟಕೆಯನ್ನು ಉಪಧಾನ ಮಾಡಬೇಕು. |
| **ಅಗ್ಂಸೌ ಏವ ಪ್ರತಿ ದಧಾತಿ** | ಈ ಎರಡು ಉಪಧಾನಗಳಿಂದ ಅಗ್ನಿಗೆ ಎರಡು ಭುಜಗಳನ್ನು ರಚಿಸಿದಂತಾಯಿತು/ರಚಿಸುತ್ತಾನೆ. |

---

**'ತ್ರ್ಯವಿರ್ವಯಃ'** ಮುಂತಾದ ಮಂತ್ರಗಳಿಂದ ಉಪಧಾನ ಮಾಡುವ ಇಷ್ಟಕೆಗಳು ಹತ್ತೊಂಬತ್ತು. ಇವು ವಯಸ್ಯೇಷ್ಟಕೆಗಳು. **'ಅಪಸ್ಪಿನ್ವ'** ಮುಂತಾದ ಮಂತ್ರಗಳಿಂದ ಉಪಧಾನ ಮಾಡುವ ಅಪಸ್ಯೇಷ್ಟಕೆಗಳು ಐದು.

ವ್ಯಾಘ್ರೋ ವಯ ಇತಿ ದಕ್ಷಿಣೇ ಪಕ್ಷ ಉಪದಧಾತಿ ಸಿಗ್ಂಹೋ ವಯ ಇತ್ಯುತ್ತರೇ

ಪಕ್ಷಯೋರೇವ ವೀರ್ಯಂ ದಧಾತಿ ಪುರುಷೋ ವಯ ಇತಿ ಮಧ್ಯೇ

---

ವ್ಯಾಘ್ರಃ । ವಯಃ । ಇತಿ । ದಕ್ಷಿಣೇ । ಪಕ್ಷೇ । ಉಪೇತಿ । ದಧಾತಿ । ಸಿಗ್ಂಹಃ । ವಯಃ । ಇತಿ । ಉತ್ತರ ಇತ್ಯುತ್-

ತರೇ । ಪಕ್ಷಯೋಃ । ಏವ । ವೀರ್ಯಮ್ । ದಧಾತಿ । ಪುರುಷಃ । ವಯಃ । ಇತಿ । ಮಧ್ಯೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ವ್ಯಾಘ್ರೋ ವಯಃ ಇತಿ ದಕ್ಷಿಣೇ ಪಕ್ಷೇ ಉಪ ದಧಾತಿ** | 'ವ್ಯಾಘ್ರೋ ವಯಃ' ಎಂಬ ಮಂತ್ರದಿಂದ ಚಯನ ಮಾಡಲ್ಪಡುವ ಪಕ್ಷಿಯ ಆಕೃತಿಯ ಅಗ್ನಿಯ ಬಲ ರೆಕ್ಕೆಯ ಸ್ಥಾನದಲ್ಲಿ ಇಷ್ಟಕೋಪಧಾನವನ್ನು ಮಾಡುತ್ತಾನೆ. |
| **ಸಿಗ್ಂಹೋ ವಯಃ ಇತಿ ಉತ್ತರೇ** ಪಕ್ಷೇ ಉಪದಧಾತಿ | 'ಸಿಗ್ಂಹೋ ವಯಃ' ಎಂಬ ಮಂತ್ರದಿಂದ ಎಡ ರೆಕ್ಕೆಯ ಸ್ಥಾನದಲ್ಲಿ ಇಷ್ಟಕೋಪಧಾನವನ್ನು ಮಾಡುತ್ತಾನೆ. |
| **ಪಕ್ಷಯೋಃ ವೀರ್ಯಮ್ ಏವ ದಧಾತಿ** | ಈ ಉಪಧಾನಗಳಿಂದ ಅಧ್ವರ್ಯುವು ರೆಕ್ಕೆಗಳಿಗೆ ಅಧಿಕ ಶಕ್ತಿಯನ್ನೀಯುತ್ತಾನೆ. |
| **ಪುರುಷೋಃ ವಯಃ ಇತಿ ಮಧ್ಯೇ** ಉಪದಧಾತಿ | 'ಪುರುಷೋ ವಯಃ' ಎಂಬ ಮಂತ್ರದಿಂದ ಮಧ್ಯದಲ್ಲಿ ವಯಸ್ಯೇಷ್ಟಕೋಪಧಾನವನ್ನು ಮಾಡುತ್ತಾನೆ/ ಮಾಡಬೇಕು. |

---

ಮಂತ್ರಕ್ರಮದಂತೆ ಮೊದಲು ಅಪಸ್ಯೇಷ್ಟಕೆಗಳ ಉಪಧಾನವಾಗಬೇಕು. ಹಾಗೆಯೇ ಅನುಷ್ಠಾನವೆಂದು ಬ್ರಾಹ್ಮಣದಲ್ಲಿ ಪ್ರಶಂಸೆಯೂ ಇದೆ. ಆದರೆ ವಯಸ್ಯೇಷ್ಟಕೆಗಳಲ್ಲಿ ಪೂರ್ವದಿಕ್ಕಿನಲ್ಲಿ ಉಪಧಾನ ಮಾಡುವ ಮಂತ್ರಗಳು **'ತ್ರ್ಯವಿರ್ವಯಃ'** ಎಂಬ ಅನುವಾಕದಲ್ಲಿ ಕಡೆಯಲ್ಲಿ ಪಠಿತವಾಗಿವೆ. ಮಂತ್ರಾಮ್ನಾನಕ್ರಮವನ್ನು ಬಿಟ್ಟು ವಿನಿಯೋಗದ ಬ್ರಾಹ್ಮಣವು ಬೇರೆಯ ಕ್ರಮವನ್ನೇ ಹೇಳಿದೆ. **'ದ್ವೇ ಶುಕ್ಲೇ ದ್ವೇ ಕೃಷ್ಣೇ'** ಎಂಬ ಬ್ರಾಹ್ಮಣಭಾಗದ ಬಳಿಕ **'ಮೂರ್ಧನ್ವತೀ ರ್ಭವಂತಿ'** ಎಂದು ಹೇಳಿರುವುದೇ ಕ್ರಮದ ವ್ಯತ್ಯಾಸಕ್ಕೆ ಚಿಹ್ನೆ. **'ವಿಷ್ಟಂಭೋ ವಯಃ'** ಎಂದು ಆರಂಭವಾಗುವ ನಾಲ್ಕು ಮಂತ್ರಗಳಲ್ಲಿ ಮೂರ್ಧಶಬ್ದವಿಲ್ಲದಿದ್ದರೂ ಕಡೆಯಲ್ಲಿರುವುದರಿಂದ ಛತ್ರಿನ್ಯಾಯದಿಂದ ಅವುಗಳೂ ಮೂರ್ಧನ್ವತಿಗಳೇ.

ಅಪಸ್ಯೇಷ್ಟಕೆಗಳ ಬಳಿಕ ಉಪಧಾನ ಮಾಡಲ್ಪಡುವ ಹತ್ತೊಂಬತ್ತು ವಯಸ್ಯೇಷ್ಟಕೆಗಳ ವಿಭಾಗ ಹೀಗಿದೆ; ಮೂರ್ಧಸ್ಥಾನದಲ್ಲಿ ಅಂದರೆ ಪೂರ್ವದಿಕ್ಕಿನಲ್ಲಿ ನಾಲ್ಕು. ಇದು ಅಗ್ನಿಯ ಶಿರಃಸ್ಥಾನ. ಬಲಭಾಗದ ಶ್ರೋಣಿಯ ಸ್ಥಾನದಲ್ಲಿ ಐದು. ಎಡಭಾಗದ ಶ್ರೋಣಿಯಲ್ಲಿ ಐದು. ಕಡೆಯ ಐದು ಇಷ್ಟಕೆಗಳಲ್ಲಿ ಎರಡನ್ನು ಭುಜಗಳಲ್ಲಿಯೂ

## ತಸ್ಮಾತ್ಪುರುಷಃ ಪಶೂನಾಮಧಿಪತಿಃ ॥ ೫-1 ॥

[ಕ್ಲೃಪ್ತ್ಯಾ ಉಪಧಾಯ ಪ್ರಾಣಭೃತಸ್ಸಮನಸಃ ಕೃಷ್ಣೇ ಪುರುಷೋ ವಯ ಇತಿ ಪಂಚ ಚ ॥]

---

ತಸ್ಮಾತ್ । ಪುರುಷಃ । ಪಶೂನಾಮ್ । ಅಧಿಪತಿರಿತ್ಯಧಿ-ಪತಿಃ ॥ ೫ ॥

---

| ಬ್ರಾಹ್ಮಣಭಾಗ | ವಿವರಣೆ |
| --- | --- |
| **ತಸ್ಮಾತ್ ಪುರುಷಃ ಪಶೂನಾಮ್ ಅಧಿಪತಿಃ** | ಉಳಿದ ವಯಸ್ಯೇಷ್ಟಕೆಗಳು ಪಶುಗಳಂತೆ. ಅಂತೆಯೇ ಶ್ರುತಿಯಲ್ಲಿ **'ಪಶವೋ ವೈ ವಯಸ್ಯಾಃ'** ಎಂದು ಹೇಳಿದೆ. ಮಧ್ಯದಲ್ಲಿ ಉಪಧಾನ ಮಾಡಲ್ಪಡುವ ಇಷ್ಟಕೆಯು ಪುರುಷನಂತೆ. ಅಂತೆಯೇ ಲೋಕದಲ್ಲಿ ಪುರುಷನು ಪಶುಗಳಿಗೆ ಒಡೆಯನು. |

---

ಎರಡನ್ನು ರೆಕ್ಕೆಗಳಲ್ಲಿಯೂ, ಒಂದನ್ನು ಮಧ್ಯದಲ್ಲಿಯೂ ಉಪಧಾನ ಮಾಡಬೇಕು.[4+5+5+5(2+2+1)=19].

ಇಲ್ಲಿಗೆ ಎರಡನೆಯ ಚಿತಿಯು ಮುಗಿಯಿತು.

## ॥ ದ್ವಿತೀಯೋಽನುವಾಕಃ ॥

ಇಂದ್ರಾಗ್ನೀ ಅವ್ಯಥಮಾನಾಮಿತಿ ಸ್ವಯಮಾತೃಣ್ಣಾಮುಪ ದಧಾತೀಂದ್ರಾಗ್ನಿಭ್ಯಾಂ ವಾ ಇಮೌ ಲೋಕೌ ವಿಧೃತಾ–

---

ಇಂದ್ರಾಗ್ನೀ ಇತೀಂದ್ರ–ಅಗ್ನೀ । ಅವ್ಯಥಮಾನಾಮ್ । ಇತಿ । ಸ್ವಯಮಾತೃಣ್ಣಾಮಿತಿ ಸ್ವಯಮ್–ಆತೃಣ್ಣಾಮ್ । ಉಪೇತಿ । ದಧಾತಿ । ಇಂದ್ರಾಗ್ನಿಭ್ಯಾಮಿತೀಂದ್ರಾಗ್ನಿ–ಭ್ಯಾಮ್ । ವೈ । ಇಮೌ । ಲೋಕೌ । ವಿಧೃತಾವಿತಿ ವಿ–ಧೃತೌ ।

---

ಹಿಂದಿನ ಅನುವಾಕದಲ್ಲಿ ದ್ವಿತೀಯಚಿತಿಯ ಉಪಧಾನವು ಹೇಳಲ್ಪಟ್ಟಿತು. ಈ ಅನುವಾಕದಲ್ಲಿ ಮೂರನೆಯ ಚಿತಿಯ ಉಪಧಾನವು ಹೇಳಲ್ಪಡುತ್ತದೆ. ಇದರ ಕಲ್ಪಸೂತ್ರವು ಹೀಗಿದೆ. **'ಶ್ವೋಭೂತೇ ಪೌರ್ವಾಹ್ಣಿಕೀಭ್ಯಾಂ ಪ್ರಚರ್ಯ ತೃತೀಯಾಂ ಚಿತಿಂ ಚಿನೋತಿ, ಇಂದ್ರಾಗ್ನೀ ಅವ್ಯಥಮಾನಾಮಿತಿ ಸ್ವಯಮಾತೃಣ್ಣಾಮಭಿಮೃಶ್ಯ ಅಶ್ವೇನೋಪಘ್ರಾಪ್ಯ'** [ಆಪ. ಶ್ರೌ. ಸೂ. ೧೭.೧.೧೧–೧೨] ಎರಡನೆಯ ಚಿತಿಯ ಉಪಧಾನ ಮಾಡಿದ ಮರುದಿನ ಪೂರ್ವಾಹ್ಣಕೃತ್ಯಗಳನ್ನು ನಡೆಸಿ **'ಇಂದ್ರಾಗ್ನೀ ಅವ್ಯಥಮಾನಾಮ್'** ಎಂಬ ಮಂತ್ರದಿಂದ ಸ್ವಯಮಾತೃಣ್ಣೇಷ್ಟಕೆಯನ್ನು ಅಶ್ವದಿಂದ ಮೂಸಿಸಿ (ಕುದುರೆಯು ಆಘ್ರಾಣಿಸುವಂತೆ ಮಾಡಿ) ಉಪಧಾನ ಮಾಡಬೇಕು.

---

| ಬ್ರಾಹ್ಮಣಭಾಗ | ವಿವರಣೆ |
|---|---|

### ಸ್ವಯಮಾತೃಣ್ಣೇಷ್ಟಕೋಪಧಾನವಿಧಿ; ಅರ್ಥವಾದ

| | |
|---|---|
| **ಇಂದ್ರಾಗ್ನೀ ಅವ್ಯಥಮಾನಾಮ್ ಇತಿ** | **'ಇಂದ್ರಾಗ್ನೀ ಅವ್ಯಥಮಾನಾಮ್'** ಎಂಬ ಮಂತ್ರದಿಂದ (ಇಷ್ಟಕೆಯನ್ನು ಅಶ್ವವು ಆಘ್ರಾಣಿಸುವಂತೆ ಮಾಡಿ) |
| **ಸ್ವಯಮಾತೃಣ್ಣಾಮ್ ಉಪದಧಾತಿ** | *ಸ್ವಯಮಾತೃಣ್ಣೇಷ್ಟಕೆಯನ್ನು ಉಪಧಾನ ಮಾಡಬೇಕು. |
| **ಇಂದ್ರಾಗ್ನಿಭ್ಯಾಮ್ ವೈ ಇಮೌ ಲೋಕೌ ವಿಧೃತೌ** | ಇಂದ್ರ–ಅಗ್ನಿ ದೇವತೆಗಳಿಂದ ದ್ಯುಲೋಕವೂ, ಪೃಥಿವಿಯೂ ಧರಿಸಲ್ಪಟ್ಟಿದೆ. |

---

* ಸ್ವಾಭಾವಿಕವಾದ ರಂಧ್ರಯುಕ್ತವಾದ ಕಲ್ಲು.

–ವನಯೋರ್ಲೋಕಯೋರ್ವಿಧೃತ್ಯಾ ಅಧೃತೇವ ವಾ ಏಷಾ ಯನ್ಮಧ್ಯಮಾ ಚಿತಿರಂತರಿಕ್ಷಮಿವ ವಾ ಏಷೇಂದ್ರಾಗ್ನೀ ಇತ್ಯಾಹೇಂದ್ರಾಗ್ನೀ ವೈ ದೇವಾನಾಮೋಜೋಭೃತಾವೋಜಸೈವೈನಾಮಂತರಿಕ್ಷೇ ಚಿನುತೇ ಧೃತ್ಯೈ

---

ಅನಯೋಃ । ಲೋಕಯೋಃ । ವಿಧೃತ್ಯಾ ಇತಿ ವಿ–ಧೃತ್ಯೈ । ಅಧೃತಾ । ಇವ । ವೈ । ಏಷಾ । ಯತ್ । ಮಧ್ಯಮಾ । ಚಿತಿಃ । ಅಂತರಿಕ್ಷಮ್ । ಇವ । ವೈ । ಏಷಾ । ಇಂದ್ರಾಗ್ನೀ ಇತೀಂದ್ರ–ಅಗ್ನೀ । ಇತಿ । ಆಹ । ಇಂದ್ರಾಗ್ನೀ ಇತೀಂದ್ರ–ಅಗ್ನೀ । ವೈ । ದೇವಾನಾಮ್ । ಓಜೋಭೃತಾವಿತ್ಯೋಜಃ–ಭೃತೌ । ಓಜಸಾ । ಏವ । ಏನಾಮ್ । ಅಂತರಿಕ್ಷೇ । ಚಿನುತೇ । ಧೃತ್ಯೈ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಅನಯೋಃ ಲೋಕಯೋಃ ವಿಧೃತ್ಯೈ** | ಈ (ತೃತೀಯ) ಚಿತಿಯ ಉಪಧಾನವು ಎರಡು ಲೋಕಗಳ ಧಾರಣೆಗಾಗಿ ಆಗುತ್ತದೆ. |

ಇಂದ್ರಾಗ್ನಿಗಳ ಪ್ರಶಂಸೆ–ಇನ್ನೊಂದು ಬಗೆ

| | |
|---|---|
| **ಏಷಾ ಅಧೃತಾ ಇವ ವೈ ಯತ್ ಮಧ್ಯಮಾ ಚಿತಿಃ ಏಷಾ ಅಂತರಿಕ್ಷಮ್ ಇವ ವೈ ಇಂದ್ರಾಗ್ನೀ ಇತಿ ಆಹ** | ಈ ಮಧ್ಯಮಚಿತಿಯು ಭೂಸ್ಪರ್ಶರಹಿತವಾಗಿರುವುದರಿಂದ ಆಧಾರರಹಿತವಾಗಿ ಅಂತರಿಕ್ಷದಂತಿದೆ. 'ಇಂದ್ರಾಗ್ನೀ ಅವ್ಯಥಮಾನಾಮ್' ಎಂಬ ಮಂತ್ರದಿಂದ ಇಷ್ಟಕೋಪಧಾನವನ್ನು ಮಾಡಬೇಕು. |
| **ದೇವಾನಾಮ್ ಇಂದ್ರಾಗ್ನೀ ಓಜೋಭೃತೌ ವೈ** | ದೇವತೆಗಳ ಪೈಕಿ ಇಂದ್ರಾಗ್ನಿಗಳು ಬಲವಂತರಾಗಿದ್ದಾರೆ. |
| **ಓಜಸಾ ಏವ ಏನಾಮ್ ಅಂತರಿಕ್ಷೇ ಚಿನುತೇ ಧೃತ್ಯೈ** | ಈ ಮಂತ್ರದಿಂದ ಉಪಧಾನ ಮಾಡುವುದರಿಂದ ಸ್ವಯಮಾತೃಣ್ಣೆಯನ್ನು (ಇಂದ್ರಾಗ್ನಿಗಳ ಅನುಗ್ರಹದಿಂದ) ಅಂತರಿಕ್ಷದಲ್ಲಿಯೇ ಬಲವಾಗಿ ಧರಿಸಿದಂತಾಗುತ್ತದೆ. |

ಸ್ವಯಮಾತೃಣ್ಣಾಮುಪದಧಾತ್ಯಂತರಿಕ್ಷಂ ವೈ ಸ್ವಯಮಾತೃಣ್ಣಾಽಂತರಿಕ್ಷಮೇ-
ವೋಪಧತ್ತೇಽಶ್ವಮುಪ [(೬)ಘ್ರಾಪಯತಿ] ಘ್ರಾಪಯತಿ ಪ್ರಾಣಮೇವಾಸ್ಯಾಂ
ದಧಾತ್ಯಥೋ ಪ್ರಾಜಾಪತ್ಯೋ ವಾ ಅಶ್ವಃ

ಸ್ವಯಮಾತೃಣ್ಣಾಮಿತಿ ಸ್ವಯಮ್-ಆತೃಣ್ಣಾಮ್ । ಉಪೇತಿ । ದಧಾತಿ । ಅಂತರಿಕ್ಷಮ್ । ವೈ । ಸ್ವಯಮಾತೃಣ್ಣೇತಿ ಸ್ವಯಮ್-ಆತೃಣ್ಣಾ । ಅಂತರಿಕ್ಷಮ್ । ಏವ । ಉಪೇತಿ । ಧತ್ತೇ । ಅಶ್ವಮ್ । ಉಪೇತಿ । (೬) । ಘ್ರಾಪಯತಿ । ಪ್ರಾಣಮಿತಿ ಪ್ರ-ಅನಮ್ । ಏವ । ಅಸ್ಯಾಮ್ । ದಧಾತಿ । ಅಥೋ ಇತಿ । ಪ್ರಾಜಾಪತ್ಯ ಇತಿ ಪ್ರಾಜಾ-ಪತ್ಯಃ । ವೈ । ಅಶ್ವಃ ।

| ಬ್ರಾಹ್ಮಣಭಾಗ | ವಿವರಣೆ |
|---|---|
| | **ಸ್ವಯಮಾತೃಣ್ಣೇಷ್ಟಕೆಯ ಪ್ರಶಂಸೆ** |
| **ಸ್ವಯಮಾತೃಣ್ಣಾಮ್ ಉಪದಧಾತಿ** | *ಸ್ವಯಮಾತೃಣ್ಣೇಷ್ಟಕೆಯನ್ನು ಉಪಧಾನ ಮಾಡಬೇಕು. |
| **ಅಂತರಿಕ್ಷಮ್ ವೈ ಸ್ವಯಮಾತೃಣ್ಣಾ** | ಸ್ವಯಮಾತೃಣ್ಣೇಷ್ಟಕೆಗೆ ಭೂಮಿಯ ಸ್ಪರ್ಶವಿಲ್ಲದಿರುವುದರಿಂದ ಅದು ಅಂತರಿಕ್ಷದಂತಿದೆ/ಬಹು ಉಪಕಾರವನ್ನು ಮಾಡುವುದರಿಂದಲೂ/ರಂಧ್ರವಿರುವುದರಿಂದಲೂ ಅಂತರಿಕ್ಷದ ಹೋಲಿಕೆ. [ಭ. ಭಾ. ಭಾ] |
| **ಅಂತರಿಕ್ಷಮ್ ಏವ ಉಪಧತ್ತೇ** | ಇದರಿಂದ ಅಂತರಿಕ್ಷವನ್ನೇ ಉಪಧಾನ ಮಾಡಿದಂತ-ಹವನಾಗುತ್ತಾನೆ. |
| | **ಅಶ್ವೋಪಘ್ರಾಣವಿಧಿ; ಪ್ರಶಂಸೆ** |
| **ಅಶ್ವಮ್ ಉಪಘ್ರಾಪಯತಿ** | ಸ್ವಯಮಾತೃಣ್ಣೇಷ್ಟಕೆಯನ್ನು ಕುದುರೆಯಿಂದ ಮೂಸಿಸಬೇಕು. |
| **ಅಸ್ಯಾಮ್ ಪ್ರಾಣಮ್ ಏವ ದಧಾತಿ** | ಅಧ್ವರ್ಯುವು ಇದರಿಂದ ಈ ಇಷ್ಟಕೆಯಲ್ಲಿ ಪ್ರಾಣವನ್ನು ಸ್ಥಾಪಿಸಿದವನಾಗುತ್ತಾನೆ. |
| **ಅಥೋ ಅಶ್ವಃ ಪ್ರಾಜಾಪತ್ಯಃ ವೈ** | ಮತ್ತು ಅಶ್ವವು ಪ್ರಜಾಪತಿಗೆ ಸಂಬಂಧಿಸಿದುದು. ಅದಕ್ಕೆ ಪ್ರಜಾಪತಿಯು ದೇವತೆ. |

* ಇಷ್ಟಕೋಪಧಾನದ ವಿಧಿವಾಕ್ಯವು ಇದಾದರೆ ಹಿಂದಿನ **'ಉಪದಧಾತಿ'** ಎಂಬುದು ಅನುವಾದವಾಗಿ ಮಂತ್ರವಿನಿಯೋಗವನ್ನು ಹೇಳುತ್ತದೆ. ಸಾ. ಭಾ.

ಪ್ರಜಾಪತಿನೈವಾಗ್ನಿಂ ಚಿನುತೇ ಸ್ವಯಮಾತೃಣ್ಣಾ ಭವತಿ ಪ್ರಾಣಾನಾಮುಥ್ಸೃಷ್ಟ್ಯಾ ಅಥೋ ಸುವರ್ಗಸ್ಯ ಲೋಕಸ್ಯಾನುಖ್ಯಾತ್ಯೈ ದೇವಾನಾಂ ವೈ ಸುವರ್ಗಂ ಲೋಕಂ ಯತಾಂ ದಿಶಸ್ಸಮವ್ಲೀಯಂತ ತ ಏತಾ ದಿಶ್ಯಾ ಅಪಶ್ಯನ್ತಾ ಉಪಾದಧತ

---

ಪ್ರಜಾಪತಿನೇತಿ ಪ್ರಜಾ-ಪತಿನಾ। ಏವ। ಅಗ್ನಿಮ್। ಚಿನುತೇ। ಸ್ವಯಮಾತೃಣ್ಣೇತಿ ಸ್ವಯಮ್-ಆತೃಣ್ಣಾ। ಭವತಿ। ಪ್ರಾಣಾನಾಮಿತಿ ಪ್ರ-ಅನಾನಾಮ್। ಉಥ್ಸೃಷ್ಟ್ಯಾ ಇತ್ಯುತ್-ಸೃಷ್ಟ್ಯೈ। ಅಥೋ ಇತಿ। ಸುವರ್ಗಸ್ಯೇತಿ ಸುವಃ-ಗಸ್ಯ। ಲೋಕಸ್ಯ। ಅನುಖ್ಯಾತ್ಯಾ ಇತ್ಯನು-ಖ್ಯಾತ್ಯೈ। ದೇವಾನಾಮ್। ವೈ। ಸುವರ್ಗಮಿತಿ ಸುವಃ-ಗಮ್। ಲೋಕಮ್। ಯತಾಮ್। ದಿಶಃ। ಸಮಿತಿ। ಅವ್ಲೀಯಂತ। ತೇ। ಏತಾಃ। ದಿಶ್ಯಾಃ। ಅಪಶ್ಯನ್। ತಾಃ। ಉಪೇತಿ। ಅದಧತ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಪ್ರಜಾಪತಿನಾ ಏವ ಅಗ್ನಿಮ್ ಚಿನುತೇ | ಅದರಿಂದ ಪ್ರಜಾಪತಿದೇವತೆಯ ಅನುಗ್ರಹದಿಂದಲೇ ಅಗ್ನಿಚಯನವನ್ನು ಮಾಡಿದವನಾಗುತ್ತಾನೆ. |
| | **ಇಷ್ಟಕೆಯಲ್ಲಿನ ಛಿದ್ರದ ಪ್ರಶಂಸೆ** |
| ಸ್ವಯಮಾತೃಣ್ಣಾ ಭವತಿ ಪ್ರಾಣಾನಾಮ್ ಉಥ್ಸೃಷ್ಟ್ಯೈ | ಸ್ವಯಮಾತೃಣ್ಣೇಷ್ಟಕೆಯು ರಂಧ್ರಯುಕ್ತವಾದುದರಿಂದ ಪ್ರಾಣಾದಿವಾಯುಗಳ ಉಚ್ಛ್ವಾಸಕ್ಕೆ/ಉಸಿರಾಟಕ್ಕೆ ಕಾರಣವಾಗುತ್ತದೆ. |
| ಅಥೋ ಸುವರ್ಗಸ್ಯ ಲೋಕಸ್ಯ ಅನುಖ್ಯಾತ್ಯೈ | ಅಲ್ಲದೆ (ಆವರಣವಿಲ್ಲದುದರಿಂದ) ಯಜಮಾನನ ಸ್ವರ್ಗಲೋಕದರ್ಶನಕ್ಕೂ ಅನುಕೂಲವಾಗುತ್ತದೆ. |
| | **ದಿಶ್ಯೇಷ್ಟಕೋಪಧಾನವಿಧಿ; ಉಪಾಖ್ಯಾನ** |
| ಸುವರ್ಗಮ್ ಲೋಕಮ್ ಯತಾಮ್ ದೇವಾನಾಮ್ ವೈ ದಿಶಃ ಸಮವ್ಲೀಯಂತ | (ಪೂರ್ವಕಾಲದಲ್ಲಿ ಭೂಮಿಯಲ್ಲಿದ್ದ) ದೇವತೆಗಳು ಸ್ವರ್ಗಕ್ಕೆ ತೆರಳುವಾಗ (ರಕ್ಷಕರಿಲ್ಲದೆ) ದಿಕ್ಕುಗಳು ಅಸ್ವಸ್ಥವಾದವು. (ದಿಕ್ಕುಗಳಲ್ಲಿ ಇದ್ದವರು ಅಸ್ವಸ್ಥರಾದರು)/ದಿಕ್ಕುಗಳು ಸಡಿಲಗೊಂಡವು. |
| ತೇ ಏತಾಃ ದಿಶ್ಯಾಃ ಅಪಶ್ಯನ್ | ಆಗ ದೇವತೆಗಳು ಪರಿಹಾರಕ್ಕಾಗಿ ಈ ದಿಶ್ಯೆಗಳೆಂಬ ಇಷ್ಟಕೆಗಳನ್ನು ತಿಳಿದರು. |
| ತಾಃ ಉಪಾದಧತ | ಅವುಗಳನ್ನು ಉಪಧಾನ ಮಾಡಿದರು. |

ತಾಭಿರ್ವೈ ತೇ ದಿಶೋಽದೃಗ್ಂಹನ್, ಯದ್ದಿಶ್ಯಾ ಉಪದಧಾತಿ ದಿಶಾಂ ವಿಧೃತ್ಯೈ ದಶ ಪ್ರಾಣಭೃತಃ ಪುರಸ್ತಾದುಪ [(೭)ದಧಾತಿ] ದಧಾತಿ ನವ ವೈ ಪುರುಷೇ ಪ್ರಾಣಾ ನಾಭಿರ್ದಶಮೀ

---

ತಾಭಿಃ । ವೈ । ತೇ । ದಿಶಃ । ಅದೃಗ್ಂಹನ್ನ್ । ಯತ್ । ದಿಶ್ಯಾಃ । ಉಪದಧಾತೀತ್ಯುಪ-ದಧಾತಿ । ದಿಶಾಮ್ । ವಿಧೃತ್ಯಾ ಇತಿ ವಿ-ಧೃತ್ಯೈ । ದಶ । ಪ್ರಾಣಭೃತ ಇತಿ ಪ್ರಾಣ-ಭೃತಃ । ಪುರಸ್ತಾತ್ । ಉಪೇತಿ । (೭) । ದಧಾತಿ । ನವ । ವೈ । ಪುರುಷೇ । ಪ್ರಾಣಾ ಇತಿ ಪ್ರ-ಅನಾಃ । ನಾಭಿಃ । ದಶಮೀ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ತಾಭಿಃ ತೇ ದಿಶಃ ಅದೃಗ್ಂಹನ್ ವೈ** | ಆ ಇಷ್ಟಕೆಗಳಿಂದ ಅವರು ದಿಕ್ಕುಗಳನ್ನು ದೃಢಪಡಿಸಿದರು./ಅದರಿಂದ ದಿಕ್ಕುಗಳಲ್ಲಿನ ಪ್ರಾಣಿಗಳು ಸ್ವಸ್ಥವಾದವು./ಅವರಿಗೆ ದಿಕ್ಕುಗಳು ಹೊಳೆದವು. |
| **ಯತ್ ದಿಶ್ಯಾಃ ಉಪದಧಾತಿ** | ದಿಶ್ಯೇಷ್ಟಕೆಗಳನ್ನು ಉಪಧಾನ ಮಾಡುವುದೆಂಬುದು ಯಾವುದೋ (ಅದು) |
| **ದಿಶಾಮ್ ವಿಧೃತ್ಯೈ** | ದಿಕ್ಕುಗಳ ದಾರ್ಢ್ಯಕ್ಕಾಗಿ ಆಗುತ್ತದೆ/ಯಜಮಾನನಿಗೂ ದಿಕ್ಕುಗಳು ದೃಢವಾಗುತ್ತವೆ. |

**ಪ್ರಾಣಭೃದಿಷ್ಟಕೋಪಧಾನ; ಅರ್ಥವಾದ**

| | |
|---|---|
| **ದಶ ಪ್ರಾಣಭೃತಃ ಪುರಸ್ತಾತ್ ಉಪದಧಾತಿ** | ಹತ್ತು ಪ್ರಾಣಭೃದಿಷ್ಟಕೆಗಳನ್ನು ಪೂರ್ವದಿಕ್ಕಿನಲ್ಲಿ ಉಪಧಾನ ಮಾಡಬೇಕು. |
| **ಪುರುಷೇ ಪ್ರಾಣಾಃ ನವ ವೈ** | ಪುರುಷನಲ್ಲಿ ಪ್ರಾಣಗಳು ಒಂಬತ್ತು.* |
| **ನಾಭಿಃ ದಶಮೀ** | ಹೊಕ್ಕಳು ಹತ್ತನೆಯ ರಂಧ್ರರೂಪವಾಗಿದೆ. |

---

**ತಾತ್ಪರ್ಯ:–'ರಾಜ್ಞ್ಯಸಿ ಪ್ರಾಚೀ ದಿಕ್'** ಎಂದು ದಿಕ್‌ಶಬ್ದದಿಂದ ಕೂಡಿದ ಮಂತ್ರಗಳಿಂದ ಉಪಧಾನ ಮಾಡಲ್ಪಡುವ ಇಷ್ಟಕೆಗಳು ದಿಶ್ಯೇಷ್ಟಕೆಗಳು.

---

* ಪುರುಷನಲ್ಲಿ ಒಂಬತ್ತು ರಂಧ್ರಗಳು ಇವೆ. ಕಣ್ಣಿನಲ್ಲಿ ಎರಡು. ಕಿವಿಯಲ್ಲಿ ಎರಡು, ಮೂಗಿನಲ್ಲಿ ಎರಡು, ಬಾಯಿಯಲ್ಲಿ ಒಂದು. ನಾಭಿಯಿಂದ ಕೆಳಗೆ (ಮುಂದೆ ಮತ್ತು ಹಿಂದೆ) ಎರಡು. ನಾಭಿಯು ಹತ್ತನೆಯ ರಂಧ್ರ. ಇವುಗಳಲ್ಲಿ ನಾಭಿಯನ್ನು ಬಿಟ್ಟು ಉಳಿದ ಒಂಬತ್ತರಲ್ಲಿ ಪ್ರಾಣವು ಸಂಚರಿಸುವುದರಿಂದ ಪ್ರಾಣಗಳೂ ಔಪಾಧಿಕವಾಗಿ ಒಂಬತ್ತು.

ಪ್ರಾಣಾನೇವ ಪುರಸ್ತಾದ್ಧತ್ತೇ ತಸ್ಮಾತ್ಪುರಸ್ತಾತ್ಪ್ರಾಣಾ ಜ್ಯೋತಿಷ್ಮತೀಮುತ್ತಮಾ ಮುಪ ದಧಾತಿ ತಸ್ಮಾತ್ಪ್ರಾಣಾನಾಂ ವಾಗ್ಜ್ಯೋತಿರುತ್ತಮಾ ದಶೋಪ ದಧಾತಿ ದಶಾಕ್ಷರಾ ವಿರಾಡ್ವಿರಾಟ್ಛಂದಸಾಂ ಜ್ಯೋತಿ-

---

ಪ್ರಾಣಾನಿತಿ ಪ್ರ-ಅನಾನ್ । ಏವ । ಪುರಸ್ತಾತ್ । ಧತ್ತೇ । ತಸ್ಮಾತ್ । ಪುರಸ್ತಾತ್ । ಪ್ರಾಣಾ ಇತಿ ಪ್ರ-ಅನಾಃ । ಜ್ಯೋತಿಷ್ಮತೀಮ್ । ಉತ್ತಮಾಮಿತ್ಯುತ್-ತಮಾಮ್ । ಉಪೇತಿ । ದಧಾತಿ । ತಸ್ಮಾತ್ । ಪ್ರಾಣಾನಾಮಿತಿ ಪ್ರ-ಅನಾನಾಮ್ । ವಾಕ್ । ಜ್ಯೋತಿಃ । ಉತ್ತಮೇತ್ಯುತ್-ತಮಾ । ದಶ । ಉಪೇತಿ । ದಧಾತಿ । ದಶಾಕ್ಷರೇತಿ ದಶ-ಅಕ್ಷರಾ । ವಿರಾಡಿತಿ ವಿ-ರಾಟ್ । ವಿರಾಡಿತಿ ವಿ-ರಾಟ್ । ಛಂದಸಾಮ್ । ಜ್ಯೋತಿಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಪ್ರಾಣಾನ್ ಏವ ಪುರಸ್ತಾತ್ ಧತ್ತೇ** | (ಹತ್ತು) ಪ್ರಾಣಗಳನ್ನೇ ಪೂರ್ವದಿಕ್ಕಿನಲ್ಲಿ ಉಪಧಾನ ಮಾಡಿದವನಾಗುತ್ತಾನೆ. |
| **ತಸ್ಮಾತ್ ಪುರಸ್ತಾತ್ ಪ್ರಾಣಾಃ** | ಆದುದರಿಂದ ಲೋಕದಲ್ಲಿ ಪುರುಷನು ಪೂರ್ವಮುಖನಾದರೆ ಶ್ವಾಸ-ದೃಷ್ಟಿಪ್ರಸಾರಾದಿಗಳು ಪೂರ್ವದಿಕ್ಕಿನತ್ತಲೇ ಆಗುತ್ತವೆ. |
| **ಜ್ಯೋತಿಷ್ಮತೀಮ್ ಉತ್ತಮಾಮ್ ಉಪ ದಧಾತಿ** | **'ಜ್ಯೋತಿರ್ಮೇ ಯಚ್ಛ'** ಎಂಬ ಮಂತ್ರದಿಂದ ಕೊನೆಯ ಪ್ರಾಣಭೃದಿಷ್ಟಕೆಯನ್ನು ಉಪಧಾನ ಮಾಡಬೇಕು. |
| **ತಸ್ಮಾತ್ ಪ್ರಾಣಾನಾಮ್ ವಾಕ್ ಜ್ಯೋತಿಃ ಉತ್ತಮಾ** | ಆ ಕಾರಣದಿಂದ ಲೋಕದಲ್ಲಿಯೂ ಜ್ಯೋತೀರೂಪವಾದ ವಾಕ್ಕು ಇಂದ್ರಿಯಗಳಲ್ಲಿಯೂ ಪ್ರಾಣಗಳಲ್ಲಿಯೂ ಶ್ರೇಷ್ಠವಾಗಿದೆ. |
| **ದಶ ಉಪದಧಾತಿ** | ಹತ್ತು ಪ್ರಾಣಭೃದಿಷ್ಟಕೆಗಳನ್ನು ಉಪಧಾನ ಮಾಡಬೇಕು. |
| **ದಶಾಕ್ಷರಾ ವಿರಾಟ್** | ವಿರಾಟ್ ಛಂದಸ್ಸು ಹತ್ತು ಅಕ್ಷರಗಳನ್ನು ಹೊಂದಿದೆ. |
| **ಛಂದಸಾಮ್ ವಿರಾಟ್ ಜ್ಯೋತಿಃ** | **(ರಾಜೃ ದೀಪ್ತೌ)** ಎಂದು ಪ್ರಕಾಶನವಾಚಿಯಾದ ರಾಜೃಧಾತುವಿಂದ ನಿರ್ದೇಶಿಸಲ್ಪಡುವ ಈ ವಿರಾಟ್ ಛಂದಸ್ಸುಗಳಲ್ಲಿ ಜ್ಯೋತೀರೂಪವಾಗಿದೆ. |

ಜ್ಯೋತಿರೇವ ಪುರಸ್ತಾದ್ಧತ್ತೇ ತಸ್ಮಾತ್ಪುರಸ್ತಾಜ್ಜ್ಯೋತಿರುಪಾಸ್ಮಹೇ

ಛಂದಾಗ್‍ಂಸಿ ಪಶುಷ್ವಾಜಿಮಯುಸ್ತಾನ್ಬೃಹತ್ಯುದಜಯತ್ತಸ್ಮಾದ್ಬಾರ್ಹತಾಃ

[(೮)]ಪಶವ ಉಚ್ಯಂತೇ

---

ಜ್ಯೋತಿಃ । ಏವ । ಪುರಸ್ತಾತ್ । ಧತ್ತೇ । ತಸ್ಮಾತ್ । ಪುರಸ್ತಾತ್ । ಜ್ಯೋತಿಃ । ಉಪೇತಿ । ಆಸ್ಮಹೇ । ಛಂದಾಗ್‍ಂಸಿ । ಪಶುಷು । ಆಜಿಮ್ । ಅಯುಃ । ತಾನ್ । ಬೃಹತೀ । ಉದಿತಿ । ಅಜಯತ್ । ತಸ್ಮಾತ್ । ಬಾರ್ಹತಾಃ । (೮) । ಪಶವಃ । ಉಚ್ಯಂತೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಜ್ಯೋತಿಃ ಏವ ಪುರಸ್ತಾತ್ ಧತ್ತೇ** | ಈ ಉಪಧಾನದಿಂದ ಪೂರ್ವದಿಕ್ಕಿನಲ್ಲಿ ಜ್ಯೋತಿಯನ್ನು ಧಾರಣೆ ಮಾಡಿದಂತಾಗುತ್ತದೆ. |
| **ತಸ್ಮಾತ್ ಪುರಸ್ತಾತ್ ಜ್ಯೋತಿಃ ಉಪಾಸ್ಮಹೇ** | ಆದುದರಿಂದ (ನಾವು ಪ್ರಾತಃಸಂಧ್ಯಾವಂದನಕಾಲದಲ್ಲಿ) ಪೂರ್ವದಿಕ್ಕಿನಲ್ಲಿ ಜ್ಯೋತಿರ್ಮಂಡಲದಲ್ಲಿ ಇರುವ ಪರಬ್ರಹ್ಮವಸ್ತುವನ್ನು ಉಪಾಸನೆ ಮಾಡುತ್ತೇವೆ. |

ಬೃಹತೀಷ್ಟಕೋಪಧಾನವಿಧಿ; ಅರ್ಥವಾದ

| | |
|---|---|
| **ಛಂದಾಗ್‍ಂಸಿ ಪಶುಷು ಆಜಿಮ್ ಅಯುಃ** | ಒಮ್ಮೆ ಗಾಯತ್ರೀ ಮುಂತಾದ ಛಂದೋದೇವತೆಗಳು ಪಶುಗಳ ನಿಮಿತ್ತವಾಗಿ ಸ್ಪರ್ಧೆಗೆ ಇಳಿದವು. |
| **ತಾನ್ ಬೃಹತೀ ಉದಜಯತ್** | ಆ ಪಶುಗಳನ್ನು ಬೃಹತೀಛಂದೋದೇವತೆಯು ಗೆದ್ದುಕೊಂಡಿತು. |
| **ತಸ್ಮಾತ್ ಪಶವಃ ಬಾರ್ಹತಾಃ ಉಚ್ಯಂತೇ** | ಆದುದರಿಂದ ಪಶುಗಳು ಬಾರ್ಹತಗಳೆನಿಸಿಕೊಳ್ಳುತ್ತವೆ. |

---

**'ಆಯುರ್ಮೇ ಪಾಹಿ'** ಮೊದಲಾದ ಮಂತ್ರಗಳಿಂದ ಉಪಧಾನ ಮಾಡುವ ಇಷ್ಟಕೆಗಳು ಪ್ರಾಣಭೃದಿಷ್ಟಕೆಗಳು. ಈ ಮಂತ್ರಗಳಲ್ಲಿರುವ **'ಆಯುಃ'** ಮುಂತಾದವು ಪ್ರಾಣಕಾರಕಗಳಾದುದರಿಂದ ಇವು ಪ್ರಾಣಭೃತ್ತುಗಳು. ಈ ಇಷ್ಟಕೆಗಳು ಪ್ರಾಣಭೃದಿಷ್ಟಕೆಗಳು.

ಮಾ ಛಂದ ಇತಿ ದಕ್ಷಿಣತ ಉಪದಧಾತಿ ತಸ್ಮಾದ್ದಕ್ಷಿಣಾವೃತೋ ಮಾಸಾಃ

ಪೃಥಿವೀ ಛಂದ ಇತಿ ಪಶ್ಚಾತ್ಪ್ರತಿಷ್ಠಿತ್ಯಾ ಅಗ್ನಿರ್ದೇವತೇತ್ಯುತ್ತರತ

---

ಮಾ । ಛಂದಃ । ಇತಿ । ದಕ್ಷಿಣತಃ । ಉಪೇತಿ । ದಧಾತಿ । ತಸ್ಮಾತ್ । ದಕ್ಷಿಣಾವೃತ ಇತಿ ದಕ್ಷಿಣಾ-ಆವೃತಃ । ಮಾಸಾಃ । ಪೃಥಿವೀ । ಛಂದಃ । ಇತಿ । ಪಶ್ಚಾತ್ । ಪ್ರತಿಷ್ಠಿತ್ಯಾ ಇತಿ ಪ್ರತಿ-ಸ್ಥಿತ್ಯೈ । ಅಗ್ನಿಃ । ದೇವತಾ । ಇತಿ । ಉತ್ತರತ ಇತ್ಯುತ್-ತರತಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಮಾ ಛಂದ ಇತಿ ದಕ್ಷಿಣತಃ ಉಪದಧಾತಿ** | **'ಮಾ ಛಂದಃ'** ಎಂದು ಆರಂಭಗೊಂಡು **'ಜಗತೀ ಛಂದಃ'** ಎಂಬ ಮಂತ್ರದವರೆಗಿನ ಹನ್ನೆರಡು ಮಂತ್ರಗಳಿಂದ ಹನ್ನೆರಡು ಬೃಹತೀಇಷ್ಟಕೆಗಳನ್ನು ಚಿತಿಯ ದಕ್ಷಿಣ ಭಾಗದಲ್ಲಿ ಉಪಧಾನ ಮಾಡಬೇಕು. |
| **ತಸ್ಮಾತ್ ಮಾಸಾಃ ದಕ್ಷಿಣಾವೃತಃ** | (ಸೂರ್ಯಮಂಡಲದ ಪ್ರದಕ್ಷಿಣಾವೃತ್ತಿಯಿಂದ ಉಂಟಾಗುವುದರಿಂದ) ಚೈತ್ರಾದಿಮಾಸಗಳು ದಕ್ಷಿಣಾವೃತಗಳು ಎಂದು ಹೇಳಲ್ಪಡುತ್ತವೆ. |
| **ಪೃಥಿವೀ ಛಂದ ಇತಿ ಪಶ್ಚಾತ್** (ಉಪದಧಾತಿ) **ಪ್ರತಿಷ್ಠಿತ್ಯೈ** | **'ಪೃಥಿವೀ ಛಂದಃ'** ಎಂದು ಆರಂಭಗೊಂಡು **'ಅಶ್ವಶ್ಛಂದಃ'** ಎಂಬ ಮಂತ್ರದವರೆಗಿನ ಹನ್ನೆರಡು ಮಂತ್ರಗಳಿಂದ ಹನ್ನೆರಡು ಬೃಹತೀಇಷ್ಟಕೆಗಳನ್ನು ಚಿತಿಯ ಪಶ್ಚಿಮಭಾಗದಲ್ಲಿ ಉಪಧಾನ ಮಾಡಬೇಕು. |
| **ಅಗ್ನಿರ್ದೇವತಾ ಇತಿ ಉತ್ತರತಃ** ಉಪದಧಾತಿ | **'ಅಗ್ನಿರ್ದೇವತಾ'** ಎಂಬುದಾಗಿ ಆರಂಭಗೊಂಡು **ವರುಣೋ ದೇವತಾ** ಎಂಬ ಮಂತ್ರದವರೆಗಿನ ಹನ್ನೆರಡು ಮಂತ್ರಗಳಿಂದ ಬೃಹತೀಇಷ್ಟಕೆಗಳನ್ನು ಚಿತಿಯ ಉತ್ತರಭಾಗದಲ್ಲಿ ಉಪಧಾನ ಮಾಡಬೇಕು. |

---

ಒಮ್ಮೆ ಛಂದೋದೇವತೆಗಳೆಲ್ಲರೂ ತಾನು ಮೊದಲು ಪಶುಗಳನ್ನು ಸ್ವೀಕರಿಸುವೆನೆಂದು ಪರಸ್ಪರ ಸ್ಪರ್ಧೆಗೆ ಇಳಿದವು. ಆ ಸ್ಪರ್ಧೆಯಲ್ಲಿ ಬೃಹತೀಛಂದೋದೇವತೆಯು ಉಳಿದ ದೇವತೆಗಳನ್ನು ಸೋಲಿಸಿ ತಾನು ಪಶುಗಳನ್ನು ಗೆದ್ದುಕೊಂಡಿತು. ಆದ್ದರಿಂದ ಪಶುಗಳು ಬಾರ್ಹತಗಳೆನಿಸಿಕೊಳ್ಳುತ್ತವೆ. ಬೃಹತೀಛಂದಸ್ಸಿನ ಅಕ್ಷರಗಳೂ ಮೂವತ್ತಾರು. ಬೃಹತೀಇಷ್ಟಕೆಗಳೂ ಮೂವತ್ತಾರೇ ಆಗಿವೆ.

ಓಜೋ ವಾ ಅಗ್ನಿರೋಜ ಏವೋತ್ತರತೋ ಧತ್ತೇ ತಸ್ಮಾದುತ್ತರತೋಽಭಿ

ಪ್ರಯಾಯೀ ಜಯತಿ ಷಟ್ತ್ರಿಗ್ಂಶಥ್ಸಂಪದ್ಯಂತೇ ಷಟ್ತ್ರಿಗ್ಂಶದಕ್ಷರಾ ಬೃಹತೀ

ಬಾರ್ಹತಾಃ ಪಶವೋ ಬೃಹತ್ಯೈವಾಸ್ಮೈ ಪಶೂನವರುಂಧೇ

---

ಓಜಃ । ವೈ । ಅಗ್ನಿಃ । ಓಜಃ । ಏವ । ಉತ್ತರತ ಇತ್ಯುತ್-ತರತಃ । ಧತ್ತೇ । ತಸ್ಮಾತ್ । ಉತ್ತರತೋಽಭಿಪ್ರಯಾಯೀತ್ಯುತ್ತರತಃ-ಅಭಿಪ್ರಯಾಯೀ । ಜಯತಿ । ಷಟ್ತ್ರಿಗ್ಂಶದಿತಿ ಷಟ್-ತ್ರಿಗ್ಂಶತ್ । ಸಮಿತಿ । ಪದ್ಯಂತೇ । ಷಟ್ತ್ರಿಗ್ಂಶದಕ್ಷರೇತಿ ಷಟ್ತ್ರಿಗ್ಂಶತ್-ಅಕ್ಷರಾ । ಬೃಹತೀ । ಬಾರ್ಹತಾಃ । ಪಶವಃ । ಬೃಹತ್ಯಾ । ಏವ । ಅಸ್ಮೈ । ಪಶೂನ್ । ಅವೇತಿ । ರುಂಧೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಓಜಃ ವೈ ಅಗ್ನಿಃ | ತಾಪಪ್ರಕಾಶಾದಿಗಳನ್ನು ಹೊಂದಿರುವ ಅಗ್ನಿಯು ಓಜೋ ರೂಪನಾಗಿರುವನು. |
| ಓಜಃ ಏವ ಉತ್ತರತಃ ಧತ್ತೇ | ಉತ್ತರದಿಕ್ಕಿನಲ್ಲಿ ಉಪಧಾನ ಮಾಡುವುದರಿಂದ ಅಧ್ವರ್ಯುವು ಯಜಮಾನನಿಗೆ ಓಜಸ್ಸನ್ನು ಸಂಪಾದಿಸಿ ಕೊಟ್ಟಂತಾಗುತ್ತದೆ. |
| ತಸ್ಮಾತ್ ಉತ್ತರತೋಽಭಿಪ್ರಯಾಯೀ ಜಯತಿ | ಆದುದರಿಂದ ಉತ್ತರದಿಕ್ಕಿಗೆ ಪ್ರಯಾಣ ಮಾಡುವವನು (ತೀರ್ಥಯಾತ್ರೆ ಮುಂತಾದ ಪುಣ್ಯಗಳಿಂದ ಕೂಡಿಕೊಳ್ಳುವವನಾದುದರಿಂದ) ಉತ್ತಮಲೋಕವನ್ನು ಪಡೆಯುವನು/ ಜಯಶೀಲನಾಗುವನು. |

**ಬೃಹತೀಷ್ಟಕೆಗಳ ಸಂಖ್ಯೆ; ಪ್ರಶಂಸೆ**

| | |
|---|---|
| ಷಟ್ತ್ರಿಗ್ಂಶತ್ ಸಂಪದ್ಯಂತೇ | ಬೃಹತೀಷ್ಟಕೆಗಳು ಮೂವತ್ತಾರು ಆಗುತ್ತವೆ. |
| ಷಟ್ತ್ರಿಗ್ಂಶದಕ್ಷರಾ ಬೃಹತೀ | ಬೃಹತೀಛಂದಸ್ಸು ಮೂವತ್ತಾರು ಅಕ್ಷರಗಳಿಂದ ಕೂಡಿದೆ. |
| ಪಶವಃ ಬಾರ್ಹತಾಃ | ಪಶುಗಳೂ ಬೃಹತೀಛಂದಸ್ಸಿಗೆ ಸಂಬಂಧಿಸಿದವುಗಳಾಗಿವೆ. |
| ಬೃಹತ್ಯಾ ಏವ ಅಸ್ಮೈ ಪಶೂನ್ ಅವ ರುಂಧೇ | ಈ ಬೃಹತೀಷ್ಟಕೆಗಳ ಉಪಧಾನದಿಂದ ಅಧ್ವರ್ಯುವು ಯಜಮಾನನಿಗೆ ಪಶುಪ್ರಾಪ್ತಿಯಾಗುವಂತೆ ಮಾಡುತ್ತಾನೆ. |

ಬೃಹತೀ ಛಂದಸಾಗ್ಂ ಸ್ವಾರಾಜ್ಯಂ ಪರೀಯಾಯ ಯಸ್ಯೈತಾ

[ಯಸ್ಯೈತಾಃ(೯)ಉಪಧೀಯಂತೇ] ಉಪಧೀಯಂತೇ ಗಚ್ಛತಿ ಸ್ವಾರಾಜ್ಯಗ್ಂ

ಸಪ್ತ ವಾಲಖಿಲ್ಯಾಃ ಪುರಸ್ತಾದುಪದಧಾತಿ ಸಪ್ತ ಪಶ್ಚಾ-

---

ಬೃಹತೀ । ಛಂದಸಾಮ್ । ಸ್ವಾರಾಜ್ಯಮಿತಿ ಸ್ವ-ರಾಜ್ಯಮ್ । ಪರೀತಿ । ಇಯಾಯ । ಯಸ್ಯ । ಏತಾಃ । (೯) ।
ಉಪಧೀಯಂತ ಇತ್ಯುಪ-ಧೀಯಂತೇ । ಗಚ್ಛತಿ । ಸ್ವಾರಾಜ್ಯಮಿತಿ ಸ್ವ-ರಾಜ್ಯಮ್ । ಸಪ್ತ । ವಾಲಖಿಲ್ಯಾ ಇತಿ
ವಾಲ-ಖಿಲ್ಯಾಃ । ಪುರಸ್ತಾತ್ । ಉಪೇತಿ । ದಧಾತಿ । ಸಪ್ತ । ಪಶ್ಚಾತ್ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ಇನ್ನೊಂದು ಪ್ರಶಂಸೆ** |
| **ಬೃಹತೀ ಛಂದಸಾಮ್ ಸ್ವಾರಾಜ್ಯಮ್ ಪರೀಯಾಯ** | ಬೃಹತೀಛಂದಸ್ಸು (ತನ್ನ ಗೆಲುವಿನಿಂದ) ಛಂದೋ ದೇವತೆಗಳ ಅಧಿಪತ್ಯವನ್ನು ಹೊಂದಿದೆ. |
| **ಯಸ್ಯ ಏತಾಃ ಉಪಧೀಯಂತೇ** | ಯಾವ ಯಜಮಾನನ ಚಯನದಲ್ಲಿ ಈ ಬೃಹತೀಷ್ಟಕೆಗಳು ಉಪಧಾನ ಮಾಡಲ್ಪಡುತ್ತವೆಯೋ |
| (ಸಃ) **ಸ್ವಾರಾಜ್ಯಮ್ ಗಚ್ಛತಿ** | ಆ ಯಜಮಾನನು ಸ್ವಾರಾಜ್ಯವನ್ನು/ಸ್ವರ್ಗವನ್ನು ಪಡೆಯುವನು. |
| | **ವಾಲಖಿಲ್ಯೇಷ್ಟಕೋಪಧಾನ; ಪ್ರಶಂಸೆ** |
| **ಸಪ್ತ ವಾಲಖಿಲ್ಯಾಃ ಪುರಸ್ತಾತ್ ಉಪದಧಾತಿ** | ಏಳು ವಾಲಖಿಲ್ಯೇಷ್ಟಕೆಗಳನ್ನು* ಪೂರ್ವದಿಕ್ಕಿನಲ್ಲಿ ಉಪಧಾನ ಮಾಡಬೇಕು. |
| | **ಸಂಖ್ಯಾಪ್ರಶಂಸೆ** |
| **ಸಪ್ತ** ವಾಲಖಿಲ್ಯಾಃ **ಪಶ್ಚಾತ್** ಉಪದಧಾತಿ | ಏಳು ವಾಲಖಿಲ್ಯೇಷ್ಟಕೆಗಳನ್ನು ಪಶ್ಚಿಮದಿಕ್ಕಿನಲ್ಲಿ ಉಪಧಾನ ಮಾಡಬೇಕು. |

---

* ವಾಲಖಿಲ್ಯಮುನಿಗಳು ಮೊದಲು ಉಪಧಾನ ಮಾಡಿದುದರಿಂದ ಆ ಋಷಿಗಳ ಹೆಸರಿನಲ್ಲೇ ಇವು ಇವೆ. ಆ ಋಷಿಗಳ ಹೆಸರಿನಿಂದ ಋಷಿಸ್ವರೂಪಗಳೆಂದು ಇಷ್ಟಕೆಗಳ ಸ್ತುತಿ. **ಅಥವಾ** ಇದೊಂದು ಸಂಜ್ಞೆ ಮಾತ್ರ ಎಂದು **ಭ. ಭಾ. ಭಾಷ್ಯ**ವಿದೆ.

ಥ್ಸಪ್ತ ವೈ ಶೀರ್ಷಣ್ಯಾಃ ಪ್ರಾಣಾ ದ್ವಾವವಾಂಚೌ ಪ್ರಾಣಾನಾಗ್ಂ

ಸವೀರ್ಯತ್ವಾಯ ಮೂರ್ಧಾಽಸಿ ರಾಡಿತಿ ಪುರಸ್ತಾದುಪ ದಧಾತಿ

---

ಸಪ್ತ । ವೈ । ಶೀರ್ಷಣ್ಯಾಃ । ಪ್ರಾಣಾ ಇತಿ ಪ್ರ-ಅನಾಃ । ದ್ವೌ । ಅವಾಂಚೌ । ಪ್ರಾಣಾನಾಮಿತಿ ಪ್ರ-ಅನಾನಾಮ್ ।

ಸವೀರ್ಯತ್ವಾಯೇತಿ ಸವೀರ್ಯ-ತ್ವಾಯ । ಮೂರ್ಧಾ । ಅಸಿ । ರಾಟ್ । ಇತಿ । ಪುರಸ್ತಾತ್ । ಉಪೇತಿ । ದಧಾತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಶೀರ್ಷಣ್ಯಾಃ ಪ್ರಾಣಾಃ ಸಪ್ತ ವೈ** | ಶಿರೋಭಾಗದಲ್ಲಿರುವ ಪ್ರಾಣಗಳು (ಪ್ರಾಣ ವಾಯುವು ಸಂಚರಿಸುವ ರಂಧ್ರಗಳು) ಏಳು. |
| **ದ್ವೌ ಅವಾಂಚೌ** | ಅಧೋಭಾಗದ ರಂಧ್ರಗಳು ಎರಡು. (ಎರಡು ಸಪ್ತಕಗಳನ್ನು ಉಪಧಾನ ಮಾಡುವುದರಿಂದ ಅಧೋರಂಧ್ರಸಾಮ್ಯವಿದೆ) |
| **ಪ್ರಾಣಾನಾಮ್ ಸವೀರ್ಯತ್ವಾಯ** | ಹೀಗಾಗಿ ಈ ವಾಲಖಿಲ್ಯೇಷ್ಟಕೋಪಧಾನದಿಂದ ಎಲ್ಲಾ ಪ್ರಾಣಗಳೂ ಶಕ್ತಿಯುತವಾಗುತ್ತವೆ. |

**ಉಪಧಾನಮಂತ್ರಗಳು**

| | |
|---|---|
| **ಮೂರ್ಧಾ ಅಸಿ ರಾಟ್ ಇತಿ ಪುರಸ್ತಾತ್ ಉಪದಧಾತಿ** | **'ಮೂರ್ಧಾಽಸಿ ರಾಟ್'** (ಎಂಬ ಮಂತ್ರದಿಂದ ಆರಂಭಿಸಿ **'ಕ್ಷೇಮಾಯ ತ್ವಾ'** ಎಂಬ ಮಂತ್ರದವರೆಗಿನ (ಮಂತ್ರಗಳಿಂದ ಏಳು) ಮಂತ್ರಗಳಿಂದ ಪೂರ್ವದಿಕ್ಕಿನಲ್ಲಿ ಏಳು ವಾಲಖಿಲ್ಯೇಷ್ಟಕೆಗಳನ್ನು ಉಪಧಾನ ಮಾಡಬೇಕು. |

---

ವಾಲಖಿಲ್ಯೇಷ್ಟಕೆಗಳು ಹದಿನಾಲ್ಕು. ಇವು ಏಳರ ಎರಡು ಗುಂಪಿನಲ್ಲಿವೆ. ಆ ಎರಡು ಗುಂಪುಗಳನ್ನು ಪರಸ್ಪರ ಅಭಿಮುಖವಾಗಿ ಉಪಧಾನ ಮಾಡುವುದರಿಂದ ಪ್ರಾಣಗಳು ಹೊಂದಿಕೊಂಡು ಹೋಗುವಂತಾಗುತ್ತದೆ. ಅಂತೆಯೇ ಎರಡು ಕಣ್ಣುಗಳೂ ಕಿವಿಗಳೂ ಹೊಂದಿಕೊಂಡು ಇವೆ. ಪ್ರಾಣಗಳು ಚೆನ್ನಾಗಿ ಇರುವುದೆಂದರೆ ತಮ್ಮ ತಮ್ಮ ಕಾರ್ಯವನ್ನು ಚೆನ್ನಾಗಿ ನಿರ್ವಹಿಸುವುದೆಂದು ಅರ್ಥ. ಇದೇ ಪ್ರಾಣಗಳ ಚೆನ್ನಾಗಿರುವಿಕೆ. (ಸಮ್ಯಕ್ತ್ವ).

# ಯಂತ್ರೀ ರಾಡಿತಿ ಪಶ್ಚಾತ್ಪ್ರಾಣಾನೇವಾಸ್ಮೈ ಸಮೀಚೋ ದಧಾತಿ ॥ ೧೦-2 ॥

[ಅಶ್ವಮುಪ ಪುರಸ್ತಾದುಪ ಬಾರ್ಹತಾ ಏತಾಶ್ಚತುಸ್ತ್ರಿಗ್ಂಶಚ್ಚ ॥]

---

ಯಂತ್ರೀ । ರಾಟ್ । ಇತಿ । ಪಶ್ಚಾತ್ । ಪ್ರಾಣಾನಿತಿ ಪ್ರ-ಅನಾನ್ । ಏವ । ಅಸ್ಮೈ । ಸಮೀಚಃ । ದಧಾತಿ ॥ ೧೦ ॥

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯಂತ್ರೀ ರಾಟ್ ಇತಿ ಪಶ್ಚಾತ್** ಉಪದಧಾತಿ | **'ಯಂತ್ರೀ ರಾಟ್'** ಎಂಬ ಮಂತ್ರದಿಂದ ಆರಂಭಿಸಿ **'ಬಲಾಯ ತ್ವಾ'** ಎಂಬ ಮಂತ್ರದವರೆಗಿನ ಏಳು ಮಂತ್ರಗಳಿಂದ ಪಶ್ಚಿಮದಿಕ್ಕಿನಲ್ಲಿ ಏಳು ವಾಲಖಿಲ್ಯೇಷ್ಟಕೆಗಳನ್ನು ಉಪಧಾನ ಮಾಡಬೇಕು. |
| **ಅಸ್ಮೈ ಪ್ರಾಣಾನ್ ಸಮೀಚಃ ಏವ ದಧಾತಿ** | ಇದರಿಂದ ಅಧ್ವರ್ಯುವು ಯಜಮಾನನ ಪ್ರಾಣಗಳು ಹೊಂದಿಕೊಂಡು ಹೋಗುವಂತೆ ಮಾಡುತ್ತಾನೆ. |

## ॥ ತೃತೀಯೋಽನುವಾಕಃ ॥

ದೇವಾ ವೈ ಯದ್ಯಜ್ಞೇಽಕುರ್ವತ ತದಸುರಾ ಅಕುರ್ವತ ತೇ ದೇವಾ ಏತಾ

ಅಕ್ಷ್ಣಯಾಸ್ತೋಮೀಯಾ ಅಪಶ್ಯನ್ತಾ ಅನ್ಯಥಾಽನೂಚ್ಯಾನ್ಯಥೋಪಾದಧತ

---

ದೇವಾಃ । ವೈ । ಯತ್ । ಯಜ್ಞೇ । ಅಕುರ್ವತ । ತತ್ । ಅಸುರಾಃ । ಅಕುರ್ವತ । ತೇ । ದೇವಾಃ । ಏತಾಃ ।

ಅಕ್ಷ್ಣಯಾಸ್ತೋಮೀಯಾ ಇತ್ಯಕ್ಷ್ಣಯಾ–ಸ್ತೋಮೀಯಾಃ । ಅಪಶ್ಯನ್ನ್ । ತಾಃ । ಅನ್ಯಥಾ । ಅನೂಚ್ಯೇತ್ಯನು–ಉಚ್ಯ ।

ಅನ್ಯಥಾ । ಉಪೇತಿ । ಅದಧತ ।

---

ಹಿಂದಿನ ಅನುವಾಕದಲ್ಲಿ ತೃತೀಯಚಿತಿಯು ಪೂರ್ಣವಾಯಿತು ಇಲ್ಲಿ ಚತುರ್ಥಚಿತಿಗೆ ಸಂಬಂಧಿಸಿದ ಅಕ್ಷ್ಣಯಾಸ್ತೋಮೀಯೇಷ್ಟಕೆಗಳು ಹೇಳಲ್ಪಟ್ಟಿವೆ. ಅವುಗಳ ವಿಧಿಯೂ ಅದಕ್ಕೆ ಸಂಬಂಧಿಸಿದ ಉಪಾಖ್ಯಾನವೂ ಇಲ್ಲಿ ಉಕ್ತವಾಗಿದೆ.

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ಅಕ್ಷ್ಣಯಾಸ್ತೋಮೀಯೇಷ್ಟಕೆಗಳ ಉಪಾಖ್ಯಾನ** |
| **ದೇವಾಃ ಯತ್ ಯಜ್ಞೇ ಅಕುರ್ವತ ವೈ** | ದೇವತೆಗಳು ಯಜ್ಞದಲ್ಲಿ ಯಾವುದನ್ನು ಅನುಷ್ಠಿಸಿದರೋ |
| **ತತ್ ಅಸುರಾಃ ಅಕುರ್ವತ** | ಅದನ್ನೇ ಅಸುರರೂ (ಗೂಢಚಾರನಿಂದ ತಿಳಿದು) ಅನುಷ್ಠಿಸಿದರು. |
| **ತೇ ದೇವಾಃ ಏತಾಃ ಅಕ್ಷ್ಣಯಾ ಸ್ತೋಮೀಯಾಃ ಅಪಶ್ಯನ್** | ಆ ದೇವತೆಗಳು(ಅಸುರರನ್ನು)ವಂಚಿಸಲು ಈ ಅಕ್ಷ್ಣಯಾಸ್ತೋಮಿಯೇಷ್ಟಕೆಗಳನ್ನು ಆಲೋಚಿಸಿ ತಿಳಿದರು. |
| **ತಾಃ ಅನ್ಯಥಾ ಅನೂಚ್ಯ ಅನ್ಯಥಾ ಉಪಾದಧತ** | ಅವುಗಳನ್ನು ಬೇರೆಯ ರೀತಿಯಲ್ಲಿ ಹೇಳಿ ಬೇರೆಯ ರೀತಿಯಲ್ಲಿ ಉಪಧಾನ ಮಾಡಿದರು. |

ತದಸುರಾ ನಾನ್ವವಾಯನ್ತತೋ ದೇವಾ ಅಭವನ್ಪರಾಽಸುರಾ ಯದಕ್ಷ್ಣಯಾ

ಸ್ತೋಮೀಯಾ ಅನ್ಯಥಾಽನೂಚ್ಯಾನ್ಯಥೋಪದಧಾತಿ ಭ್ರಾತೃವ್ಯಾಭಿಭೂತ್ಯೈ

ಭವತ್ಯಾತ್ಮನಾ ಪರಾಽಸ್ಯ ಭ್ರಾತೃವ್ಯೋ ಭವ-

---

ತತ್ । ಅಸುರಾಃ । ನ । ಅನ್ವವಾಯನ್ನಿತ್ಯನು-ಅವಾಯನ್ನ್ । ತತಃ । ದೇವಾಃ । ಅಭವನ್ನ್ । ಪರೇತಿ । ಅಸುರಾಃ ।

ಯತ್ । ಅಕ್ಷ್ಣಯಾಸ್ತೋಮೀಯಾ ಇತ್ಯಕ್ಷ್ಣಯಾ-ಸ್ತೋಮೀಯಾಃ । ಅನ್ಯಥಾ । ಅನೂಚ್ಯೇತ್ಯನು-ಉಚ್ಯ ।

ಅನ್ಯಥಾ । ಉಪದಧಾತೀತ್ಯುಪ-ದಧಾತಿ । ಭ್ರಾತೃವ್ಯಾಭಿಭೂತ್ಯಾ ಇತಿ ಭ್ರಾತೃವ್ಯ-ಅಭಿಭೂತ್ಯೈ । ಭವತಿ ।

ಆತ್ಮನಾ । ಪರೇತಿ । ಅಸ್ಯ । ಭ್ರಾತೃವ್ಯಃ । ಭವತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ತತ್ ಅಸುರಾಃ ನ ಅನ್ವವಾಯನ್** | ಅದನ್ನು ಅಸುರರು ತಿಳಿಯಲಿಲ್ಲ. |
| **ತತಃ ದೇವಾಃ ಅಭವನ್** | ಬಳಿಕ ದೇವತೆಗಳು ವಿಜಯಿಗಳಾದರು. |
| **ಅಸುರಾಃ ಪರಾ** ಅಭವನ್ | ಅಸುರರು ಸೋತುಹೋದರು. |
| **ಯತ್ ಅಕ್ಷ್ಣಯಾಸ್ತೋಮೀಯಾಃ** | ಅಕ್ಷ್ಣಯಾಸ್ತೋಮೀಯೇಷ್ಟಕೆಗಳನ್ನು ಮಂತ್ರಾಮ್ನಾಯ |
| **ಅನ್ಯಥಾ ಅನೂಚ್ಯ ಅನ್ಯಥಾ** | ಕ್ರಮಕ್ಕೆ ವಿರುದ್ಧವಾದ ಕ್ರಮದಿಂದ ಉಪಧಾನ |
| **ಉಪದಧಾತಿ** | ಮಾಡುವುದೆಂಬುದು |
| **ಭ್ರಾತೃವ್ಯಾಭಿಭೂತ್ಯೈ** | ಶತ್ರುಗಳ ಪರಾಭವಕ್ಕೆ (ಕಾರಣವಾಗುತ್ತದೆ) |
| **ಆತ್ಮನಾ ಭವತಿ** | ತಾನು ಐಶ್ವರ್ಯವಂತ/ಸಾಮರ್ಥ್ಯವಂತನಾಗುತ್ತಾನೆ. |
| **ಅಸ್ಯ ಭ್ರಾತೃವ್ಯಃ ಪರಾ ಭವತಿ** | ಈ ಯಜಮಾನನ ಶತ್ರುವು ಸೋಲುವನು. |

---

**ತಾತ್ಪರ್ಯ:**– ಪೂರ್ವಕಾಲದಲ್ಲಿ ಒಮ್ಮೆ ದೇವತೆಗಳ ಸಾಮ್ಯವನ್ನು ಬಯಸಿ ಅಸುರರು ದೇವತೆಗಳ ಬಳಿ ಗೂಢಚಾರನನ್ನಿಟ್ಟರು. ಅವನು ದೇವತೆಗಳ ಚಯನಾನುಷ್ಠಾನದ ಕ್ರಮವನ್ನು ಅಸುರರಿಗೆ ತಿಳಿಸಿದನು. ಆಗ ದೇವತೆಗಳು ಯಾವ ಯಾವ ಯಜ್ಞಾಂಗವನ್ನು ಹೇಗೆ ಹೇಗೆಅನುಷ್ಠಿಸಿದರೋ ಅಸುರರೂ ಹಾಗೆಯೇ ಅನುಷ್ಠಿಸಿದರು. ಇದನ್ನು ತಿಳಿದ ದೇವತೆಗಳು ಗೂಢಚಾರನನ್ನು ಭ್ರಮೆಗೊಳಿಸಲು ಅಕ್ಷ್ಣಯಾಸ್ತೋಮೀಯೇಷ್ಟಕೆಗಳನ್ನು ಕಂಡುಕೊಂಡರು. ಅದರಲ್ಲಿ ಕೆಲವನ್ನು ಮಂತ್ರ ಪಾಠಕ್ರಮದಂತೆಯೂ, ಕೆಲವನ್ನು ವಿರುದ್ಧವಾಗಿಯೂ ಉಪಧಾನ ಮಾಡಿದರು. ಮಂತ್ರಪಾಠದ ಕ್ರಮದಂತೆ **'ಭಾಂತಃ ಪಂಚದಶಃ'** ಎಂಬುದು ಎರಡನೆಯ ಮಂತ್ರ. ಉಪಧಾನದಲ್ಲಿ ನಾಲ್ಕನೆಯದು. ಇದೇ ಮಂತ್ರಾಮ್ನಾನಕ್ರಮಕ್ಕೆ ವಿಪರೀತವಾದುದು. ಇದನ್ನು ಅಸುರರು ತಿಳಿಯದೇ ಮಂತ್ರಾಮ್ನಾನಕ್ರಮದಂತೆ ಅನುಷ್ಠಿಸಿ ಸೋತುಹೋದರು.

-ತ್ಯಾಶುಸ್ತ್ರಿವೃದಿತಿ ಪುರಸ್ತಾದುಪದಧಾತಿ ಯಜ್ಞಮುಖಂ ವೈ ತ್ರಿವೃ

[ತ್ರಿವೃತ್(೧೧)ಯಜ್ಞಮುಖ]ದ್ಯಜ್ಞಮುಖಮೇವ ಪುರಸ್ತಾದ್ವಿ ಯಾತಯತಿ

ವ್ಯೋಮ ಸಪ್ತದಶ ಇತಿ ದಕ್ಷಿಣತೋಽನ್ನಂ ವೈ ವ್ಯೋಮಾನ್ನಗ್ಂ ಸಪ್ತದಶೋ-

---

ಆಶುಃ । ತ್ರಿವೃದಿತಿ ತ್ರಿ-ವೃತ್ । ಇತಿ । ಪುರಸ್ತಾತ್ । ಉಪೇತಿ । ದಧಾತಿ । ಯಜ್ಞಮುಖಮಿತಿ ಯಜ್ಞ-ಮುಖಮ್ । ವೈ । ತ್ರಿವೃದಿತಿ ತ್ರಿ-ವೃತ್ । (೧೧) । ಯಜ್ಞಮುಖಮಿತಿ ಯಜ್ಞ-ಮುಖಮ್ । ಏವ । ಪುರಸ್ತಾತ್ । ವೀತಿ । ಯಾತಯತಿ । ವ್ಯೋಮೇತಿ ವಿ-ಓಮ । ಸಪ್ತದಶ ಇತಿ ಸಪ್ತ-ದಶಃ । ಇತಿ । ದಕ್ಷಿಣತಃ । ಅನ್ನಮ್ । ವೈ । ವ್ಯೋಮೇತಿ ವಿ-ಓಮ । ಅನ್ನಮ್ । ಸಪ್ತದಶ ಇತಿ ಸಪ್ತ-ದಶಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|

ಅಕ್ಷ್ಣಯಾಸ್ತೋಮೀಯೇಷ್ಟಕೆಗಳ ಉಪಧಾನಕ್ರಮ

| | |
|---|---|
| **ಆಶುಸ್ತ್ರಿವೃತ್ ಇತಿ ಪುರಸ್ತಾತ್ ಉಪದಧಾತಿ** | ಚತುರ್ಥಚಿತಿಯ ಪೂರ್ವಭಾಗದಲ್ಲಿ 'ಆಶುಸ್ತ್ರಿವೃತ್' ಎಂಬ ಮಂತ್ರದಿಂದ ಅಕ್ಷ್ಣಯಾಸ್ತೋಮೀಯೇಷ್ಟಕೆಯನ್ನು ಉಪಧಾನ ಮಾಡಬೇಕು. |
| **ತ್ರಿವೃತ್ ಯಜ್ಞಮುಖಮ್ ವೈ** | ತ್ರಿವೃತ್‌ಸ್ತೋಮವು ಯಜ್ಞದಲ್ಲಿ ಮೊದಲನೆಯ ಸ್ತೋಮವಾಗಿದೆ. |
| **ಯಜ್ಞಮುಖಮ್ ಏವ ಪುರಸ್ತಾತ್ ವಿಯಾತಯತಿ** | ಈ ಇಷ್ಟಕೋಪಧಾನದಿಂದ ಅಧ್ವರ್ಯುವು ಯಜ್ಞವನ್ನೇ ಪ್ರಾರಂಭ ಮಾಡಿದವನಾಗುತ್ತಾನೆ. |
| **ವ್ಯೋಮ ಸಪ್ತದಶ ಇತಿ ದಕ್ಷಿಣತಃ** ಉಪದಧಾತಿ | 'ವ್ಯೋಮ ಸಪ್ತದಶಃ' ಎಂಬ ಮಂತ್ರದಿಂದ ದಕ್ಷಿಣ ಭಾಗದಲ್ಲಿ ಅಕ್ಷ್ಣಯಾಸ್ತೋಮೀಯೇಷ್ಟಕೆಯನ್ನು ಉಪಧಾನ ಮಾಡಬೇಕು. |
| **ಅನ್ನಮ್ ವೈ ವ್ಯೋಮ** | (ಆಕಾಶದಂತೆ ವಿಶಾಲವಾದ ಕ್ಷೇತ್ರದಲ್ಲಿ ಉತ್ಪನ್ನವಾಗುವುದರಿಂದ) ಅನ್ನವು ಆಕಾಶರೂಪವಾಗಿದೆ. |
| **ಅನ್ನಮ್ ಸಪ್ತದಶಃ** | ಸಪ್ತದಶಸ್ತೋಮವೂ ಸಹ (ಅನ್ನಸಂಪಾದಕವಾದ ವೈಶ್ಯಜಾತಿಯೊಡನೆ ಪ್ರಜಾಪತಿಯ ಮಧ್ಯದೇಶದಲ್ಲಿ ಉತ್ಪನ್ನವಾದುದರಿಂದ) ಅನ್ನವೇ ಆಗಿದೆ. |

ऽನ್ನಮೇವ ದಕ್ಷಿಣತೋ ಧತ್ತೇ ತಸ್ಮಾದ್ದಕ್ಷಿಣೇನಾನ್ನಮದ್ಯತೇ ಧರುಣ

ಏಕವಿಗ್ಂಶ ಇತಿ ಪಶ್ಚಾತ್ಪ್ರತಿಷ್ಠಾ ವಾ ಏಕವಿಗ್ಂಶಃ ಪ್ರತಿಷ್ಠಿತ್ಯೈ ಭಾಂತಃ

ಪಂಚದಶ ಇತ್ಯುತ್ತರತ

---

ಅನ್ನಮ್ । ಏವ । ದಕ್ಷಿಣತಃ । ಧತ್ತೇ । ತಸ್ಮಾತ್ । ದಕ್ಷಿಣೇನ । ಅನ್ನಮ್ । ಅದ್ಯತೇ । ಧರುಣಃ । ಏಕವಿಗ್ಂಶ ಇತ್ಯೇಕ–ವಿಗ್ಂಶಃ । ಇತಿ । ಪಶ್ಚಾತ್ । ಪ್ರತಿಷ್ಠೇತಿ ಪ್ರತಿ–ಸ್ಥಾ । ವೈ । ಏಕವಿಗ್ಂಶ ಇತ್ಯೇಕ–ವಿಗ್ಂಶಃ । ಪ್ರತಿಷ್ಠಿತ್ಯಾ ಇತಿ ಪ್ರತಿ–ಸ್ಥಿತ್ಯೈ । ಭಾಂತಃ । ಪಂಚದಶ ಇತಿ ಪಂಚ–ದಶಃ । ಇತಿ । ಉತ್ತರತ ಇತ್ಯುತ್–ತರತಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಅನ್ನಮ್ ಏವ ದಕ್ಷಿಣತಃ ಧತ್ತೇ** | (ಈ ಇಷ್ಟಕೋಪಧಾನದಿಂದ ಅಧ್ವರ್ಯುವು ಚತುರ್ಥ ಚಿತಿಯ) ದಕ್ಷಿಣಭಾಗದಲ್ಲಿ ಅನ್ನವನ್ನು ಸ್ಥಾಪಿಸಿದವನಾಗುತ್ತಾನೆ. |
| **ತಸ್ಮಾತ್ ದಕ್ಷಿಣೇನ ಅನ್ನಮ್ ಅದ್ಯತೇ** | ಆದುದರಿಂದ ಬಲಗೈಯಿಂದಲೇ ಅನ್ನವು ತಿನ್ನಲ್ಪಡುತ್ತದೆ. |
| **ಧರುಣ ಏಕವಿಗ್ಂಶ ಇತಿ ಪಶ್ಚಾತ್** ಉಪದಧಾತಿ | **'ಧರುಣ ಏಕವಿಗ್ಂಶಃ'** ಎಂಬ ಮಂತ್ರದಿಂದ ಚಿತಿಯ ಪಶ್ಚಿಮಭಾಗದಲ್ಲಿ ಇಷ್ಟಕೋಪಧಾನವನ್ನು ಮಾಡಬೇಕು. |
| **ಏಕವಿಗ್ಂಶಃ ಪ್ರತಿಷ್ಠಾ ವೈ** | ಏಕವಿಗ್ಂಶಸ್ತೋಮವು ಸ್ತೋಮಗಳಲ್ಲಿ ಪ್ರತಿಷ್ಠಾ/ಪ್ರಕೃಷ್ಟ ಸ್ಥಿತಿ/ರೂಪವಾಗಿದೆ. (ಆದುದರಿಂದ ಈ ಇಷ್ಟಕೆಯ ಉಪಧಾನವು) |
| **ಪ್ರತಿಷ್ಠಿತ್ಯೈ** | ಯಜಮಾನನ ಪ್ರತಿಷ್ಠೆಗೆ/ಪ್ರಕೃಷ್ಟಸ್ಥಿತಿಗೆ ಕಾರಣವಾಗುತ್ತದೆ. |
| **ಭಾಂತಃ ಪಂಚದಶಃ ಇತಿ ಉತ್ತರತಃ** ಉಪದಧಾತಿ | **'ಭಾಂತಃ ಪಂಚದಶಃ'** ಎಂಬ ಮಂತ್ರದಿಂದ ಚಿತಿಯ ಉತ್ತರಭಾಗದಲ್ಲಿ ಇಷ್ಟಕೋಪಧಾನವನ್ನು ಮಾಡಬೇಕು. |

---

ಚಯನವನ್ನು ಅನುಷ್ಠಾನ ಮಾಡುವ ಯಜಮಾನನು ಮಂತ್ರಾಮ್ನಾಯಕ್ರಮಕ್ಕೆ ವಿರುದ್ಧವಾದ ಕ್ರಮದಿಂದ ಅಕ್ಷ್ಣಯಾಸ್ತೋಮೀಯೇಷ್ಟಕೆಗಳನ್ನು ಉಪಧಾನ ಮಾಡಿದರೆ ಯಜಮಾನನು ಗೆಲ್ಲುವನು, ಶತ್ರುವು ಸೋಲುವನು.

ಓಜೋ ವೈ ಭ್ರಾಂತ ಓಜಃ ಪಂಚದಶ ಓಜ ಏವೋತ್ತರತೋ ಧತ್ತೇ ತಸ್ಮಾದುತ್ತರತೋಽಭಿಪ್ರಯಾಯೀ ಜಯತಿ ಪ್ರತೂರ್ತಿರಷ್ಟಾದಶ ಇತಿ ಪುರಸ್ತಾ [ಪುರಸ್ತಾತ್(೧೨)ಉಪದಧಾತಿ]ದುಪದಧಾತಿ

---

ಓಜಃ । ವೈ । ಭ್ರಾಂತಃ । ಓಜಃ । ಪಂಚದಶ ಇತಿ ಪಂಚ–ದಶಃ । ಓಜಃ । ಏವ । ಉತ್ತರತ ಇತ್ಯುತ್–ತರತಃ । ಧತ್ತೇ । ತಸ್ಮಾತ್ । ಉತ್ತರತೋಽಭಿಪ್ರಯಾಯೀತ್ಯುತ್ತರತಃ–ಅಭಿಪ್ರಯಾಯೀ । ಜಯತಿ । ಪ್ರತೂರ್ತಿರಿತಿ ಪ್ರ–ತೂರ್ತಿಃ । ಅಷ್ಟಾದಶ ಇತ್ಯಷ್ಟಾ–ದಶಃ । ಇತಿ । ಪುರಸ್ತಾತ್ । (೧೨) । ಉಪೇತಿ । ದಧಾತಿ ।

---

| ಬ್ರಾಹ್ಮಣಭಾಗ | ವಿವರಣೆ |
| --- | --- |
| **ಓಜಃ ವೈ ಭ್ರಾಂತಃ** | ಪ್ರಕಾಶನಪಡಿಸುವಿಕೆಯು ಓಜಃಸ್ವರೂಪವಾಗಿದೆ. |
| **ಓಜಃ ಪಂಚದಶಃ** | ಪಂಚದಶಸ್ತೋಮವು ಓಜಃಸ್ವರೂಪವಾಗಿದೆ. |
| **ಓಜಃ ಏವ ಉತ್ತರತಃ ಧತ್ತೇ** | ಈ ಉಪಧಾನದಿಂದ ಉತ್ತರದಿಕ್ಕಿನಲ್ಲಿ ಓಜಸ್ಸನ್ನು/ಬಲವನ್ನು ಸ್ಥಾಪಿಸಿದಂತಾಗುತ್ತದೆ. |
| **ತಸ್ಮಾತ್ ಉತ್ತರತೋಽಭಿಪ್ರಯಾಯೀ ಜಯತಿ** | ಆದುದರಿಂದ ಉತ್ತರದಿಕ್ಕಿಗೆ ಪ್ರಯಾಣ ಮಾಡುವವನು ಜಯಶೀಲನಾಗುವನು. |
| **ಪ್ರತೂರ್ತಿಃ ಅಷ್ಟಾದಶಃ ಇತಿ ಪುರಸ್ತಾತ್ ಉಪದಧಾತಿ** | 'ಪ್ರತೂರ್ತಿರಷ್ಟಾದಶಃ' ಎಂಬ ಮಂತ್ರದಿಂದ ಚಿತಿಯ ಪೂರ್ವಭಾಗದಲ್ಲಿ ಅಕ್ಷ್ಣಯೇಷ್ಟಕೆಯನ್ನು ಉಪಧಾನ ಮಾಡಬೇಕು. |

---

ಚಿತಿಯ ದಕ್ಷಿಣಭಾಗದಲ್ಲಿ **'ವ್ಯೋಮ ಸಪ್ತದಶಃ'** ಎಂಬ ಮಂತ್ರದಿಂದ ಇಷ್ಟಕೋಪಧಾನವನ್ನು ಮಾಡಬೇಕು. ಮಂತ್ರಪಾಠದಲ್ಲಿ ಈ ಮಂತ್ರವು ಮೂರನೆಯದು. ಈ ಮಂತ್ರದಿಂದ ಎರಡನೆಯ ಇಷ್ಟಕೋಪಧಾನವನ್ನು ಮಾಡಬೇಕು. ಮಂತ್ರಾಮ್ನಾನಕ್ರಮವು ಇದರಲ್ಲಿ ಇಲ್ಲವಾದುದರಿಂದ ಇದು ಅಕ್ಷ್ಣಯಾಸ್ತೋಮೀಯೇಷ್ಟಕೆ. ತ್ರಿವೃತ್, ಪಂಚದಶ, ಸಪ್ತದಶ, ಏಕವಿಗ್ಂಶ ಮುಂತಾದವು ಯಜ್ಞಗಳ ಸ್ತೋಮಗಳು. ಇದನ್ನು ಕ್ರಮವಾಗಿ ಅನುಸರಿಸಿ ಉಪಧಾನ ಮಾಡಿದ ಇಷ್ಟಕೆಗಳು ಸ್ತೋಮೀಯಗಳು. ತ್ರಿವೃತ್, ಸಪ್ತದಶ ಮುಂತಾದ ಬೇರೆಯ ಕ್ರಮದಲ್ಲಿ ಉಪಧಾನ ಮಾಡಿದ ಇಷ್ಟಕೆಗಳು ಅಕ್ಷ್ಣಯಾಸ್ತೋಮೀಯೇಷ್ಟಕೆಗಳು.

ಸಾಮಿಧೇನೀಪ್ರಕರಣದಲ್ಲಿ **'ಏಕವಿಗ್ಂಶಃ ಸ್ತೋಮಾನಾಮ್ ಪ್ರತಿಷ್ಠಾ'** ಎಂದು ಹೇಳಿದೆ. ಹೀಗಾಗಿ ಸ್ತೋಮಗಳಲ್ಲಿ ಏಕವಿಂಶಸ್ತೋಮವು ಪ್ರಕೃಷ್ಟಸ್ಥಿತಿಯುಳ್ಳದ್ದಾಗಿದೆ.

ದ್ವೌ ತ್ರಿವೃತಾವಭಿಪೂರ್ವಂ ಯಜ್ಞಮುಖೇ ವಿ ಯಾತಯತ್ಯಭಿವರ್ತಸ್ಸವಿಗ್ಂಶ

ಇತಿ ದಕ್ಷಿಣತೋಽನ್ನಂ ವಾ ಅಭಿವರ್ತೋಽನ್ನಗ್ಂ ಸವಿಗ್ಂಶೋಽನ್ನಮೇವ

ದಕ್ಷಿಣತೋ ಧತ್ತೇ ತಸ್ಮಾದ್ದಕ್ಷಿಣೇನಾನ್ನಮದ್ಯತೇ

---

ದ್ವೌ । ತ್ರಿವೃತಾವಿತಿ ತ್ರಿ-ವೃತೌ । ಅಭಿಪೂರ್ವಮಿತ್ಯಭಿ-ಪೂರ್ವಮ್ । ಯಜ್ಞಮುಖ ಇತಿ ಯಜ್ಞ-ಮುಖೇ । ವೀತಿ । ಯಾತಯತಿ । ಅಭಿವರ್ತ ಇತ್ಯಭಿ-ವರ್ತಃ । ಸವಿಗ್ಂಶ ಇತಿ ಸ-ವಿಗ್ಂಶಃ । ಇತಿ । ದಕ್ಷಿಣತಃ । ಅನ್ನಮ್ । ವೈ । ಅಭಿವರ್ತ ಇತ್ಯಭಿ-ವರ್ತಃ । ಅನ್ನಮ್ । ಸವಿಗ್ಂಶ ಇತಿ ಸ-ವಿಗ್ಂಶಃ । ಅನ್ನಮ್ । ಏವ । ದಕ್ಷಿಣತಃ । ಧತ್ತೇ । ತಸ್ಮಾತ್ । ದಕ್ಷಿಣೇನ । ಅನ್ನಮ್ । ಅದ್ಯತೇ ।

---

| ಬ್ರಾಹ್ಮಣಭಾಗ | ವಿವರಣೆ |
| --- | --- |
| **ದ್ವೌ ತ್ರಿವೃತೌ ಅಭಿಪೂರ್ವಮ್ ಯಜ್ಞಮುಖೇ ವಿ ಯಾತಯತಿ** | ಇದರಿಂದ ಎರಡು ತ್ರಿವೃತ್‌ಸ್ತೋಮಗಳನ್ನು ಅನುಕ್ರಮವಾಗಿ ಯಜ್ಞಮುಖದಲ್ಲಿ ಪ್ರಸಾರಪಡಿಸಿದಂತೆ ಆಗುತ್ತದೆ. |
| **ಅಭಿವರ್ತಃ ಸವಿಗ್ಂಶಃ ಇತಿ ದಕ್ಷಿಣತಃ** ಉಪದಧಾತಿ | **'ಅಭಿವರ್ತಃ ಸವಿಗ್ಂಶಃ'** ಎಂಬ ಮಂತ್ರದಿಂದ ಚಿತಿಯ ದಕ್ಷಿಣಭಾಗದಲ್ಲಿ ಇಷ್ಟಕೆಯನ್ನು ಉಪಧಾನ ಮಾಡಬೇಕು. |
| **ಅನ್ನಮ್ ವೈ ಅಭಿವರ್ತಃ** | ಅಭಿವರ್ತವೆಂಬ ಸಾಮವಿಶೇಷವು ಅನ್ನಸಾಧನವಾಗಿದೆ. |
| **ಅನ್ನಮ್ ಸವಿಗ್ಂಶಃ** | ಇದು ಎರಡು ವಿರಾಡ್ರೂಪವಾದ ಇಪ್ಪತ್ತು ಸಂಖ್ಯೆಯನ್ನು ಒಳಗೊಂಡಿದೆ. |
| **ಅನ್ನಮ್ ಏವ ದಕ್ಷಿಣತಃ ಧತ್ತೇ** | (ವಿರಾಟ್ ಛಂದಸ್ಸು ಅನ್ನರೂಪವಾಗಿದೆ. ಎರಡು ವಿರಾಟ್ಛಂದಸ್ಸುಗಳು ವಿಂಶಸ್ತೋಮ) ಹೀಗಾಗಿ ಚಿತಿಯ ದಕ್ಷಿಣಭಾಗದಲ್ಲಿ ಅನ್ನವನ್ನೇ ಸ್ಥಾಪಿಸಿದಂತಾಗುತ್ತದೆ. |
| **ತಸ್ಮಾತ್ ದಕ್ಷಿಣೇನ ಅನ್ನಮ್ ಅದ್ಯತೇ** | ಆದುದರಿಂದ ಬಲಗೈಯಿಂದ ಅನ್ನವು ತಿನ್ನಲ್ಪಡುತ್ತದೆ. |

---

**'ಪಂಚದಶೋ ವಜ್ರಃ'** ಎಂಬ ಶ್ರುತಿವಚನವು ಪಂಚದಶಸ್ತೋಮವು ಓಜಃಸ್ವರೂಪವುಳ್ಳದುದು ಎಂದಿದೆ. ಓಜವೆಂದರೆ ಬಲ. ಅದು ಅಷ್ಟಮಧಾತು.

ವರ್ಚೋ ದ್ವಾವಿಗ್ಂಶ ಇತಿ ಪಶ್ಚಾದ್ಯದ್ವಿಗ್ಂಶತಿರ್ದ್ವೇ ತೇನ ವಿರಾಜೌ ಯದ್ದ್ವೇ ಪ್ರತಿಷ್ಠಾ ತೇನ ವಿರಾಜೋರೇವಾಭಿಪೂರ್ವಮನ್ನಾದ್ಯೇ ಪ್ರತಿತಿಷ್ಠತಿ ತಪೋ ನವದಶ ಇತ್ಯುತ್ತರತಸ್ತಸ್ಮಾಥ್ಸವ್ಯೋ [ಸವ್ಯಃ(೧೩)]ಹಸ್ತಯೋಸ್ತಪಸ್ವಿತರೋ

---

ವರ್ಚಃ । ದ್ವಾವಿಗ್ಂಶಃ । ಇತಿ । ಪಶ್ಚಾತ್ । ಯತ್ । ವಿಗ್ಂಶತಿಃ । ದ್ವೇ ಇತಿ । ತೇನ । ವಿರಾಜಾವಿತಿ ವಿ-ರಾಜೌ । ಯತ್ । ದ್ವೇ ಇತಿ । ಪ್ರತಿಷ್ಠೇತಿ ಪ್ರತಿ-ಸ್ಥಾ । ತೇನ । ವಿರಾಜೋರಿತಿ ವಿ-ರಾಜೋಃ । ಏವ । ಅಭಿಪೂರ್ವಮಿತ್ಯಭಿ-ಪೂರ್ವಮ್ । ಅನ್ನಾದ್ಯ ಇತ್ಯನ್ನ-ಅದ್ಯೇ । ಪ್ರತೀತಿ । ತಿಷ್ಠತಿ । ತಪಃ । ನವದಶ ಇತಿ ನವ-ದಶಃ । ಇತಿ । ಉತ್ತರತ ಇತ್ಯುತ್-ತರತಃ । ತಸ್ಮಾತ್ । ಸವ್ಯಃ । (೧೩) । ಹಸ್ತಯೋಃ । ತಪಸ್ವಿತರ ಇತಿ ತಪಸ್ವಿ-ತರಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ವರ್ಚಃ ದ್ವಾವಿಗ್ಂಶಃ ಇತಿ ಪಶ್ಚಾತ್** ಉಪದಧಾತಿ | 'ವರ್ಚೋ ದ್ವಾವಿಗ್ಂಶಃ' ಎಂಬ ಮಂತ್ರದಿಂದ ಚಿತಿಯ ಪಶ್ಚಿಮಭಾಗದಲ್ಲಿ ಇಷ್ಟಕೆಯ ಉಪಧಾನವನ್ನು ಮಾಡಬೇಕು. |
| **ಯತ್ ವಿಂಶತಿಃ** | (ಇಪ್ಪತ್ತೆರಡು ಸ್ತೋಮಸಂಖ್ಯೆಯಲ್ಲಿ) ಇಪ್ಪತ್ತು ಸಂಖ್ಯೆಯು ಇರುವುದರಿಂದ |
| **ತೇನ ದ್ವೇ ವಿರಾಜೌ** | ಅದು ಎರಡು ವಿರಾಟ್ ರೂಪವಾಗಿದೆ. |
| **ಯತ್ ದ್ವೇ ಪ್ರತಿಷ್ಠಾ** | ಉಳಿದ ಎರಡು ಸಂಖ್ಯೆಯು ಪ್ರತಿಷ್ಠಾರೂಪವಾಗಿದೆ. |
| **ತೇನ ವಿರಾಜೋಃ ಅನ್ನಾದ್ಯೇ ಏವ ಅಭಿ ಪೂರ್ವಮ್ ಪ್ರತಿತಿಷ್ಠತಿ** | ಈ ಉಪಧಾನದಿಂದ ವಿರಾಟ್ ಛಂದಸ್ಸಿಗೆ ಸಂಬಂಧಿಸಿದ ಅನ್ನಾದಿಗಳಲ್ಲಿ ಕ್ರಮವಾಗಿ ಯಜಮಾನನು ಪ್ರತಿಷ್ಠಿತನಾಗುವನು. |
| **ತಪಃ ನವದಶಃ ಇತಿ ಉತ್ತರತಃ** ಉಪದಧಾತಿ | **'ತಪೋ ನವದಶಃ'** ಎಂಬ ಮಂತ್ರದಿಂದ ಚಿತಿಯ ಉತ್ತರಭಾಗದಲ್ಲಿ ಇಷ್ಟಕೋಪಧಾನವನ್ನು ಮಾಡಬೇಕು. |
| **ತಸ್ಮಾತ್ ಹಸ್ತಯೋಃ ಸವ್ಯಃ ತಪಸ್ವಿತರಃ** | ಆದುದರಿಂದ ಕೈಗಳಲ್ಲಿ ಎಡಗೈಯು ಹೆಚ್ಚಿನ ತಪಸ್ವಿಯಾಗಿದೆ.* |

---

* ಕೈಗಳಲ್ಲಿ ಎಡಗೈಯು ಭೋಜನ ಮಾಡಲು ಸಾಧನವಾಗದಿರುವುದರಿಂದ **'ತಪೋಽನಶನಮ್'** (ಅಶನ ಮಾಡದಿರುವುದೇ ತಪಸ್ಸು) ಎಂಬ ವಚನದಂತೆ ಹೆಚ್ಚಿನ ತಪಸ್ವಿಯಾಗಿದೆ. [ತೈ.ಉ. 4.78 ಅನುವಾಕ]

ಯೋನಿಶ್ಚತುರ್ವಿಗ್‌ಂಶ ಇತಿ ಪುರಸ್ತಾದುಪದಧಾತಿ ಚತುರ್ವಿಗ್‌ಂಶತ್ಯಕ್ಷರಾ ಗಾಯತ್ರೀ ಗಾಯತ್ರೀ ಯಜ್ಞಮುಖಂ ಯಜ್ಞಮುಖಮೇವ ಪುರಸ್ತಾದ್ವಿ ಯಾತಯತಿ ಗರ್ಭಾಃ ಪಂಚವಿಗ್‌ಂಶ ಇತಿ ದಕ್ಷಿಣತೋಽನ್ನಂ ವೈ ಗರ್ಭಾ

---

ಯೋನಿಃ । ಚತುರ್ವಿಗ್‌ಂಶ ಇತಿ ಚತುಃ–ವಿಗ್‌ಂಶಃ । ಇತಿ । ಪುರಸ್ತಾತ್ । ಉಪೇತಿ । ದಧಾತಿ । ಚತುರ್ವಿಗ್‌ಂಶತ್ಯಕ್ಷರೇತಿ ಚತುರ್ವಿಗ್‌ಂಶತಿ–ಅಕ್ಷರಾ । ಗಾಯತ್ರೀ । ಗಾಯತ್ರೀ । ಯಜ್ಞಮುಖಮಿತಿ ಯಜ್ಞ–ಮುಖಮ್ । ಯಜ್ಞಮುಖಮಿತಿ ಯಜ್ಞ–ಮುಖಮ್ । ಏವ । ಪುರಸ್ತಾತ್ । ವೀತಿ । ಯಾತಯತಿ । ಗರ್ಭಾಃ । ಪಂಚವಿಗ್‌ಂಶ ಇತಿ ಪಂಚ–ವಿಗ್‌ಂಶಃ । ಇತಿ । ದಕ್ಷಿಣತಃ । ಅನ್ನಮ್ । ವೈ । ಗರ್ಭಾಃ ।

---

| ಬ್ರಾಹ್ಮಣಭಾಗ | ವಿವರಣೆ |
| --- | --- |
| **ಯೋನಿಃ ಚತುರ್ವಿಗ್‌ಂಶಃ ಇತಿ ಪುರಸ್ತಾತ್ ಉಪದಧಾತಿ** | **'ಯೋನಿಶ್ಚತುರ್ವಿಗ್‌ಂಶಃ'** ಎಂಬ ಮಂತ್ರದಿಂದ ಚಿತಿಯ ಪೂರ್ವದಿಕ್ಕಿನಲ್ಲಿ ಇಷ್ಟಕೋಪಧಾನವನ್ನು ಮಾಡಬೇಕು. |
| **ಚತುರ್ವಿಗ್‌ಂಶತ್ಯಕ್ಷರಾ ಗಾಯತ್ರೀ** | ಗಾಯತ್ರೀಛಂದಸ್ಸು ಇಪ್ಪತ್ತನಾಲ್ಕು ಅಕ್ಷರಗಳಿಂದ ಕೂಡಿದೆ. |
| **ಗಾಯತ್ರೀ ಯಜ್ಞಮುಖಮ್** | (ಗಾಯತ್ರಿಯು ಪ್ರಾತಃಸವನದಲ್ಲಿ ಪ್ರವೃತ್ತವಾಗುವುದರಿಂದ) ಯಜ್ಞಮುಖರೂಪವಾಗಿದೆ. |
| **ಯಜ್ಞಮುಖಮ್ ಏವ ಪುರಸ್ತಾತ್ ವಿ ಯಾತಯತಿ** | ಈ ಉಪಧಾನದಿಂದ ಅಧ್ವರ್ಯುವು ಯಜ್ಞಮುಖವನ್ನೇ ಪ್ರಸಾರಪಡಿಸಿದವನಾಗುತ್ತಾನೆ. |
| **ಗರ್ಭಾಃ ಪಂಚವಿಗ್‌ಂಶಃ ಇತಿ ದಕ್ಷಿಣತಃ ಉಪದಧಾತಿ** | **'ಗರ್ಭಾಃ ಪಂಚವಿಗ್‌ಂಶಃ'** ಎಂಬ ಮಂತ್ರದಿಂದ ಅಕ್ಷ್ಣಯಾಸ್ತೋಮೀಯೇಷ್ಟಕೆಯನ್ನು ಚಿತಿಯ ದಕ್ಷಿಣ ಭಾಗದಲ್ಲಿ ಉಪಧಾನ ಮಾಡಬೇಕು. |
| **ಗರ್ಭಾಃ ಅನ್ನಮ್ ವೈ** | (ಗರ್ಭಗಳು ಅನ್ನಕಾರ್ಯವಾದುದರಿಂದ) ಅನ್ನಸ್ವರೂಪವೇ ಆಗಿವೆ. |

---

**'ಗರ್ಭಾಃ ಪಂಚವಿಗ್‌ಂಶಃ'** ಎಂಬುದು ಮಂತ್ರಪಾಠದಲ್ಲಿ ಹನ್ನೊಂದನೆಯದಾಗಿದೆ. ಇಷ್ಟಕೋಪಧಾನದಲ್ಲಿ ಹತ್ತನೆಯದು. ಹೀಗಾಗಿ ಅಕ್ಷ್ಣಯಾಸ್ತೋಮೀಯವಾಗಿದೆ.

ಅನ್ನಂ ಪಂಚವಿಗ್ಂಶೋಽನ್ನಮೇವ ದಕ್ಷಿಣತೋ ಧತ್ತೇ ತಸ್ಮಾದ್ದಕ್ಷಿಣೇನಾನ್ನಮದ್ಯತ ಓಜಸ್ತ್ರಿಣವ ಇತಿ ಪಶ್ಚಾದಿಮೇ ವೈ ಲೋಕಾಸ್ತ್ರಿಣವ ಏಷ್ವೇವ ಲೋಕೇಷು ಪ್ರತಿತಿಷ್ಠತಿ ಸಂಭರಣಸ್ತ್ರಯೋವಿಗ್ಂಶ [ಇತಿ(೧೪)ಉತ್ತರತಃ]ಇತ್ಯುತ್ತರತ–

---

ಅನ್ನಮ್ । ಪಂಚವಿಗ್ಂಶ ಇತಿ ಪಂಚ–ವಿಗ್ಂಶಃ । ಅನ್ನಮ್ । ಏವ । ದಕ್ಷಿಣತಃ । ಧತ್ತೇ । ತಸ್ಮಾತ್ । ದಕ್ಷಿಣೇನ । ಅನ್ನಮ್ । ಅದ್ಯತೇ । ಓಜಃ । ತ್ರಿಣವ ಇತಿ ತ್ರಿ–ನವಃ । ಇತಿ । ಪಶ್ಚಾತ್ । ಇಮೇ । ವೈ । ಲೋಕಾಃ । ತ್ರಿಣವ ಇತಿ ತ್ರಿ–ನವಃ । ಏಷು । ಏವ । ಲೋಕೇಷು । ಪ್ರತೀತಿ । ತಿಷ್ಠತಿ । ಸಂಭರಣ ಇತಿ ಸಮ್–ಭರಣಃ । ತ್ರಯೋವಿಗ್ಂಶ ಇತಿ ತ್ರಯಃ–ವಿಗ್ಂಶಃ । ಇತಿ । (೧೪) । ಉತ್ತರತ ಇತ್ಯುತ್–ತರತಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಪಂಚವಿಗ್ಂಶಃ ಅನ್ನಮ್** | ಪಂಚವಿಂಶಸ್ತೋಮವು ಅನ್ನಹೇತುವಾದುದರಿಂದ ಅನ್ನರೂಪವಾಗಿದೆ. |
| **ಅನ್ನಮ್ ಏವ ದಕ್ಷಿಣತಃ ಧತ್ತೇ** | ಈ ಉಪಧಾನದಿಂದ ಅಧ್ವರ್ಯುವು ಅನ್ನವನ್ನು ದಕ್ಷಿಣಭಾಗದಲ್ಲಿ ಸ್ಥಾಪಿಸಿದವನಾಗುತ್ತಾನೆ. |
| **ತಸ್ಮಾತ್ ದಕ್ಷಿಣೇನ ಅನ್ನಮ್ ಅದ್ಯತೇ** | ಆದ್ದರಿಂದ ಅನ್ನವು ಬಲಗೈಯಿಂದ ತಿನ್ನಲ್ಪಡುತ್ತದೆ. |
| **ಓಜಃ ತ್ರಿಣವಃ ಇತಿ ಪಶ್ಚಾತ್** ಉಪದಧಾತಿ | **'ಓಜಸ್ತ್ರಿಣವಃ'** ಎಂಬ ಮಂತ್ರದಿಂದ ಚತುರ್ಥಚಿತಿಯ ಪಶ್ಚಿಮದಿಕ್ಕಿನಲ್ಲಿ ಇಷ್ಟಕೋಪಧಾನ ಮಾಡಬೇಕು. |
| **ಇಮೇ ವೈ ಲೋಕಾಃ ತ್ರಿಣವಃ** | ತ್ರಿಣವ ಶಬ್ದದಲ್ಲಿ ಇರುವ ತ್ರಿಶಬ್ದವು ತ್ರಿಲೋಕ ಸ್ವರೂಪವಾಗಿದೆ. [ತ್ರಿಣವಶಬ್ದವು ತ್ರಿಣವಸ್ತೋಮ ರೂಪವಾಗಿದೆ (ಸಾಮವಿಶೇಷ)] |
| **ಏಷು ಏವ ಲೋಕೇಷು ಪ್ರತಿತಿಷ್ಠತಿ** | ಈ ಉಪಧಾನದಿಂದ ಅಧ್ವರ್ಯುವು ಯಜಮಾನನು ಮೂರು ಲೋಕಗಳಲ್ಲಿಯೂ ಪ್ರತಿಷ್ಠಿತನಾಗುವಂತೆ ಮಾಡುತ್ತಾನೆ. |
| **ಸಂಭರಣಃ ತ್ರಯೋವಿಗ್ಂಶಃ ಇತಿ ಉತ್ತರತಃ** ಉಪದಧಾತಿ | **'ಸಂಭರಣಸ್ತ್ರಯೋವಿಗ್ಂಶಃ'** ಎಂಬ ಮಂತ್ರದಿಂದ ಚತುರ್ಥಚಿತಿಯ ಉತ್ತರಭಾಗದಲ್ಲಿ ಅಕ್ಷ್ಣಯಾಸ್ತೋಮೀಯೇಷ್ಟಕೆಯನ್ನು ಉಪಧಾನ ಮಾಡಬೇಕು. |

ಸ್ತಸ್ಮಾಥ್ಸವ್ಯೋ ಹಸ್ತಯೋಸ್ಸಂಭಾರ್ಯತರಃ ಕ್ರತುರೇಕತ್ರಿಗ್ಂಶ ಇತಿ ಪುರಸ್ತಾದುಪ ದಧಾತಿ ವಾಗ್ವೈ ಕ್ರತುರ್ಯಜ್ಞಮುಖಂ ವಾಗ್ಯಜ್ಞಮುಖಮೇವ ಪುರಸ್ತಾದ್ವಿ ಯಾತಯತಿ ಬ್ರಧ್ನಸ್ಯ ವಿಷ್ಟಪಂ ಚತುಸ್ತ್ರಿಗ್ಂಶ ಇತಿ ದಕ್ಷಿಣತೋಽಸೌ ವಾ ಆದಿತ್ಯೋ

---

ತಸ್ಮಾತ್ । ಸವ್ಯಃ । ಹಸ್ತಯೋಃ । ಸಂಭಾರ್ಯತರ ಇತಿ ಸಂಭಾರ್ಯ-ತರಃ । ಕ್ರತುಃ । ಏಕತ್ರಿಗ್ಂಶ ಇತ್ಯೇಕ-ತ್ರಿಗ್ಂಶಃ । ಇತಿ । ಪುರಸ್ತಾತ್ । ಉಪೇತಿ । ದಧಾತಿ । ವಾಕ್ । ವೈ । ಕ್ರತುಃ । ಯಜ್ಞಮುಖಮಿತಿ ಯಜ್ಞ-ಮುಖಮ್ । ವಾಕ್ । ಯಜ್ಞಮುಖಮಿತಿ ಯಜ್ಞ-ಮುಖಮ್ । ಏವ । ಪುರಸ್ತಾತ್ । ವೀತಿ । ಯಾತಯತಿ । ಬ್ರಧ್ನಸ್ಯ । ವಿಷ್ಟಪಮ್ । ಚತುಸ್ತ್ರಿಗ್ಂಶ ಇತಿ ಚತುಃ-ತ್ರಿಗ್ಂಶಃ । ಇತಿ । ದಕ್ಷಿಣತಃ । ಅಸೌ । ವೈ । ಆದಿತ್ಯಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ತಸ್ಮಾತ್ ಹಸ್ತಯೋಃ ಸವ್ಯಃ ಸಂಭಾರ್ಯತರಃ** | ಆದುದರಿಂದ ಕೈಗಳಲ್ಲಿ ಎಡಗೈಯು ಧರಿಸಬೇಕಾದ ವಸ್ತುಗಳನ್ನು ಧಾರಣೆ ಮಾಡುವುದರಲ್ಲಿ ಮೇಲಾಗಿದೆ. |
| **ಕ್ರತುಃ ಏಕತ್ರಿಗ್ಂಶಃ ಇತಿ ಪುರಸ್ತಾತ್ ಉಪದಧಾತಿ** | **'ಕ್ರತುರೇಕತ್ರಿಗ್ಂಶಃ'** ಎಂಬ ಮಂತ್ರದಿಂದ ಚತುರ್ಥ ಚಿತಿಯ ಪೂರ್ವಭಾಗದಲ್ಲಿ ಅಕ್ಷ್ಣಯಾಸ್ತೋಮೀಯೇಷ್ಟಕೆಯನ್ನು ಉಪಧಾನ ಮಾಡಬೇಕು. |
| **ವಾಕ್ ವೈ ಕ್ರತುಃ** | ಮಂತ್ರಗಳಿಂದ ಅನುಷ್ಠಿಸಬೇಕಾದುದರಿಂದ ಕ್ರತುವು ವಾಗ್ರೂಪವಾಗಿದೆ. |
| **ವಾಕ್ ಯಜ್ಞಮುಖಮ್** | ಅಂತಹ ವಾಕ್ ಯಜ್ಞದ ಪ್ರಮುಖಸ್ಥಾನವಾಗಿದೆ. |
| **ಯಜ್ಞಮುಖಮ್ ಏವ ಪುರಸ್ತಾತ್ ವಿಯಾತಯತಿ** | ಈ ಇಷ್ಟಕೋಪಧಾನದಿಂದ ಅಧ್ವರ್ಯುವು ಯಜ್ಞಮುಖವನ್ನೇ ಪ್ರಸಾರಪಡಿಸಿದವನಾಗುತ್ತಾನೆ. |
| **ಬ್ರಧ್ನಸ್ಯ ವಿಷ್ಟಪಮ್ ಚತುಸ್ತ್ರಿಗ್ಂಶಃ ಇತಿ ದಕ್ಷಿಣತಃ** ಉಪದಧಾತಿ | **'ಬ್ರಧ್ನಸ್ಯ ವಿಷ್ಟಪಮ್ ಚತುಸ್ತ್ರಿಗ್ಂಶಃ'** ಎಂಬ ಮಂತ್ರದಿಂದ ಚತುರ್ಥಚಿತ್ಯಗ್ನಿಯ ದಕ್ಷಿಣಭಾಗದಲ್ಲಿ ಇಷ್ಟಕೋಪಧಾನವನ್ನು ಮಾಡಬೇಕು. |
| **ಅಸೌ ವೈ ಆದಿತ್ಯಃ** | ಈ ಸೂರ್ಯನು |

ಬ್ರ॒ಧ್ನಸ್ಯ॑ ವಿ॒ಷ್ಟ॑ಪಂ ಬ್ರಹ್ಮವ॒ರ್ಚ॒ಸಮೇ॒ವ ದ॑ಕ್ಷಿ॒ಣತೋ॒ ಧ॑ತ್ತೇ॒

ತಸ್ಮಾ॒ದ್ದಕ್ಷಿ॒ಣೋಽರ್ಧೋ॑ ಬ್ರಹ್ಮವ॒ರ್ಚ॒ಸಿತ॑ರಃ ಪ್ರ॒ತಿಷ್ಠಾ॑ ತ್ರಯಸ್ತ್ರಿ॒ಗ್ಂ॒ಶ ಇತಿ

ಪ॒ಶ್ಚಾತ್ಪ್ರ॑ತಿಷ್ಠಿತ್ಯೈ॒ ನಾಕ॑ಷ್ಷಟ್ತ್ರಿ॒ಗ್ಂ॒ಶ ಇತ್ಯು॑ತ್ತ॒ರತಃ

---

ಬ್ರ॒ಧ್ನಸ್ಯ॑ । ವಿ॒ಷ್ಟಪ॑ಮ್ । ಬ್ರ॒ಹ್ಮ॒ವ॒ರ್ಚ॒ಸಮಿ॑ತಿ ಬ್ರಹ್ಮ-ವ॒ರ್ಚ॒ಸಮ್ । ಏ॒ವ । ದ॒ಕ್ಷಿ॒ಣ॑ತಃ । ಧ॒ತ್ತೇ॒ । ತಸ್ಮಾ॑ತ್ । ದಕ್ಷಿ॑ಣಃ । ಅರ್ಧ॑ಃ । ಬ್ರ॒ಹ್ಮ॒ವ॒ರ್ಚ॒ಸಿತ॑ರ॒ ಇತಿ॑ ಬ್ರಹ್ಮವರ್ಚಸಿ-ತ॒ರಃ । ಪ್ರ॒ತಿ॒ಷ್ಠೇತಿ॑ ಪ್ರತಿ-ಸ್ಥಾ । ತ್ರ॒ಯ॒ಸ್ತ್ರಿ॒ಗ್ಂ॒ಶ ಇತಿ॑ ತ್ರಯಃ-ತ್ರಿ॒ಗ್ಂ॒ಶಃ । ಇತಿ॑ । ಪ॒ಶ್ಚಾತ್ । ಪ್ರತಿ॑ಷ್ಠಿ॒ತ್ಯಾ॒ ಇತಿ॒ ಪ್ರತಿ॑-ಸ್ಥಿ॒ತ್ಯೈ॒ । ನಾಕ॑ಃ । ಷ॒ಟ್ತ್ರಿ॒ಗ್ಂ॒ಶ ಇತಿ॑ ಷಟ್-ತ್ರಿ॒ಗ್ಂ॒ಶಃ । ಇತಿ॑ । ಉ॒ತ್ತ॒ರ॒ತ ಇತ್ಯು॑ತ್-ತ॒ರ॒ತಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಬ್ರಧ್ನಸ್ಯ ವಿಷ್ಟಪಮ್** | ಬ್ರಹ್ಮವರ್ಚಸಕ್ಕೆ ವಾಸಸ್ಥಾನವಾಗಿರುತ್ತಾನೆ. |
| **ದಕ್ಷಿಣತಃ ಬ್ರಹ್ಮವರ್ಚಸಮ್ ಏವ ಧತ್ತೇ** | (ಅಧ್ವರ್ಯುವು ಸೂರ್ಯಸಂಬಂಧಿಮಂತ್ರದಿಂದ ಇಷ್ಟಕೋಪಧಾನವನ್ನು ಮಾಡುವುದರಿಂದ) ದಕ್ಷಿಣಭಾಗದಲ್ಲಿ ಯಜಮಾನನಿಗೆ ಬ್ರಹ್ಮವರ್ಚಸವನ್ನು ಒದಗಿಸಿಕೊಟ್ಟವನಾಗುತ್ತಾನೆ. |
| **ತಸ್ಮಾತ್ ದಕ್ಷಿಣಃ ಅರ್ಧಃ ಬ್ರಹ್ಮವರ್ಚಸಿತರಃ** | (ಪೂಜಾ-ಜಪಾದಿಗಳಲ್ಲಿ ಬಲಗೈಯು ಉಪಯೋಗಿಸಲ್ಪಡುವುದರಿಂದ) ಬಲಭಾಗವು ಹೆಚ್ಚಿನ ಬ್ರಹ್ಮವರ್ಚಸದಿಂದ ಕೂಡಿದೆ. |
| **ಪ್ರತಿಷ್ಠಾ ತ್ರಯಸ್ತ್ರಿಗ್ಂಶಃ ಇತಿ ಪಶ್ಚಾತ್** ಉಪದಧಾತಿ | **'ಪ್ರತಿಷ್ಠಾ ತ್ರಯಸ್ತ್ರಿಗ್ಂಶಃ'** ಎಂಬ ಮಂತ್ರದಿಂದ ಚತುರ್ಥ ಚಿತಿಯ ಪಶ್ಚಿಮಸ್ಥಾನದಲ್ಲಿ ಇಷ್ಟಕೋಪಧಾನವನ್ನು ಮಾಡಬೇಕು. |
| **ಪ್ರತಿಷ್ಠಿತ್ಯೈ** | ಇದು ಯಜಮಾನನ ಶ್ರೇಷ್ಠಸ್ಥಿತಿಗೆ ಕಾರಣವಾಗುತ್ತದೆ. |
| **ನಾಕಃ ಷಟ್ತ್ರಿಗ್ಂಶಃ ಇತಿ ಉತ್ತರತಃ** ಉಪದಧಾತಿ | **'ನಾಕಷ್ಷಟ್ತ್ರಿಗ್ಂಶಃ'** ಎಂಬ ಮಂತ್ರದಿಂದ ಚತುರ್ಥ ಚಿತಿಯ ಉತ್ತರಭಾಗದಲ್ಲಿ ಇಷ್ಟಕೋಪಧಾನವನ್ನು ಮಾಡಬೇಕು. |

ಸುವರ್ಗೋ೭ ವೈ ಲೋಕೋ೭ ನಾಕಸ್ಸುವರ್ಗಸ್ಯ ಲೋಕಸ್ಯ ಸಮಷ್ಟ್ಯೈ ॥ ೧೫-3 ॥

[ವೈ ತ್ರಿವೃದಿತಿ ಪುರಸ್ತಾತ್ಥ್ಸವ್ಯಸ್ತ್ರಯೋವಿಗ್‍ಂಶ ಇತಿ ಸುವರ್ಗೋ೭ ವೈ ಪಂಚ ಚ ॥]

---

ಸುವರ್ಗ ಇತಿ ಸುವಃ-ಗಃ । ವೈ । ಲೋಕಃ । ನಾಕಃ । ಸುವರ್ಗಸ್ಯೇತಿ ಸುವಃ-ಗಸ್ಯ । ಲೋಕಸ್ಯ । ಸಮಷ್ಟ್ಯಾ ಇತಿ ಸಮ್-ಅಷ್ಟ್ಯೈ ॥ ೧೫ ॥

---

| ಬ್ರಾಹ್ಮಣಭಾಗ | ವಿವರಣೆ |
| --- | --- |
| **ಸುವರ್ಗಃ ವೈ ಲೋಕಃ ನಾಕಃ ಸುವರ್ಗಸ್ಯ ಲೋಕಸ್ಯ ಸಮಷ್ಟ್ಯೈ** | ಸ್ವರ್ಗಲೋಕವೇ ನಾಕಶಬ್ದಾರ್ಥವಾಗಿದೆ. ಈ ಉಪಧಾನವು ಯಜಮಾನನ ಸ್ವರ್ಗಪ್ರಾಪ್ತಿಗೆ ಕಾರಣವಾಗುತ್ತದೆ. |

## ॥ ಚತುರ್ಥೋಽನುವಾಕಃ ॥

ಅಗ್ನೇರ್ಭಾಗೋಽಸೀತಿ ಪುರಸ್ತಾದುಪ ದಧಾತಿ ಯಜ್ಞಮುಖಂ ವಾ

ಅಗ್ನಿರ್ಯಜ್ಞಮುಖಂ ದೀಕ್ಷಾ ಯಜ್ಞಮುಖಂ ಬ್ರಹ್ಮ ಯಜ್ಞಮುಖಂ ತ್ರಿವೃ-

---

ಅಗ್ನೇಃ । ಭಾಗಃ । ಅಸಿ । ಇತಿ । ಪುರಸ್ತಾತ್ । ಉಪೇತಿ । ದಧಾತಿ । ಯಜ್ಞಮುಖಮಿತಿ ಯಜ್ಞ-ಮುಖಮ್ । ವೈ । ಅಗ್ನಿಃ । ಯಜ್ಞಮುಖಮಿತಿ ಯಜ್ಞ-ಮುಖಮ್ । ದೀಕ್ಷಾ । ಯಜ್ಞಮುಖಮಿತಿ ಯಜ್ಞ-ಮುಖಮ್ । ಬ್ರಹ್ಮ । ಯಜ್ಞಮುಖಮಿತಿ ಯಜ್ಞ-ಮುಖಮ್ । ತ್ರಿವೃದಿತಿ ತ್ರಿ-ವೃತ್ ।

---

ಈ ನಾಲ್ಕನೆಯ ಅನುವಾಕದಲ್ಲಿ ಉಳಿದ ಅಕ್ಷ್ಣಯಾಸ್ತೋಮೀಯೇಷ್ಟಕೆಗಳು ಹೇಳಲ್ಪಟ್ಟಿವೆ.

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ಅಕ್ಷ್ಣಯಾಸ್ತೋಮೀಯೇಷ್ಟಕೆಗಳ ಉಪಧಾನಕ್ರಮ** |
| **ಅಗ್ನೇಃ ಭಾಗಃ ಅಸಿ ಇತಿ ಪುರಸ್ತಾತ್ ಉಪದಧಾತಿ** | 'ಅಗ್ನೇರ್ಭಾಗೋಽಸಿ' ಎಂಬ ಮಂತ್ರದಿಂದ ಚತುರ್ಥ ಚಿತಿಯ ಪೂರ್ವಭಾಗದಲ್ಲಿ ಅಕ್ಷ್ಣಯಾಸ್ತೋಮೀಯೇಷ್ಟಕೆಯನ್ನು ಉಪಧಾನ ಮಾಡಬೇಕು. |
| **ಅಗ್ನಿಃ ಯಜ್ಞಮುಖಮ್ ವೈ** | (ಆಧಾನ ಮಾಡಿದ ಅಗ್ನಿಯಲ್ಲಿ ಯಜ್ಞವು ಅನುಷ್ಠಿಸಲ್ಪಡುವುದರಿಂದ) ಅಗ್ನಿಯು ಯಜ್ಞಮುಖವೆನಿಸಿದೆ. |
| **ದೀಕ್ಷಾ ಯಜ್ಞಮುಖಮ್** | (ಸೋಮಯಾಗವು ದೀಕ್ಷೆಯಿಂದ ಆರಂಭಗೊಳ್ಳುವುದರಿಂದ) ದೀಕ್ಷೆಯು ಯಜ್ಞಮುಖವೆನಿಸಿದೆ. |
| **ಬ್ರಹ್ಮ ಯಜ್ಞಮುಖಮ್** | (ಋತ್ವಿಗ್ವರಣದಿಂದ ಯಜ್ಞವು ಪ್ರಾರಂಭವಾಗುವುದರಿಂದ ಆರ್ತ್ವಿಜ್ಯವು ಬ್ರಾಹ್ಮಣಧರ್ಮವಾದುದರಿಂದ/ಮಂತ್ರಸಮುದಾಯ/ಬ್ರಾಹ್ಮಣಜಾತಿಯು ಯಜ್ಞಮುಖವೆನಿಸಿದೆ. |
| **ತ್ರಿವೃತ್ ಯಜ್ಞಮುಖಮ್** | (ಸ್ತೋತ್ರಗಳಲ್ಲಿ ಮೊದಲನೆಯದಾದ ಬಹಿಷ್ಪವಮಾನ ಸ್ತೋತ್ರವು ತ್ರಿವೃತ್‌ಸ್ತೋಮದಿಂದ ಆಗುವುದರಿಂದ) ತ್ರಿವೃತ್‌ಸ್ತೋಮವು ಯಜ್ಞಮುಖವೆನಿಸಿದೆ. |

ದ್ಯಜ್ಞಮುಖಮೇವ ಪುರಸ್ತಾದ್ವಿಯಾತಯತಿ ನೃಚಕ್ಷಸಾಂ ಭಾಗೋಽಸೀತಿ
ದಕ್ಷಿಣತಶ್ಶುಶ್ರುವಾಗ್ಂಸೋ ವೈ ನೃಚಕ್ಷಸೋಽನ್ನಂ ಧಾತಾ ಜಾತಾಯೈವಾಸ್ಮಾ
ಅನ್ನಮಪಿ ದಧಾತಿ ತಸ್ಮಾಜ್ಜಾತೋಽನ್ನಮತ್ತಿ

---

ಯಜ್ಞಮುಖಮಿತಿ ಯಜ್ಞ–ಮುಖಮ್ । ಏವ । ಪುರಸ್ತಾತ್ । ವೀತಿ । ಯಾತಯತಿ । ನೃಚಕ್ಷಸಾಮಿತಿ ನೃ–ಚಕ್ಷಸಾಮ್ । ಭಾಗಃ । ಅಸಿ । ಇತಿ । ದಕ್ಷಿಣತಃ । ಶುಶ್ರುವಾಗ್ಂಸಃ । ವೈ । ನೃಚಕ್ಷಸ ಇತಿ ನೃ–ಚಕ್ಷಸಃ । ಅನ್ನಮ್ । ಧಾತಾ । ಜಾತಾಯ । ಏವ । ಅಸ್ಮೈ । ಅನ್ನಮ್ । ಅಪೀತಿ । ದಧಾತಿ । ತಸ್ಮಾತ್ । ಜಾತಃ । ಅನ್ನಮ್ । ಅತ್ತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯಜ್ಞಮುಖಮ್ ಏವ ಪುರಸ್ತಾತ್ ವಿ ಯಾತಯತಿ** | (ಈ ಮಂತ್ರದಿಂದ ಉಪಧಾನ ಮಾಡುವುದರಿಂದ) ಅಧ್ವರ್ಯುವು ನಾಲ್ಕನೆಯ ಚಿತಿಯ ಪೂರ್ವಭಾಗದಲ್ಲಿ ಯಜ್ಞಮುಖವನ್ನೇ ಪ್ರಸಾರಪಡಿಸಿದವನಾಗುತ್ತಾನೆ. |
| **ನೃಚಕ್ಷಸಾಮ್ ಭಾಗಃ ಅಸಿ ಇತಿ ದಕ್ಷಿಣತಃ** ಉಪದಧಾತಿ | ***ನೃಚಕ್ಷಸಾಂ ಭಾಗೋಽಸಿ** ಎಂಬ ಮಂತ್ರದಿಂದ ಚತುರ್ಥಚಿತಿಯ ದಕ್ಷಿಣಭಾಗದಲ್ಲಿ ಅಕ್ಷ್ಣಯಾಸ್ತೋಮೀಯೇಷ್ಟಕೆಯನ್ನು ಉಪಧಾನ ಮಾಡಬೇಕು. |
| **ಶುಶ್ರುವಾಗ್ಂಸಃ ವೈ ನೃಚಕ್ಷಸಃ ಅನ್ನಮ್ ಧಾತಾ** | ವೇದಶಾಸ್ತ್ರಪಾರಂಗತರಾದ ಬ್ರಾಹ್ಮಣರು ನೃಚಕ್ಷಸರು. ಧಾತೃವು/ಬ್ರಹ್ಮನು ಅನ್ನೋತ್ಪಾದಕನಾದುದರಿಂದ ಅನ್ನವೆನಿಸಿದ್ದಾನೆ. |
| **ಜಾತಾಯ ಏವ ಅಸ್ಮೈ ಅನ್ನಮ್ ಅಪಿ ದಧಾತಿ** | ಹುಟ್ಟಿದ ಪ್ರಾಣಿಗೆ ಬ್ರಹ್ಮನೇ ಅನ್ನವನ್ನು ಒದಗಿಸಿ ಕೊಡುತ್ತಾನೆ. |
| **ತಸ್ಮಾತ್ ಜಾತಃ ಅನ್ನಮ್ ಅತ್ತಿ** | ಆದುದರಿಂದ ಹುಟ್ಟಿದ ಪ್ರಾಣಿಯು ಆಹಾರವನ್ನು ಸ್ವೀಕರಿಸುತ್ತದೆ. |

---

**ತಾತ್ಪರ್ಯ:–** ಈ ಅನುವಾಕದಲ್ಲಿ ವಿವರಿಸಿರುವ ಅಕ್ಷ್ಣಯಾಸ್ತೋಮೀಯೇಷ್ಟಕೆಗಳನ್ನು ಉಪಧಾನ ಮಾಡಲು ಹೇಳಬೇಕಾದ ಮಂತ್ರಗಳಲ್ಲಿ ಇಷ್ಟಕೆಗಳನ್ನು ಸಂಬೋಧಿಸಿ ಸ್ತುತಿಸಲಾಗಿದೆ. ಅಲ್ಲಿಯ ಪದಗಳನ್ನು ಇಲ್ಲಿ ವಿವರಿಸಲಾಗಿದೆ. ಮೊದಲನೆಯ ಮಂತ್ರದಲ್ಲಿ ಇಷ್ಟಕೆಯನ್ನು ಅಗ್ನಿಯ ಭಾಗವಾದ ಹವಿಸ್ಸೆಂದೂ, ದೀಕ್ಷೆಯೆಂದೂ, ಬ್ರಹ್ಮವೆಂದೂ ತ್ರಿವೃತ್ಸ್ತೋಮವೆಂದೂ ಹೇಳಿದೆ. ಇವೆಲ್ಲವೂ ಯಜ್ಞಮುಖಗಳೆಂದು ಇಲ್ಲಿ ವಿವರಣೆಯು ಇದೆ.

---

* ಮಂತ್ರಗಳ ಆಮ್ನಾನಕ್ರಮಕ್ಕೆ ವ್ಯತ್ಯಾಸವಾಗಿ ಉಪಧಾನ ಮಾಡುವುದರಿಂದ ಇವೂ ಅಕ್ಷ್ಣಯಾಸ್ತೋಮೀಯೇಷ್ಟಕೆಗಳು. ಈ ಮಂತ್ರವು ಅನುವಚನದಲ್ಲಿ ಮೂರನೆಯದು. ಉಪಧಾನದಲ್ಲಿ ಎರಡನೆಯದಾಗಿ ವಿನಿಯುಕ್ತವಾಗಿದೆ.

ಜನಿತ್ರಗ್ಗ್ಂ ಸ್ಪೃತಗ್ಂ ಸಪ್ತದಶಸ್ತೋಮ ಇತ್ಯಾಹಾನ್ನಂ ವೈ ಜನಿತ್ರ [ಜನಿತ್ರಮ್(೧೬)ಅನ್ನಗ್ಂ]ಮನ್ನಗ್ಂ ಸಪ್ತದಶೋಽನ್ನಮೇವ ದಕ್ಷಿಣತೋ ಧತ್ತೇ ತಸ್ಮಾದ್ದಕ್ಷಿಣೇನಾನ್ನಮದ್ಯತೇ ಮಿತ್ರಸ್ಯ ಭಾಗೋಽಸೀತಿ ಪಶ್ಚಾತ್ಪ್ರಾಣೋ ವೈ ಮಿತ್ರೋಽಪಾನೋ ವರುಣಃ

---

ಜನಿತ್ರಮ್ । ಸ್ಪೃತಮ್ । ಸಪ್ತದಶ ಇತಿ ಸಪ್ತ-ದಶಃ । ಸ್ತೋಮಃ । ಇತಿ । ಆಹ । ಅನ್ನಮ್ । ವೈ । ಜನಿತ್ರಮ್ । (೧೬) ಅನ್ನಮ್ । ಸಪ್ತದಶ ಇತಿ ಸಪ್ತ-ದಶಃ । ಅನ್ನಮ್ । ಏವ । ದಕ್ಷಿಣತಃ । ಧತ್ತೇ । ತಸ್ಮಾತ್ । ದಕ್ಷಿಣೇನ । ಅನ್ನಮ್ । ಅದ್ಯತೇ । ಮಿತ್ರಸ್ಯ । ಭಾಗಃ । ಅಸಿ । ಇತಿ । ಪಶ್ಚಾತ್ । ಪ್ರಾಣ ಇತಿ ಪ್ರ-ಅನಃ । ವೈ । ಮಿತ್ರಃ । ಅಪಾನ ಇತ್ಯಪ-ಅನಃ । ವರುಣಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಜನಿತ್ರಮ್ ಸ್ಪೃತಮ್ ಸಪ್ತದಶಃ ಸ್ತೋಮಃ ಇತಿ ಆಹ** | (ಈ ಮಂತ್ರದಲ್ಲಿಯೇ)'**ಜನಿತ್ರಮ್ ಸ್ಪೃತಮ್ ಸಪ್ತದಶಃ ಸ್ತೋಮಃ**' ಎಂದು ಶ್ರುತಿಯು ಹೇಳುತ್ತದೆ. (ಈ ಅಂಶವನ್ನೂ ಉಪಧಾನ ಮಾಡುವಾಗ ಹೇಳಬೇಕು) |
| **ಅನ್ನಮ್ ವೈ ಜನಿತ್ರಮ್** | ಅನ್ನವೇ ಜನಿತ್ರಶಬ್ದಾರ್ಥವಾಗಿದೆ. |
| **ಅನ್ನಮ್ ಸಪ್ತದಶಃ** | (ಅನ್ನಕಾರಣವಾದುದರಿಂದ) ಸಪ್ತದಶಸ್ತೋಮವೂ ಅನ್ನವೇ. |
| **ಅನ್ನಮ್ ಏವ ದಕ್ಷಿಣತಃ ಧತ್ತೇ** | ಈ ಉಪಧಾನದಿಂದ ಅಧ್ವರ್ಯುವು ಯಜಮಾನನಿಗೆ ದಕ್ಷಿಣಭಾಗದಲ್ಲಿ ಅನ್ನವನ್ನು ಸಂಪಾದಿಸಿಕೊಡುತ್ತಾನೆ. |
| **ತಸ್ಮಾತ್ ದಕ್ಷಿಣೇನ ಅನ್ನಮ್ ಅದ್ಯತೇ** | ಆದುದರಿಂದ ಅನ್ನವು ಬಲಗೈಯಿಂದ ತಿನ್ನಲ್ಪಡುತ್ತದೆ. |
| **ಮಿತ್ರಸ್ಯ ಭಾಗಃ ಅಸಿ ಇತಿ ಪಶ್ಚಾತ್** ಉಪದಧಾತಿ | '**ಮಿತ್ರಸ್ಯ ಭಾಗೋಽಸಿ**' ಎಂಬ ಮಂತ್ರದಿಂದ ಚತುರ್ಥ ಚಿತಿಯ ಪಶ್ಚಿಮಭಾಗದಲ್ಲಿ ಅಕ್ಷ್ಣಯಾಸ್ತೋಮೀಯೇಷ್ಟಕೆಯನ್ನು ಉಪಧಾನ ಮಾಡಬೇಕು. |
| **ಮಿತ್ರಃ ಪ್ರಾಣಃ ವೈ ಅಪಾನಃ ವರುಣಃ** | ಮಿತ್ರನು (ಸೂರ್ಯನು) ಪ್ರಾಣಸ್ವರೂಪನು. ವರುಣನು ಅಪಾನಸ್ವರೂಪನು. |

ಪ್ರಾಣಾಪಾನಾವೇವಾಸ್ಮಿನ್ದಧಾತಿ ದಿವೋ ವೃಷ್ಟಿರ್ವಾತಾಃ ಸ್ಪೃತಾ ಏಕವಿಗ್ಂಶಃ ಸ್ತೋಮ ಇತ್ಯಾಹ ಪ್ರತಿಷ್ಠಾ ವಾ ಏಕವಿಗ್ಂಶಃ ಪ್ರತಿಷ್ಠಿತ್ಯಾ ಇಂದ್ರಸ್ಯ ಭಾಗೋಽಸೀತ್ಯುತ್ತರತ ಓಜೋ ವಾ ಇಂದ್ರ ಓಜೋ ವಿಷ್ಣುರೋಜಃ ಕ್ಷತ್ರ-

---

ಪ್ರಾಣಾಪಾನಾವಿತಿ ಪ್ರಾಣ-ಅಪಾನೌ । ಏವ । ಅಸ್ಮಿನ್ನ್ । ದಧಾತಿ । ದಿವಃ । ವೃಷ್ಟಿಃ । ವಾತಾಃ । ಸ್ಪೃತಾಃ । ಏಕವಿಗ್ಂಶ ಇತ್ಯೇಕ-ವಿಗ್ಂಶಃ । ಸ್ತೋಮಃ । ಇತಿ । ಆಹ । ಪ್ರತಿಷ್ಠೇತಿ ಪ್ರತಿ-ಸ್ಥಾ । ವೈ । ಏಕವಿಗ್ಂಶ ಇತ್ಯೇಕ-ವಿಗ್ಂಶಃ । ಪ್ರತಿಷ್ಠಿತ್ಯಾ ಇತಿ ಪ್ರತಿ-ಸ್ಥಿತ್ಯೈ । ಇಂದ್ರಸ್ಯ । ಭಾಗಃ । ಅಸಿ । ಇತಿ । ಉತ್ತರತ ಇತ್ಯುತ್-ತರತಃ । ಓಜಃ । ವೈ । ಇಂದ್ರಃ । ಓಜಃ । ವಿಷ್ಣುಃ । ಓಜಃ । ಕ್ಷತ್ರಮ್ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಅಸ್ಮಿನ್ ಪ್ರಾಣಾಪಾನೌ ಏವ ದಧಾತಿ** | ಈ ಇಷ್ಟಕೋಪಧಾನದಿಂದ ಅಧ್ವರ್ಯುವು ಈ ಚಿತ್ಯಾಗ್ನಿಯಲ್ಲಿ ಪ್ರಾಣ-ಅಪಾನಗಳನ್ನು ಸ್ಥಾಪಿಸಿದವನಾಗುತ್ತಾನೆ. |
| **ದಿವಃ ವೃಷ್ಟಿಃ ವಾತಾಃ ಸ್ಪೃತಾಃ ಏಕವಿಗ್ಂಶಃ ಸ್ತೋಮಃ ಇತಿ ಆಹ** | (ಇಷ್ಟಕೋಪಧಾನದಲ್ಲಿ ಹೇಳಬೇಕಾದ) 'ದಿವಃ.... ಏಕವಿಗ್ಂಶಃ ಸ್ತೋಮಃ' ಎಂಬ ಉತ್ತರಭಾಗವನ್ನು ಶ್ರುತಿಯು ಹೇಳುತ್ತದೆ. |
| **ಏಕವಿಗ್ಂಶಃ ಪ್ರತಿಷ್ಠಾ ವೈ ಪ್ರತಿಷ್ಠಿತ್ಯೈ** | ಏಕವಿಂಶಸ್ತೋಮವು ಸರ್ವಸ್ತೋಮಪ್ರತಿಷ್ಠಾರೂಪವಾಗಿದೆ. ಈ ಮಂತ್ರಪಠಣವು ಯಜಮಾನನ ಪ್ರತಿಷ್ಠೆಗೆ ಕಾರಣವಾಗುತ್ತದೆ. |
| **ಇಂದ್ರಸ್ಯ ಭಾಗಃ ಅಸಿ ಇತಿ ಉತ್ತರತಃ** ಉಪದಧಾತಿ | **'ಇಂದ್ರಸ್ಯ ಭಾಗೋಽಸಿ'** ಎಂಬ ಮಂತ್ರದಿಂದ ಚತುರ್ಥ ಚಿತ್ಯಗ್ನಿಯ ಉತ್ತರಭಾಗದಲ್ಲಿ ಅಧ್ವರ್ಯುವು ಅಕ್ಷ್ಣಯಾಸ್ತೋಮೀಯೇಷ್ಟಕೆಯನ್ನು ಉಪಧಾನ ಮಾಡಬೇಕು. |
| **ಇಂದ್ರಃ ಓಜಃ ವೈ** | ಇಂದ್ರನು ಬಲವಂತನಾದುದರಿಂದ ಓಜಃಸ್ವರೂಪನು. |
| **ವಿಷ್ಣುಃ ಓಜಃ ಕ್ಷತ್ರಮ್ ಓಜಃ** | ವಿಷ್ಣುವೂ ಓಜಸ್ಸೇ. ಕ್ಷತ್ರಿಯಜಾತಿಯೂ ಓಜೋರೂಪವೇ. |

–ಮೋಜಃ ಪಂಚದಶ[ಪಂಚದಶಃ(೧೭)]ಓಜ ಏವೋತ್ತರತೋ ಧತ್ತೇ
ತಸ್ಮಾದುತ್ತರತೋಽಭಿಪ್ರಯಾಯೀ ಜಯತಿ ವಸೂನಾಂ ಭಾಗೋಽಸೀತಿ
ಪುರಸ್ತಾದುಪದಧಾತಿ ಯಜ್ಞಮುಖಂ ವೈ ವಸವೋ ಯಜ್ಞಮುಖಗ್ಂ ರುದ್ರಾ
ಯಜ್ಞಮುಖಂ ಚತುರ್ವಿಗ್ಂಶೋ

---

ಓಜಃ । ಪಂಚದಶ ಇತಿ ಪಂಚ–ದಶಃ । (೧೭) । ಓಜಃ । ಏವ । ಉತ್ತರತ ಇತ್ಯುತ್–ತರತಃ । ಧತ್ತೇ । ತಸ್ಮಾತ್ । ಉತ್ತರತೋಽಭಿಪ್ರಯಾಯೀತ್ಯುತ್ತರತಃ–ಅಭಿಪ್ರಯಾಯೀ । ಜಯತಿ । ವಸೂನಾಮ್ । ಭಾಗಃ । ಅಸಿ । ಇತಿ । ಪುರಸ್ತಾತ್ । ಉಪೇತಿ । ದಧಾತಿ । ಯಜ್ಞಮುಖಮಿತಿ ಯಜ್ಞ–ಮುಖಮ್ । ವೈ । ವಸವಃ । ಯಜ್ಞಮುಖಮಿತಿ ಯಜ್ಞ–ಮುಖಮ್ । ರುದ್ರಾಃ । ಯಜ್ಞಮುಖಮಿತಿ ಯಜ್ಞ–ಮುಖಮ್ । ಚತುರ್ವಿಗ್ಂಶ ಇತಿ ಚತುಃ–ವಿಗ್ಂಶಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಪಂಚದಶಃ ಓಜಃ** | ಪಂಚದಶಸ್ತೋಮವೂ ಓಜಃಸ್ವರೂಪವೇ. |
| **ಉತ್ತರತಃ ಓಜಃ ಏವ ಧತ್ತೇ** | (ಓಜಃಸ್ವರೂಪರಾದ ಇಂದ್ರಾದಿಗಳನ್ನು ಉಪಧಾನ ಮಾಡಿದವನಾಗಿ)ಉತ್ತರದಿಕ್ಕಿನಲ್ಲಿ ಓಜಃಸ್ಥಾಪನೆಯನ್ನು ಮಾಡಿದವನಾಗುವನು. |
| **ತಸ್ಮಾತ್ ಉತ್ತರತಃ ಅಭಿಪ್ರಯಾಯೀ ಜಯತಿ** | ಆದುದರಿಂದ ಉತ್ತರದಿಕ್ಕಿನೆಡೆಗೆ ಹೋಗುವವನು (ತೀರ್ಥಯಾತ್ರಾದಿಪುಣ್ಯವನ್ನು ಗಳಿಸಿ ಸ್ವರ್ಗವನ್ನು ಹೊಂದುವನು) ಅಂತೆಯೇ ಯಜಮಾನನೂ ಹೊಂದುವನು. |
| **ವಸೂನಾಮ್ ಭಾಗಃ ಅಸಿ ಇತಿ ಪುರಸ್ತಾತ್ ಉಪದಧಾತಿ** | 'ವಸೂನಾಂ ಭಾಗೋಽಸಿ'ಎಂಬ ಮಂತ್ರದಿಂದ ಚತುರ್ಥ ಚಿತಿಯ ಪೂರ್ವಭಾಗದಲ್ಲಿ ಅಕ್ಷ್ಣಯಾ ಸ್ತೋಮೀಯೇಷ್ಟಕೆಯನ್ನು ಉಪಧಾನ ಮಾಡುತ್ತಾನೆ./ಮಾಡಬೇಕು. |
| **ವಸವಃ ಯಜ್ಞಮುಖಮ್ ವೈ** | ವಸುಗಳು ಯಜ್ಞಮುಖವೆನಿಸಿದ್ದಾರೆ. |
| **ರುದ್ರಾಃ ಯಜ್ಞಮುಖಮ್** | ರುದ್ರರೂ ಯಜ್ಞಮುಖರೇ. |
| **ಚತುರ್ವಿಗ್ಂಶಃ ಯಜ್ಞಮುಖಮ್** | ಚತುರ್ವಿಂಶಸ್ತೋಮವೂ ಯಜ್ಞಮುಖವೇ. |

ಯಜ್ಞಮುಖಮೇವ ಪುರಸ್ತಾದ್ವಿಯಾತಯತ್ಯಾದಿತ್ಯಾನಾಂ ಭಾಗೋಽಸೀತಿ ದಕ್ಷಿಣತೋಽನ್ನಂ ವಾ ಆದಿತ್ಯಾ ಅನ್ನಂ ಮರುತೋಽನ್ನಂ ಗರ್ಭಾ ಅನ್ನಂ ಪಂಚವಿಗ್ಂಶೋಽನ್ನಮೇವ ದಕ್ಷಿಣತೋ ಧತ್ತೇ

---

ಯಜ್ಞಮುಖಮಿತಿ ಯಜ್ಞ–ಮುಖಮ್ । ಏವ । ಪುರಸ್ತಾತ್ । ವೀತಿ । ಯಾತಯತಿ । ಆದಿತ್ಯಾನಾಮ್ । ಭಾಗಃ । ಅಸಿ । ಇತಿ । ದಕ್ಷಿಣತಃ । ಅನ್ನಮ್ । ವೈ । ಆದಿತ್ಯಾಃ । ಅನ್ನಮ್ । ಮರುತಃ । ಅನ್ನಮ್ । ಗರ್ಭಾಃ । ಅನ್ನಮ್ । ಪಂಚವಿಗ್ಂಶ ಇತಿ ಪಂಚ–ವಿಗ್ಂಶಃ । ಅನ್ನಮ್ । ಏವ । ದಕ್ಷಿಣತಃ । ಧತ್ತೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯಜ್ಞಮುಖಮ್ ಏವ ಪುರಸ್ತಾತ್ ವಿಯಾತಯತಿ** | (ಈ ಇಷ್ಟಕೋಪಧಾನದಿಂದ ಅಧ್ವರ್ಯುವು) ಯಜ್ಞ ಮುಖವನ್ನೇ ಚತುರ್ಥಚಿತ್ಯಗ್ನಿಯ ಪೂರ್ವಭಾಗದಲ್ಲಿ ಪ್ರವರ್ತಿಸಿದವನಾಗುತ್ತಾನೆ. |
| **ಆದಿತ್ಯಾನಾಮ್ ಭಾಗಃ ಅಸಿ ಇತಿ ದಕ್ಷಿಣತಃ** ಉಪದಧಾತಿ | 'ಆದಿತ್ಯಾನಾಂ ಭಾಗೋಽಸಿ' ಎಂಬ ಮಂತ್ರದಿಂದ ಚತುರ್ಥಚಿತ್ಯಗ್ನಿಯ ದಕ್ಷಿಣದಿಕ್ಕಿನಲ್ಲಿ ಅಕ್ಷ್ಣಯಾ ಸ್ತೋಮೀಯೇಷ್ಟಕೆಯನ್ನು ಉಪಧಾನ ಮಾಡಬೇಕು. |
| **ಅನ್ನಮ್ ವೈ ಆದಿತ್ಯಾಃ** | ಆದಿತ್ಯರು ಮಳೆಗೆ ಕಾರಣರಾಗಿ ಸಸ್ಯದ ಮೂಲಕ ವಾಗಿ ಅನ್ನಕ್ಕೆ ಕಾರಣರಾಗಿ ಅನ್ನವಾಗಿರುತ್ತಾರೆ. |
| **ಮರುತಃ ಅನ್ನಮ್** | ದೇವವೈಶ್ಯರಾದ ಮರುದ್ದೇವತೆಗಳು (ಭೂಲೋಕ ದಲ್ಲಿ ಅನ್ನೋತ್ಪಾದಕರಾದ ವೈಶ್ಯರಂತೆ) ಅನ್ನವನ್ನು ಉತ್ಪಾದಿಸಿ ಅನ್ನವೆನಿಸಿಕೊಳ್ಳುತ್ತಾರೆ. |
| **ಗರ್ಭಾಃ ಅನ್ನಮ್** | ಗರ್ಭವೂ ಅನ್ನಕಾರ್ಯವಾದುದರಿಂದ ಅನ್ನವೆನಿಸಿದೆ. |
| **ಪಂಚವಿಗ್ಂಶಃ ಅನ್ನಮ್** | ಪಂಚವಿಂಶಸ್ತೋಮವೂ ಅನ್ನಹೇತುವೆಂದು ಪ್ರಸಿದ್ಧ ವಾಗಿದೆ. |
| **ಅನ್ನಮ್ ಏವ ದಕ್ಷಿಣತಃ ಧತ್ತೇ** | ಈ ಇಷ್ಟಕೋಪಧಾನದಿಂದ ಅಧ್ವರ್ಯುವು ಅನ್ನ ವನ್ನು ದಕ್ಷಿಣದಿಕ್ಕಿನಲ್ಲಿ ಸ್ಥಾಪಿಸಿದವನಾಗುತ್ತಾನೆ. |

---

ಈ ಅನುವಾಕದ ಮಂತ್ರಗಳಲ್ಲಿ **'ಜನಿತ್ರಮ್...**ಮುಂತಾದ ಉತ್ತರಭಾಗವನ್ನೂ ಅನುಷ್ಠಾನದಲ್ಲಿ ಹೇಳಬೇಕು. ಬ್ರಾಹ್ಮಣದಲ್ಲಿ ಅದರ ವಿವರಣೆಯೂ ಇದೆ.

ತಸ್ಮಾದ್ದಕ್ಷಿಣೇನಾನ್ನಮದ್ಯತೇಽದಿತ್ಯೈ ಭಾಗೋಽ[ಭಾಗಃ(೧೮)ಅಸೀತಿ]ಸೀತಿ ಪಶ್ಚಾತ್ಪ್ರತಿಷ್ಠಾ ವಾ ಅದಿತಿಃ ಪ್ರತಿಷ್ಠಾ ಪೂಷಾ ಪ್ರತಿಷ್ಠಾ ತ್ರಿಣವಃ ಪ್ರತಿಷ್ಠಿತ್ಯೈ ದೇವಸ್ಯ ಸವಿತುರ್ಭಾಗೋಽಸೀತ್ಯುತ್ತರತೋ

---

ತಸ್ಮಾತ್ । ದಕ್ಷಿಣೇನ । ಅನ್ನಮ್ । ಅದ್ಯತೇ । ಅದಿತ್ಯೈ । ಭಾಗಃ । (೧೮) । ಅಸಿ । ಇತಿ । ಪಶ್ಚಾತ್ । ಪ್ರತಿಷ್ಠೇತಿ ಪ್ರತಿ–ಸ್ಥಾ । ವೈ । ಅದಿತಿಃ । ಪ್ರತಿಷ್ಠೇತಿ ಪ್ರತಿ–ಸ್ಥಾ । ಪೂಷಾ । ಪ್ರತಿಷ್ಠೇತಿ ಪ್ರತಿ–ಸ್ಥಾ । ತ್ರಿಣವ ಇತಿ ತ್ರಿ–ನವಃ । ಪ್ರತಿಷ್ಠಿತ್ಯಾ ಇತಿ ಪ್ರತಿ–ಸ್ಥಿತ್ಯೈ । ದೇವಸ್ಯ । ಸವಿತುಃ । ಭಾಗಃ । ಅಸಿ । ಇತಿ । ಉತ್ತರತ ಇತ್ಯುತ್–ತರತಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ತಸ್ಮಾತ್ ದಕ್ಷಿಣೇನ ಅನ್ನಮ್ ಅದ್ಯತೇ** | ಆದುದರಿಂದ ಬಲಗೈಯಿಂದ ಅನ್ನವು ತಿನ್ನಲ್ಪಡುತ್ತದೆ. |
| **ಅದಿತ್ಯೈ ಭಾಗಃ ಅಸಿ ಇತಿ ಪಶ್ಚಾತ್** ಉಪದಧಾತಿ | **'ಅದಿತ್ಯೈ ಭಾಗೋಽಸಿ'** ಎಂಬ ಮಂತ್ರದಿಂದ ಚತುರ್ಥ ಚಿತ್ಯಗ್ನಿಯ ಪಶ್ಚಿಮಭಾಗದಲ್ಲಿ ಅಧ್ವರ್ಯುವು ಅಕ್ಷ್ಣಯಾಸ್ತೋಮೀಯೇಷ್ಟಕೆಯನ್ನು ಉಪಧಾನ ಮಾಡಬೇಕು. |
| **ಅದಿತಿಃ ಪ್ರತಿಷ್ಠಾ ವೈ** | ಈ ಪೃಥಿವಿಯು ಸರ್ವನಿವಾಸಹೇತುವಾಗಿ ಪ್ರತಿಷ್ಠೆಯಾಗಿದೆ. |
| **ಪೂಷಾ ಪ್ರತಿಷ್ಠಾ** | ಪೋಷಕನಾದ ಪೂಷದೇವನೂ ಪ್ರಕೃಷ್ಟಸ್ಥಿತಿಗೆ ಕಾರಣನಾಗಿ ಪ್ರತಿಷ್ಠೆಯಾಗಿರುತ್ತಾನೆ. |
| **ತ್ರಿಣವಃ ಪ್ರತಿಷ್ಠಾ** | ತ್ರಿಣವಸ್ತೋಮವೂ ಶಾಸ್ತ್ರಸಿದ್ಧಪ್ರತಿಷ್ಠಾರೂಪವಾಗಿದೆ. |
| **ಪ್ರತಿಷ್ಠಿತ್ಯೈ** | ಇದರಿಂದ ಈ ಇಷ್ಟಕೋಪಧಾನವು ಪ್ರತಿಷ್ಠೆಗೆ ಕಾರಣವಾಗುತ್ತದೆ. |
| **ದೇವಸ್ಯ ಸವಿತುಃ ಭಾಗಃ ಅಸಿ ಉತ್ತರತಃ** ಉಪದಧಾತಿ | 'ದೇವಸ್ಯ ಸವಿತುರ್ಭಾಗೋಽಸಿ' ಎಂಬ ಮಂತ್ರದಿಂದ ಚತುರ್ಥಚಿತ್ಯಗ್ನಿಯ ಉತ್ತರಭಾಗದಲ್ಲಿ ಅಕ್ಷ್ಣಯಾಸ್ತೋಮೀಯೇಷ್ಟಕೆಯನ್ನು ಉಪಧಾನ ಮಾಡುತ್ತಾನೆ. |

---

ಶ್ರುತಿಯಲ್ಲಿ **'ವಸೂನಾಂ ಪ್ರಾತಃಸವನಮ್' [ಛಾಂ. ಉ. 2. 23. 1]** ಎಂದು ಹೇಳಿರುವುದರಿಂದ ಪ್ರಾತಃಸವನವು ಮೊದಲನೆಯದಾಗಿರುವುದರಿಂದ ವಸುಗಳು ಯಜ್ಞಮುಖಿಗಳೆನ್ನಿಸಿಕೊಳ್ಳುತ್ತಾರೆ. ದ್ವಾದಶಾಹಮಹಾಕ್ರತುವಿನಲ್ಲಿ

ಬ್ರಹ್ಮ ವೈ ದೇವಸ್ಸವಿತಾ ಬ್ರಹ್ಮ ಬೃಹಸ್ಪತಿರ್ಬ್ರಹ್ಮ ಚತುಷ್ಟೋಮೋ
ಬ್ರಹ್ಮವರ್ಚಸಮೇವೋತ್ತರತೋ ಧತ್ತೇ ತಸ್ಮಾದುತ್ತರೋಽರ್ಧೋ
ಬ್ರಹ್ಮವರ್ಚಸಿತರಸ್ಸಾವಿತ್ರವತೀ ಭವತಿ ಪ್ರಸೂತ್ಯೈ೮

---

ಬ್ರಹ್ಮ । ವೈ । ದೇವಃ । ಸವಿತಾ । ಬ್ರಹ್ಮ । ಬೃಹಸ್ಪತಿಃ । ಬ್ರಹ್ಮ । ಚತುಷ್ಟೋಮ ಇತಿ ಚತುಃ-ಸ್ತೋಮಃ । ಬ್ರಹ್ಮವರ್ಚಸಮಿತಿ ಬ್ರಹ್ಮ-ವರ್ಚಸಮ್ । ಏವ । ಉತ್ತರತ ಇತ್ಯುತ್-ತರತಃ । ಧತ್ತೇ । ತಸ್ಮಾತ್ । ಉತ್ತರ ಇತ್ಯುತ್-ತರಃ । ಅರ್ಧಃ । ಬ್ರಹ್ಮವರ್ಚಸಿತರ ಇತಿ ಬ್ರಹ್ಮವರ್ಚಸಿ-ತರಃ । ಸಾವಿತ್ರವತೀತಿ ಸಾವಿತ್ರ-ವತೀ । ಭವತಿ । ಪ್ರಸೂತ್ಯಾ ಇತಿ ಪ್ರ-ಸೂತ್ಯೈ೮ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಸವಿತಾ ದೇವಃ ಬ್ರಹ್ಮ ವೈ** | ಸವಿತೃದೇವನು (ಸಂಧ್ಯಾವಂದನಾದಿಗಳಲ್ಲಿ ಬ್ರಾಹ್ಮಣರಿಂದ ಉಪಾಸ್ಯನಾಗಿರುವುದರಿಂದ) ಬ್ರಹ್ಮಸ್ವರೂಪನು. |
| **ಬೃಹಸ್ಪತಿಃ ಬ್ರಹ್ಮ** | (ದೇವತಾಗುರುವಾದ) ಬೃಹಸ್ಪತಿಯು (ಬ್ರಾಹ್ಮಣಜಾತ್ಯಭಿಮಾನಿದೇವತೆಯೂ ಆದುದರಿಂದ) ಬ್ರಹ್ಮಸ್ವರೂಪನಾಗಿದ್ದಾನೆ. |
| **ಚತುಷ್ಟೋಮಃ ಬ್ರಹ್ಮ** | ಚತುಷ್ಟೋಮಸ್ತೋಮವು ಶಾಸ್ತ್ರಸಿದ್ಧವಾದ ಬ್ರಹ್ಮಸ್ವರೂಪವಾಗಿದೆ. |
| **ಬ್ರಹ್ಮವರ್ಚಸಮ್ ಏವ ಉತ್ತರತಃ ಧತ್ತೇ** | ಈ ಇಷ್ಟಕೋಪಧಾನದಿಂದ ಉತ್ತರದಿಕ್ಕಿನಲ್ಲಿ ಬ್ರಹ್ಮವರ್ಚಸವನ್ನು ಸ್ಥಾಪಿಸಿದವನಾಗುತ್ತಾನೆ. |
| **ತಸ್ಮಾತ್ ಉತ್ತರಃ ಅರ್ಧಃ ಬ್ರಹ್ಮವರ್ಚಸಿತರಃ** | ಆದುದರಿಂದ ಭಾರತದೇಶದಲ್ಲಿ ವಿಂಧ್ಯಪರ್ವತದ ಉತ್ತರಭಾಗವು ಹೆಚ್ಚಾದ ಬ್ರಹ್ಮವರ್ಚಸವನ್ನು ಹೊಂದಿದೆ. ಬ್ರಹ್ಮತೇಜಸ್ಸುಳ್ಳವರ ವಾಸಸ್ಥಾನವಾಗಿದೆ. |
| **ಸಾವಿತ್ರವತೀ ಭವತಿ ಪ್ರಸೂತ್ಯೈ೮** | ಸವಿತೃದೇವತಾಕವಾದ ಮಂತ್ರದಿಂದ ಉಪಧಾನ ಮಾಡಲ್ಪಡುವ ಈ ಇಷ್ಟಕೆಯು ಸವಿತೃದೇವನ ಅನುಮತಿಗೆ ಕಾರಣವಾಗುತ್ತದೆ. |

---

ಎಂಟನೆಯ ಅಹಸ್ಸಿನಲ್ಲಿ ಚತುಶ್ಚತ್ವಾರಿಂಶಸ್ತೋಮಾದಿಗಳಿಗೆ ಚತುರ್ವಿಂಶಸ್ತೋಮವು ಮೊದಲನೆಯದಾದುದರಿಂದ ಯಜ್ಞಮುಖವಾಗಿದೆ.

ತಸ್ಮಾದ್ಬ್ರಾಹ್ಮಣಾನಾಮುದೀಚೀ ಸನಿಃ ಪ್ರಸೂತಾ ಧರ್ತ್ರಶ್ಚತುಷ್ಟೋಮ ಇತಿ ಪುರಸ್ತಾದುಪದಧಾತಿ ಯಜ್ಞಮುಖಂ ವೈ ಧರ್ತ್ರೋ[ಧರ್ತ್ರಃ(೧೯)ಯಜ್ಞಮುಖಂ]

ತಸ್ಮಾತ್ । ಬ್ರಾಹ್ಮಣಾನಾಮ್ । ಉದೀಚೀ । ಸನಿಃ । ಪ್ರಸೂತೇತಿ ಪ್ರ-ಸೂತಾ । ಧರ್ತ್ರಃ । ಚತುಷ್ಟೋಮ ಇತಿ ಚತುಃ-ಸ್ತೋಮಃ । ಇತಿ । ಪುರಸ್ತಾತ್ । ಉಪೇತಿ । ದಧಾತಿ । ಯಜ್ಞಮುಖಮಿತಿ ಯಜ್ಞ-ಮುಖಮ್ । ವೈ । ಧರ್ತ್ರಃ । (೧೯) ।

| ಬ್ರಾಹ್ಮಣಭಾಗ | ವಿವರಣೆ |
|---|---|
| **ತಸ್ಮಾತ್ ಬ್ರಾಹ್ಮಣಾನಾಮ್ ಉದೀಚೀ ಸನಿಃ ಪ್ರಸೂತಾ** | (ಬ್ರಹ್ಮರೂಪನಾದ ಸವಿತೃದೇವತೆಗೆ ಸಂಬಂಧಿಸಿದ ಮಂತ್ರದಿಂದ ಉತ್ತರದಿಕ್ಕಿನಲ್ಲಿ ಇಷ್ಟಕೋಪಧಾನವು ವಿಹಿತವಾದುದರಿಂದ) ಉತ್ತರದಿಕ್ಕು ಬ್ರಾಹ್ಮಣರಿಗೆ ಯಜ್ಞಭಿಕ್ಷಾದಿಗಳಿಗೆ ಪ್ರಶಸ್ತವೆಂದು ಹೇಳಲ್ಪಟ್ಟಿದೆ. |
| ***ಧರ್ತ್ರಃ ಚತುಷ್ಟೋಮಃ ಇತಿ ಪುರಸ್ತಾತ್ ಉಪದಧಾತಿ** | **'ಧರ್ತ್ರಶ್ಚತುಷ್ಟೋಮಃ'** ಎಂಬ ಮಂತ್ರದಿಂದ ಅಧ್ವರ್ಯುವು ಚತುರ್ಥಚಿತ್ಯಗ್ನಿಯ ಪೂರ್ವದಿಕ್ಕಿನಲ್ಲಿ ಅಕ್ಷ್ಣಯಾಸ್ತೋಮೀಯೇಷ್ಟಕೆಯನ್ನು ಉಪಧಾನ ಮಾಡಬೇಕು. |
| **ಧರ್ತ್ರಃ ಯಜ್ಞಮುಖಮ್ ವೈ** | ಅಗ್ನಿಷ್ಟೋಮವು ಪ್ರಥಮಯಜ್ಞವಾಗಿ ಧಾರಕವಾದುದರಿಂದ ಯಜ್ಞಮುಖವೆನಿಸಿದೆ. |

'ರುತಂ=ಶಬ್ದಮ್=ಮಂತ್ರರೂಪಮ್; ದ್ರಾವಯಂತಿ=ಪ್ರವರ್ತಯಂತಿ (ಮಂತ್ರವು ಹೊರಡುವಂತೆ ಮಾಡುವವರು) ಇತಿ ರುದ್ರಾಃ' ಎಂಬ ವಿವರಣೆಯಂತೆ ಮಂತ್ರಗಳಿಂದಲೇ ಯಜ್ಞವು ಪ್ರಾರಂಭವಾಗುವುದರಿಂದ ರುದ್ರರನ್ನು ಯಜ್ಞಮುಖರೆಂದು ಗೌಣವಾಗಿ ಹೇಳಲಾಗಿದೆ.

ಆರ್ಯಾವರ್ತದಲ್ಲಿ (ವಿಂಧ್ಯದ ಉತ್ತರಭಾಗದಲ್ಲಿ) ಪರಿಶುದ್ಧಬ್ರಾಹ್ಮಣರಿರುವುದರಿಂದ ಅಲ್ಲಿ ಪ್ರತಿಗ್ರಹವು ಶ್ರೇಷ್ಠವಾದುದು. ಇದು ಶ್ರುತಿಯು ಹೇಳುವ ಉಪಧಾನಪ್ರಶಂಸಾರ್ಥವಾದುದಾಗಿದೆ. ಎಲ್ಲೆಡೆಯಲ್ಲಿಯೂ ಪರಿಶುದ್ಧ ಬ್ರಾಹ್ಮಣರು ಇರುತ್ತಾರೆ.

* **'ಆಶುಸ್ತ್ರಿವೃತ್'** ಅನುವಾಕದ [ತೈ. ಸಂ. 4.3.8] ಹದಿನೇಳು-ಹದಿನೆಂಟನೆಯ ಮಂತ್ರಗಳ ವಿನಿಯೋಗವು **'ದೇವಾ ವೈ ಯತ್'** [ತೈ. ಸಂ. 5.3.3] ಎಂಬ ಹಿಂದಿನ ಅನುವಾಕದಲ್ಲಿ ಇಲ್ಲ. ಅವುಗಳಲ್ಲಿ **'ಧರ್ತ್ರಶ್ಚತುಷ್ಟೋಮಃ'** ಎಂಬುದರ ವಿನಿಯೋಗವು ಇಲ್ಲಿದೆ. **'ವಿವರ್ತೋಽಷ್ಟಾಚತ್ವಾರಿಂಶಃ'** ಎಂಬ ಹದಿನೇಳನೆಯ ಮಂತ್ರದ ವಿನಿಯೋಗವು ಈ ಅನುವಾಕದಲ್ಲಿಯೇ ಮುಂದೆ ಇದೆ. ಅಕ್ಷ್ಣಯಾಸ್ತೋಮೀಯೇಷ್ಟಕೆಗಳಾದುದರಿಂದ ಈ ರೀತಿ ಇದೆ.

ಯಜ್ಞಮುಖಂ ಚತುಷ್ಟೋಮೋ ಯಜ್ಞಮುಖಮೇವ ಪುರಸ್ತಾದ್ವಿಯಾತಯತಿ

ಯಾವಾನಾಂ ಭಾಗೋಽಸೀತಿ ದಕ್ಷಿಣತೋ ಮಾಸಾ ವೈ ಯಾವಾ

ಅರ್ಧಮಾಸಾ ಅಯಾವಾಸ್ತಸ್ಮಾದ್ದಕ್ಷಿಣಾವೃತೋ ಮಾಸಾ

---

ಯಜ್ಞಮುಖಮಿತಿ ಯಜ್ಞ–ಮುಖಮ್ । ಚತುಷ್ಟೋಮ ಇತಿ ಚತುಃ–ಸ್ತೋಮಃ । ಯಜ್ಞಮುಖಮಿತಿ ಯಜ್ಞ–ಮುಖಮ್ । ಏವ । ಪುರಸ್ತಾತ್ । ವೀತಿ । ಯಾತಯತಿ । ಯಾವಾನಾಮ್ । ಭಾಗಃ । ಅಸಿ । ಇತಿ । ದಕ್ಷಿಣತಃ । ಮಾಸಾಃ । ವೈ । ಯಾವಾಃ । ಅರ್ಧಮಾಸಾ ಇತ್ಯರ್ಧ–ಮಾಸಾಃ । ಅಯಾವಾಃ । ತಸ್ಮಾತ್ । ದಕ್ಷಿಣಾವೃತ ಇತಿ ದಕ್ಷಿಣಾ–ಆವೃತಃ । ಮಾಸಾಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಚತುಷ್ಟೋಮಃ ಯಜ್ಞಮುಖಮ್** | (ಅಗ್ನಿಷ್ಟೋಮದಲ್ಲಿ ಮೊದಲನೆಯದಾದ ತ್ರಿವೃತ್ ಸ್ತೋಮವನ್ನು ಒಳಗೊಂಡಿರುವ) ಚತುಷ್ಟೋಮವು ತ್ರಿವೃತ್, ಪಂಚದಶ, ಸಪ್ತದಶ ಮತ್ತು ಏಕವಿಂಶ ಸ್ತೋಮಗಳನ್ನು ಒಳಗೊಂಡಿರುವುದರಿಂದ ಯಜ್ಞ ಮುಖವೆನಿಸಿದೆ. |
| **ಯಜ್ಞಮುಖಮ್ ಏವ ಪುರಸ್ತಾತ್ ವಿಯಾತಯತಿ** | ಈ ಮಂತ್ರದಿಂದ ಉಪಧಾನವನ್ನು ಮಾಡುವುದರಿಂದ ಅಧ್ವರ್ಯುವು ಯಜ್ಞಮುಖವನ್ನೇ ಪ್ರಸಾರ ಮಾಡಿದ ವನಾಗುತ್ತಾನೆ. |
| **ಯಾವಾನಾಮ್ ಭಾಗಃ ಅಸಿ ಇತಿ ದಕ್ಷಿಣತಃ** ಉಪದಧಾತಿ | **'ಯಾವಾನಾಂ ಭಾಗೋಽಸಿ'** ಎಂಬ ಮಂತ್ರದಿಂದ ಚತುರ್ಥಚಿತ್ಯಗ್ನಿಯ ದಕ್ಷಿಣದಲ್ಲಿ ಅಧ್ವರ್ಯುವು ಅಕ್ಷ್ಣಯಾಸ್ತೋಮೀಯೇಷ್ಟಕೆಯನ್ನು ಉಪಧಾನ ಮಾಡಬೇಕು. |
| **ಮಾಸಾಃ ವೈ ಯಾವಾಃ** | ಪುನಃ ಪುನಃ ಬಂದು ಹೋಗುವುದರಿಂದ ಮಾಸಗಳೇ ಯಾವಗಳೆನಿಸಿವೆ. |
| **ಅರ್ಧಮಾಸಾಃ ಅಯಾವಾಃ** | ಅರ್ಧಮಾಸಗಳು/ಪಕ್ಷಗಳು ಅಯಾವಗಳೆನಿಸಿವೆ. |
| **ತಸ್ಮಾತ್ ಮಾಸಾಃ ದಕ್ಷಿಣಾವೃತಃ** | ಸೂರ್ಯನು ಪ್ರದಕ್ಷಿಣರೂಪದಲ್ಲಿ ಸುತ್ತುವುದರಿಂದ ಉಂಟಾಗುವ ಮಾಸಗಳು **'ದಕ್ಷಿಣಾವೃತ್'** ಗಳೆನಿಸಿವೆ. |

# ಅನ್ನಂ ವೈ ಯಾವಾ ಅನ್ನಂ ಪ್ರಜಾ ಅನ್ನಮೇವ ದಕ್ಷಿಣತೋ ಧತ್ತೇ ತಸ್ಮಾದ್ದಕ್ಷಿಣೇನಾನ್ನಮದ್ಯತ ಋಭೂಣಾಂ ಭಾಗೋಽಸೀತಿ ಪಶ್ಚಾತ್ಪ್ರತಿಷ್ಠಿತ್ಯೈಲ

---

ಅನ್ನಮ್ । ವೈ । ಯಾವಾಃ । ಅನ್ನಮ್ । ಪ್ರಜಾ ಇತಿ ಪ್ರ-ಜಾಃ । ಅನ್ನಮ್ । ಏವ । ದಕ್ಷಿಣತಃ । ಧತ್ತೇ । ತಸ್ಮಾತ್ । ದಕ್ಷಿಣೇನ । ಅನ್ನಮ್ । ಅದ್ಯತೇ । ಋಭೂಣಾಮ್ । ಭಾಗಃ । ಅಸಿ । ಇತಿ । ಪಶ್ಚಾತ್ । ಪ್ರತಿಷ್ಠಿತ್ಯಾ ಇತಿ ಪ್ರತಿ-ಸ್ಥಿತ್ಯೈಲ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯಾವಾಃ ಅನ್ನಮ್ ವೈ** | 'ಯಾವ' ಶಬ್ದದಿಂದ ಹೇಳಲ್ಪಡುವ ಮಾಸಗಳು ಕಾಲ ರೂಪಗಳಾದುದರಿಂದ ಅನ್ನಪಾಕಕ್ಕೆ ಕಾರಣವಾಗಿ ಅನ್ನವೆನಿಸಿವೆ. |
| **ಅನ್ನಮ್ ಪ್ರಜಾಃ** | ಅನ್ನದಿಂದ ಪೋಷಿತರಾದ ಪ್ರಜೆಗಳು ಅನ್ನರೂಪ ರಾಗಿರುತ್ತಾರೆ. |
| **ಅನ್ನಮ್ ಏವ ದಕ್ಷಿಣತಃ ಧತ್ತೇ** | ಅನ್ನರೂಪವಾದ ಇಷ್ಟಕೆಯನ್ನು ದಕ್ಷಿಣದಲ್ಲಿ ಉಪ ಧಾನ ಮಾಡುವುದರಿಂದ ಅಧ್ವರ್ಯುವು ಅನ್ನವನ್ನು ದಕ್ಷಿಣದಲ್ಲಿ ಸ್ಥಾಪಿಸಿದವನಾಗುತ್ತಾನೆ. |
| **ತಸ್ಮಾತ್ ದಕ್ಷಿಣೇನ ಅನ್ನಮ್ ಅದ್ಯತೇ** | ಆದುದರಿಂದ ಬಲಗೈಯಿಂದ ಅನ್ನವು ತಿನ್ನಲ್ಪಡು ತ್ತದೆ. |
| **ಋಭೂಣಾಮ್ ಭಾಗಃ ಅಸಿ ಇತಿ ಪಶ್ಚಾತ್** ಉಪದಧಾತಿ | **'ಋಭೂಣಾಂ ಭಾಗೋಽಸಿ'** ಎಂಬ ಮಂತ್ರದಿಂದ ಚತುರ್ಥಚಿತ್ಯಗ್ನಿಯ ಪಶ್ಚಿಮದಿಕ್ಕಿನಲ್ಲಿ ಅಧ್ವರ್ಯುವು ಅಕ್ಷ್ಣಯಾಸ್ತೋಮೀಯೇಷ್ಟಕೆಯನ್ನು ಉಪಧಾನ ಮಾಡಬೇಕು. |
| **ಪ್ರತಿಷ್ಠಿತ್ಯೈಲ** | ಇದು ಯಜಮಾನನ ಪ್ರಕೃಷ್ಟಸ್ಥಿತಿಗೆ ಕಾರಣವಾ ಗುತ್ತದೆ. |

---

ಋಭುಶಬ್ದವು ದೇವತಾಸಾಮಾನ್ಯವಾಚಿಯಾಗಿದೆ. ಇಷ್ಟಕೆಯು ದೇವಹವಿಃಸ್ವರೂಪವಾಗಿದೆ. ಇಷ್ಟಕೆಯ ಉಪಧಾನ ದಿಂದ ದೇವತಾನುಗ್ರಹವುಂಟಾಗಿ ಯಜಮಾನನು ಪ್ರತಿಷ್ಠಿತನಾಗುವನು.

ವಿವರ್ತೋಽಷ್ಟಾಚತ್ವಾರಿಗ್ಂಶ ಇತ್ಯುತ್ತರತೋಽನಯೋರ್ಲೋಕಯೋ

ಸ್ಸವೀರ್ಯತ್ವಾಯ ತಸ್ಮಾದಿಮೌ ಲೋಕೌ ಸಮಾವದ್ವೀರ್ಯೌ[ವೀರ್ಯೌ(೨೦)]

ಯಸ್ಯ ಮುಖ್ಯವತೀಃ ಪುರಸ್ತಾದುಪಧೀಯಂತೇ ಮುಖ್ಯ ಏವ ಭವತ್ಯಾಸ್ಯ

ಮುಖ್ಯೋ ಜಾಯತೇ

---

ವಿವರ್ತ ಇತಿ ವಿ–ವರ್ತಃ । ಅಷ್ಟಾಚತ್ವಾರಿಗ್ಂಶ ಇತ್ಯಷ್ಟಾ–ಚತ್ವಾರಿಗ್ಂಶಃ । ಇತಿ । ಉತ್ತರತ ಇತ್ಯುತ್–ತರತಃ । ಅನಯೋಃ । ಲೋಕಯೋಃ । ಸವೀರ್ಯತ್ವಾಯೇತಿ ಸವೀರ್ಯ–ತ್ವಾಯ । ತಸ್ಮಾತ್ । ಇಮೌ । ಲೋಕೌ । ಸಮಾವದ್ವೀರ್ಯಾವಿತಿ ಸಮಾವತ್–ವೀರ್ಯೌ । (೨೦) । ಯಸ್ಯ । ಮುಖ್ಯವತೀರಿತಿ ಮುಖ್ಯ–ವತೀಃ । ಪುರಸ್ತಾತ್ । ಉಪಧೀಯಂತ ಇತ್ಯುಪ–ಧೀಯಂತೇ । ಮುಖ್ಯಃ । ಏವ । ಭವತಿ । ಏತಿ । ಅಸ್ಯ । ಮುಖ್ಯಃ । ಜಾಯತೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ವಿವರ್ತಃ ಅಷ್ಟಾಚತ್ವಾರಿಗ್ಂಶಃ ಇತಿ ಉತ್ತರತಃ** ಉಪದಧಾತಿ | **'ವಿವರ್ತೋಽಷ್ಟಾಚತ್ವಾರಿಗ್ಂಶಃ'** ಎಂಬ ಮಂತ್ರದಿಂದ ಉತ್ತರದಿಕ್ಕಿನಲ್ಲಿ ಅಧ್ವರ್ಯುವು ಅಕ್ಷ್ಣಯಾಸ್ತೋಮೀಯೇಷ್ಟಕೆಯನ್ನು ಉಪಧಾನ ಮಾಡಬೇಕು. |
| **ಅನಯೋಃ ಲೋಕಯೋಃ ಸವೀರ್ಯತ್ವಾಯ** | ಇದು ಮನುಷ್ಯಲೋಕ ಮತ್ತು ಸ್ವರ್ಗಲೋಕಗಳೆರಡೂ ಸಮಾನ ಬಲವುಳ್ಳವುಗಳಾಗಲು ಕಾರಣವಾಗುತ್ತದೆ. |
| **ತಸ್ಮಾತ್ ಇಮೌ ಲೋಕೌ ಸಮಾವದ್ವೀರ್ಯೌ** | ಈ ಇಷ್ಟಕೋಪಧಾನದಿಂದ ಮನುಷ್ಯಲೋಕ–ಸ್ವರ್ಗಲೋಕಗಳೆರಡೂ ಸಮಾನಬಲವುಳ್ಳವುಗಳಾಗುತ್ತವೆ. |
| **ಯಸ್ಯ ಮುಖ್ಯವತೀಃ ಪುರಸ್ತಾತ್ ಉಪಧೀಯಂತೇ** | (ಹಿಂದಿನ ಅರ್ಥವಾದವಾಕ್ಯಗಳಲ್ಲಿ ಯಾವ ಇಷ್ಟಕೆಗಳು ಮುಖವೆಂಬುದಾಗಿ ಸ್ತುತಿಸಲ್ಪಟ್ಟಿವೆಯೋ] ಅಂತಹ ಮುಖ್ಯವತಿಗಳಾದ ಇಷ್ಟಕೆಗಳು ಯಾವ ಯಜಮಾನನಿಗಾಗಿ ಪೂರ್ವದಿಕ್ಕಿನಲ್ಲಿ ಉಪಧಾನ ಮಾಡಲ್ಪಡುತ್ತವೆಯೋ |
| **ಮುಖ್ಯಃ ಏವ ಭವತಿ** | ಆ ಯಜಮಾನನು ಮುಖ್ಯನೇ ಆಗುತ್ತಾನೆ. |
| **ಅಸ್ಯ ಮುಖ್ಯಃ ಆ ಜಾಯತೇ** | ಅವನಿಗೆ ಮಗನೂ ಮುಖ್ಯನಾಗಿಯೇ ಹುಟ್ಟುತ್ತಾನೆ. |

ಯಸ್ಯಾನ್ನವತೀರ್ದಕ್ಷಿಣತೋಽತ್ತ್ಯನ್ನಮಾಸ್ಯಾನ್ನಾದೋ ಜಾಯತೇ ಯಸ್ಯ ಪ್ರತಿಷ್ಠಾವತೀಃ ಪಶ್ಚಾತ್ಪ್ರತ್ಯೇವ ತಿಷ್ಠತಿ ಯಸ್ಯೌಜಸ್ವತೀರುತ್ತರತ

---

ಯಸ್ಯ । ಅನ್ನವತೀರಿತ್ಯನ್ನ-ವತೀಃ । ದಕ್ಷಿಣತಃ । ಅತ್ತಿ । ಅನ್ನಮ್ । ಏತಿ । ಅಸ್ಯ । ಅನ್ನಾದ ಇತ್ಯನ್ನ-ಅದಃ । ಜಾಯತೇ । ಯಸ್ಯ । ಪ್ರತಿಷ್ಠಾವತೀರಿತಿ ಪ್ರತಿಷ್ಠಾ-ವತೀಃ । ಪಶ್ಚಾತ್ । ಪ್ರತೀತಿ । ಏವ । ತಿಷ್ಠತಿ । ಯಸ್ಯ । ಓಜಸ್ವತೀಃ । ಉತ್ತರತ ಇತ್ಯುತ್-ತರತಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯಸ್ಯ ಅನ್ನವತೀಃ ದಕ್ಷಿಣತಃ** ಉಪಧೀಯಂತೇ | ಯಾವ ಯಜಮಾನನಿಗಾಗಿ ದಕ್ಷಿಣದಿಕ್ಕಿನಲ್ಲಿ (ಅನ್ನವೆಂದು ಸ್ತುತಿಸಲ್ಪಟ್ಟಿರುವ) ಅನ್ನವತೀಷ್ಟಕೆಗಳು ಉಪಧಾನ ಮಾಡಲ್ಪಟ್ಟಿವೆಯೋ |
| (ಸಃ) **ಅನ್ನಮ್ ಅತ್ತಿ** | ಅವನು ಚೆನ್ನಾಗಿ ಅನ್ನವನ್ನು ಭುಂಜಿಸುತ್ತಾನೆ. |
| **ಅಸ್ಯ ಅನ್ನಾದಃ ಆ ಜಾಯತೇ** | ಅವನಿಗೆ ಅನ್ನವನ್ನು ಚೆನ್ನಾಗಿ ತಿನ್ನಬಲ್ಲ ಮಗನೂ ಜನಿಸುತ್ತಾನೆ. |
| **ಯಸ್ಯ ಪ್ರತಿಷ್ಠಾವತೀಃ ಪಶ್ಚಾತ್** ಉಪಧೀಯಂತೇ | ಯಾವ ಯಜಮಾನನಿಗಾಗಿ ಪಶ್ಚಿಮದಿಕ್ಕಿನಲ್ಲಿ (ಪ್ರತಿಷ್ಠೆಯೆಂದು ಸ್ತುತಿಸಲ್ಪಟ್ಟ) ಪ್ರತಿಷ್ಠಾವತೀಷ್ಟಕೆಗಳು ಉಪಧಾನ ಮಾಡಲ್ಪಟ್ಟಿವೆಯೋ |
| **ಪ್ರತಿ ತಿಷ್ಠತಿ ಏವ** | ಆತನು ಪ್ರತಿಷ್ಠಿತನೇ ಆಗುತ್ತಾನೆ. |
| **ಯಸ್ಯ ಓಜಸ್ವತೀಃ ಉತ್ತರತಃ** ಉಪಧೀಯಂತೇ | ಯಾವ ಯಜಮಾನನಿಗಾಗಿ ಉತ್ತರದಿಕ್ಕಿನಲ್ಲಿ (ಓಜಸ್ಸೆಂದು ಸ್ತುತಿಸಲ್ಪಟ್ಟಿರುವ) ಓಜಸ್ವತೀಷ್ಟಕೆಗಳು ಉಪಧಾನ ಮಾಡಲ್ಪಟ್ಟಿವೆಯೋ |

---

**ಸ್ತೋಮಗಳಲ್ಲಿ ಅಷ್ಟಾಚತ್ವಾರಿಂಶಸ್ತೋಮಕ್ಕಿಂತಲೂ ಹೆಚ್ಚಾದ ಸ್ತೋಮವಿಲ್ಲವಾದುದರಿಂದ ಅದು ಸರ್ವೋತ್ತಮವಾಗಿದೆ. ದಿಕ್ಕುಗಳಲ್ಲಿ ಉತ್ತರದಿಕ್ಕು ಶ್ರೇಷ್ಠವಾಗಿದೆ. ಉತ್ತಮವಾದ ಈ ಎರಡರ ಸಂಗಮದಿಂದ ಮನುಷ್ಯಲೋಕವು ವೀರ್ಯವತ್ತಾದುದಾಗಿದೆ. ದೇವತೆಗಳ ವಾಸಸ್ಥಾನವಾದ ಸ್ವರ್ಗವು ವೀರ್ಯವತ್ತಾಗಿದೆಯೆಂಬುದು ಪ್ರಸಿದ್ಧವೇ ಇದೆ. ಈ ಇಷ್ಟಕೋಪಧಾನದಿಂದ ಎರಡು ಲೋಕಗಳೂ ಸಮಬಲವುಳ್ಳವುಗಳಾದಂತಾಯಿತು. ಮನುಷ್ಯಲೋಕದ ಬಲವಂತಿಕೆಯು ಲಭಿಸಿದುದು ಈ ಇಷ್ಟಕೋಪಧಾನದಿಂದ ಎಂದು ತಾತ್ಪರ್ಯ.**

**ಮನುಷ್ಯಲೋಕವು ಪುಣ್ಯಾನುಷ್ಠಾನಕ್ಕೆ ಸ್ಥಾನ. ಸ್ವರ್ಗಲೋಕವು ಪುಣ್ಯಫಲಭೋಗಸ್ಥಾನ. ಹೀಗೆ ಈ ಎರಡು ಲೋಕಗಳೂ ಸಮಾನವೀರ್ಯವುಳ್ಳವುಗಳಾಗಿವೆ.**

ಓಜಸ್ವ್ಯೇವ ಭವತ್ಯಾಸ್ಯೌಜಸ್ವೀ ಜಾಯತೇಽರ್ಕೋ ವಾ ಏಷ ಯದಗ್ನಿಸ್ತಸ್ಯೈತ-

ತದೇವ ಸ್ತೋತ್ರಮೇತಚ್ಛಸ್ತ್ರಂ ಯದೇಷಾ ವಿಧಾ[(೨೧)ವಿಧೀಯತೇ]

ವಿಧೀಯತೇಽರ್ಕ ಏವ ತದರ್ಕ್ಯಮನು ವಿಧೀಯತೇ–

---

ಓಜಸ್ವೀ । ಏವ । ಭವತಿ । ಏತಿ । ಅಸ್ಯ । ಓಜಸ್ವೀ । ಜಾಯತೇ । ಅರ್ಕಃ । ವೈ । ಏಷಃ । ಯತ್ । ಅಗ್ನಿಃ । ತಸ್ಯ ।

ಏತತ್ । ಏವ । ಸ್ತೋತ್ರಮ್ । ಏತತ್ । ಶಸ್ತ್ರಮ್ । ಯತ್ । ಏಷಾ । ವಿಧೇತಿ ವಿ–ಧಾ । (೨೧) । ವಿಧೀಯತ ಇತಿ

ವಿ–ಧೀಯತೇ । ಅರ್ಕೇ । ಏವ । ತತ್ । ಅರ್ಕ್ಯಮ್ । ಅನು । ವೀತಿ । ಧೀಯತೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಓಜಸ್ವೀ ಏವ ಭವತಿ | ಆತನು ಬಲವಂತನೇ ಆಗುತ್ತಾನೆ. |
| ಅಸ್ಯ ಓಜಸ್ವೀ ಆ ಜಾಯತೇ | ಆತನಿಗೆ ಓಜಸ್ವಂತನಾದ ಮಗನೂ ಜನಿಸುತ್ತಾನೆ. |
| ಯತ್ ಅಗ್ನಿಃ ಏಷಃ ಅರ್ಕಃ ವೈ | ಯಾವ ಅಗ್ನಿಯು ಇರುವನೋ ಈತನು ಅರ್ಚನಾರ್ಹನು, (ಆ ಅರ್ಚನೆಗೆ ಅಂಗವಾಗಿ ಸ್ತೋತ್ರ–ಶಸ್ತ್ರಗಳು ಅವಶ್ಯ) (ಅದು ಪೂಜೆಯ ಕ್ರಮವಾಗಿದೆ) |
| ತಸ್ಯ ಏತತ್ ಏವ ಸ್ತೋತ್ರಮ್ | ಅಂತಹ ಅಗ್ನಿಗೆ (ಇಷ್ಟಕೋಪಧಾನದ ಒಂದನೆಯ ಅನುವಾಕದಿಂದ) ಇಷ್ಟಕೋಪಧಾನವೇ ಸಾಮವೇದದ ಸ್ತೋತ್ರವಾಗುತ್ತದೆ. |
| ಏತತ್ ಶಸ್ತ್ರಮ್ | (ಮುಂದಿನ ಅನುವಾಕದಿಂದ) ಇಷ್ಟಕೋಪಧಾನವನ್ನು ಮಾಡುವುದು ಋಗ್ವೇದದ ಶಸ್ತ್ರವಾಗುತ್ತದೆ. |
| ಯತ್ ಏಷಾ ವಿಧಾ ವಿಧೀಯತೇ | ಈ ರೀತಿಯಾಗಿ ವಕ್ರವಾಗಿ ಉಪಧಾನ ಮಾಡಬೇಕೆಂಬ ವಿಧಿಯೆಂಬುದು |
| ತತ್ ಅರ್ಕ್ಯಮ್ ಏವ ಅನು ಅರ್ಕೇ ವಿಧೀಯತೇ | ಪೂಜ್ಯನಾದ ಅಗ್ನಿಯನ್ನು ಉದ್ದೇಶಿಸಿ ಅರ್ಚನೆಯ ನಿಮಿತ್ತವಾಗಿ ವಿಧಿಸಲ್ಪಟ್ಟಿದೆ. |

---

ಇಲ್ಲಿ ಅಕ್ಷ್ಣಯಾಸ್ತೋಮೀಯೇಷ್ಟಕೆಗಳ ವಿಧಿ, ಆ ವಿಧಾನದ ಕುರಿತ ಆಖ್ಯಾನ, ಆ ರೀತಿಯ ಅರಿವಿನಿಂದ ಉಂಟಾಗುವ ಫಲ, ಅದರ ವಿಧಿಯ ಪ್ರಶಂಸೆಯೂ ಇದೆ. ವಿಧಿ–ಅರ್ಥವಾದಗಳೂ ಇವೆ.

–ऽತ್ತ್ಯನ್ನಮಾಸ್ಯಾನ್ನಾದೋ ಜಾಯತೇ ಯಸ್ಯೈಷಾ ವಿಧಾ ವಿಧೀಯತೇ ಯ

ಉ ಚೈನಾಮೇವಂ ವೇದ ಸೃಷ್ಟೀರುಪದಧಾತಿ ಯಥಾಸೃಷ್ಟಮೇವಾವರುಂಧೇ

---

ಅತ್ತಿ । ಅನ್ನಮ್ । ಏತಿ । ಅಸ್ಯ । ಅನ್ನಾದ ಇತ್ಯನ್ನ–ಅದಃ । ಜಾಯತೇ । ಯಸ್ಯ । ಏಷಾ । ವಿಧೇತಿ ವಿ–ಧಾ । ವಿಧೀಯತ ಇತಿ ವಿ–ಧೀಯತೇ । ಯಃ । ಉ । ಚ । ಏನಾಮ್ । ಏವಮ್ । ವೇದ । ಸೃಷ್ಟೀಃ । ಉಪೇತಿ । ದಧಾತಿ । ಯಥಾಸೃಷ್ಟಮಿತಿ ಯಥಾ–ಸೃಷ್ಟಮ್ । ಏವ । ಅವೇತಿ । ರುಂಧೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯಸ್ಯ ಏಷಾ ವಿಧಾ ವಿಧೀಯತೇ** | ಯಾವ ಯಜಮಾನನಿಗಾಗಿ ಅಧ್ವರ್ಯುವು ಈ ಅನುಷ್ಠಾನಪ್ರಕಾರದಂತೆ ಇಷ್ಟಕೋಪಧಾನವನ್ನು ಮಾಡುವನೋ |
| [ಸಃ] **ಅನ್ನಮ್ ಅತ್ತಿ** | ಆ ಯಜಮಾನನು ಅನ್ನವನ್ನು ಭುಂಜಿಸುವನು. |
| **ಅಸ್ಯ ಅನ್ನಾದಃ ಆ ಜಾಯತೇ** | ಅವನಿಗೆ ಅನ್ನವನ್ನು ಊಟ ಮಾಡುವ ಮಗನೂ ಹುಟ್ಟುತ್ತಾನೆ. |
| **ಏನಾಮ್ ಯಃ ಉ ಏವಮ್ ವೇದ ಚ** | ಯಾವನು ಈ ರೀತಿಯನ್ನು ಹೀಗೆಯೇ ತಿಳಿಯುವನೋ ಅವನೂ ಕೂಡ(ಮೇಲೆ ಹೇಳಿದ ಫಲವನ್ನೇ ಪಡೆಯುವನು) |

### ಸೃಷ್ಟೀಷ್ಟಕೋಪಧಾನ; ಪ್ರಶಂಸೆ

| | |
|---|---|
| **ಸೃಷ್ಟೀಃ ಉಪದಧಾತಿ** | ಅಧ್ವರ್ಯುವು *ಸೃಷ್ಟೀಷ್ಟಕೆಗಳನ್ನು ಉಪಧಾನ ಮಾಡುತ್ತಾನೆ. |
| **ಯಥಾಸೃಷ್ಟಮ್ ಏವ ಅವರುಂಧೇ** | ಇವುಗಳ ಉಪಧಾನದಿಂದ ಯಜಮಾನನು ಯಾವ ವಸ್ತುವಿನ ಸೃಷ್ಟಿಯು ಹೇಗಾಗಿದೆಯೋ ಆ ರೀತಿಯಲ್ಲಿ ಆ ವಸ್ತುವನ್ನು ಹೊಂದುವನು. |

---

* **'ಬ್ರಹ್ಮಾಸೃಜ್ಯತ'** ಮೊದಲಾದವುಗಳು ಸೃಷ್ಟಿಯನ್ನು ಪ್ರತಿಪಾದಿಸುವ ಮಂತ್ರಗಳು. ಈ ಇಷ್ಟಕೆಗಳ ಉಪಧಾನದಲ್ಲಿ **ಸೃಷ್ಟಿಶಬ್ದ** (ಸೃಜಧಾತು)ವುಳ್ಳ ಮಂತ್ರಗಳು ಇರುವುದರಿಂದ ಈ ಇಷ್ಟಕೆಗಳು **'ಸೃಷ್ಟಿ'**ಗಳೆನಿಸಿವೆ. **[ಪಾ. ಸೂ. 4.4.125]** ಇವು ಹದಿನೇಳು.

ನ ವಾ ಇದಂ ದಿವಾ ನ ನಕ್ತಮಾಸೀದವ್ಯಾವೃತ್ತಂ ತೇ ದೇವಾ ಏತಾ ವ್ಯುಷ್ಟೀರಪಶ್ಯನ್ತಾ ಉಪಾದಧತ ತತೋ ವಾ ಇದಂ ವ್ಯೌಚ್ಛದ್ಯಸ್ಯೈತಾ ಉಪಧೀಯಂತೇ

---

ನ । ವೈ । ಇದಮ್ । ದಿವಾ । ನ । ನಕ್ತಮ್ । ಆಸೀತ್ । ಅವ್ಯಾವೃತ್ತಮಿತ್ಯವಿ–ಆವೃತ್ತಮ್ । ತೇ । ದೇವಾಃ । ಏತಾಃ । ವ್ಯುಷ್ಟೀರಿತಿ ವಿ–ಉಷ್ಟೀಃ । ಅಪಶ್ಯನ್ನ್ । ತಾಃ । ಉಪೇತಿ । ಅದಧತ । ತತಃ । ವೈ । ಇದಮ್ । ವೀತಿ । ಔಚ್ಛತ್ । ಯಸ್ಯ । ಏತಾಃ । ಉಪಧೀಯಂತ ಇತ್ಯುಪ–ಧೀಯಂತೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ವ್ಯುಷ್ಟೀಷ್ಟಕೋಪಧಾನ; ಆಖ್ಯಾನ/ಪ್ರಶಂಸೆ** |
| **ನ ವೈ ಇದಮ್ ದಿವಾ ನ ನಕ್ತಮ್ ಆಸೀತ್ ಅವ್ಯಾವೃತ್ತಮ್** | ಪೂರ್ವದಲ್ಲಿ ಹಗಲು–ರಾತ್ರಿಗಳು ವಿಭಾಗವಿಲ್ಲದೆ ಏಕರೂಪವಾಗಿದ್ದವು. |
| **ತೇ ದೇವಾಃ ಏತಾಃ ವ್ಯುಷ್ಟೀಃ ಅಪಶ್ಯನ್** | ಆಗ ದೇವತೆಗಳು ಆಲೋಚಿಸಿ, ವ್ಯುಷ್ಟಿ ಎಂಬ ಹೆಸರಿನ ಇಷ್ಟಕೆಗಳನ್ನು ಕಂಡುಕೊಂಡರು. |
| **ತಾಃ ಉಪಾದಧತ** | ಆ ಇಷ್ಟಕೆಗಳನ್ನು ಉಪಧಾನ ಮಾಡಿದರು. |
| **ತತಃ ವೈ ಇದಮ್ ವ್ಯೌಚ್ಛತ್** | ಇದರಿಂದ ಹಗಲು–ರಾತ್ರಿಗಳು ಸ್ಪಷ್ಟವಾಗಿ ಪ್ರಕಾಶಿಸಿದವು. |
| **ಯಸ್ಯ ಏತಾಃ ಉಪಧೀಯಂತೇ** | ಯಾವ ಯಜಮಾನನಿಗಾಗಿ ಈ ಇಷ್ಟಕೆಗಳ ಉಪಧಾನವಾಗುತ್ತದೆಯೋ |

---

**'ಏಕಯಾಽಸ್ತುವತ'** ಎಂಬ ಅನುವಾಕದಲ್ಲಿ ಕೆಲವು ಮಂತ್ರಗಳಲ್ಲಿ ಸೃಷ್ಟಿಯ ಪ್ರತಿಪಾದನೆಯು ಇಲ್ಲದಿದ್ದರೂ ಛತ್ರಿನ್ಯಾಯದಿಂದ ಎಲ್ಲವೂ **'ಸೃಷ್ಟಿ'** ಎನ್ನಿಸಿಕೊಳ್ಳುತ್ತವೆ.

**'ಛತ್ರಿಣೋ ಯಾಂತಿ'** ಎಂದರೆ ಛತ್ರಿಯನ್ನು ಹಿಡಿದವರು ಹೋಗುತ್ತಿದ್ದಾರೆ ಎಂದು ಅರ್ಥ. ಹೋಗುತ್ತಿರುವ ಕೆಲವರು ಛತ್ರಿಯನ್ನು ಹಿಡಿಯದಿದ್ದರೂ ಜೊತೆಯಲ್ಲಿರುವುದರಿಂದ ಅವರಲ್ಲಿಯೂ ಛತ್ರಿತ್ವವನ್ನು ಆರೋಪಿಸಿ **'ಛತ್ರಿಣೋ ಯಾಂತಿ'** ಎಂಬ ಪ್ರಯೋಗದಂತೆ ಸೃಷ್ಟಿತ್ವದ ಆರೋಪವಿದೆ. ಹೀಗಾಗಿ **'ಸೃಷ್ಟೀರುಪದಧಾತಿ'** ಎಂಬ ಶ್ರುತಿವಾಕ್ಯ.

ವ್ಯೇವಾಸ್ಮಾ ಉಚ್ಛತ್ಯಥೋ ತಮ ಏವಾಪಹತೇ ॥ ೨೨-4 ॥

[ವ್ಯೈ ಜನಿತ್ರಂ ಪಂಚದಶೋಽದಿತ್ಯೈ ಭಾಗೋ ವ್ಯೈ ಧರ್ತ್ರಸ್ಸಮಾವದ್ವೀರ್ಯೌ ವಿಧಾ ತತೋ ವಾ

ಇದಂ ಚತುರ್ದಶ ಚ ॥]

---

ವೀತಿ । ಏವ । ಅಸ್ಮೈ । ಉಚ್ಛತಿ । ಅಥೋ ಇತಿ । ತಮಃ । ಏವ । ಅಪೇತಿ । ಹತೇ ॥ ೨೨-೪ ॥

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಅಸ್ಮೈ ವಿ ಉಚ್ಛತಿ ಏವ** | ಆ ಯಜಮಾನನಿಗೆ ಪರಲೋಕ-ಅಪರಲೋಕಗಳು ಸ್ಪಷ್ಟವಾಗಿ ತಿಳಿಯುತ್ತವೆ. |
| **ಅಥೋ ತಮಃ ಏವ ಅಪಹತೇ** | ಮತ್ತು ಭ್ರಾಂತಿರೂಪವಾದ ಅಜ್ಞಾನದ ಪರಿಹಾರವೂ ಆಗುತ್ತದೆ. |

## || ಪಂಚಮೋಽನುವಾಕಃ ||

ಅಗ್ನೇ ಜಾತಾನ್ಪ್ರಣುದಾ ನಸ್ಸಪತ್ನಾನಿತಿ ಪುರಸ್ತಾದುಪದಧಾತಿ ಜಾತಾನೇವ

ಭ್ರಾತೃವ್ಯಾನ್ಪ್ರಣುದತೇ ಸಹಸಾ ಜಾತಾನಿತಿ ಪಶ್ಚಾ-

---

ಅಗ್ನೇ । ಜಾತಾನ್ । ಪ್ರೇತಿ । ನುದ । ನಃ । ಸಪತ್ನಾನ್ । ಇತಿ । ಪುರಸ್ತಾತ್ । ಉಪೇತಿ । ದಧಾತಿ । ಜಾತಾನ್ । ಏವ ।

ಭ್ರಾತೃವ್ಯಾನ್ । ಪ್ರೇತಿ । ನುದತೇ । ಸಹಸಾ । ಜಾತಾನ್ । ಇತಿ । ಪಶ್ಚಾತ್ ।

---

ಈ ಐದನೆಯ ಅನುವಾಕದಲ್ಲಿ ಅಸಪತ್ನೇಷ್ಟಕಾದಿಗಳು ಹೇಳಲ್ಪಟ್ಟಿವೆ. ಇವು ಪಂಚಮಚಿತಿಯ ಇಷ್ಟಕೆಗಳು.

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ಅಸಪತ್ನೇಷ್ಟಕೋಪಧಾನ; ಫಲ** |
| **ಅಗ್ನೇ ಜಾತಾನ್ ಪ್ರ ನುದ ನಃ ಸಪತ್ನಾನ್ ಇತಿ ಪುರಸ್ತಾತ್ ಉಪದಧಾತಿ** | **'ಅಗ್ನೇ ಜಾತಾನ್ ಪ್ರಣುದಾ ನಃ'** ಎಂಬ ಮಂತ್ರದಿಂದ ಪಂಚಮಚಿತ್ಯಗ್ನಿಯ ಪೂರ್ವದಿಕ್ಕಿನಲ್ಲಿ ಇಷ್ಟಕೋಪಧಾನವನ್ನು ಮಾಡಬೇಕು. |
| **ಜಾತಾನ್ ಭ್ರಾತೃವ್ಯಾನ್ ಏವ ಪ್ರಣುದತೇ** | ಈ ಉಪಧಾನದಿಂದ ಅಧ್ವರ್ಯುವು ಹುಟ್ಟಿರುವ ಯಜಮಾನನ ಶತ್ರುಗಳನ್ನು ಪ್ರಕರ್ಷವಾಗಿ ಮತ್ತು ಪ್ರಧಾನವಾಗಿ ನಾಶಪಡಿಸುತ್ತಾನೆ. |
| **ಸಹಸಾ ಜಾತಾನ್ ಇತಿ ಪಶ್ಚಾತ್** ಉಪದಧಾತಿ | **'ಸಹಸಾ ಜಾತಾನ್'** ಎಂಬ ಮಂತ್ರದಿಂದ ಪಂಚಮಚಿತ್ಯಗ್ನಿಯ ಪಶ್ಚಿಮಭಾಗದಲ್ಲಿ ಅಸಪತ್ನೇಷ್ಟಕೆಯನ್ನು ಉಪಧಾನ ಮಾಡಬೇಕು. |

ಜ್ಜನಿಷ್ಯಮಾಣಾನೇವ ಪ್ರತಿನುದತೇ ಚತುಶ್ಚತ್ವಾರಿಗ್‌ಂಶಃ ಸ್ತೋಮ ಇತಿ ದಕ್ಷಿಣತೋ ಬ್ರಹ್ಮವರ್ಚಸಂ ವೈ ಚತುಶ್ಚತ್ವಾರಿಗ್‌ಂಶೋ ಬ್ರಹ್ಮವರ್ಚಸಮೇವ ದಕ್ಷಿಣತೋ ಧತ್ತೇ ತಸ್ಮಾದ್ದಕ್ಷಿಣೋಽರ್ಧೋ ಬ್ರಹ್ಮವರ್ಚಸಿತರಃ

---

ಜನಿಷ್ಯಮಾಣಾನ್ । ಏವ । ಪ್ರತೀತಿ । ನುದತೇ । ಚತುಶ್ಚತ್ವಾರಿಗ್‌ಂಶ ಇತಿ ಚತುಃ–ಚತ್ವಾರಿಗ್‌ಂಶಃ । ಸ್ತೋಮಃ । ಇತಿ । ದಕ್ಷಿಣತಃ । ಬ್ರಹ್ಮವರ್ಚಸಮಿತಿ ಬ್ರಹ್ಮ–ವರ್ಚಸಮ್ । ವೈ । ಚತುಶ್ಚತ್ವಾರಿಗ್‌ಂಶ ಇತಿ ಚತುಃ–ಚತ್ವಾರಿಗ್‌ಂಶಃ । ಬ್ರಹ್ಮವರ್ಚಸಮಿತಿ ಬ್ರಹ್ಮ–ವರ್ಚಸಮ್ । ಏವ । ದಕ್ಷಿಣತಃ । ಧತ್ತೇ । ತಸ್ಮಾತ್ । ದಕ್ಷಿಣಃ । ಅರ್ಧಃ । ಬ್ರಹ್ಮವರ್ಚಸಿತರ ಇತಿ ಬ್ರಹ್ಮವರ್ಚಸಿ–ತರಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಜನಿಷ್ಯಮಾಣಾನ್** ಭ್ರಾತೃವ್ಯಾನ್ **ಏವ ಪ್ರತಿ ನುದತೇ** | ಇದರಿಂದ ಅಧ್ವರ್ಯುವು ಹುಟ್ಟಲಿರುವ ಯಜಮಾನನ ಶತ್ರುಗಳನ್ನು ಹುಟ್ಟದಂತೆ ಮಾಡಿ ಅವರನ್ನು ಮುಖ್ಯವಾಗಿ ನಾಶಪಡಿಸುತ್ತಾನೆ. |
| **ಚತುಶ್ಚತ್ವಾರಿಗ್‌ಂಶಃ ಸ್ತೋಮಃ ಇತಿ ದಕ್ಷಿಣತಃ** ಉಪದಧಾತಿ | **'ಚತುಶ್ಚತ್ವಾರಿಗ್‌ಂಶಃ ಸ್ತೋಮಃ'** ಎಂಬ ಮಂತ್ರದಿಂದ ಅಧ್ವರ್ಯುವು ಪಂಚಮಚಿತ್ಯಗ್ನಿಯ ದಕ್ಷಿಣದಲ್ಲಿ ಅಸಪತ್ನೇಷ್ಟಕೆಯನ್ನು ಉಪಧಾನ ಮಾಡಬೇಕು. |
| **ಚತುಶ್ಚತ್ವಾರಿಗ್‌ಂಶಃ ಬ್ರಹ್ಮವರ್ಚಸಮ್ ವೈ** | ಚತುಶ್ಚತ್ವಾರಿಂಶಸ್ತೋಮವು ಸಾಮವೇದವನ್ನು ಗಾನ ಮಾಡುವ ಋತ್ವಿಜರಿಂದ ಗಾನ ಮಾಡಲ್ಪಟ್ಟು (ಋತ್ವಿಜರು ಬ್ರಾಹ್ಮಣರಾಗಿ ಬ್ರಹ್ಮವರ್ಚಸವುಳ್ಳವರಾದುದರಿಂದ) ಬ್ರಹ್ಮವರ್ಚಸರೂಪವಾಗಿದೆ. |
| **ಬ್ರಹ್ಮವರ್ಚಸಮ್ ಏವ ದಕ್ಷಿಣತಃ ಧತ್ತೇ** | ಈ ಇಷ್ಟಕೋಪಧಾನದಿಂದ ಅಧ್ವರ್ಯುವು ದಕ್ಷಿಣ ಭಾಗದಲ್ಲಿ ಯಜಮಾನನಲ್ಲಿ ಬ್ರಹ್ಮವರ್ಚಸವನ್ನು ಸ್ಥಾಪಿಸಿದವನಾಗುತ್ತಾನೆ. |
| **ತಸ್ಮಾತ್ ದಕ್ಷಿಣಃ ಅರ್ಧಃ ಬ್ರಹ್ಮವರ್ಚಸಿತರಃ** | ಆದುದರಿಂದ ಶರೀರದ ಬಲಭಾಗವು(ಯಜ್ಞಾದಿಗಳಲ್ಲಿ ಹೆಚ್ಚಾಗಿ ಉಪಯುಕ್ತವಾಗಿ)ಹೆಚ್ಚಿನ ಬ್ರಹ್ಮವರ್ಚಸವನ್ನು ಹೊಂದಿದೆ. |

ಷೋಡಶಃ ಸ್ತೋಮ ಇತ್ಯುತ್ತರತ ಓಜೋ ವೈ ಷೋಡಶ ಓಜ

ಏವೋತ್ತರತೋ ಧತ್ತೇ ತಸ್ಮಾ[ತಸ್ಮಾತ್(೨೩)ಉತ್ತರತೋಽಭಿಪ್ರಯಾಯೀ]

ದುತ್ತರತೋಽಭಿಪ್ರಯಾಯೀ ಜಯತಿ ವಜ್ರೋ ವೈ ಚತುಶ್ಚತ್ವಾರಿಗ್ಂಶೋ

ವಜ್ರಷ್ಷೋಡಶೋ ಯದೇತೇ ಇಷ್ಟಕೇ ಉಪದಧಾತಿ

---

ಷೋಡಶಃ । ಸ್ತೋಮಃ । ಇತಿ । ಉತ್ತರತ ಇತ್ಯುತ್-ತರತಃ । ಓಜಃ । ವೈ । ಷೋಡಶಃ । ಓಜಃ । ಏವ । ಉತ್ತರತ ಇತ್ಯುತ್-ತರತಃ । ಧತ್ತೇ । ತಸ್ಮಾತ್ । (೨೩) । ಉತ್ತರತೋಽಭಿಪ್ರಯಾಯೀತ್ಯುತ್ತರತಃ-ಅಭಿಪ್ರಯಾಯೀ । ಜಯತಿ । ವಜ್ರಃ । ವೈ । ಚತುಶ್ಚತ್ವಾರಿಗ್ಂಶ ಇತಿ ಚತುಃ-ಚತ್ವಾರಿಗ್ಂಶಃ । ವಜ್ರಃ । ಷೋಡಶಃ । ಯತ್ । ಏತೇ ಇತಿ । ಇಷ್ಟಕೇ ಇತಿ । ಉಪದಧಾತೀತ್ಯುಪ-ದಧಾತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಷೋಡಶಃ ಸ್ತೋಮಃ ಇತಿ ಉತ್ತರತಃ** ಉಪದಧಾತಿ | '**ಷೋಡಶಃ ಸ್ತೋಮಃ**' ಎಂಬ ಮಂತ್ರದಿಂದ ಅಧ್ವರ್ಯುವು ಪಂಚಮಚಿತ್ಯಗ್ನಿಯ ಉತ್ತರಭಾಗದಲ್ಲಿ ಅಸಪತ್ನೇಷ್ಟಕೆಯ ಉಪಧಾನವನ್ನು ಮಾಡಬೇಕು. |
| **ಷೋಡಶಃ ಓಜಃ ವೈ** | ಓಜೋವೃದ್ಧಿಕಾರಣವಾದುದರಿಂದ ಷೋಡಶಸ್ತೋಮವು ಓಜಸ್ಸು ಎನ್ನಿಸಿದೆ. |
| **ಓಜಃ ಏವ ಉತ್ತರತಃ ಧತ್ತೇ** | ಈ ಉಪಧಾನದಿಂದ ಓಜಸ್ಸನ್ನೇ ಉತ್ತರದಿಕ್ಕಿನಲ್ಲಿ ಅಧ್ವರ್ಯುವು ಸ್ಥಾಪಿಸಿದವನಾಗುತ್ತಾನೆ. |
| **ತಸ್ಮಾತ್ ಉತ್ತರತೋಽಭಿಪ್ರಯಾಯೀ ಜಯತಿ** | ಆದುದರಿಂದ ಉತ್ತರದಿಕ್ಕಿಗೆ ಪ್ರಯಾಣ ಮಾಡುವ ವನು ಜಯಶೀಲನಾಗುವನು. |
| **ಚತುಶ್ಚತ್ವಾರಿಗ್ಂಶಃ ವಜ್ರಃ ವೈ** | ಚತುಶ್ಚತ್ವಾರಿಂಶಸ್ತೋಮವು ವಜ್ರಸ್ವರೂಪವಾಗಿದೆ. |
| **ಷೋಡಶಃ ವಜ್ರಃ** | ಷೋಡಶಸ್ತೋಮವೂ ವಜ್ರಸ್ವರೂಪವೇ ಆಗಿದೆ. |
| **ಯತ್ ಏತೇ ಇಷ್ಟಕೇ ಉಪದಧಾತಿ** | ಈ ಎರಡು ಇಷ್ಟಕೆಗಳನ್ನು ಉಪಧಾನ ಮಾಡುವುದೆಂಬುದು ಯಾವುದೋ (ಅದರಿಂದ) |

ಜಾತಾಗ್‌ಂಶ್ಚೈವ ಜನಿಷ್ಯಮಾಣಾಗ್‌ಂಶ್ಚ ಭ್ರಾತೃವ್ಯಾನ್ಪ್ರಣುದ್ಯ ವಜ್ರಮನು ಪ್ರಹರತಿ ಸ್ತೃತ್ಯೈ ಪುರೀಷವತೀಂ ಮಧ್ಯ ಉಪದಧಾತಿ ಪುರೀಷಂ ವೈ ಮಧ್ಯಮಾತ್ಮನಸ್ಸಾತ್ಮಾನಮೇವಾಗ್ನಿಂ ಚಿನುತೇ

---

ಜಾತಾನ್ । ಚ । ಏವ । ಜನಿಷ್ಯಮಾಣಾನ್ । ಚ । ಭ್ರಾತೃವ್ಯಾನ್ । ಪ್ರಣುದ್ಯೇತಿ ಪ್ರ–ನುದ್ಯ । ವಜ್ರಮ್ । ಅನು । ಪ್ರೇತಿ । ಹರತಿ । ಸ್ತೃತ್ಯೈ । ಪುರಿಷವತೀಮಿತಿ ಪುರೀಷ–ವತೀಮ್ । ಮಧ್ಯೇ । ಉಪೇತಿ । ದಧಾತಿ । ಪುರೀಷಮ್ । ವೈ । ಮಧ್ಯಮ್ । ಆತ್ಮನಃ । ಸಾತ್ಮಾನಮಿತಿ ಸ–ಆತ್ಮಾನಮ್ । ಏವ । ಅಗ್ನಿಮ್ । ಚಿನುತೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಜಾತಾನ್ ಚ ಜನಿಷ್ಯಮಾಣಾನ್ ಚ ಭ್ರಾತೃವ್ಯಾನ್ ಪ್ರಣುದ್ಯ ಏವ ವಜ್ರಮ್ ಅನು ಪ್ರಹರತಿ ಸ್ತೃತ್ಯೈ** | ಅಧ್ವರ್ಯುವು ಹುಟ್ಟಿದ ಮತ್ತು ಹುಟ್ಟಲಿರುವ ಶತ್ರುಗಳನ್ನು ನಾಶಪಡಿಸಿಯೇ(ಉಳಿದ ಶತ್ರುಗಳ) ನಾಶಕ್ಕಾಗಿ ವಜ್ರಾಯುಧವನ್ನು ಪ್ರಹರಿಸುವನು. |
| **ಪುರಿಷವತೀಮ್ ಮಧ್ಯೇ ಉಪದಧಾತಿ** | ಅಧ್ವರ್ಯುವು **'ಪೃಥಿವ್ಯಾಃ ಪುರೀಷಮಸಿ । ಅಪ್ಸೋ ನಾಮ'** ಎಂಬ ಮಂತ್ರದಿಂದ ಪಂಚಮಚಿತ್ಯಗ್ನಿಯ ಮಧ್ಯಭಾಗದಲ್ಲಿ ಪುರೀಷವತೀಷ್ಟಕೆಯನ್ನು ಉಪಧಾನ ಮಾಡಬೇಕು. |
| **ಆತ್ಮನಃ ಮಧ್ಯಮ್ ಪುರೀಷಮ್ ವೈ** | (ಗವಾದಿಗಳ) ಶರೀರದ ಮಧ್ಯಭಾಗವು ಪುರೀಷವೇ ಆಗಿದೆ. |
| **ಸಾತ್ಮಾನಮ್ ಏವ ಅಗ್ನಿಮ್ ಚಿನುತೇ** | ಈ ಇಷ್ಟಕೋಪಧಾನದಿಂದ ಅಧ್ವರ್ಯುವು ಶರೀರದಿಂದ ಕೂಡಿದ ಅಗ್ನಿಯನ್ನೇ ಚಯನ ಮಾಡಿದವನಾಗುತ್ತಾನೆ. |

---

**ತಾತ್ಪರ್ಯ:–** **'ಚತುಶ್ಚತ್ವಾರಿಂಶಃ' 'ಷೋಡಶಃ'** ಈ ಎರಡೂ ಮಂತ್ರಗಳಿಂದ ಉಪಧಾನ ಮಾಡುವ ಇಷ್ಟಕೆಗಳನ್ನು ಒಟ್ಟಿಗೆ ಶ್ರುತಿಯಲ್ಲಿ ಪ್ರಶಂಸಿಸಲಾಗಿದೆ.

ಗವಾದಿಶರೀರದಲ್ಲಿ ಪುರೀಷವು ಮಧ್ಯದಲ್ಲಿ ಇರುವುದರಿಂದ ಪುರೀಷವನ್ನಿಟ್ಟು ಉಪಧಾನ ಮಾಡುವುದರಿಂದ ಇಷ್ಟಕೆಯು **'ಪುರೀಷವತಿ'** ಎನಿಸಿದೆ. ಅದು ಮಧ್ಯದಲ್ಲಿ ಉಪಧಾನ ಮಾಡಲ್ಪಡುತ್ತದೆ.

ಸಾತ್ಮಾಽಮುಷ್ಮಿಲ್ಲೋಕೇ ಭವತಿ ಯ ಏವಂ ವೇದೈತಾ ವಾ ಅಸಪತ್ನಾ ನಾಮೇಷ್ಟಕಾ ಯಸ್ಯೈತಾ ಉಪಧೀಯಂತೇ[ಉಪಧೀಯಂತೇ(೨೪)]ನಾಸ್ಯ ಸಪತ್ನೋ ಭವತಿ ಪಶುರ್ವಾ ಏಷ ಯದಗ್ನಿರ್ವಿರಾಜ ಉತ್ತಮಾಯಾಂ ಚಿತ್ಯಾಮುಪದಧಾತಿ

---

ಸಾತ್ಮೇತಿ ಸ-ಆತ್ಮಾ । ಅಮುಷ್ಮಿನ್ನ್ । ಲೋಕೇ । ಭವತಿ । ಯಃ । ಏವಮ್ । ವೇದ । ಏತಾಃ । ವೈ । ಅಸಪತ್ನಾಃ । ನಾಮ । ಇಷ್ಟಕಾಃ । ಯಸ್ಯ । ಏತಾಃ । ಉಪಧೀಯಂತ ಇತ್ಯುಪ-ಧೀಯಂತೇ । (೨೪) । ನ । ಅಸ್ಯ । ಸಪತ್ನಃ । ಭವತಿ । ಪಶುಃ । ವೈ । ಏಷಃ । ಯತ್ । ಅಗ್ನಿಃ । ವಿರಾಜ ಇತಿ ವಿ-ರಾಜಃ । ಉತ್ತಮಾಯಾಮಿತ್ಯುತ್-ತಮಾಯಾಮ್ । ಚಿತ್ಯಾಮ್ । ಉಪೇತಿ । ದಧಾತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಅಮುಷ್ಮಿನ್ ಲೋಕೇ ಸಾತ್ಮಾ ಭವತಿ ಯಃ ಏವಮ್ ವೇದ** | ಯಾರು ಈ ರೀತಿಯಾಗಿ ತಿಳಿಯುವನೋ ಅವನು ಸ್ವರ್ಗಲೋಕದಲ್ಲಿ ಆತ್ಮಸಹಿತನೇ ಆಗುವನು. (ಇದು ಜ್ಞಾನದ ಪ್ರಶಂಸೆ) |
| **ಏತಾಃ ವೈ ಅಸಪತ್ನಾಃ ನಾಮ ಇಷ್ಟಕಾಃ** | ಈ ಇಷ್ಟಕೆಗಳೇ ಅಸಪತ್ನೇಷ್ಟಕೆಗಳೆಂದು ಪ್ರಸಿದ್ಧವಾದ ಇಷ್ಟಕೆಗಳು. |
| **ಯಸ್ಯ ಏತಾಃ ಉಪಧೀಯಂತೇ** | ಯಾವ ಯಜಮಾನನಿಗಾಗಿ ಈ ಇಷ್ಟಕೆಗಳ ಉಪಧಾನವಾಗುತ್ತದೆಯೋ |
| **ಅಸ್ಯ ಸಪತ್ನಃ ನ ಭವತಿ** | ಆ ಯಜಮಾನನಿಗೆ ಶತ್ರುಗಳೇ ಇರುವುದಿಲ್ಲ. |

ವಿರಾಡಿಷ್ಟಕೋಪಧಾನವಿಧಿ; ಪ್ರಶಂಸೆ

| | |
|---|---|
| **ಯತ್ ಅಗ್ನಿಃ ಏಷಃ ಪಶುಃ ವೈ** | ಚಯನಾಗ್ನಿಯೆಂಬುದು ಪಶುವೇ ಸರಿ. ಅಗ್ನಿಯು ಪಶುಸಾಧನವಾಗಿದೆ. |
| **ಉತ್ತಮಾಯಾಮ್ ಚಿತ್ಯಾಮ್ ವಿರಾಜಃ ಉಪದಧಾತಿ** | ಅಗ್ನಿಚಯನದಲ್ಲಿ ಕೊನೆಯದಾದ ಪಂಚಮಚಿತಿಯಲ್ಲಿ ವಿರಾಡಿಷ್ಟಕೆಗಳನ್ನು ಅಧ್ವರ್ಯುವು ಉಪಧಾನ ಮಾಡಬೇಕು.* |

---

* ವಿರಾಡಿಷ್ಟಕೆಗಳು ನಲವತ್ತು.

ವಿರಾಜಮೇವೋತ್ತಮಾಂ ಪಶುಷು ದಧಾತಿ ತಸ್ಮಾತ್ಪಶುಮಾನುತ್ತಮಾಂ ವಾಚಂ ವದತಿ ದಶದಶೋಪದಧಾತಿ ಸವೀರ್ಯತ್ವಾಯಾಕ್ಷ್ಣಯೋಪ ದಧಾತಿ

---

ವಿರಾಜಮಿತಿ ವಿ–ರಾಜಮ್ । ಏವ । ಉತ್ತಮಾಮಿತ್ಯುತ್–ತಮಾಮ್ । ಪಶುಷು । ದಧಾತಿ । ತಸ್ಮಾತ್ । ಪಶುಮಾನಿತಿ ಪಶು–ಮಾನ್ । ಉತ್ತಮಾಮಿತ್ಯುತ್–ತಮಾಮ್ । ವಾಚಮ್ । ವದತಿ । ದಶದಶೇತಿ ದಶ–ದಶ । ಉಪೇತಿ । ದಧಾತಿ । ಸವೀರ್ಯತ್ವಾಯೇತಿ ಸವೀರ್ಯ–ತ್ವಾಯ । ಅಕ್ಷ್ಣಯಾ । ಉಪೇತಿ । ದಧಾತಿ ।

---

| ಬ್ರಾಹ್ಮಣಭಾಗ | ವಿವರಣೆ |
| --- | --- |
| **ಪಶುಷು ಉತ್ತಮಾಮ್ ವಿರಾಜಮ್ ಏವ ದಧಾತಿ** | (ಹೀಗೆ ಉಪಧಾನ ಮಾಡಿದ ಅಧ್ವರ್ಯುವು) ಪಶುಗಳಲ್ಲಿ ಉತ್ತಮವಾದ ಕ್ಷೀರ–ದಧಿರೂಪವಾದ ಅನ್ನವನ್ನು ಸ್ಥಾಪಿಸಿದವನಾಗುತ್ತಾನೆ. |
| **ತಸ್ಮಾತ್ ಪಶುಮಾನ್ ಉತ್ತಮಾಮ್ ವಾಚಮ್ ವದತಿ** | ಆದ್ದರಿಂದಲೇ ಪಶುಸಂಪತ್ತುಳ್ಳವನು (ಮನೆಗೆ ಬಂದ ಅತಿಥಿಗಳಿಗೆ ಬನ್ನಿ 'ಕುಳಿತುಕೊಳ್ಳಿ' 'ಊಟ ಮಾಡಿ', ಮುಂತಾದ) ಉತ್ತಮವಾದ ಮಾತನ್ನೇ ಹೇಳುತ್ತಾನೆ. **[ಸಾ. ಭಾಷ್ಯ]**<br>ಪಶುಸಂಪತ್ತುಳ್ಳ ಬ್ರಾಹ್ಮಣನು 'ಓ ಶ್ರಾವಯ' ಮುಂತಾದ ಯಜ್ಞಸಂಬಂಧಿಯಾದ ಒಳ್ಳೆಯ ಮಾತನ್ನಾಡುತ್ತಾನೆ. **[ಭ.ಭಾ.ಭಾ]** |

ಸಂಖ್ಯಾವಿಧಿ; ಫಲ

| | |
| --- | --- |
| **ದಶದಶ ಉಪದಧಾತಿ ಸವೀರ್ಯತ್ವಾಯ** | ಒಂದೊಂದು ದಿಕ್ಕಿನಲ್ಲಿ ಹತ್ತು ಹತ್ತು ಇಷ್ಟಕೆಗಳನ್ನು ಉಪಧಾನ ಮಾಡಬೇಕು. ಇದರಿಂದ ಚಿತಿಯು ದೃಢವಾಗಿರುತ್ತದೆ. |

ವಕ್ರಪದ್ಧತಿವಿಧಿ

| | |
| --- | --- |
| **ಅಕ್ಷ್ಣಯಾ ಉಪದಧಾತಿ** | ವಕ್ರಪದ್ಧತಿಯನ್ನು ಅನುಸರಿಸಿ ಇಷ್ಟಕೋಪಧಾನವನ್ನು ಮಾಡಬೇಕು. |

ತಸ್ಮಾದಕ್ಷ್ಣಯಾ ಪಶವೋಽಂಗಾನಿ ಪ್ರಹರಂತಿ ಪ್ರತಿಷ್ಠಿತ್ಯೈ ಯಾನಿ ವೈ

ಛಂದಾಗ್ಂಸಿ ಸುವರ್ಗ್ಯಾಣ್ಯಾಸನ್ತೈರ್ದೇವಾಸ್ಸುವರ್ಗಲ್ಲೋಕಮಾಯ

ನ್ತೇನರ್ಷಯೋ [ಋಷಯಃ(೨೫)ಅಶ್ರಾಮ್ಯನ್ತೇ]ಽಶ್ರಾಮ್ಯನ್ತೇ

ತಪೋಽತಪ್ಯಂತ ತಾನಿ ತಪಸಾಽಪಶ್ಯ

---

ತಸ್ಮಾತ್ । ಅಕ್ಷ್ಣಯಾ । ಪಶವಃ । ಅಂಗಾನಿ । ಪ್ರೇತಿ । ಹರಂತಿ । ಪ್ರತಿಷ್ಠಿತ್ಯಾ ಇತಿ ಪ್ರತಿ–ಸ್ಥಿತ್ಯೈ । ಯಾನಿ । ವೈ । ಛಂದಾಗ್ಂಸಿ । ಸುವರ್ಗ್ಯಾಣೀತಿ ಸುವಃ–ಗ್ಯಾನಿ । ಆಸನ್ನ್ । ತೈಃ । ದೇವಾಃ । ಸುವರ್ಗಮಿತಿ ಸುವಃ–ಗಮ್ । ಲೋಕಮ್ । ಆಯನ್ನ್ । ತೇನ । ಋಷಯಃ । (೨೫) । ಅಶ್ರಾಮ್ಯನ್ನ್ । ತೇ । ತಪಃ । ಅತಪ್ಯಂತ । ತಾನಿ । ತಪಸಾ । ಅಪಶ್ಯನ್ನ್ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ತಸ್ಮಾತ್ ಪಶವಃ ಅಕ್ಷ್ಣಯಾ ಅಂಗಾನಿ ಪ್ರಹರಂತಿ ಪ್ರತಿಷ್ಠಿತ್ಯೈ** | ಆದುದರಿಂದಲೇ ಪಶುಗಳು ತಮ್ಮ ಅಂಗಗಳನ್ನು ಅಡ್ಡಲಾಗಿ ಕೊಡವಿಕೊಳ್ಳುತ್ತವೆ. ಇದು ದೃಢವಾಗಿ ನಿಲ್ಲುವುದಕ್ಕೆ ಸಾಧನವಾಗುತ್ತದೆ. |

ವಿರಾಡಿಷ್ಟಕೋಪಧಾನ; ಆಖ್ಯಾನ

| | |
|---|---|
| **ಯಾನಿ ಛಂದಾಗ್ಂಸಿ ಸುವರ್ಗ್ಯಾಣಿ ವೈ ಆಸನ್** | ಸ್ವರ್ಗಕ್ಕೆ ಅರ್ಹವಾದ ಯಾವ ಛಂದಸ್ಸುಗಳು ಇವೆಯೋ |
| **ತೈಃ ದೇವಾಃ ಸುವರ್ಗಮ್ ಲೋಕಮ್ ಆಯನ್** | ಅವುಗಳಿಂದ ದೇವತೆಗಳು ಸ್ವರ್ಗವನ್ನು ಹೊಂದಿದರು. |
| **ತೇನ ಋಷಯಃ ಅಶ್ರಾಮ್ಯನ್** | ಸ್ವರ್ಗಗಮನನಿಮಿತ್ತವಾಗಿ ಋಷಿಗಳು ಶ್ರಮಿಸಿದರು. |
| **ತೇ ತಪಃ ಅತಪ್ಯಂತ** | ಆ ಮುನಿಗಳು ತಪಸ್ಸನ್ನು ಮಾಡಿದರು. |
| **ತಾನಿ ತಪಸಾ ಅಪಶ್ಯನ್** | ಆ ತಪಸ್ಸಿನಿಂದ ಸ್ವರ್ಗಗಮನಾರ್ಹವಾದ ಛಂದಸ್ಸುಗಳನ್ನು ತಿಳಿದುಕೊಂಡರು. |

ನ್ತೇಭ್ಯ ಏತಾ ಇಷ್ಟಕಾ ನಿರಮಿಮತೇವಶ್ಛಂದೋ ವರಿವಶ್ಛಂದ ಇತಿ ತಾ ಉಪಾದಧತ ತಾಭಿರ್ವೈ ತೇ ಸುವರ್ಗಲ್ಲೋಕಮಾಯನ್, ಯದೇತಾ ಇಷ್ಟಕಾ ಉಪದಧಾತಿ ಯಾನ್ಯೇವ ಛಂದಾಗ್ಂಸಿ ಸುವರ್ಗ್ಯಾಣಿ ತೈರೇವ ಯಜಮಾನಸ್ಸುವರ್ಗಂ ಲೋಕಮೇತಿ

---

ತೇಭ್ಯ । ಏತಾಃ । ಇಷ್ಟಕಾಃ । ನಿರಿತಿ । ಅಮಿಮತ । ಏವಃ । ಛಂದಃ । ವರಿವಃ । ಛಂದಃ । ಇತಿ । ತಾಃ । ಉಪೇತಿ । ಅದಧತ । ತಾಭಿಃ । ವೈ । ತೇ । ಸುವರ್ಗಮಿತಿ ಸುವಃ-ಗಮ್ । ಲೋಕಮ್ । ಆಯನ್ನ್ । ಯತ್ । ಏತಾಃ । ಇಷ್ಟಕಾಃ । ಉಪದಧಾತೀತ್ಯುಪ-ದಧಾತಿ । ಯಾನಿ । ಏವ । ಛಂದಾಗ್ಂಸಿ । ಸುವರ್ಗ್ಯಾಣೀತಿ ಸುವಃ-ಗ್ಯಾನಿ । ತೈಃ । ಏವ । ಯಜಮಾನಃ । ಸುವರ್ಗಮಿತಿ ಸುವಃ-ಗಮ್ । ಲೋಕಮ್ । ಏತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ತೇಭ್ಯ ಏತಾಃ ಇಷ್ಟಕಾಃ ನಿರಮಿಮತ | 'ಏವಶ್ಛಂದಃ' ಮೊದಲಾದ ಆ ಛಂದಸ್ಸುಗಳಿಂದ ಈ ವಿರಾಡಿಷ್ಟಕೆಗಳನ್ನು ನಿರ್ಮಿಸಿದರು. |
| ಏವಃ ಛಂದಃ ವರಿವಃ ಛಂದಃ ಇತಿ ತಾಃ ಉಪಾದಧತ | 'ಏವಶ್ಛಂದಃ' 'ವರಿವಶ್ಛಂದಃ' ಮುಂತಾದ ಮಂತ್ರಗಳಿಂದ ಆ ಇಷ್ಟಕೆಗಳನ್ನು ಉಪಧಾನ ಮಾಡಿದರು. |
| ತಾಭಿಃ ವೈ ತೇ ಸುವರ್ಗಮ್ ಲೋಕಮ್ ಆಯನ್ | ಆ ಇಷ್ಟಕೋಪಧಾನದಿಂದ/ಸ್ವರ್ಗ್ಯವಾದ ಛಂದಸ್ಸುಗಳಿಂದ ಋಷಿಗಳು ಸ್ವರ್ಗಲೋಕವನ್ನು ಹೊಂದಿದರು. |
| ಯತ್ ಏತಾಃ ಇಷ್ಟಕಾಃ ಉಪದಧಾತಿ | ಈ ಇಷ್ಟಕೆಗಳನ್ನು ಉಪಧಾನ ಮಾಡುವುದೆಂಬುದು ಯಾವುದೋ (ಅದರಿಂದ) |
| ಯಾನಿ ಏವ ಛಂದಾಗ್ಂಸಿ ಸುವರ್ಗ್ಯಾಣಿ | ಯಾವ ಛಂದಸ್ಸುಗಳು ಸ್ವರ್ಗಕ್ಕೆ ಅರ್ಹವಾಗಿವೆಯೋ |
| ತೈಃ ಏವ ಯಜಮಾನಃ ಸುವರ್ಗಮ್ ಲೋಕಮ್ ಏತಿ | ಅವುಗಳಿಂದ ಯಜಮಾನನು ಸ್ವರ್ಗಲೋಕವನ್ನು ಹೊಂದಿಯೇ ಹೊಂದುವನು. |

ಯಜ್ಞೇನ ವೈ ಪ್ರಜಾಪತಿಃ ಪ್ರಜಾ ಅಸೃಜತ ತಾಃ ಸ್ತೋಮಭಾಗೈರೇವಾಸೃಜತ ಯ[ಯತ್(೨೬)ಸ್ತೋಮಭಾಗಾ]ಥ್ಸ್ತೋಮಭಾಗಾ ಉಪದಧಾತಿ ಪ್ರಜಾ ಏವ ತದ್ಯಜಮಾನಸ್ಸೃಜತೇ ಬೃಹಸ್ಪತಿರ್ವಾ ಏತದ್ಯಜ್ಞಸ್ಯ ತೇಜಸ್ಸಮಭರ–

---

ಯಜ್ಞೇನ । ವೈ । ಪ್ರಜಾಪತಿರಿತಿ ಪ್ರಜಾ–ಪತಿಃ । ಪ್ರಜಾ ಇತಿ ಪ್ರ–ಜಾಃ । ಅಸೃಜತ । ತಾಃ । ಸ್ತೋಮಭಾಗೈರಿತಿ ಸ್ತೋಮ–ಭಾಗೈಃ । ಏವ । ಅಸೃಜತ । ಯತ್ । (೨೬) । ಸ್ತೋಮಭಾಗಾ ಇತಿ ಸ್ತೋಮ–ಭಾಗಾಃ । ಉಪದಧಾತೀತ್ಯುಪ–ದಧಾತಿ । ಪ್ರಜಾ ಇತಿ ಪ್ರ–ಜಾಃ । ಏವ । ತತ್ । ಯಜಮಾನಃ । ಸೃಜತೇ । ಬೃಹಸ್ಪತಿಃ । ವೈ । ಏತತ್ । ಯಜ್ಞಸ್ಯ । ತೇಜಃ । ಸಮಿತಿ । ಅಭರತ್ ।

---

| ಬ್ರಾಹ್ಮಣಭಾಗ | ವಿವರಣೆ |
|---|---|

**ಸ್ತೋಮಭಾಗೇಷ್ಟಕಾವಿಧಿ; ಆಖ್ಯಾನ**

| | |
|---|---|
| **ಪ್ರಜಾಪತಿಃ ಯಜ್ಞೇನ ಪ್ರಜಾಃ ಅಸೃಜತ ವೈ** | ಪ್ರಜಾಪತಿದೇವನು ಯಜ್ಞದಿಂದ ಪ್ರಜೆಗಳನ್ನು ಸೃಷ್ಟಿಸಿದನು. |
| **ತಾಃ ಸ್ತೋಮಭಾಗೈಃ ಏವ ಅಸೃಜತ** | (ಆ ಸೃಷ್ಟಿಯನ್ನು ಮಾಡುವಾಗ) (ಯಜ್ಞದ ಮಧ್ಯದಲ್ಲಿರುವ) ಸ್ತೋಮಭಾಗಗಳಿಂದ* ಪ್ರಜೆಗಳನ್ನು ಸೃಜಿಸಿದನು. |
| **ಯತ್ ಸ್ತೋಮಭಾಗಾಃ ಉಪದಧಾತಿ** | ಸ್ತೋಮಭಾಗಗಳನ್ನು ಉಪಧಾನ ಮಾಡುವುದೆಂಬುದು ಯಾವುದೋ |
| **ತತ್ ಪ್ರಜಾಃ ಏವ ಯಜಮಾನಃ ಸೃಜತೇ** | ಯಜಮಾನನು ಅದರಿಂದ ಪ್ರಜೆಗಳನ್ನೇ ಸೃಜಿಸುತ್ತಾನೆ. |

**ಸ್ತೋಮಭಾಗಗಳ ಪ್ರಶಂಸೆ**

| | |
|---|---|
| **ಯತ್ ಸ್ತೋಮಭಾಗಾಃ ಬೃಹಸ್ಪತಿಃ ವೈ ಯಜ್ಞಸ್ಯ ಏತತ್ ತೇಜಃ ಸಮಭರತ್** | ಸ್ತೋಮಭಾಗಗಳೆಂಬುದು ಯಾವುದೋ ಇದನ್ನು ಬೃಹಸ್ಪತಿಯು ಯಜ್ಞದ ತೇಜೋರೂಪವಾಗಿ ಸಂಪಾದಿಸಿದನು. |

---

* **'ರಶ್ಮಿರಸಿ'** ಮುಂತಾದ ಮಂತ್ರಗಳು ಸ್ತೋಮಭಾಗಗಳು. ಅವುಗಳನ್ನು ಪಠಿಸಿ ಉಪಧಾನ ಮಾಡಲ್ಪಡುವ ಇಷ್ಟಕೆಗಳೂ ಸ್ತೋಮಭಾಗಗಳೇ. ಇವು ಮೂವತ್ತೊಂದು (31).

ದ್ಯಥ್ಸ್ತೋಮಭಾಗಾ ಯಥ್ಸ್ತೋಮಭಾಗಾ ಉಪದಧಾತಿ ಸತೇಜಸಮೇವಾಗ್ನಿಂ ಚಿನುತೇ ಬೃಹಸ್ಪತಿರ್ವಾ ಏತಾಂ ಯಜ್ಞಸ್ಯ ಪ್ರತಿಷ್ಠಾಮಪಶ್ಯದ್ಯಥ್ಸ್ತೋಮಭಾಗಾ ಯಥ್ಸ್ತೋಮಭಾಗಾ ಉಪದಧಾತಿ ಯಜ್ಞಸ್ಯ ಪ್ರತಿಷ್ಠಿತ್ಯೈ ಸಪ್ತಸಪ್ತೋಪ ದಧಾತಿ ಸವೀರ್ಯತ್ವಾಯ

---

ಯತ್ । ಸ್ತೋಮಭಾಗಾ ಇತಿ ಸ್ತೋಮ-ಭಾಗಾಃ । ಯತ್ । ಸ್ತೋಮಭಾಗಾ ಇತಿ ಸ್ತೋಮ-ಭಾಗಾಃ । ಉಪದಧಾತೀತ್ಯುಪ-ದಧಾತಿ । ಸತೇಜಸಮಿತಿ ಸ-ತೇಜಸಮ್ । ಏವ । ಅಗ್ನಿಮ್ । ಚಿನುತೇ । ಬೃಹಸ್ಪತಿಃ । ವೈ । ಏತಾಮ್ । ಯಜ್ಞಸ್ಯ । ಪ್ರತಿಷ್ಠಾಮಿತಿ ಪ್ರತಿ-ಸ್ಥಾಮ್ । ಅಪಶ್ಯತ್ । ಯತ್ । ಸ್ತೋಮಭಾಗಾ ಇತಿ ಸ್ತೋಮ-ಭಾಗಾಃ । ಯತ್ । ಸ್ತೋಮಭಾಗಾ ಇತಿ ಸ್ತೋಮ-ಭಾಗಾಃ । ಉಪದಧಾತೀತ್ಯುಪ-ದಧಾತಿ । ಯಜ್ಞಸ್ಯ । ಪ್ರತಿಷ್ಠಿತ್ಯಾ ಇತಿ ಪ್ರತಿ-ಸ್ಥಿತ್ಯೈ । ಸಪ್ತಸಪ್ತೇತಿ ಸಪ್ತ-ಸಪ್ತ । ಉಪೇತಿ । ದಧಾತಿ । ಸವೀರ್ಯತ್ವಾಯೇತಿ ಸವೀರ್ಯ-ತ್ವಾಯ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯತ್ ಸ್ತೋಮಭಾಗಾಃ ಉಪದಧಾತಿ ಸತೇಜಸಮ್ ಅಗ್ನಿಮ್ ಏವ ಚಿನುತೇ** | ಈ ಸ್ತೋಮಭಾಗೇಷ್ಟಕೆಗಳನ್ನು ಉಪಧಾನ ಮಾಡುವನೆಂಬುದು ತೇಜೋಯುಕ್ತವಾದ ಅಗ್ನಿಯನ್ನೇ ಯಜಮಾನನು ಚಯನ ಮಾಡಿದವನಾಗುತ್ತಾನೆ. |
| ಇನ್ನೊಂದು ಪ್ರಶಂಸೆ | |
| **ಯತ್ ಸ್ತೋಮಭಾಗಾಃ ಬೃಹಸ್ಪತಿಃ ವೈ ಏತಾಮ್ ಯಜ್ಞಸ್ಯ ಪ್ರತಿಷ್ಠಾಮ್ ಅಪಶ್ಯತ್** | ಯಾವ ಸ್ತೋಮಭಾಗಗಳಿವೆಯೋ (ಇದನ್ನು) ಬೃಹಸ್ಪತಿಯು ಯಜ್ಞದ ಪ್ರತಿಷ್ಠಾರೂಪವನ್ನಾಗಿ ತಿಳಿದನು. |
| **ಯತ್ ಸ್ತೋಮಭಾಗಾಃ ಉಪ ದಧಾತಿ** | ಯಾವ ಸ್ತೋಮಭಾಗೇಷ್ಟಕೆಗಳನ್ನು ಉಪಧಾನ ಮಾಡುವನೋ |
| **ಯಜ್ಞಸ್ಯ ಪ್ರತಿಷ್ಠಿತ್ಯೈ** | (ಅದು) ಯಜ್ಞದ ಪ್ರಕೃಷ್ಟಸ್ಥಿತಿಗೆ ಕಾರಣವಾಗುತ್ತದೆ. |
| ಸಂಖ್ಯಾವಿಧಿ | |
| **ಸವೀರ್ಯತ್ವಾಯ ಸಪ್ತಸಪ್ತ ಉಪದಧಾತಿ** | ದೃಢವಾಗಿರುವುದಕ್ಕಾಗಿ ಪ್ರತಿದಿಕ್ಕಿನಲ್ಲಿಯೂ ಏಳು ಏಳು ಇಷ್ಟಕೆಗಳನ್ನು ಉಪಧಾನ ಮಾಡಬೇಕು. |

ತಿಸ್ರೋ ಮಧ್ಯೇ ಪ್ರತಿಷ್ಠಿತ್ಯೈ ॥ ೨೭-5 ॥

[ಉತ್ತರತೋ ಧತ್ತೇ ತಸ್ಮಾದುಪಧೀಯಂತ ಋಷಯೋಽಸೃಜತ ಯತ್ತ್ರಿಚತ್ವಾರಿಗ್‌ಂಶಚ್ಚ ॥]

---

ತಿಸ್ರಃ। ಮಧ್ಯೇ। ಪ್ರತಿಷ್ಠಿತ್ಯಾ ಇತಿ ಪ್ರತಿ-ಸ್ಥಿತ್ಯೈ ॥ ೨೭-೫ ॥

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಮಧ್ಯೇ ತಿಸ್ರಃ ಪ್ರತಿಷ್ಠಿತ್ಯೈ** | ಮೂರು ಸ್ತೋಮಭಾಗೇಷ್ಟಕೆಗಳನ್ನು ಮಧ್ಯದಲ್ಲಿ ಉಪಧಾನ ಮಾಡಬೇಕು. ಇದು ಸ್ಥಿರತೆಯನ್ನು ಉಂಟು ಮಾಡುವುದಕ್ಕಾಗಿ ಆಗುತ್ತದೆ. |

---

ಈ ಅನುವಾಕದಲ್ಲಿ ಅಸಪತ್ನೇಷ್ಟಕೆಗಳು, ವಿರಾಡಿಷ್ಟಕೆಗಳು. ಮತ್ತು ಸ್ತೋಮಭಾಗೇಷ್ಟಕೆಗಳು-ಇವುಗಳ ವಿಧಿ-ಆಖ್ಯಾನ, ಉಪಧಾನದ ಫಲ-ಪ್ರಶಂಸೆ ಇವೆಲ್ಲವೂ ಇವೆ.

## ॥ ಷಷ್ಠೋಽನುವಾಕಃ ॥

ರಶ್ಮಿರಿತ್ಯೇವಾದಿತ್ಯಮಸೃಜತ ಪ್ರೇತಿರಿತಿ ಧರ್ಮಮನ್ವಿತಿರಿತಿ ದಿವಗ್‍ಂ
ಸಂಧಿರಿತ್ಯಂತರಿಕ್ಷಂ ಪ್ರತಿಧಿರಿತಿ ಪೃಥಿವೀಂ

---

ರಶ್ಮಿಃ । ಇತಿ । ಏವ । ಆದಿತ್ಯಮ್ । ಅಸೃಜತ । ಪ್ರೇತಿರಿತಿ ಪ್ರ-ಇತಿಃ । ಇತಿ । ಧರ್ಮಮ್ । ಅನ್ವಿತಿರಿತ್ಯನು-ಇತಿಃ । ಇತಿ । ದಿವಮ್ । ಸಂಧಿರಿತಿ ಸಮ್-ಧಿಃ । ಇತಿ । ಅಂತರಿಕ್ಷಮ್ । ಪ್ರತಿಧಿರಿತಿ ಪ್ರತಿ-ಧಿಃ । ಇತಿ । ಪೃಥಿವೀಮ್ ।

---

**'ಯಜ್ಞೇನ ವೈ ಪ್ರಜಾಪತಿಃ ಪ್ರಜಾಃ ಅಸೃಜತ'** ಎಂದು ಪ್ರಜಾಸಾಮಾನ್ಯಸೃಷ್ಟಿಯನ್ನು ಹೇಳಲಾಗಿದೆ. ಈ ಐದನೆಯ ಅನುವಾಕದಲ್ಲಿ ಆ ಸೃಷ್ಟಿಯ ವಿಷಯವನ್ನು ವಿವರಿಸಲಾಗಿದೆ.

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ರಶ್ಮಿಃ ಇತಿ ಏವ ಆದಿತ್ಯಮ್ ಅಸೃಜತ** | **'ರಶ್ಮಿರಸಿ ಕ್ಷಯಾಯ ತ್ವಾ ಕ್ಷಯಂ ಜಿನ್ವ'** ಎಂಬ ಮಂತ್ರದಿಂದಲೇ(ಆ ಪ್ರಜಾಪತಿದೇವನು)ಆದಿತ್ಯನನ್ನು ಸೃಷ್ಟಿಸಿದನು. |
| **ಪ್ರೇತಿಃ ಇತಿ ಧರ್ಮಮ್** ಅಸೃಜತ | **'ಪ್ರೇತಿರಸಿ ಧರ್ಮಾಯ ತ್ವಾ ಧರ್ಮಂ ಜಿನ್ವ'** ಎಂಬ ಮಂತ್ರದಿಂದ ಧರ್ಮವನ್ನು ಸೃಜಿಸಿದನು. |
| **ಅನ್ವಿತಿಃ ಇತಿ ದಿವಮ್** ಅಸೃಜತ | **'ಅನ್ವಿತಿರಸಿ ದಿವೇ ತ್ವಾ ದಿವಂ ಜಿನ್ವ'** ಎಂಬ ಮಂತ್ರದಿಂದ ದ್ಯುಲೋಕವನ್ನು ಸೃಷ್ಟಿಸಿದನು. |
| **ಸಂಧಿಃ ಇತಿ ಅಂತರಿಕ್ಷಮ್** ಅಸೃಜತ | **'ಸಂಧಿರಸಿ ಅಂತರಿಕ್ಷಾಯ ತ್ವಾ ಅಂತರಿಕ್ಷಂ ಜಿನ್ವ'** ಎಂಬ ಮಂತ್ರದಿಂದ ಅಂತರಿಕ್ಷವನ್ನು ಸೃಷ್ಟಿಸಿದನು. |
| **ಪ್ರತಿಧಿಃ ಇತಿ ಪೃಥಿವೀಮ್** ಅಸೃಜತ | **'ಪ್ರತಿಧಿರಸಿ ಪೃಥಿವ್ಯೈ ತ್ವಾ ಪೃಥಿವೀಂ ಜಿನ್ವ'** ಎಂಬ ಮಂತ್ರದಿಂದ ಪೃಥಿವಿಯನ್ನು ಸೃಜಿಸಿದನು. |

ವಿಷ್ಟಂಭ ಇತಿ ವೃಷ್ಟಿಂ ಪ್ರವೇತ್ಯಹರನುವೇತಿ ರಾತ್ರಿಮುಶಿಗಿತಿ ವಸೂನ್ಪ್ರಕೇತ ಇತಿ ರುದ್ರಾನ್ಥ್ಸುದೀತಿರಿತ್ಯಾದಿತ್ಯಾನೋಜ ಇತಿ ಪಿತೄಗ್‍ಂಸ್ತಂತುರಿತಿ ಪ್ರಜಾಃ ಪೃತನಾಷಾಡಿತಿ ಪಶೂ–

---

ವಿಷ್ಟಂಭ ಇತಿ ವಿ–ಸ್ತಂಭಃ । ಇತಿ । ವೃಷ್ಟಿಮ್ । ಪ್ರವೇತಿ ಪ್ರ–ವಾ । ಇತಿ । ಅಹಃ । ಅನುವೇತ್ಯನು–ವಾ । ಇತಿ । ರಾತ್ರಿಮ್ । ಉಶಿಕ್ । ಇತಿ । ವಸೂನ್ । ಪ್ರಕೇತ ಇತಿ ಪ್ರ–ಕೇತಃ । ಇತಿ । ರುದ್ರಾನ್ । ಸುದೀತಿರಿತಿ ಸು–ದೀತಿಃ । ಇತಿ । ಆದಿತ್ಯಾನ್ । ಓಜಃ । ಇತಿ । ಪಿತೄನ್ । ತಂತುಃ । ಇತಿ । ಪ್ರಜಾ ಇತಿ ಪ್ರ–ಜಾಃ । ಪೃತನಾಷಾಟ್ । ಇತಿ । ಪಶೂನ್ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ವಿಷ್ಟಂಭಃ ಇತಿ ವೃಷ್ಟಿಮ್** ಅಸೃಜತ | **'ವಿಷ್ಟಂಭೋಽಸಿ ವೃಷ್ಟ್ಯೈ ತ್ವಾ ವೃಷ್ಟಿಂ ಜಿನ್ವ'** ಎಂಬ ಮಂತ್ರದಿಂದ ವೃಷ್ಟಿಯನ್ನು ಸೃಜಿಸಿದನು. |
| **ಪ್ರವಾ ಇತಿ ಅಹಃ** ಅಸೃಜತ | **'ಪ್ರವಾಽಸ್ಯಹ್ನೇ ತ್ವಾಹರ್ಜಿನ್ವ'** ಎಂಬ ಮಂತ್ರದಿಂದ ಹಗಲನ್ನು ಸೃಷ್ಟಿಸಿದನು. |
| **ಅನುವಾ ಇತಿ ರಾತ್ರಿಮ್** ಅಸೃಜತ | **'ಅನುವಾಽಸಿ ರಾತ್ರಿಯೈ ತ್ವಾ ರಾತ್ರಿಂ ಜಿನ್ವ'** ಎಂಬ ಮಂತ್ರದಿಂದ ರಾತ್ರಿಯನ್ನು ಸೃಜಿಸಿದನು. |
| **ಉಶಿಕ್ ಇತಿ ವಸೂನ್** ಅಸೃಜತ | **'ಉಶಿಗಸಿ ವಸುಭ್ಯಸ್ತ್ವಾ ವಸೂಞ್ಜಿನ್ವ'** ಎಂಬ ಮಂತ್ರದಿಂದ ವಸುಗಳನ್ನು ಸೃಜಿಸಿದನು. |
| **ಪ್ರಕೇತಃ ಇತಿ ರುದ್ರಾನ್** ಅಸೃಜತ | **'ಪ್ರಕೇತೋಽಸಿ ರುದ್ರೇಭ್ಯಸ್ತ್ವಾ ರುದ್ರಾಞ್ಜಿನ್ವ'** ಎಂಬ ಮಂತ್ರದಿಂದ ರುದ್ರರನ್ನು ಸೃಜಿಸಿದನು. |
| **ಸುದೀತಿಃ ಇತಿ ಆದಿತ್ಯಾನ್** ಅಸೃಜತ | ಸುದೀತಿರಸ್ಯಾದಿತ್ಯೇಭ್ಯಸ್ತ್ವಾದಿತ್ಯಾಞ್ಜಿನ್ವ' ಎಂಬ ಮಂತ್ರದಿಂದ ಆದಿತ್ಯರನ್ನು ಸೃಜಿಸಿದನು. |
| **ಓಜಃ ಇತಿ ಪಿತೄನ್** ಅಸೃಜತ | **'ಓಜೋಽಸಿ ಪಿತೃಭ್ಯಸ್ತ್ವಾ ಪಿತೄಞ್ಜಿನ್ವ'** ಎಂಬ ಮಂತ್ರದಿಂದ ಪಿತೃದೇವತೆಗಳನ್ನು ಸೃಜಿಸಿದನು. |
| **ತಂತುಃ ಇತಿ ಪ್ರಜಾಃ** ಅಸೃಜತ | **'ತಂತುರಸಿ ಪ್ರಜಾಭ್ಯಸ್ತ್ವಾ ಪ್ರಜಾ ಜಿನ್ವ'** ಎಂಬ ಮಂತ್ರದಿಂದ ಪ್ರಜೆಗಳನ್ನು ಸೃಜಿಸಿದನು. |
| **ಪೃತನಾಷಾಟ್ ಇತಿ ಪಶೂನ್** ಅಸೃಜತ | **'ಪೃತನಾಷಾಡಸಿ ಪಶುಭ್ಯಸ್ತ್ವಾ ಪಶೂಞ್ಜಿನ್ವ'** ಎಂಬ ಮಂತ್ರದಿಂದ ಪಶುಗಳನ್ನು ಸೃಷ್ಟಿಸಿದನು. |

–ನ್ರೇವದಿತ್ಯೋಷಧೀರಭಿಜಿದಸಿ ಯುಕ್ತಗ್ರಾವೇಂದ್ರಾಯ

[ಯುಕ್ತಗ್ರಾವಾ(೨೮)ಇಂದ್ರಾಯ]ತ್ವೇಂದ್ರಂ ಜಿನ್ವೇತ್ಯೇವ ದಕ್ಷಿಣತೋ ವಜ್ರಂ

ಪರ್ಯೌಹದಭಿಜಿತ್ಯೈ ತಾಃ ಪ್ರಜಾ ಅಪಪ್ರಾಣಾ ಅಸೃಜತ

---

ರೇವತ್। ಇತಿ। ಓಷಧೀಃ। ಅಭಿಜದಿತ್ಯಭಿ–ಜಿತ್। ಅಸಿ। ಯುಕ್ತಗ್ರಾವೇತಿ ಯುಕ್ತ–ಗ್ರಾವಾ। (೨೮)। ಇಂದ್ರಾಯ। ತ್ವಾ। ಇಂದ್ರಮ್। ಜಿನ್ವ। ಇತಿ। ಏವ। ದಕ್ಷಿಣತಃ। ವಜ್ರಮ್। ಪರೀತಿ। ಔಹತ್। ಅಭಿಜಿತ್ಯಾ ಇತ್ಯಭಿ–ಜಿತ್ಯೈ। ತಾಃ। ಪ್ರಜಾ ಇತಿ ಪ್ರ–ಜಾಃ। ಅಪಪ್ರಾಣಾ ಇತ್ಯಪ–ಪ್ರಾಣಾಃ। ಅಸೃಜತ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ರೇವತ್ ಇತಿ ಓಷಧೀಃ** ಅಸೃಜತ | **'ರೇವದಸ್ಯೋಷಧೀಭ್ಯಸ್ತ್ವೌಷಧೀರ್ಜಿನ್ವ'** ಎಂಬ ಮಂತ್ರದಿಂದ ಓಷಧಿಗಳನ್ನು ಸೃಷ್ಟಿಸಿದನು. |
| **ಅಭಿಜಿತ್ ಅಸಿ ಯುಕ್ತಗ್ರಾವಾ ಇಂದ್ರಾಯ ತ್ವಾ ಇಂದ್ರಂ ಜಿನ್ವ ಇತಿ ಏವ ದಕ್ಷಿಣತಃ ವಜ್ರಮ್ ಪರ್ಯೌಹತ್** **ಅಭಿಜಿತ್ಯೈ** | (ಅದೆಲ್ಲದರ ರಕ್ಷಣೆಗಾಗಿ) ವಜ್ರಾಯುಧವನ್ನು 'ಎಲೈ! ವಜ್ರಾಯುಧವೇ! ನೀನು ಜಯಹೇತುವಾಗಿರುವೆ. ಭೂಮಿಯಲ್ಲಿ ಸ್ಥಾಪಿಸಿರುವ ಕಲ್ಲಿನಂತೆ ದೃಢವಾಗಿ ಇರುವೆ. ಇಂದ್ರನ ಪ್ರೀತಿಗಾಗಿ ನಿನ್ನನ್ನು ಸ್ತುತಿಸುವೆನು. ನೀನು ಇಂದ್ರನನ್ನು ಸಂತೋಷಪಡಿಸು', ಎಂಬ ಈ ಮಂತ್ರದಿಂದ ಪ್ರಜಾಪತಿಯು ತನ್ನ ಬಲಗೈಯಿಂದ ಜಗತ್ತಿನ ಜಯ–ರಕ್ಷಣೆಗಾಗಿ ಪ್ರೇರಿಸಿದನು/ಸ್ತುತಿಸಿದನು. |

ಪ್ರಜೆಗಳಲ್ಲಿ ಇಂದ್ರಿಯಸ್ಥಾಪನ

| | |
|---|---|
| **ತಾಃ ಅಪಪ್ರಾಣಾಃ ಪ್ರಜಾಃ ಅಸೃಜತ** | ಪ್ರಜಾಪತಿಯು ಆ ಪ್ರಜೆಗಳನ್ನು ಪ್ರಾಣರಹಿತರನ್ನಾಗಿ ಸೃಷ್ಟಿಸಿದನು. |

---

**ತಾತ್ಪರ್ಯ:– 'ರಶ್ಮಿರಸಿ'** ಎಂದು ಆರಂಭಗೊಂಡು ಹದಿನೈದು ಮಂತ್ರಗಳಿಂದ ಪ್ರಜಾಪತಿದೇವನು ಮಾಡಿದ ವಿವಿಧ ಸೃಷ್ಟಿಗಳು ಹೇಳಲ್ಪಟ್ಟವು. **'ಅಭಿಜಿತ್...'**ಎಂಬ ಮಂತ್ರದಿಂದ ಅವುಗಳ ರಕ್ಷಣೆಗಾಗಿ ವಜ್ರಾಯುಧವನ್ನು ಪ್ರೇರಿಸಿದುದನ್ನು ಹೇಳಲಾಗಿದೆ.

ತಾಸ್ವಧಿಪತಿರಸೀತ್ಯೇವ ಪ್ರಾಣಮದಧಾದ್ಯಂತೇತ್ಯಪಾನಗ್ಂ ಸಗ್ಂಸರ್ಪ ಇತಿ
ಚಕ್ಷುರ್ವಯೋಧಾ ಇತಿ ಶ್ರೋತ್ರಂ ತಾಃ ಪ್ರಜಾಃ ಪ್ರಾಣತೀರಪಾನತೀಃ
ಪಶ್ಯಂತೀಶ್ಶೃಣ್ವತೀರ್ನ ಮಿಥುನೀ ಅಭವ–

---

ತಾಸು । ಅಧಿಪತಿರಿತ್ಯಧಿ–ಪತಿಃ । ಅಸಿ । ಇತಿ । ಏವ । ಪ್ರಾಣಮಿತಿ ಪ್ರ–ಅನಮ್ । ಅದಧಾತ್ । ಯಂತಾ । ಇತಿ । ಅಪಾನಮಿತ್ಯಪ–ಅನಮ್ । ಸಗ್ಂಸರ್ಪ ಇತಿ ಸಮ್–ಸರ್ಪಃ । ಇತಿ । ಚಕ್ಷುಃ । ವಯೋಧಾ ಇತಿ ವಯಃ–ಧಾಃ । ಇತಿ । ಶ್ರೋತ್ರಮ್ । ತಾಃ । ಪ್ರಜಾ ಇತಿ ಪ್ರ–ಜಾಃ । ಪ್ರಾಣತೀರಿತಿ ಪ್ರ–ಅನತೀಃ । ಅಪಾನತೀರಿತ್ಯಪ–ಅನತೀಃ । ಪಶ್ಯಂತೀಃ । ಶೃಣ್ವತೀಃ । ನ । ಮಿಥುನೀ । ಅಭವನ್ನ್ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ತಾಸು ಅಧಿಪತಿಃ ಅಸಿ ಇತಿ ಏವ ಪ್ರಾಣಮ್** ಅದಧಾತ್ | ಬಳಿಕ ಆ ಪ್ರಜೆಗಳಲ್ಲಿ **'ಅಧಿಪತಿರಸಿ ಪ್ರಾಣಾಯ ತ್ವಾ ಪ್ರಾಣಂ ಜಿನ್ವ'** ಎಂಬ ಮಂತ್ರದಿಂದ ಪ್ರಾಣವನ್ನು ಸ್ಥಾಪಿಸಿದನು. |
| **ಯಂತಾ ಇತಿ ಅಪಾನಮ್** ಅದಧಾತ್ | **'ಯಂತಾಸ್ಯಪಾನಾಯ ತ್ವಾಽಪಾನಂ ಜಿನ್ವ'** ಎಂಬ ಮಂತ್ರದಿಂದ ಅಪಾನವನ್ನು ಸ್ಥಾಪಿಸಿದನು. |
| **ಸಗ್ಂಸರ್ಪಃ ಇತಿ ಚಕ್ಷುಃ** ಅದಧಾತ್ | **'ಸಗ್ಂಸರ್ಪೋಽಸಿ ಚಕ್ಷುಷೇ ತ್ವಾ ಚಕ್ಷುರ್ಜಿನ್ವ'** ಎಂಬ ಮಂತ್ರದಿಂದ ಕಣ್ಣನ್ನು ಸ್ಥಾಪಿಸಿದನು. |
| **ವಯೋಧಾಃ ಇತಿ ಶ್ರೋತ್ರಮ್** ಅದಧಾತ್ | **'ವಯೋಧಾ ಅಸಿ ಶ್ರೋತ್ರಾಯ ತ್ವಾ ಶ್ರೋತ್ರಂ ಜಿನ್ವ'** ಎಂಬ ಮಂತ್ರದಿಂದ ಕಿವಿಯನ್ನು ಸ್ಥಾಪಿಸಿದನು. |

ಮಿಥುನಭಾವಸ್ಥಾಪನ

| | |
|---|---|
| **ತಾಃ ಪ್ರಾಣತೀಃ ಅಪಾನತೀಃ ಪಶ್ಯಂತೀಃ ಶೃಣ್ವತೀಃ ಪ್ರಜಾಃ** | ಈ ರೀತಿ ಪ್ರಾಣದಿಂದ ಕೂಡಿದ, ಅಪಾನದಿಂದ ಯುಕ್ತವಾಗಿರುವ, ನೋಡುತ್ತಿರುವ, ಕೇಳುವ ಶಕ್ತಿಯನ್ನು ಹೊಂದಿರುವ ಪ್ರಜೆಗಳು |
| **ಮಿಥುನೀ ನ ಅಭವನ್** | ಮಿಥುನಭಾವವನ್ನು ಹೊಂದಲಿಲ್ಲ. |

ನ್ತಾಸು ತ್ರಿವೃದಸೀತ್ಯೇವ ಮಿಥುನಮದಧಾತ್ತಾಃ ಪ್ರಜಾ ಮಿಥುನೀ [(೨೯)] ಭವಂತೀರ್ನ ಪ್ರಾಜಾಯಂತ ತಾಸ್ಸಗ್ಂರೋಹೋऽಸಿ ನೀರೋಹೋऽಸೀತ್ಯೇವ ಪ್ರಾಜನಯತ್ತಾಃ ಪ್ರಜಾಃ ಪ್ರಜಾತಾ ನ ಪ್ರತ್ಯತಿಷ್ಠ–

---

ತಾಸು । ತ್ರಿವೃದಿತಿ ತ್ರಿ–ವೃತ್ । ಅಸಿ । ಇತಿ । ಏವ । ಮಿಥುನಮ್ । ಅದಧಾತ್ । ತಾಃ । ಪ್ರಜಾ ಇತಿ ಪ್ರ–ಜಾಃ । ಮಿಥುನೀ । (೨೯) । ಭವಂತೀಃ । ನ । ಪ್ರೇತಿ । ಅಜಾಯಂತ । ತಾಃ । ಸಗ್ಂರೋಹ ಇತಿ ಸಮ್–ರೋಹಃ । ಅಸಿ । ನೀರೋಹ ಇತಿ ನಿಃ–ರೋಹಃ । ಅಸಿ । ಇತಿ । ಏವ । ಪ್ರೇತಿ । ಅಜನಯತ್ । ತಾಃ । ಪ್ರಜಾ ಇತಿ ಪ್ರ–ಜಾಃ । ಪ್ರಜಾತಾ ಇತಿ ಪ್ರ–ಜಾತಾಃ । ನ । ಪ್ರತೀತಿ । ಅತಿಷ್ಠನ್ನ್ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ತಾಸು ತ್ರಿವೃತ್ ಅಸಿ ಇತಿ ಏವ ಮಿಥುನಮ್ ಅದಧಾತ್** | (ಬಳಿಕ ಪ್ರಜಾಪತಿಯು) ಆ ಪ್ರಜೆಗಳಲ್ಲಿ **'ತ್ರಿವೃದಸಿ, ಪ್ರವೃದಸಿ, ಸಂವೃದಸಿ, ವಿವೃದಸಿ'** ಎಂಬ ನಾಲ್ಕು ಮಂತ್ರಗಳಿಂದ ಮಿಥುನಶಕ್ತಿಯನ್ನು ಇಟ್ಟನು. |

ಪ್ರಜೋತ್ಪಾದನಸಾಮರ್ಥ್ಯಸ್ಥಾಪನ

| | |
|---|---|
| **ಮಿಥುನೀ ಭವಂತೀಃ ತಾಃ ಪ್ರಜಾಃ ನ ಪ್ರಾಜಾಯಂತ** | ಹೀಗೆ ಮಿಥುನಭಾವವನ್ನು ಹೊಂದಿದರೂ ಆ ಪ್ರಜೆಗಳು ಪ್ರಜೋತ್ಪಾದನಸಾಮರ್ಥ್ಯವನ್ನು ಹೊಂದಲಿಲ್ಲ. |
| **ತಾಃ ಸಗ್ಂರೋಹಃ ಅಸಿ ನೀರೋಹಃ ಅಸಿ ಇತಿ ಏವ ಪ್ರಾಜನಯತ್** | (ಬಳಿಕ ಪ್ರಜಾಪತಿದೇವನು) **'ಸಗ್ಂರೋಹೋऽಸಿ' 'ನೀರೋಹೋऽಸಿ' 'ಪ್ರರೋಹೋऽಸಿ' 'ಅನುರೋಹೋऽಸಿ'** ಎಂಬ ನಾಲ್ಕು ಮಂತ್ರಗಳಿಂದ ಪ್ರಜೆಗಳನ್ನು ಪ್ರಜೋತ್ಪಾದನಶಕ್ತರನ್ನಾಗಿ ಮಾಡಿದನು. |

ಪ್ರಜಾಪ್ರತಿಷ್ಠಾಪನ

| | |
|---|---|
| **ಪ್ರಜಾತಾಃ ತಾಃ ಪ್ರಜಾಃ ನ ಪ್ರತ್ಯತಿಷ್ಠನ್** | ಹುಟ್ಟಿದ ಆ ಪ್ರಜೆಗಳು ನೆಲೆಗೊಳ್ಳಲಿಲ್ಲ. |

---

ಪ್ರಜಾಪತಿದೇವನು ತಾನು ಸೃಷ್ಟಿಸಿದ ಪ್ರಜೆಗಳು ಪ್ರಾಣರಹಿತರಾಗಿದ್ದುದರಿಂದ ಅವರಲ್ಲಿ **'ಅಧಿಪತಿರಸಿ'** ಮುಂತಾದ ನಾಲ್ಕು ಮಂತ್ರಗಳಿಂದ ಪ್ರಾಣ–ಅಪಾನ–ಚಕ್ಷುಸ್ಸು–ಶ್ರೋತ್ರಗಳನ್ನಿಟ್ಟನು.

–ನ್ತಾ ವಸುಕೋಽಸಿ ವೇಷಶ್ರಿರಸಿ ವಸ್ಯಷ್ಟಿರಸೀತ್ಯೇವೈಷು ಲೋಕೇಷು ಪ್ರತ್ಯಸ್ಥಾಪಯದ್ಯದಾಹ ವಸುಕೋಽಸಿ ವೇಷಶ್ರಿರಸಿ ವಸ್ಯಷ್ಟಿರಸೀತಿ ಪ್ರಜಾ ಏವ ಪ್ರಜಾತಾ ಏಷು ಲೋಕೇಷು ಪ್ರತಿಷ್ಠಾಪಯತಿ

---

ತಾಃ । ವಸುಕಃ । ಅಸಿ । ವೇಷಶ್ರಿರಿತಿ ವೇಷ–ಶ್ರೀಃ । ಅಸಿ । ವಸ್ಯಷ್ಟಿಃ । ಅಸಿ । ಇತಿ । ಏವ । ಏಷು । ಲೋಕೇಷು । ಪ್ರತೀತಿ । ಅಸ್ಥಾಪಯತ್ । ಯತ್ । ಆಹ । ವಸುಕಃ । ಅಸಿ । ವೇಷಶ್ರಿರಿತಿ ವೇಷ–ಶ್ರೀಃ । ಅಸಿ । ವಸ್ಯಷ್ಟಿಃ । ಅಸಿ । ಇತಿ । ಪ್ರಜಾ ಇತಿ ಪ್ರ–ಜಾಃ । ಏವ । ಪ್ರಜಾತಾ ಇತಿ ಪ್ರ–ಜಾತಾಃ । ಏಷು । ಲೋಕೇಷು । ಪ್ರತೀತಿ । ಸ್ಥಾಪಯತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ತಾಃ ವಸುಕಃ ಅಸಿ ವೇಷಶ್ರೀಃ ಅಸಿ ವಸ್ಯಷ್ಟಿಃ ಅಸಿ ಇತಿ** | (ಆಗ ಆ ಪ್ರಜಾಪತಿಯು)ಆ ಪ್ರಜೆಗಳನ್ನು **'ವಸುಕೋಽಸಿ' 'ವೇಷಶ್ರಿರಸಿ' 'ವಸ್ಯಷ್ಟಿರಸಿ'** ಎಂಬ (ಮೂರು ಮಂತ್ರ ಗಳಿಂದ) |
| **ಏಷು ಲೋಕೇಷು ಏವ ಪ್ರತ್ಯಸ್ಥಾಪಯತ್** | ಈ (ಮೂರು) ಲೋಕಗಳಲ್ಲಿಯೇ ಪ್ರತಿಷ್ಠಿತರನ್ನಾಗಿ ಮಾಡಿದನು. |
| **ಯತ್ ವಸುಕಃ ಅಸಿ ವೇಷಶ್ರೀಃ ಅಸಿ ವಸ್ಯಷ್ಟಿಃ ಅಸಿ ಇತಿ ಆಹ** | ಯಾವ ಯಜಮಾನನು **'ವಸುಕೋಽಸಿ' 'ವೇಷಶ್ರಿರಸಿ' 'ವಸ್ಯಷ್ಟಿರಸಿ'** ಎಂದು ಹೇಳುತ್ತಾನೆಯೋ |
| **ಪ್ರಜಾತಾಃ ಪ್ರಜಾಃ ಏಷು ಲೋಕೇಷು ಪ್ರತಿ ಸ್ಥಾಪಯತಿ ಏವ** | ಅವನು ಹುಟ್ಟಿದ ಪ್ರಜೆಗಳನ್ನು ಮೂರು ಲೋಕಗಳಲ್ಲಿ ಪ್ರತಿಷ್ಠಿತರಾಗುವಂತೆಯೇ ಮಾಡುವನು. |

---

ಬಳಿಕ ಆ ಪ್ರಜೆಗಳಲ್ಲಿ ಮಿಥುನಶಕ್ತಿಯನ್ನೂ, ಪ್ರಜೋತ್ಪಾದನಸಾಮರ್ಥ್ಯವನ್ನೂ ಇಟ್ಟು ಅವರು ನೆಲೆಗೊಳ್ಳುವಂತೆ ಮಾಡಿದನು.

**'ರಶ್ಮಿರಸಿ'** ಎಂದು ಆರಂಭವಾಗುವ ಮಂತ್ರಗಳಿಂದ ಮೂವತ್ತೊಂದು ಸ್ತೋಮಭಾಗೇಷ್ಟಕೆಗಳನ್ನು ಉಪಧಾನ ಮಾಡಬೇಕು. ಈ ಸ್ತೋಮಗಳ ಸಂಬಂಧಿಯಾಗಿ ಶ್ರುತಿಯು ಹೇಳಿರುವ ಸೃಷ್ಟಿಯನ್ನು ತಿಳಿಯುವವನಿಗೆ ಉಂಟಾಗುವ ಫಲವನ್ನೂ ಶ್ರುತಿಯು ಹೇಳಿದೆ. ಇದು ಅರ್ಥವಾದವಾಗಿದೆ.

ಇಲ್ಲಿ ಪ್ರಜಾಪತಿಯು ಪ್ರಜೆಗಳನ್ನು ಸೃಷ್ಟಿಸಿದ ಉಪಾಖ್ಯಾನವೂ, ಅದನ್ನು ಅರಿಯುವುದರ ಪ್ರಶಂಸೆಯೂ ಇದೆ.

ಸಾತ್ಮಾಽಂತರಿಕ್ಷಗ್ಂ ರೋಹತಿ ಸಪ್ರಾಣೋಽಮುಷ್ಮಿಲ್ಲೋಕೇ ಪ್ರತಿತಿಷ್ಠತ್ಯವ್ಯರ್ಧುಕಃ

ಪ್ರಾಣಾಪಾನಾಭ್ಯಾಂ ಭವತಿ ಯ ಏವಂ ವೇದ ॥ ೩೦–6 ॥

[ಯುಕ್ತಗ್ರಾವಾ ಪ್ರಜಾ ಮಿಥುನ್ಯಂತರಿಕ್ಷಂ ದ್ವಾದಶ ಚ ॥]

---

ಸಾತ್ಮೇತಿ ಸ–ಆತ್ಮಾ । ಅಂತರಿಕ್ಷಮ್ । ರೋಹತಿ । ಸಪ್ರಾಣ ಇತಿ ಸ–ಪ್ರಾಣಃ । ಅಮುಷ್ಮಿನ್ । ಲೋಕೇ । ಪ್ರತೀತಿ ।

ತಿಷ್ಠತಿ । ಅವ್ಯರ್ಧುಕ ಇತ್ಯವಿ–ಅರ್ಧುಕಃ । ಪ್ರಾಣಾಪಾನಾಭ್ಯಾಮಿತಿ ಪ್ರಾಣ–ಅಪಾನಾಭ್ಯಾಮ್ । ಭವತಿ । ಯಃ ।

ಏವಮ್ । ವೇದ ॥ ೩೦–೬ ॥

---

| ಬ್ರಾಹ್ಮಣಭಾಗ | ವಿವರಣೆ |
| --- | --- |
| **ಸಾತ್ಮಾ ಅಂತರಿಕ್ಷಮ್ ರೋಹತಿ ಯಃ ಏವಮ್ ವೇದ** | ಯಾವನು ಹೀಗೆ ತಿಳಿಯುತ್ತಾನೆಯೋ ಅವನು ಶರೀರ ಸಹಿತನಾಗಿ ಅಂತರಿಕ್ಷವನ್ನು ಏರುತ್ತಾನೆ. |
| **ಅಮುಷ್ಮಿನ್ ಲೋಕೇ ಸಪ್ರಾಣಃ ಪ್ರತಿತಿಷ್ಠತಿ** | ಅಲ್ಲಿ (ಯಕ್ಷ, ಗಂಧರ್ವಲೋಕದಲ್ಲಿ ಭೋಗವನ್ನು ಅನುಭವಿಸಿ) ಪ್ರಾಣಸಹಿತನಾಗಿ ಸ್ವರ್ಗಲೋಕದಲ್ಲಿ ಪ್ರತಿಷ್ಠಿತನಾಗುವನು. |
| **ಅವ್ಯರ್ಧುಕಃ ಪ್ರಾಣಾಪಾನಾಭ್ಯಾಮ್ ಭವತಿ** | ಪ್ರಾಣ–ಅಪಾನಗಳಿಂದ ವಿಯುಕ್ತನಾಗುವುದೇ ಇಲ್ಲ. |

## ॥ ಸಪ್ತಮೋಽನುವಾಕಃ ॥

ನಾಕಸದ್ಭಿರ್ವೈ ದೇವಾಸ್ಸುವರ್ಗಂ ಲೋಕಮಾಯನ್ತನ್ನಾಕಸದಾನ್ನಾಕಸತ್ತ್ವಂ ಯನ್ನಾಕಸದ ಉಪದಧಾತಿ ನಾಕಸದ್ಭಿರೇವ ತದ್ಯಜಮಾನಸ್ಸುವರ್ಗಂ ಲೋಕಮೇತಿ

---

ನಾಕಸದ್ಭಿರಿತಿ ನಾಕಸತ್-ಭಿಃ । ವೈ । ದೇವಾಃ । ಸುವರ್ಗಮಿತಿ ಸುವಃ-ಗಮ್ । ಲೋಕಮ್ । ಆಯನ್ನ್ । ತತ್ । ನಾಕಸದಾಮಿತಿ ನಾಕ-ಸದಾಮ್ । ನಾಕಸತ್ತ್ವಮಿತಿ ನಾಕಸತ್-ತ್ವಮ್ । ಯತ್ । ನಾಕಸದ ಇತಿ ನಾಕ-ಸದಃ । ಉಪದಧಾತೀತ್ಯುಪ-ದಧಾತಿ । ನಾಕಸದ್ಭಿರಿತಿ ನಾಕಸತ್-ಭಿಃ । ಏವ । ತತ್ । ಯಜಮಾನಃ । ಸುವರ್ಗಮಿತಿ ಸುವಃ-ಗಮ್ । ಲೋಕಮ್ । ಏತಿ ।

---

ಈ ಏಳನೆಯ ಅನುವಾಕದಲ್ಲಿ ನಾಕಸದಿಷ್ಟಕೆ ಮುಂತಾದ ಐದು ವಿಧವಾದ ಇಷ್ಟಕೆಗಳು ಹೇಳಲ್ಪಟ್ಟಿವೆ.

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ನಾಕಸದ್ಭಿಃ ವೈ ದೇವಾಃ ಸುವರ್ಗಮ್ ಲೋಕಮ್ ಆಯನ್** | ಈ ನಾಕಸದಿಷ್ಟಕೆಗಳಿಂದ ದೇವತೆಗಳು ಸ್ವರ್ಗಲೋಕವನ್ನು ಹೊಂದಿದರು. |
| **ತತ್ ನಾಕಸದಾಮ್ ನಾಕಸತ್ತ್ವಮ್** | ಇದೇ (**ನಾಕಃ=ಸ್ವರ್ಗಃ, ಸದ್ಯತೇ=ಪ್ರಾಪ್ಯತೇ ಇತಿ ನಾಕಸತ್**) ನಾಕಸದಿಷ್ಟಕೆಗಳ ನಾಕಸತ್ತ್ವ (ಅನ್ವರ್ಥವಾದ ಹೆಸರು) |
| **ಯತ್ ನಾಕಸದಃ ಉಪದಧಾತಿ ತತ್** | ನಾಕಸದಿಷ್ಟಕೆಗಳನ್ನು ಉಪಧಾನ ಮಾಡುತ್ತಾನೆಂಬುದು ಯಾವುದೋ ಅದರಿಂದ |
| **ನಾಕಸದ್ಭಿಃ ಏವ ಯಜಮಾನಃ ಸುವರ್ಗಮ್ ಲೋಕಮ್ ಏತಿ** | ನಾಕಸದಿಷ್ಟಕೆಗಳಿಂದಲೇ ಯಜಮಾನನು ನಿಶ್ಚಯವಾಗಿ ಸ್ವರ್ಗವನ್ನು ಹೊಂದುತ್ತಾನೆ. |

ಸುವರ್ಗೋ ವೈ ಲೋಕೋ ನಾಕೋ ಯಸ್ಯೈತಾ ಉಪಧೀಯಂತೇ ನಾಸ್ಮಾ

ಅಕಂ ಭವತಿ ಯಜಮಾನಾಯತನಂ ವೈ ನಾಕಸದೋ ಯನ್ನಾಕಸದ

ಉಪದಧಾತ್ಯಾಯತನಮೇವ ತದ್ಯಜಮಾನಃ ಕುರುತೇ

---

ಸುವರ್ಗ ಇತಿ ಸುವಃ–ಗಃ । ವೈ । ಲೋಕಃ । ನಾಕಃ । ಯಸ್ಯ । ಏತಾಃ । ಉಪಧೀಯಂತ ಇತ್ಯುಪ–ಧೀಯಂತೇ । ನ । ಅಸ್ಮೈ । ಅಕಮ್ । ಭವತಿ । ಯಜಮಾನಾಯತನಮಿತಿ ಯಜಮಾನ–ಆಯತನಮ್ । ವೈ । ನಾಕಸದ ಇತಿ ನಾಕ–ಸದಃ । ಯತ್ । ನಾಕಸದ ಇತಿ ನಾಕ–ಸದಃ । ಉಪದಧಾತೀತ್ಯುಪ–ದಧಾತಿ । ಆಯತನಮ್ । ಏವ । ತತ್ । ಯಜಮಾನಃ । ಕುರುತೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|

ನಾಕಸದಿಷ್ಟಕೆಗಳ ಪ್ರಶಂಸೆ

| | |
|---|---|
| **ಸುವರ್ಗಃ ವೈ ಲೋಕಃ ನಾಕಃ** | ಸ್ವರ್ಗಲೋಕವೇ ನಾಕವಾಗಿದೆ. |
| **ಯಸ್ಯ ಏತಾಃ ಉಪಧೀಯಂತೇ ಅಸ್ಮೈ ಅಕಮ್ ನ ಭವತಿ** | ಯಾವ ಯಜಮಾನನಿಗಾಗಿ ಈ ನಾಕಸದಿಷ್ಟಕೆಗಳು ಉಪಧಾನ ಮಾಡಲ್ಪಡುತ್ತವೆಯೋ, ಅವನಿಗೆ ದುಃಖವು ಉಂಟಾಗುವುದಿಲ್ಲ. |
| **ನಾಕಸದಃ ಯಜಮಾನಾಯತನಮ್ ವೈ** | ನಾಕಸದಿಷ್ಟಕೆಗಳು ಯಜಮಾನನ ಸ್ಥಾನವಾಗಿವೆ. |
| **ಯತ್ ನಾಕಸದಃ ಉಪದಧಾತಿ** | ನಾಕಸದಿಷ್ಟಕೆಗಳನ್ನು ಉಪಧಾನ ಮಾಡುವನೆಂಬುದು ಯಾವುದೋ |
| **ತತ್ ಯಜಮಾನಃ ಆಯತನಮ್ ಏವ ಕುರುತೇ** | ಅದರಿಂದ ಯಜಮಾನನು ಸ್ಥಾನವನ್ನೇ ಗಳಿಸಿದವನಾಗುತ್ತಾನೆ. |

---

**ತಾತ್ಪರ್ಯ:– ನಾಕಃ**=ಸ್ವರ್ಗವು;(ಯಾವುದರಿಂದ) **ಸದ್ಯತೇ=ಪ್ರಾಪ್ಯತೇ=ಹೊಂದಲ್ಪಡುತ್ತದೆಯೋ** ಆ ಮಂತ್ರಗಳು ನಾಕಸದಗಳು. ಮಂತ್ರದಲ್ಲಿ **'ನಾಕಸ್ಯ ಪೃಷ್ಠೇ ಸುವರ್ಗೇ ಲೋಕೇ ಯಜಮಾನಂ ಚ ಸಾದಯಂತು'** ಎಂಬ ಲಿಂಗವು ಇದೆ. ಇಂತಹ ಮಂತ್ರಗಳಿಂದ ಉಪಧಾನ ಮಾಡಲ್ಪಡುವ ಇಷ್ಟಕೆಗಳು ನಾಕಸದಿಷ್ಟಕೆಗಳು.

**'ರಾಜ್ಞ್ಯಸಿ'** ಎಂದು ಪ್ರಾರಂಭಗೊಳ್ಳುವ ಮಂತ್ರಗಳಿಂದ ನಾಕಸದಿಷ್ಟಕೆಗಳು ವಿಹಿತವಾಗಿವೆ. ಈ ಅನುವಾಕದಲ್ಲಿ ಆ ವಿಧಿಗೆ ಸಂಬಂಧಿಸಿದ ಅರ್ಥವಾದವೂ ಇದೆ.

ಪೃಷ್ಠಾನಾಂ ವಾ ಏತತ್ತೇಜಸ್ಸಂಭೃತಂ ಯನ್ನಾಕಸದೋ ಯನ್ನಾಕಸದ [ನಾಕಸದಃ(೩೧)ಉಪದಧಾತಿ]ಉಪದಧಾತಿ ಪೃಷ್ಠಾನಾಮೇವ ತೇಜೋऽವ ರುಂಧೇ ಪಂಚಚೋಡಾ ಉಪದಧಾತ್ಯಪ್ಸರಸ ಏವೈನಮೇತಾ ಭೂತಾ

---

ಪೃಷ್ಠಾನಾಮ್ । ವೈ । ಏತತ್ । ತೇಜಃ । ಸಂಭೃತಮಿತಿ ಸಮ್-ಭೃತಮ್ । ಯತ್ । ನಾಕಸದ ಇತಿ ನಾಕ-ಸದಃ । ಯತ್ । ನಾಕಸದ ಇತಿ ನಾಕ-ಸದಃ । (೩೧) । ಉಪದಧಾತೀತ್ಯುಪ-ದಧಾತಿ । ಪೃಷ್ಠಾನಾಮ್ । ಏವ । ತೇಜಃ । ಅವೇತಿ । ರುಂಧೇ । ಪಂಚಚೋಡಾ ಇತಿ ಪಂಚ-ಚೋಡಾಃ । ಉಪೇತಿ । ದಧಾತಿ । ಅಪ್ಸರಸಃ । ಏವ । ಏನಮ್ । ಏತಾಃ । ಭೂತಾಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಯತ್ ನಾಕಸದಃ ಏತತ್ ಪೃಷ್ಠಾನಾಮ್ ತೇಜಃ ಸಂಭೃತಮ್ ವೈ | ಈ ನಾಕಸದಿಷ್ಟಕೆಗಳೆಂಬುದು ಯಾವುದೋ ಅದು ಪೃಷ್ಠಸ್ತೋತ್ರಗಳ ತೇಜಸ್ಸನ್ನೇ ಇಟ್ಟಂತೆ ಆಗುತ್ತದೆ. |
| ನಾಕಸದಃ ಉಪದಧಾತಿ ಯತ್ ಪೃಷ್ಠಾನಾಮ್ ತೇಜಃ ಏವ ಅವರುಂಧೇ | ನಾಕಸದಿಷ್ಟಕೆಗಳನ್ನು ಉಪಧಾನ ಮಾಡುವುದೆಂಬುದು (ಅದರಿಂದ) ಯಜಮಾನನು ಪೃಷ್ಠಸ್ತೋತ್ರಗಳ ತೇಜಸ್ಸನ್ನೇ ಹೊಂದುವನು. |

**ಚೋಡೇಷ್ಟಕೋಪಧಾನ; ಪ್ರಶಂಸೆ**

| | |
|---|---|
| ಪಂಚಚೋಡಾಃ ಉಪದಧಾತಿ | ಐದು ಚೋಡೇಷ್ಟಕೆಗಳನ್ನು ಉಪಧಾನ ಮಾಡಬೇಕು./ಪಂಚಚೋಡೇಷ್ಟಕೆಗಳನ್ನು ಉಪಧಾನ ಮಾಡಬೇಕು. |
| ಏತಾಃ ಅಪ್ಸರಸಃ ಏವ ಭೂತಾಃ | ಈ ಇಷ್ಟಕೆಗಳು ಅಪ್ಸರೆಯರೇ ಆಗಿ |

---

ಮಂತ್ರದಲ್ಲಿ **'ನಾಕಸ್ಯ ಪೃಷ್ಠೇ ಸುವರ್ಗೇ ಲೋಕೇ'** ಎಂದು ಇರುವುದರಿಂದ ನಾಕಲೋಕದ ಕೆಳಗೆ ಸ್ವರ್ಗ ಲೋಕವು ಇದೆಯೆಂದು ತಿಳಿಯುತ್ತದೆ. **'ಸುವರ್ಗಃ ವೈ ಲೋಕಃ ನಾಕಃ'** ಎಂದಿರುವುದರಿಂದ ನಾಕ-ಸ್ವರ್ಗಗಳೆರಡೂ ಒಂದೇ ಎಂಬುದಾಗಿಯೂ ತೋರುತ್ತದೆ. **'ಕ'** ಎಂದರೆ ಸುಖ. **'ಅಕ'** ಎಂದರೆ ದುಃಖ. **ನ+ಅಕ**=ದುಃಖವಿಲ್ಲದುದು

ಅಮುಷ್ಮಿಲ್ಲೋಕ ಉಪಶೇರೇಽಥೋ ತನೂಪಾನೀರೇವೈತಾ ಯಜಮಾನಸ್ಯ
ಯಂ ದ್ವಿಷ್ಯಾತ್ತಮುಪದಧದ್ಧ್ಯಾಯೇದೇತಾಭ್ಯ ಏವೈನಂ ದೇವತಾಭ್ಯ
ಆವೃಶ್ಚತಿ ತಾಜಗಾರ್ತಿಮಾರ್ಛತ್ಯುತ್ತರಾ ನಾಕಸದ್ಭ್ಯ ಉಪದಧಾತಿ

---

ಅಮುಷ್ಮಿನ್ನ್ । ಲೋಕೇ । ಉಪೇತಿ । ಶೇರೇ । ಅಥೋ ಇತಿ । ತನೂಪಾನೀತಿರಿತಿ ತನೂ–ಪಾನೀಃ । ಏವ । ಏತಾಃ । ಯಜಮಾನಸ್ಯ । ಯಮ್ । ದ್ವಿಷ್ಯಾತ್ । ತಮ್ । ಉಪದಧದಿತ್ಯುಪ–ದಧತ್ । ಧ್ಯಾಯೇತ್ । ಏತಾಭ್ಯಃ । ಏವ । ಏನಮ್ । ದೇವತಾಭ್ಯಃ । ಏತಿ । ವೃಶ್ಚತಿ । ತಾಜಕ್ । ಆರ್ತಿಮ್ । ಏತಿ । ಋಚ್ಛತಿ । ಉತ್ತರಾ ಇತ್ಯುತ್–ತರಾಃ । ನಾಕಸದ್ಭ್ಯ ಇತಿ ನಾಕಸತ್–ಭ್ಯಃ । ಉಪೇತಿ । ದಧಾತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಅಮುಷ್ಮಿನ್ ಲೋಕೇ ಏನಮ್ ಉಪಶೇರೇ | ಸ್ವರ್ಗಲೋಕದಲ್ಲಿ ಯಜಮಾನನ ಜೊತೆಯಲ್ಲಿ ಮಲಗಿ ಸುಖವನ್ನು ಕೊಡುತ್ತಾರೆ. |
| ಅಥೋ ಏತಾಃ ಯಜಮಾನಸ್ಯ ತನೂಪಾನೀಃ ಏವ | ಮತ್ತು ಈ ಪಂಚಚೋಡೇಷ್ಟಕೆಗಳು ಯಜಮಾನನ ಶರೀರವನ್ನು ಪಾಲಿಸುವವರೂ ಆಗಿರುತ್ತಾರೆ. |
| | **ಆಭಿಚಾರಿಕಕ್ರಮ** |
| ಯಮ್ ದ್ವಿಷ್ಯಾತ್ ಉಪದಧತ್ ತಮ್ ಧ್ಯಾಯೇತ್ | ಯಜಮಾನನು ಯಾವನನ್ನು ದ್ವೇಷಿಸುತ್ತಾನೆಯೋ ಅಧ್ವರ್ಯುವು ಇಷ್ಟಕೋಪಧಾನವನ್ನು ಮಾಡುವಾಗ ಆತನನ್ನು ಧ್ಯಾನಿಸಬೇಕು. |
| ಏತಾಭ್ಯಃ ದೇವತಾಭ್ಯಃ ಏವ ಏನಮ್ ಆ ವೃಶ್ಚತಿ | ಆಗ ಅಧ್ವರ್ಯುವು ಮಂತ್ರಗಳಲ್ಲಿರುವ ಅಗ್ನಿ–ಸೇನಾನಿ ಮುಂತಾದ ದೇವತೆಗಳಿಂದ ಈ ದ್ವೇಷ್ಯನನ್ನು ದೂರಮಾಡುತ್ತಾನೆ. |
| ತಾಜಕ್ ಆರ್ತಿಮ್ ಆರ್ಛತಿ | ಆ ದ್ವೇಷ್ಯನು ಒಡನೆಯೇ ಮರಣ/ಪೀಡೆಯನ್ನು ಹೊಂದುವನು. |
| | **ಇಷ್ಟಕೋಪಧಾನಕಾಲ/ದೇಶ** |
| ನಾಕಸದ್ಭ್ಯಃ ಉತ್ತರಾಃ ಉಪದಧಾತಿ | ನಾಕಸದಿಷ್ಟಕೆಗಳ ಉಪಧಾನದ ಅನಂತರ ಅವುಗಳ ಮೇಲೆಯೇ ಪಂಚಚೋಡೇಷ್ಟಕೆಗಳನ್ನು ಉಪಧಾನ ಮಾಡಬೇಕು. |

ಯಥಾ ಜಾಯಾಮಾನೀಯ ಗೃಹೇಷು ನಿಷಾದಯತಿ ತಾದೃಗೇವ

ತ[ತತ್(೩೨)ಪಶ್ಚಾತ್]ತ್ಪಶ್ಚಾತ್ಪ್ರಾಚೀಮುತ್ತಮಾಮುಪದಧಾತಿ

ತಸ್ಮಾತ್ಪಶ್ಚಾತ್ಪ್ರಾಚೀ ಪತ್ನ್ಯನ್ವಾಸ್ತೇ ಸ್ವಯಮಾತೃಣ್ಣಾಂ ಚ

---

ಯಥಾ । ಜಾಯಾಮ್ । ಆನೀಯೇತ್ಯಾ-ನೀಯ । ಗೃಹೇಷು । ನಿಷಾದಯತೀತಿ ನಿ-ಸಾದಯತಿ । ತಾದೃಕ್ । ಏವ ।

ತತ್ । (೩೨) । ಪಶ್ಚಾತ್ । ಪ್ರಾಚೀಮ್ । ಉತ್ತಮಾಮಿತ್ಯುತ್-ತಮಾಮ್ । ಉಪೇತಿ । ದಧಾತಿ । ತಸ್ಮಾತ್ ।

ಪಶ್ಚಾತ್ । ಪ್ರಾಚೀ । ಪತ್ನೀ । ಅನ್ವಿತಿ । ಆಸ್ತೇ । ಸ್ವಯಮಾತೃಣ್ಣಾಮಿತಿ ಸ್ವಯಮ್-ಆತೃಣ್ಣಾಮ್ । ಚ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯಥಾ ಜಾಯಾಮ್ ಆನೀಯ ಗೃಹೇಷು ನಿಷಾದಯತಿ ತತ್ ತಾದೃಕ್ ಏವ ಪಶ್ಚಾತ್ ಪ್ರಾಚೀಮ್ ಉತ್ತಮಾಮ್ ಉಪದಧಾತಿ** | ಹೇಗೆ ಗೃಹಸ್ಥನು ಮದುವೆಯಾಗಿ ಹೆಂಡತಿಯನ್ನು ತನ್ನ ಮನೆಗೆ ಕರೆತಂದು ಕೂರಿಸುತ್ತಾನೆಯೋ ಅದರಂತೆಯೇ ಈ ಉಪಧಾನವಾಗುತ್ತದೆ. ಪಶ್ಚಿಮದಿಕ್ಕಿನಲ್ಲಿ ಪೂರ್ವಾಭಿಮುಖವಾಗಿ **'ಅಯಂ ಪಶ್ಚಾತ್ ವಿಶ್ವವ್ಯಚಾಃ'** ಎಂಬ ಮಂತ್ರದಿಂದ ಉಪಧಾನ ಮಾಡುವ ಇಷ್ಟಕೆಯನ್ನು ಕೊನೆಯದಾಗಿ ಉಪಧಾನ ಮಾಡಬೇಕು. |
| **ತಸ್ಮಾತ್ ಪಶ್ಚಾತ್ ಪ್ರಾಚೀ ಪತ್ನೀ ಅನ್ವಾಸ್ತೇ** | ಆದುದರಿಂದ ಯಜಮಾನನ ಪತ್ನಿಯು ಪಶ್ಚಿಮದಿಕ್ಕಿನಲ್ಲಿ ಗಾರ್ಹಪತ್ಯಾಗ್ನಿಯ ಸಮೀಪದಲ್ಲಿ ಪೂರ್ವಾಭಿಮುಖವಾಗಿ ಕುಳಿತುಕೊಳ್ಳಬೇಕು. |

**ಸ್ವಯಮಾತೃಣ್ಣೇಷ್ಟಕೆ-ವಿಕರ್ಣೀಷ್ಟಕೆಗಳ ಉಪಧಾನ**

| | |
|---|---|
| **ಸ್ವಯಮಾತೃಣ್ಣಾಮ್ ಚ** | ಕೊನೆಯದಾಗಿ *ಸ್ವಯಮಾತೃಣ್ಣೇಷ್ಟಕೆಯನ್ನೂ, |

---

ಅಂದರೆ ಸುಖರೂಪವಾದುದು ಸ್ವರ್ಗ. ನಾಕಸದಿಷ್ಟಕೆಗಳು ಸ್ಥಾನರೂಪಗಳೂ ಪೃಷ್ಠಸ್ತೋತ್ರತೇಜೋರೂಪಗಳೂ ಆಗಿವೆ. ಇವುಗಳ ಉಪಧಾನದಿಂದ ಯಜಮಾನನು ಸ್ಥಾನವನ್ನು ಗಳಿಸುವನು. ತೇಜಸ್ಸನ್ನೂ ಹೊಂದುವನು ಎಂಬ ಅರ್ಥವಾದವೂ ಇಲ್ಲಿದೆ. ನಾಕಸದಿಷ್ಟಕೆಗಳು ಐದು.

**'ಅಯಂ ಪುರಃ'** ಮುಂತಾದ ಮಂತ್ರಗಳಿಂದ ಉಪಧಾನ ಮಾಡುವ ಇಷ್ಟಕೆಗಳು ಚೋಡೇಷ್ಟಕೆಗಳು. ಇವು ಐದು.

---

* ತಾನಾಗಿಯೇ ರಂಧ್ರಯುಕ್ತವಾದ ಕಲ್ಲು.

ವಿಕರ್ಣೀಂ ಚೋತ್ತಮೇ ಉಪದಧಾತಿ ಪ್ರಾಣೋ ವೈ ಸ್ವಯಮಾತೃಣ್ಣಾಽಽಯು

ರ್ವಿಕರ್ಣೀ ಪ್ರಾಣಂ ಚೈವಾಯುಶ್ಚ ಪ್ರಾಣಾನಾಮುತ್ತಮೌ ಧತ್ತೇ ತಸ್ಮಾತ್ಪ್ರಾಣ

-ಶ್ಚಾಯುಶ್ಚ ಪ್ರಾಣಾನಾಮುತ್ತಮೌ ನಾನ್ಯಾಮುತ್ತರಾಮಿಷ್ಟಕಾಮುಪದಧ್ಯಾ-

---

ವಿಕರ್ಣೀಮಿತಿ ವಿ-ಕರ್ಣೀಮ್। ಚ। ಉತ್ತಮೇ ಇತ್ಯುತ್-ತಮೇ। ಉಪೇತಿ। ದಧಾತಿ। ಪ್ರಾಣ ಇತಿ ಪ್ರ-ಅನಃ। ವೈ। ಸ್ವಯಮಾತೃಣ್ಣೇತಿ ಸ್ವಯಮ್-ಆತೃಣ್ಣಾ। ಆಯುಃ। ವಿಕರ್ಣೀತಿ ವಿ-ಕರ್ಣೀ। ಪ್ರಾಣಮಿತಿ ಪ್ರ-ಅನಮ್। ಚ। ಏವ। ಆಯುಃ। ಚ। ಪ್ರಾಣಾನಾಮಿತಿ ಪ್ರ-ಅನಾನಾಮ್। ಉತ್ತಮಾವಿತ್ಯುತ್-ತಮೌ। ಧತ್ತೇ। ತಸ್ಮಾತ್। ಪ್ರಾಣ ಇತಿ ಪ್ರ-ಅನಃ। ಚ। ಆಯುಃ। ಚ। ಪ್ರಾಣಾನಾಮಿತಿ ಪ್ರ-ಅನಾನಾಮ್। ಉತ್ತಮಾವಿತ್ಯುತ್-ತಮೌ। ನ। ಅನ್ಯಾಮ್। ಉತ್ತರಾಮಿತ್ಯುತ್-ತರಾಮ್। ಇಷ್ಟಕಾಮ್। ಉಪೇತಿ। ದಧ್ಯಾತ್।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ವಿಕರ್ಣೀಮ್ ಚ ಉತ್ತಮೇ ಉಪದಧಾತಿ** | *ವಿಕರ್ಣೀಷ್ಟಕೆಯನ್ನೂ ಉಪಧಾನ ಮಾಡಬೇಕು. |
| **ಪ್ರಾಣಃ ವೈ ಸ್ವಯಮಾತೃಣ್ಣಾ** | ಸ್ವಯಾಮಾತೃಣ್ಣೇಷ್ಟಕೆಯು ಪ್ರಾಣರೂಪವಾಗಿದೆ. |
| **ಆಯುಃ ವಿಕರ್ಣೀ** | ವಿಕರ್ಣೀಷ್ಟಕೆಯು ಆಯುಃಸ್ವರೂಪವಾಗಿದೆ. |
| **ಪ್ರಾಣಾನಾಮ್ ಉತ್ತಮೌ ಪ್ರಾಣಮ್ ಚ ಆಯುಃ ಚ ಧತ್ತೇ ಏವ** | ಚಕ್ಷುರಾದಿಪ್ರಾಣಗಳಲ್ಲಿ ಶ್ರೇಷ್ಠವಾದ ಪ್ರಾಣವನ್ನೂ ಆಯುಸ್ಸನ್ನೂ ಯಜಮಾನನು (ಈ ಇಷ್ಟಕೋಪಧಾನದಿಂದ) ಧಾರಣೆ ಮಾಡಿದವನಾಗುತ್ತಾನೆ. |
| **ತಸ್ಮಾತ್ ಪ್ರಾಣಾನಾಮ್ ಪ್ರಾಣಃ ಚ ಆಯುಃ ಚ ಉತ್ತಮೌ** | ಆದುದರಿಂದ ಪ್ರಾಣವೂ, ಆಯುಸ್ಸೂ, ಪ್ರಾಣಗಳಲ್ಲಿ ಶ್ರೇಷ್ಠವಾದವುಗಳು. |
| **ಅನ್ಯಾಮ್ ಉತ್ತರಾಮ್ ಇಷ್ಟಕಾಮ್ ನ ಉಪದಧ್ಯಾತ್** | ಈ ಎರಡು ಇಷ್ಟಕೆಗಳ ಉಪಧಾನವಾದ ಮೇಲೆ ಮುಂದೆ ಬೇರೆಯ ಇಷ್ಟಕೆಯನ್ನು ಉಪಧಾನ ಮಾಡಬಾರದು. |

---

ನಾಕಸದಿಷ್ಟಕೆಗಳ ಮೇಲೆ ರಂಧ್ರವನ್ನು ಮುಚ್ಚುವುದಕ್ಕಾಗಿ ಈ ಇಷ್ಟಕೆಗಳು. ಹೀಗಾಗಿ ಇವುಗಳಿಗೆ **'ಚೋಡೇಷ್ಟಕೆ'** ಗಳೆಂದು ಹೆಸರು. **(ಚುಡ=ಸಂವರಣೇ=ಮುಚ್ಚುವಿಕೆ)**

---

* ಚಿತಿಯ ಉತ್ತರಭುಜದಲ್ಲಿ ಇರುವಾಗ ಎಡಭಾಗದಲ್ಲಿ ಕತ್ತರಿಸಿದ ಕಿವಿಯಂತೆ ತೋರುವುದರಿಂದ **'ವಿಕರ್ಣೀ'** ಎನಿಸಿದೆ.

ದ್ಯದನ್ಯಾಮುತ್ತರಾಮಿಷ್ಟಕಾಮುಪದಧ್ಯಾತ್ಪಶೂನಾಞ್ಚ

[ಪಶೂನಾಮ್(೩೩)]ಯಜಮಾನಸ್ಯ ಚ ಪ್ರಾಣಂ ಚಾಯುಶ್ಚಾಪಿ

ದಧ್ಯಾತ್ತಸ್ಮಾನ್ನಾನ್ಯೋತ್ತರೇಷ್ಟಕೋಪಧೇಯಾ ಸ್ವಯಮಾತೃಣ್ಣಾಮುಪದಧಾ-

---

ಯತ್ । ಅನ್ಯಾಮ್ । ಉತ್ತರಾಮಿತ್ಯುತ್-ತರಾಮ್ । ಇಷ್ಟಕಾಮ್ । ಉಪದಧ್ಯಾದಿತ್ಯುಪ-ದಧ್ಯಾತ್ । ಪಶೂನಾಮ್ । (೩೩) । ಚ । ಯಜಮಾನಸ್ಯ । ಚ । ಪ್ರಾಣಮಿತಿ ಪ್ರ-ಅನಮ್ । ಚ । ಆಯುಃ । ಚ । ಅಪೀತಿ । ದಧ್ಯಾತ್ । ತಸ್ಮಾತ್ । ನ । ಅನ್ಯಾ । ಉತ್ತರೇತ್ಯುತ್-ತರಾ । ಇಷ್ಟಕಾ । ಉಪಧೇಯೇತ್ಯುಪ-ಧೇಯಾ । ಸ್ವಯಮಾತೃಣ್ಣಾಮಿತಿ ಸ್ವಯಮ್-ಆತೃಣ್ಣಾಮ್ । ಉಪೇತಿ । ದಧಾತಿ ।

---

| ಬ್ರಾಹ್ಮಣಭಾಗ | ವಿವರಣೆ |
| --- | --- |
| **ಯತ್ ಅನ್ಯಾಮ್ ಇಷ್ಟಕಾಮ್ ಉತ್ತರಾಮ್ ಉಪದಧ್ಯಾತ್ ಯಜಮಾನಸ್ಯ ಚ ಪಶೂನಾಮ್ ಚ ಪ್ರಾಣಮ್ ಚ ಆಯುಃ ಚ ಅಪಿದಧ್ಯಾತ್** | ಇವೆರಡರ ಉಪಧಾನದ ಬಳಿಕ ಬೇರೆಯ ಇಷ್ಟಕೆಯನ್ನು ಉಪಧಾನ ಮಾಡಿದರೆ ಯಜಮಾನನ ಮತ್ತು ಅವನ ಪಶುಗಳ ಪ್ರಾಣವನ್ನೂ, ಆಯುಸ್ಸನ್ನೂ ಮುಚ್ಚಿಹಾಕಿದಂತೆ ಆಗುತ್ತದೆ. |
| **ತಸ್ಮಾತ್ ಅನ್ಯಾ ಉತ್ತರಾ ಇಷ್ಟಕಾ ನ ಉಪಧೇಯಾ** | ಆದುದರಿಂದ ಆ ಮೇಲೆ ಬೇರೆಯ ಇಷ್ಟಕೆಯ ಉಪಧಾನವನ್ನು ಮಾಡಬಾರದು. |

### ಸ್ವಯಮಾತೃಣ್ಣೇಷ್ಟಕೆಯ ಪ್ರಶಂಸೆ

| | |
| --- | --- |
| **ಸ್ವಯಮಾತೃಣ್ಣಾಮ್ ಉಪದಧಾತಿ** | ಸ್ವಯಮಾತೃಣ್ಣೇಷ್ಟಕೆಯನ್ನು ಉಪಧಾನ ಮಾಡಬೇಕು. |

---

**'ಸಪ್ತ ವೈ ಶೀರ್ಷಣ್ಯಾಃ ಪ್ರಾಣಾಃ'** ಎಂಬ ಶ್ರುತಿವಚನದಂತೆ ಕಣ್ಣು ಮೊದಲಾದವುಗಳೂ ಪ್ರಾಣಗಳೇ. ಆದರೆ ಪ್ರಾಣವಾಯುವೂ, ಆಯುಸ್ಸೂ ಇಲ್ಲವಾದರೆ ಅವು ಇರಲಾರವು. ಅವೆರಡೂ ಇದ್ದರೆ ಕಣ್ಣು ಮುಂತಾದ ಪ್ರಾಣಗಳ ಕೊರತೆಯನ್ನು ಸಹಿಸುವರಷ್ಟೆ.

**'ಆಯೋಸ್ತ್ವಾ...'** ಎಂಬ ಮಂತ್ರದಿಂದಲೂ **'ಪ್ರೋಥದಶ್ವೋ'** ಎಂಬ ಮಂತ್ರದಿಂದಲೂ ಸ್ವಯಮಾತೃಣ್ಣೇಷ್ಟಕೆಯನ್ನೂ, ವಿಕರ್ಣೀಷ್ಟಕೆಯನ್ನೂ ಕ್ರಮವಾಗಿ ಉಪಧಾನ ಮಾಡಬೇಕು.

–ತ್ಯಸೌ ವೈ ಸ್ವಯಮಾತೃಣ್ಣಾಽಮೂಮೇವೋಪ ಧತ್ತೇಽಶ್ವಮುಪ ಘ್ರಾಪಯತಿ ಪ್ರಾಣಮೇವಾಸ್ಯಾಂ ದಧಾತ್ಯಥೋ ಪ್ರಾಜಾಪತ್ಯೋ ವಾ ಅಶ್ವಃ ಪ್ರಜಾಪತಿ ನೈವಾಗ್ನಿಂ ಚಿನುತೇ ಸ್ವಯಮಾತೃಣ್ಣಾ ಭವತಿ ಪ್ರಾಣಾನಾಮುಥ್ಸೃಷ್ಟ್ಯೈ

---

ಅಸೌ । ವೈ । ಸ್ವಯಮಾತೃಣ್ಣೇತಿ ಸ್ವಯಮ್–ಆತೃಣ್ಣಾ । ಅಮೂಮ್ । ಏವ । ಉಪೇತಿ । ಧತ್ತೇ । ಅಶ್ವಮ್ । ಉಪೇತಿ । ಘ್ರಾಪಯತಿ । ಪ್ರಾಣಮಿತಿ ಪ್ರ–ಅನಮ್ । ಏವ । ಅಸ್ಯಾಮ್ । ದಧಾತಿ । ಅಥೋ ಇತಿ । ಪ್ರಾಜಾಪತ್ಯ ಇತಿ ಪ್ರಾಜಾ–ಪತ್ಯಃ । ವೈ । ಅಶ್ವಃ । ಪ್ರಜಾಪತಿನೇತಿ ಪ್ರಜಾ–ಪತಿನಾ । ಏವ । ಅಗ್ನಿಮ್ । ಚಿನುತೇ । ಸ್ವಯಮಾತೃಣ್ಣೇತಿ ಸ್ವಯಮ್–ಅತೃಣ್ಣಾ । ಭವತಿ । ಪ್ರಾಣಾನಾಮಿತಿ ಪ್ರ–ಅನಾನಾಮ್ । ಉಥ್ಸೃಷ್ಟ್ಯೈ ಇತ್ಯುತ್–ಸೃಷ್ಟ್ಯೈ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಅಸೌ ವೈ ಸ್ವಯಮಾತೃಣ್ಣಾ** | ಈ ಸ್ವಯಮಾತೃಣ್ಣೆಯು ದ್ಯುಲೋಕಸ್ವರೂಪವಾಗಿದೆ. |
| **ಅಮೂಮ್ ಏವ ಉಪಧತ್ತೇ** | (ಈ ಇಷ್ಟಕೋಪಧಾನವನ್ನು ಮಾಡಿದ ಯಜಮಾನನು] ಈ ದ್ಯುಲೋಕವನ್ನೇ ಉಪಧಾನ ಮಾಡಿದವನಾಗುತ್ತಾನೆ. |
| **ಅಶ್ವಮ್ ಉಪಘ್ರಾಪಯತಿ** | ಅಶ್ವವು ಸ್ವಯಮಾತೃಣ್ಣೇಷ್ಟಕೆಯನ್ನು ಆಘ್ರಾಣಿಸುವಂತೆ ಮಾಡಬೇಕು. |
| **ಅಸ್ಯಾಮ್ ಪ್ರಾಣಮ್ ಏವ ದಧಾತಿ** | ಇದರಿಂದ ಅಧ್ವರ್ಯುವು ಈ ಸ್ವಯಮಾತೃಣ್ಣೆಯಲ್ಲಿ ಪ್ರಾಣವನ್ನೇ ಸ್ಥಾಪಿಸಿದವನಾಗುತ್ತಾನೆ. |
| **ಅಥೋ ಅಶ್ವಃ ಪ್ರಾಜಾಪತ್ಯಃ ವೈ** | ಮತ್ತು ಅಶ್ವವು ಪ್ರಜಾಪತಿದೇವತಾಕವಾದುದು. |
| **ಪ್ರಜಾಪತಿನಾ ಏವ ಅಗ್ನಿಮ್ ಚಿನುತೇ** | ಪ್ರಜಾಪತಿಯ ಅನುಗ್ರಹದಿಂದಲೇ ಯಜಮಾನನು ಅಗ್ನಿಚಯನವನ್ನು ಮಾಡಿದವನಾಗುತ್ತಾನೆ. |
| **ಪ್ರಾಣಾನಾಮ್ ಉಥ್ಸೃಷ್ಟ್ಯೈ ಸ್ವಯಮಾತೃಣ್ಣಾ ಭವತಿ** | ಸ್ವಯಮಾತೃಣ್ಣೇಷ್ಟಕೆಯು ಪ್ರಾಣಾದಿವಾಯುಗಳ ಊರ್ಧ್ವಸಂಚಾರಕ್ಕೆ ಕಾರಣವಾಗುತ್ತದೆ. |

ಅಥೋ ಸುವರ್ಗಸ್ಯ ಲೋಕಸ್ಯಾನುಖ್ಯಾತ್ಯಾ ಏಷಾ ವೈ ದೇವಾನಾಂ
ವಿಕ್ರಾಂತಿರ್ಯದ್ವಿಕರ್ಣೀ ಯದ್ವಿಕರ್ಣೀಮುಪದಧಾತಿ ದೇವಾನಾಮೇವ
ವಿಕ್ರಾಂತಿಮನು ವಿ ಕ್ರಮತ ಉತ್ತರತ ಉಪದಧಾತಿ

---

ಅಥೋ ಇತಿ । ಸುವರ್ಗಸ್ಯೇತಿ ಸುವಃ-ಗಸ್ಯ । ಲೋಕಸ್ಯ । ಅನುಖ್ಯಾತ್ಯಾ ಇತ್ಯನು-ಖ್ಯಾತ್ಯೈ । ಏಷಾ । ವೈ । ದೇವಾನಾಮ್ । ವಿಕ್ರಾಂತಿರಿತಿ ವಿ-ಕ್ರಾಂತಿಃ । ಯತ್ । ವಿಕರ್ಣೀತಿ ವಿ-ಕರ್ಣೀ । ಯತ್ । ವಿಕರ್ಣೀಮಿತಿ ವಿ-ಕರ್ಣೀಮ್ । ಉಪದಧಾತೀತ್ಯುಪ-ದಧಾತಿ । ದೇವಾನಾಮ್ । ಏವ । ವಿಕ್ರಾಂತಿಮಿತಿ ವಿ-ಕ್ರಾಂತಿಮ್ । ಅನು । ವೀತಿ । ಕ್ರಮತೇ । ಉತ್ತರತ ಇತ್ಯುತ್-ತರತಃ । ಉಪೇತಿ । ದಧಾತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಅಥೋ ಸುವರ್ಗಸ್ಯ ಲೋಕಸ್ಯ ಅನುಖ್ಯಾತ್ಯೈ | ಮತ್ತು ಸ್ವರ್ಗಲೋಕದ ಪ್ರಸಿದ್ಧಿಪಡಿಸುವಿಕೆಗೂ ಕಾರಣ ವಾಗುತ್ತದೆ. |

ವಿಕರ್ಣೀಇಷ್ಟಕೆಯ ಪ್ರಶಂಸೆ

| ಬ್ರಾಹ್ಮಣಭಾಗ | ವಿವರಣೆ |
|---|---|
| ಯತ್ ವಿಕರ್ಣೀ | ಈ ವಿಕರ್ಣೀಇಷ್ಟಕೆಯೆಂಬುದು ಯಾವುದೋ |
| ಏಷಾ ವೈ ದೇವಾನಾಮ್ ವಿಕ್ರಾಂತಿಃ | ಇದು ದೇವತೆಗಳ ಪರಾಕ್ರಮರೂಪವಾಗಿದೆ. |
| ಯತ್ ವಿಕರ್ಣೀಮ್ ಉಪದಧಾತಿ | ವಿಕರ್ಣೀಇಷ್ಟಕೆಯನ್ನು ಉಪಧಾನ ಮಾಡುತ್ತಾನೆಂಬುದು ಯಾವುದೋ |
| ದೇವಾನಾಮ್ ವಿಕ್ರಾಂತಿಮ್ ಏವ ಅನು ವಿಕ್ರಮತೇ | (ಅದರಿಂದ ಯಜಮಾನನು) ದೇವತೆಗಳ ಪರಾಕ್ರಮ ವನ್ನು ಮೆರೆಯುವನು. |
| ಉತ್ತರತಃ ಉಪದಧಾತಿ | ಉತ್ತರಭಾಗದಲ್ಲಿ ಇದ್ದು ವಿಕರ್ಣೀಇಷ್ಟಕೆಯನ್ನು ಉಪ ಧಾನ ಮಾಡಬೇಕು. |

---

ಪ್ರಥಮಚಿತಿಯಲ್ಲಿ ಸ್ವಯಮಾತೃಣ್ಣೇಷ್ಟಕೆಯನ್ನು ಭೂರೂಪವೆಂದು ವರ್ಣಿಸಲಾಗಿದೆ. ಮಧ್ಯಮಚಿತಿಯಲ್ಲಿ ಅಂತರಿಕ್ಷ ರೂಪವೆಂದು ವರ್ಣಿಸಲಾಗಿದೆ. ಈ ಪಂಚಮಚಿತಿಯಲ್ಲಿ ದ್ಯುಲೋಕರೂಪವೆಂದು ಹೇಳಲಾಗಿದೆ. ಸ್ವಯಮಾತೃಣ್ಣೇಷ್ಟಕೆಯ ಉಪಧಾನಕ್ರಮವು ಹಿಂದೆಯೂ ಬಂದಿದೆ. ವಿಕರ್ಣೀಇಷ್ಟಕೆಯ ಪ್ರಶಂಸೆಯು ಇಲ್ಲಿದೆ.

ತಸ್ಮಾದುತ್ತರತಉಪಚಾರೋಽಗ್ನಿರ್ವಾಯುಮತೀ ಭವತಿ ಸಮಿದ್ಧೈ॥ ೩೪–7 ॥

[ಸಂಭೃತಂ ಯನ್ನಾಕಸದೋ ಯನ್ನಾಕಸದಸ್ತತ್ಪಶೂನಾಮೇಷಾ ವೈ ದ್ವಾವಿಗ್ಂಶತಿಶ್ಚ ॥]

---

ತಸ್ಮಾತ್ । ಉತ್ತರತಉಪಚಾರ ಇತ್ಯುತ್ತರತಃ–ಉಪಚಾರಃ । ಅಗ್ನಿಃ । ವಾಯುಮತೀತಿ ವಾಯು–ಮತೀ । ಭವತಿ ।

ಸಮಿದ್ಧ್ಯಾ ಇತಿ ಸಮ್–ಇದ್ಧ್ಯೈ ॥ ೩೪ ॥

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ತಸ್ಮಾತ್ ಅಗ್ನಿಃ ಉತ್ತರತಉಪಚಾರಃ** (ಭವತಿ) | ಅದರಿಂದ ಅಗ್ನಿಯು ಉತ್ತರದಿಕ್ಕಿನಲ್ಲಿ ಉಪಚಾರವನ್ನು ಪಡೆಯುವವನಾಗುತ್ತಾನೆ. |
| (ಅಗ್ನಿಃ) **ವಾಯುಮತೀ ಭವತಿ ಸಮಿದ್ಧ್ಯೈ** | ಅಗ್ನಿಯು ಪ್ರಜ್ವಲಿಸುವುದಕ್ಕಾಗಿ **'ಆದಸ್ಯ ವಾತಃ'** ಎಂಬುದಾಗಿ ವಾಯುಶಬ್ದದಿಂದ ಕೂಡಿರುವ ಋಕ್ಕಿನಿಂದ ಉಪಧಾನ ಮಾಡಬೇಕು. |

---

ಅನುಷ್ಠಾನಕ್ಕಾಗಿ ದೇಶವಿಶೇಷ/ಸ್ಥಾನವನ್ನು ವಿಧಾನ ಮಾಡದೆ ಇರುವಾಗ ಬ್ರಹ್ಮವರಣ–ಅನ್ವಾಧಾನ–ಜಪಾದಿಗಳಲ್ಲಿ ಯಜಮಾನನು ಅಗ್ನಿಯ ಉತ್ತರಭಾಗದಲ್ಲಿಯೇ ಇದ್ದು ಉಪಚರಿಸಬೇಕು.

'ಆದಸ್ಯ ವಾತಃ...' ಎಂಬ ಮಂತ್ರದಲ್ಲಿ ವಾತಶಬ್ದವಿರುವುದರಿಂದ ಆ ಋಕ್ ವಾಯುಮತೀ ಎನಿಸಿದೆ.

## || ಅಷ್ಟಮೋಽನುವಾಕಃ ||

ಛಂದಾಗ್ಂಸ್ಯುಪ ದಧಾತಿ ಪಶವೋ ವೈ ಛಂದಾಗ್ಂಸಿ ಪಶೂನೇವಾವರುಂಧೇ
ಛಂದಾಗ್ಂಸಿ ವೈ ದೇವಾನಾಂ ವಾಮಂ ಪಶವೋ ವಾಮಮೇವ ಪಶೂನವರುಂಧ

ಛಂದಾಗ್ಂಸಿ । ಉಪೇತಿ । ದಧಾತಿ । ಪಶವಃ । ವೈ । ಛಂದಾಗ್ಂಸಿ । ಪಶೂನ್ । ಏವ । ಅವೇತಿ । ರುಂಧೇ ।
ಛಂದಾಗ್ಂಸಿ । ವೈ । ದೇವಾನಾಮ್ । ವಾಮಮ್ । ಪಶವಃ । ವಾಮಮ್ । ಏವ । ಪಶೂನ್ । ಅವೇತಿ । ರುಂಧೇ ।

ಈ ಎಂಟನೆಯ ಅನುವಾಕದಲ್ಲಿ ಛಂದೋನಾಮಕವಾದ ಇಷ್ಟಕೆಗಳ ಉಪಧಾನವನ್ನು ಹೇಳಲಾಗಿದೆ.

| ಬ್ರಾಹ್ಮಣಭಾಗ | ವಿವರಣೆ |
|---|---|
| **ಛಂದಾಗ್ಂಸಿ ಉಪದಧಾತಿ** | ಛಂದೋನಾಮಕವಾದ ಇಷ್ಟಕೆಗಳನ್ನು ಅಧ್ವರ್ಯುವು ಉಪಧಾನ ಮಾಡಬೇಕು. |
| **ಛಂದಾಗ್ಂಸಿ ಪಶವಃ ವೈ** | ಪಶುಗಳು ಛಂದಸ್ಸುಗಳೇ.(ಛಂದಸ್ಸುಗಳು ಪಶುಸಾಧನಗಳು) |
| **ಪಶೂನ್ ಅವ ರುಂಧೇ ಏವ** | (ಆದುದರಿಂದ ಈ ಇಷ್ಟಕೆಗಳನ್ನು ಉಪಧಾನ ಮಾಡಿದ ಯಜಮಾನನು) ನಿಶ್ಚಯವಾಗಿಯೂ ಪಶುಗಳನ್ನು ಪಡೆಯುವನು. |
| **ಛಂದಾಗ್ಂಸಿ ವೈ ದೇವಾನಾಮ್ ವಾಮಮ್ ಪಶವಃ** | ಮತ್ತು ಛಂದಸ್ಸುಗಳೆಂಬುವುಗಳು ದೇವತೆಗಳು ಹೊಂದಲು ಅಪೇಕ್ಷಿಸುವ ಪಶುರೂಪಸಂಪತ್ತು ಆಗಿವೆ. |
| **ವಾಮಮ್ ಏವ ಪಶೂನ್ ಅವರುಂಧೇ** | (ಹೀಗಾಗಿ ಈ ಇಷ್ಟಕೋಪಧಾನದಿಂದ ಯಜಮಾನನನು ಹೊಂದಬೇಕಾದ) ಧನರೂಪವಾದ ಪಶುಗಳನ್ನು ಪಡೆಯುವನು. |

ಏತಾಗ್ಂ ಹ ವೈ ಯಜ್ಞಸೇನಶ್ಚೈತ್ರಿಯಾಯಣಶ್ಚಿತಿಂ ವಿದಾಂಚಕಾರ ತಯಾ ವೈ ಸ ಪಶೂನವಾರುಂಧ ಯದೇತಾಮುಪ ದಧಾತಿ ಪಶೂನೇವಾವರುಂಧೇ ಗಾಯತ್ರೀಃ ಪುರಸ್ತಾದುಪದಧಾತಿ ತೇಜೋ ವೈ ಗಾಯತ್ರೀ

---

ಏತಾಮ್ । ಹ । ವೈ । ಯಜ್ಞಸೇನ ಇತಿ ಯಜ್ಞ–ಸೇನಃ । ಚೈತ್ರಿಯಾಯಣಃ । ಚಿತಿಮ್ । ವಿದಾಮ್ । ಚಕಾರ । ತಯಾ । ವೈ । ಸಃ । ಪಶೂನ್ । ಅವೇತಿ । ಅರುಂಧ । ಯತ್ । ಏತಾಮ್ । ಉಪದಧಾತೀತ್ಯುಪ–ದಧಾತಿ । ಪಶೂನ್ । ಏವ । ಅವೇತಿ । ರುಂಧೇ । ಗಾಯತ್ರೀಃ । ಪುರಸ್ತಾತ್ । ಉಪೇತಿ । ದಧಾತಿ । ತೇಜಃ । ವೈ । ಗಾಯತ್ರೀ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಏತಾಮ್ ಹ ವೈ ಚಿತಿಮ್ ಯಜ್ಞಸೇನಃ ಚೈತ್ರಿಯಾಯಣಃ ವಿದಾಂಚಕಾರ** | ಚಿತ್ರ ಎಂಬ ಹೆಸರಿನವನ ವಂಶದವನಾದ ಯಜ್ಞಸೇನನೆಂಬ ಮುನಿಯು ಛಂದೋನಾಮಕ ಇಷ್ಟಕೆಗಳಿಂದ ನಿರ್ಮಿತವಾಗುವ ಚಿತಿಯನ್ನು ತಿಳಿದುಕೊಂಡನು. |
| **ತಯಾ ವೈ ಸಃ ಪಶೂನ್ ಅವಾರುಂಧ** | ಆ ಚಿತಿಯ ಪ್ರಭಾವದಿಂದ ಅವನು ಪಶುಗಳನ್ನು ಹೊಂದಿದನು. |
| **ಯತ್ ಏತಾಮ್ ಉಪದಧಾತಿ** | ಯಾರು ಈ ಇಷ್ಟಕೆಯನ್ನು ಉಪಧಾನ ಮಾಡುವನೋ |
| **ಪಶೂನ್ ಅವರುಂಧೇ ಏವ** | ಅವನು ಪಶುಗಳನ್ನು ಪಡೆದೇ ಪಡೆ ಯುತ್ತಾನೆ. |

**ಛಂದೋನಾಮಕ ಇಷ್ಟಕೆಗಳ ವಿಧಿ**

| | |
|---|---|
| **ಗಾಯತ್ರೀಃ ಪುರಸ್ತಾತ್ ಉಪದಧಾತಿ** | ಯಜಮಾನನು ಗಾಯತ್ರೀನಾಮಕ ಇಷ್ಟಕೆಗಳನ್ನು ಮೊದಲು ಉಪಧಾನ ಮಾಡಬೇಕು. |
| **ತೇಜಃ ವೈ ಗಾಯತ್ರೀ** | ಗಾಯತ್ರಿಯು ತೇಜಃಸ್ವರೂಪಳು. |

---

**ತಾತ್ಪರ್ಯ:–***ಗಾಯತ್ರೀಛಂದಸ್ಸಿನಿಂದ ಕೂಡಿದ ಮಂತ್ರಗಳಾದ ***'ಅಗ್ನಿರ್ಮೂರ್ಧಾ' 'ತ್ವಾಮಗ್ನೇ' 'ಅಯಮಗ್ನಿಃ'** ಎಂಬ ಮಂತ್ರಗಳಿಂದ ಉಪಧಾನ ಮಾಡಲ್ಪಡುವ ಇಷ್ಟಕೆಗಳಿಗೂ **'ಗಾಯತ್ರೀ'** ಎಂದೇ ಹೆಸರು. ಹೀಗೆಯೇ ಮುಂದಿನ ಛಂದೋನಾಮಕ ಇಷ್ಟಕೆಗಳು. ಉಪಧಾನ ಮಾಡುವಾಗ **ಹೇಳಬೇಕಾದ** ಮಂತ್ರಗಳು ಮೂರು, **ಹಾಗೂ** ನಾಲ್ಕು ಇವೆ.

---

* ಈ ಮಂತ್ರಗಳು ಚತುರ್ಥಕಾಂಡದ ನಾಲ್ಕನೆಯ ಪ್ರಪಾಠಕದ ನಾಲ್ಕನೆಯ ಅನುವಾಕದಲ್ಲಿವೆ.

ತೇಜ ಏವ[(೩೫)ಮುಖತಃ]ಮುಖತೋ ಧತ್ತೇ ಮೂರ್ಧನ್ವತೀರ್ಭವಂತಿ

ಮೂರ್ಧಾನಮೇವೈನಗ್ಂ ಸಮಾನಾನಾಂ ಕರೋತಿ ತ್ರಿಷ್ಟುಭ ಉಪ

ದಧಾತೀಂದ್ರಿಯಂ ವೈ ತ್ರಿಷ್ಟುಗಿಂದ್ರಿಯಮೇವ ಮಧ್ಯತೋ ಧತ್ತೇ

ಜಗತೀರುಪದಧಾತಿ

---

ತೇಜಃ । ಏವ । (೩೫) । ಮುಖತಃ । ಧತ್ತೇ । ಮೂರ್ಧನ್ವತೀರಿತಿ ಮೂರ್ಧನ್ನ್-ವತೀಃ । ಭವಂತಿ ।

ಮೂರ್ಧಾನಮ್ । ಏವ । ಏನಮ್ । ಸಮಾನಾನಾಮ್ । ಕರೋತಿ । ತ್ರಿಷ್ಟುಭಃ । ಉಪೇತಿ । ದಧಾತಿ ।

ಇಂದ್ರಿಯಮ್ । ವೈ । ತ್ರಿಷ್ಟುಕ್ । ಇಂದ್ರಿಯಮ್ । ಏವ । ಮಧ್ಯತಃ । ಧತ್ತೇ । ಜಗತೀಃ । ಉಪೇತಿ । ದಧಾತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ತೇಜಃ ಏವ ಮುಖತಃ ಧತ್ತೇ** | ಆದುದರಿಂದ ಈ ಉಪಧಾನದಿಂದ ಪ್ರಾರಂಭದಲ್ಲಿಯೇ ಯಜಮಾನನು ತೇಜಸ್ಸನ್ನು ಪಡೆಯುತ್ತಾನೆ. |
| **ಮೂರ್ಧನ್ವತೀಃ ಭವಂತಿ** | ಮೂರ್ಧನ್ ಶಬ್ದದಿಂದ ಕೂಡಿರುವ ಮಂತ್ರದಿಂದ ಉಪಧಾನ ಮಾಡಲ್ಪಡುವ ಇಷ್ಟಕೆಗಳು ಮೂರ್ಧನ್ವತಿಗಳು ಎನಿಸುತ್ತವೆ. |
| **ಏನಮ್ ಸಮಾನಾನಾಮ್ ಮೂರ್ಧಾನಮ್ ಏವ ಕರೋತಿ** | ಹೀಗಾಗಿ ಈ ಉಪಧಾನದಿಂದ ಅಧ್ವರ್ಯುವು ಯಜಮಾನನನ್ನು ಸಮಾನರ ಮಧ್ಯದಲ್ಲಿ ಶ್ರೇಷ್ಠನನ್ನಾಗಿ ಮಾಡುತ್ತಾನೆ. |
| **ತ್ರಿಷ್ಟುಭಃ ಉಪದಧಾತಿ** | ತ್ರಿಷ್ಟುಪ್ ಛಂದಸ್ಸಿನ ಮೂರು ಮಂತ್ರಗಳಿಂದ ಛಂದೋನಾಮಕೇಷ್ಟಕೆಗಳನ್ನು ಉಪಧಾನ ಮಾಡಬೇಕು. |
| **ತ್ರಿಷ್ಟುಕ್ ಇಂದ್ರಿಯಮ್ ವೈ ಇಂದ್ರಿಯಮ್ ಏವ ಮಧ್ಯತಃ ಧತ್ತೇ** | ತ್ರಿಷ್ಟುಪ್ ಛಂದಸ್ಸು ಇಂದ್ರಿಯಸಾಮರ್ಥ್ಯರೂಪವಾಗಿದೆ. ಈ ಉಪಧಾನದಿಂದ ಯಜಮಾನನು ಶರೀರಸಾಮರ್ಥ್ಯವನ್ನು ದೇಹಮಧ್ಯದಲ್ಲಿ ಧರಿಸಿದವನಾಗುತ್ತಾನೆ. |
| **ಜಗತೀಃ ಉಪದಧಾತಿ** | ಜಗತೀಛಂದಸ್ಸಿನ ಮೂರು ಮಂತ್ರಗಳಿಂದ ಇಷ್ಟಕೆಗಳನ್ನು ಬಳಿಕ ಉಪಧಾನ ಮಾಡಬೇಕು. |

ಜಾಗತಾ ವೈ ಪಶವಃ ಪಶೂನೇವಾವ ರುಂಧೇಽನುಷ್ಟುಭ

ಉಪದಧಾತಿ ಪ್ರಾಣಾ ವಾ ಅನುಷ್ಟುಪ್ಪ್ರಾಣಾನಾಮುತ್ಸೃಷ್ಟ್ಯೈ ಬೃಹತೀರುಷ್ಣಿಹಾಃ

ಪಙ್ಕ್ತೀರಕ್ಷರಪಙ್ಕ್ತೀರಿತಿ ವಿಷುರೂಪಾಣಿ ಛಂದಾಗ್ಂಸ್ಯುಪದಧಾತಿ

---

ಜಾಗತಾಃ । ವೈ । ಪಶವಃ । ಪಶೂನ್ । ಏವ । ಅವೇತಿ । ರುಂಧೇ । ಅನುಷ್ಟುಭ ಇತ್ಯನು-ಸ್ತುಭಃ । ಉಪೇತಿ । ದಧಾತಿ । ಪ್ರಾಣಾ ಇತಿ ಪ್ರ-ಅನಾಃ । ವೈ । ಅನುಷ್ಟುಬಿತ್ಯನು-ಸ್ತುಪ್ । ಪ್ರಾಣಾನಾಮಿತಿ ಪ್ರ-ಅನಾನಾಮ್ । ಉತ್ಸೃಷ್ಟ್ಯಾ ಇತ್ಯುತ್-ಸೃಷ್ಟ್ಯೈ । ಬೃಹತೀಃ । ಉಷ್ಣಿಹಾಃ । ಪಙ್ಕ್ತೀಃ । ಅಕ್ಷರಪಙ್ಕ್ತೀರಿತ್ಯಕ್ಷರ-ಪಙ್ಕ್ತೀಃ । ಇತಿ । ವಿಷುರೂಪಾಣೀತಿ ವಿಷು-ರೂಪಾಣಿ । ಛಂದಾಗ್ಂಸಿ । ಉಪೇತಿ । ದಧಾತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಪಶವಃ ಜಾಗತಾಃ ವೈ** | ಪಶುಗಳು ಜಗತೀಛಂದಸ್ಸಿನಿಂದ ಪ್ರಾಪ್ತವಾಗತಕ್ಕವುಗಳು. |
| **ಪಶೂನ್ ಅವರುಂಧೇ ಏವ** | (ಈ ಇಷ್ಟಕೋಪಧಾನದಿಂದ) ಯಜಮಾನನು ಪಶುಗಳನ್ನು ಪಡೆದೇ ಪಡೆಯುತ್ತಾನೆ. |
| **ಅನುಷ್ಟುಭಃ ಉಪ ದಧಾತಿ** | ಬಳಿಕ ಅನುಷ್ಟುಪ್‌ಛಂದಸ್ಸಿನ ಮೂರು ಮಂತ್ರಗಳಿಂದ ಇಷ್ಟಕೆಗಳನ್ನು ಉಪಧಾನ ಮಾಡಬೇಕು. |
| **ಪ್ರಾಣಾಃ ವೈ ಅನುಷ್ಟುಪ್** | ಅನುಷ್ಟುಪ್ ಛಂದಸ್ಸು ಪ್ರಾಣರೂಪವಾಗಿದೆ. |
| **ಪ್ರಾಣಾನಾಮ್ ಉತ್ಸೃಷ್ಟ್ಯೈ** | ಈ ಇಷ್ಟಕೋಪಧಾನದಿಂದ ಪ್ರಾಣಗಳ ಊರ್ಧ್ವ ಸಂಚಾರವು ಸಾಧ್ಯವಾಗುತ್ತದೆ. |
| **ಬೃಹತೀಃ ಉಷ್ಣಿಹಾಃ ಪಙ್ಕ್ತೀಃ ಅಕ್ಷರಪಙ್ಕ್ತೀಃ ಇತಿ ವಿಷುರೂಪಾಣಿ ಛಂದಾಗ್ಂಸಿ ಉಪದಧಾತಿ** | ಬೃಹತೀ, ಉಷ್ಣಿಕ್, ಪಙ್ಕ್ತಿ, ಅಕ್ಷರಪಙ್ಕ್ತಿ ಎಂಬ ಪರಸ್ಪರವಿಲಕ್ಷಣಸ್ವರೂಪವುಳ್ಳ ಛಂದಸ್ಸಿನ ಮಂತ್ರಗಳಿಂದ ಇಷ್ಟಕೋಪಧಾನವನ್ನು ಮಾಡಬೇಕು. |

---

**'ಭುವೋ ಯಜ್ಞಸ್ಯ' 'ಅಬೋಧ್ಯಗ್ನಿಃ' 'ಅವ್ರೋಚಾಮ'** ಈ ಮೂರು ಮಂತ್ರಗಳು ತ್ರಿಷ್ಟುಪ್ ಛಂದಸ್ಸಿನಲ್ಲಿವೆ. **'ಜನಸ್ಯ ಗೋಪಾಃ' 'ತ್ವಾಮಗ್ನೇ ಅಂಗಿರಸಃ' 'ಯಜ್ಞಸ್ಯ ಕೇತುಮ್'** ಈ ಮೂರು ಮಂತ್ರಗಳು ಜಗತೀ ಛಂದಸ್ಸಿನಲ್ಲಿವೆ. **'ತ್ವಾಂ ಚಿತ್ರಶ್ರವಸ್ತಮ' 'ಸಖಾಯಃ ಸಂ ವಃ' 'ಸಗ್ಂ ಸಮಿದ್ಯುವಸೇ'** ಈ ಮೂರು ಮಂತ್ರಗಳು ಅನುಷ್ಟುಪ್ ಛಂದಸ್ಸಿನಲ್ಲಿ ಇವೆ.

ವಿಷುರೂಪಾ ವೈ ಪಶವಃ ಪಶವ[ ಪಶವಃ(೩೬)]ಶ್ಛಂದಾಗ್ಂಸಿ ವಿಷುರೂಪಾ ನೇವ ಪಶೂನವರುಂಧೇ ವಿಷುರೂಪಮಸ್ಯ ಗೃಹೇ ದೃಶ್ಯತೇ ಯಸ್ಯೈತಾ ಉಪಧೀಯಂತೇ ಯ ಉ ಚೈನಾ ಏವಂ ವೇದಾತಿಚ್ಛಂದಸಮುಪದಧಾ-

---

ವಿಷುರೂಪಾ ಇತಿ ವಿಷು–ರೂಪಾಃ । ವೈ । ಪಶವಃ । ಪಶವಃ । (೩೬) । ಛಂದಾಗ್ಂಸಿ । ವಿಷುರೂಪಾನಿತಿ ವಿಷು–ರೂಪಾನ್ । ಏವ । ಪಶೂನ್ । ಅವೇತಿ । ರುಂಧೇ । ವಿಷುರೂಪಮಿತಿ ವಿಷು–ರೂಪಮ್ । ಅಸ್ಯ । ಗೃಹೇ । ದೃಶ್ಯತೇ । ಯಸ್ಯ । ಏತಾಃ । ಉಪಧೀಯಂತ ಇತ್ಯುಪ–ಧೀಯಂತೇ । ಯಃ । ಉ । ಚ । ಏನಾಃ । ಏವಮ್ । ವೇದ । ಅತಿಚ್ಛಂದಸಮಿತ್ಯತಿ–ಛಂದಸಮ್ । ಉಪೇತಿ । ದಧಾತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಪಶವಃ ವಿಷುರೂಪಾಃ ವೈ** | ಗೋ, ಮಹಿಷಿ (ಹಸು, ಎಮ್ಮೆ) ಮುಂತಾದ ಪಶುಗಳು ವಿಲಕ್ಷಣವಾದ ರೂಪವುಳ್ಳವುಗಳು. |
| **ಪಶವಃ ಛಂದಾಗ್ಂಸಿ** | ಪಶುಗಳು ಛಂದೋರೂಪಗಳು. |
| **ವಿಷುರೂಪಾನ್ ಏವ ಪಶೂನ್ ಅವರುಂಧೇ** | (ಪಶುಗಳಂತೆ ಭಿನ್ನರೂಪಗಳಾದ ಈ ಛಂದಸ್ಸಿನ ಇಷ್ಟಕೆಗಳಿಂದ) ಯಜಮಾನನು ಬಗೆ ಬಗೆಯ ಪಶುಗಳನ್ನು ಪಡೆಯುತ್ತಾನೆ. |
| **ಯಸ್ಯ ಏತಾಃ ಉಪಧೀಯಂತೇ** | ಯಾವ ಯಜಮಾನನಿಗಾಗಿ ಈ ವಿಷುರೂಪೇಷ್ಟಕೆಗಳು ಉಪಧಾನ ಮಾಡಲ್ಪಡುತ್ತವೆಯೋ |
| **ಯಃ ಉ ಚ ಏನಾಃ ಏವಮ್ ವೇದ** | ಯಾವನು ಈ ಇಷ್ಟಕೆಗಳನ್ನು ಈ ರೀತಿ ಅರಿಯುವನೋ |
| **ಅಸ್ಯ ಗೃಹೇ ವಿಷುರೂಪಮ್ ದೃಶ್ಯತೇ** | ಅವನ ಮನೆಯಲ್ಲಿ ಬಹುವಿಧವಾದ ಧನವು ಕಂಡು ಬರುತ್ತದೆ. |
| **ಅತಿಚ್ಛಂದಸಮ್ ಉಪ ದಧಾತಿ** | ಅತಿಚ್ಛಂದೋನಾಮಕವಾದ ಇಷ್ಟಕೆಯನ್ನು ಉಪಧಾನ ಮಾಡಬೇಕು. |

---

ಹಿಂದಿನ ಗಾಯತ್ರೀ ಮೊದಲಾದ ಛಂದಸ್ಸುಗಳಲ್ಲಿ ಎಲ್ಲ ಪಾದಗಳಲ್ಲಿಯೂ ಅಕ್ಷರಗಳು ಸಮಾನಸಂಖ್ಯೆಯಲ್ಲಿ ಇವೆ. ಬೃಹತೀ ಮುಂತಾದ ಮುಂದಿನ ಛಂದಸ್ಸುಗಳ ಪಾದಗಳಲ್ಲಿ ಬೇರೆಬೇರೆ ಸಂಖ್ಯೆಯಲ್ಲಿ ಇವೆ.

–ತ್ಯತಿಚ್ಛಂದಾ ವೈ ಸರ್ವಾಣಿ ಛಂದಾಗ್ಂಸಿ ಸರ್ವೇಭಿರೇವೈನಂ
ಛಂದೋಭಿಶ್ಚಿನುತೇ ವರ್ಷ್ಮ ವಾ ಏಷಾ ಛಂದಸಾಂ ಯದತಿಚ್ಛಂದಾ
ಯದತಿಚ್ಛಂದಸಮುಪ ದಧಾತಿ

---

ಅತಿಚ್ಛಂದಾ ಇತ್ಯತಿ–ಛಂದಾಃ । ವೈ । ಸರ್ವಾಣಿ । ಛಂದಾಗ್ಂಸಿ । ಸರ್ವೇಭಿಃ । ಏವ । ಏನಮ್ । ಛಂದೋಭಿರಿತಿ ಛಂದಃ–ಭಿಃ । ಚಿನುತೇ । ವರ್ಷ್ಮ । ವೈ । ಏಷಾ । ಛಂದಸಾಮ್ । ಯತ್ । ಅತಿಚ್ಛಂದಾ ಇತ್ಯತಿ–ಛಂದಾಃ । ಯತ್ । ಅತಿಚ್ಛಂದಸಮಿತ್ಯತಿ–ಛಂದಸಮ್ । ಉಪದಧಾತೀತ್ಯುಪ–ದಧಾತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಅತಿಚ್ಛಂದಾಃ ವೈ ಸರ್ವಾಣಿ ಛಂದಾಗ್ಂಸಿ** | ಅತಿಚ್ಛಂದಸ್ಸು ಎಂಬುದು ಸರ್ವಛಂದೋರೂಪವಾಗಿದೆ (ಎಲ್ಲ ಛಂದಸ್ಸುಗಳ ಅಕ್ಷರಸಂಖ್ಯೆಯೂ ಇದರಲ್ಲಿ ಅಂತರ್ಗತವಾಗಿದೆ.) |
| **ಸರ್ವೇಭಿಃ ಛಂದೋಭಿಃ ಏವ ಏನಮ್ ಚಿನುತೇ** | ಇದರ ಉಪಧಾನದಿಂದ ಎಲ್ಲ ಛಂದಸ್ಸುಗಳಿಂದಲೂ ಅಗ್ನಿಯನ್ನು ಚಯನ ಮಾಡಿದಂತಾಗುತ್ತದೆ/ ಇಷ್ಟಕೋಪಧಾನವನ್ನು ಮಾಡಿದಂತಾಗುತ್ತದೆ. |
| **ಯತ್ ಅತಿಚ್ಛಂದಾಃ** | ಈ ಅತಿಚ್ಛಂದಸ್ಸಿನ ಮಂತ್ರದಿಂದ ಉಪಧಾನ ಮಾಡಲ್ಪಡುವ ಇಷ್ಟಕೆಯು |
| **ಏಷಾ ಛಂದಸಾಮ್ ವರ್ಷ್ಮ ವೈ** | ಗಾಯತ್ರ್ಯಾದಿ ಛಂದಸ್ಸುಗಳಿಂದ ಉಪಧಾನ ಮಾಡುವ ಇಷ್ಟಕೆಗಳ ಶರೀರವಿದ್ದಂತೆ. (ಎಲ್ಲವೂ ಅಂತರ್ಗತವಾಗುವುದರಿಂದ ಹೀಗಾಗುತ್ತದೆ) |
| **ಯತ್ ಅತಿಚ್ಛಂದಸಮ್ ಉಪದಧಾತಿ** | ಅತಿಚ್ಛಂದಸೇಷ್ಟಕೆಯನ್ನು ಉಪಧಾನ ಮಾಡುತ್ತಾನೆಂಬುದು ಯಾವುದೋ ಅದು |

---

ಹೀಗಾಗಿ ಅವು **'ವಿಷುರೂಪಗಳು'** ಎನಿಸಿತ್ತವೆ. ಗೋ–ಮಹಿಷಾದಿ ಪಶುಗಳೂ ಭಿನ್ನರೂಪಗಳೇ. ಛಂದಸ್ಸುಗಳು ಪಶುಪ್ರಾಪ್ತಿಗೆ ಕಾರಣವಾದುದರಿಂದ ಈ ವಿಲಕ್ಷಣಛಂದೋನಾಮಕೇಷ್ಟಕೆಗಳ ಉಪಧಾನದಿಂದ ಯಜಮಾನನು ಬಗೆಬಗೆಯ ಪಶುಗಳನ್ನು ಹೊಂದುವನು ಎಂದು ತಾತ್ಪರ್ಯ.

**'ಏನಾ ವೋ' 'ಸ ಯೋಜತೇ' 'ಉದಸ್ಯ ಶೋಚಿಃ'** ಈ ಮೂರು ಮಂತ್ರಗಳು ಬೃಹತೀಛಂದಸ್ಸಿನಲ್ಲಿ ಇವೆ. **'ಅಗ್ನೇ ವಾಜಸ್ಯ' 'ಸ ಇಧಾನೋ' 'ಕ್ಷಪೋ ರಾಜನ್'** ಈ ಮೂರು ಮಂತ್ರಗಳು ಉಷ್ಣಿಕ್ ಛಂದಸ್ಸಿನಲ್ಲಿ ಇವೆ.

ವರ್ಷ್ಮೈವೈನಗ್ಂ ಸಮಾನಾನಾಂ ಕರೋತಿ ದ್ವಿಪದಾ ಉಪದಧಾತಿ

ದ್ವಿಪಾದ್ಯಜಮಾನಃ ಪ್ರತಿಷ್ಠಿತ್ಯೈ ॥ ೩೭-8 ॥

[ತೇಜ ಏವ ಪಶವಃ ಪಶವೋ ಯಜಮಾನ ಏಕಂ ಚ ॥]

---

ವರ್ಷ್ಮ । ಏವ । ಏನಮ್ । ಸಮಾನಾನಾಮ್ । ಕರೋತಿ । ದ್ವಿಪದಾ ಇತಿ ದ್ವಿ-ಪದಾಃ । ಉಪೇತಿ । ದಧಾತಿ ।

ದ್ವಿಪಾದಿತಿ ದ್ವಿ-ಪಾತ್ । ಯಜಮಾನಃ । ಪ್ರತಿಷ್ಠಿತ್ಯಾ ಇತಿ ಪ್ರತಿ-ಸ್ಥಿತ್ಯೈ ॥ ೩೭ ॥

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಸಮಾನಾನಾಮ್ ಏನಮ್ ವರ್ಷ್ಮ ಏವ ಕರೋತಿ** | ಈ ಯಜಮಾನನನ್ನು ಸಮಾನರಾಗಿರುವವರ ಶರೀರ ರೂಪನನ್ನಾಗಿ ಮಾಡಿದಂತಾಗುತ್ತದೆ./ಯಜಮಾನನನ್ನು ಅವನ ಸಮಾನರೆಲ್ಲರೂ ಅನುಸರಿಸುವಂತಾಗುತ್ತದೆ. |
| **ದ್ವಿಪದಾಃ ಉಪದಧಾತಿ** | ದ್ವಿಪದೇಷ್ಟಕೆಗಳನ್ನು ಉಪಧಾನ ಮಾಡಬೇಕು. |
| **ಯಜಮಾನಃ ದ್ವಿಪಾತ್** | ಯಜಮಾನನು ಎರಡು ಪಾದವುಳ್ಳವನಾಗಿದ್ದಾನೆ. |
| **ಪ್ರತಿಷ್ಠಿತ್ಯೈ** | (ಈ ದ್ವಿಪದೇಷ್ಟಕೋಪಧಾನವು ಯಜಮಾನನು) ಪ್ರತಿಷ್ಠಿತನಾಗಿರುವಂತೆ ಮಾಡುತ್ತದೆ. |

---

**'ಆ ತೇ ಅಗ್ನೇ' 'ಆ ತೇ ಅಗ್ನ ಋಚಾ' 'ಉಭೇ ಸುಶ್ಚಂದ್ರ'** ಈ ಮೂರು ಮಂತ್ರಗಳು ಪಙ್ಕ್ತಿಛಂದಸ್ಸಿನಲ್ಲಿ ಇವೆ. **'ಅಗ್ನೇ ತಮದ್ಯ' 'ಅಧಾ ಹ್ಯಗ್ನೇ' 'ಅಭಿಷ್ಟೇ ಅದ್ಯ' 'ಏಭಿರ್ನೋ ಅರ್ಕೈಃ'** ಈ ನಾಲ್ಕು ಮಂತ್ರಗಳು ಅಕ್ಷರಪಙ್ಕ್ತಿ ಛಂದಸ್ಸಿನಲ್ಲಿ ಇವೆ.

**'ಅಗ್ನಿಗ್ಂ ಹೋತಾರಮ್'** ಎಂಬ ಮಂತ್ರವು ಅತಿಚ್ಛಂದಸ್ಸಿನಲ್ಲಿ ಇದೆ. ಇದರಲ್ಲಿ ಎಲ್ಲ ಛಂದಸ್ಸುಗಳೂ ಅಡಗಿವೆ. ಇದರ ಅಕ್ಷರಸಂಖ್ಯೆಯು ಎಲ್ಲ ಛಂದಸ್ಸುಗಳ ಅಕ್ಷರ ಸಂಖ್ಯೆಯನ್ನೂ ಒಳಗೊಂಡಿದೆ. ಹೀಗಾಗಿ ಎಲ್ಲ ಛಂದಸ್ಸುಗಳಿಂದಲೂ ಉಪಧಾನ ಮಾಡಿದಂತೆಯೇ ಆಗುತ್ತದೆ.

**'ಅಗ್ನೇ ತ್ವಂ ನೋ ಅಂತಮಃ' 'ತಂ ತ್ವಾ ಶೋಚಿಷ್ಠ' 'ವಸುರಗ್ನಿಃ'** ಈ ಮಂತ್ರಗಳು ದ್ವಿಪದಾ ವಿರಾಟ್ ಛಂದಸ್ಸಿನಲ್ಲಿ ಇವೆ. ಈ ಮಂತ್ರಗಳಿಂದ ಉಪಧಾನ ಮಾಡುವ ಇಷ್ಟಕೆಗಳಿಂದ ಯಜಮಾನನು ಪ್ರತಿಷ್ಠಿತನಾಗುತ್ತಾನೆ.

ಉ❀ಊಉ❀ಊ

## ॥ ನವಮೋಽನುವಾಕಃ ॥

ಸರ್ವಾಭ್ಯೋ ವೈ ದೇವತಾಭ್ಯೋಽಗ್ನಿಶ್ಚೀಯತೇ ಯಥ್ಸಯುಜೋ
ನೋಪದಧ್ಯಾದ್ದೇವತಾ ಅಸ್ಯಾಗ್ನಿಂ ವೃಂಜೀರನ್, ಯಥ್ಸಯುಜ ಉಪದಧಾ-

---

ಸರ್ವಾಭ್ಯಃ । ವೈ । ದೇವತಾಭ್ಯಃ । ಅಗ್ನಿಃ । ಚೀಯತೇ । ಯತ್ । ಸಯುಜ ಇತಿ ಸ-ಯುಜಃ । ನ । ಉಪದಧ್ಯಾದಿತ್ಯುಪ-ದಧ್ಯಾತ್ । ದೇವತಾಃ । ಅಸ್ಯ । ಅಗ್ನಿಮ್ । ವೃಂಜೀರನ್ನ್ । ಯತ್ । ಸಯುಜ ಇತಿ ಸ-ಯುಜಃ । ಉಪದಧಾತೀತ್ಯುಪ-ದಧಾತಿ ।

---

ಈ ಒಂಬತ್ತನೆಯ ಅನುವಾಕದಲ್ಲಿ ಸಯುಜಾದೀಷ್ಟಕೆಗಳು ಹೇಳಲ್ಪಟ್ಟಿವೆ.

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ಸಯುಗಿಷ್ಟಕೆಗಳ ಉಪಧಾನ** |
| **ಸರ್ವಾಭ್ಯಃ ದೇವತಾಭ್ಯಃ ವೈ ಅಗ್ನಿಃ ಚೀಯತೇ** | ಎಲ್ಲ ದೇವತೆಗಳಿಗಾಗಿ ಈ ಅಗ್ನಿಯು ಚಯನ ಮಾಡಲ್ಪಡುತ್ತಾನೆ. |
| **ಯತ್ ಸಯುಜಃ ನ ಉಪದಧ್ಯಾತ್** | ಒಮ್ಮೆ ಸಯುಜನಾಮಕವಾದ ಇಷ್ಟಕೆಗಳನ್ನು ಉಪಧಾನ ಮಾಡದೆ ಇದ್ದರೆ |
| **ಅಸ್ಯ ಅಗ್ನಿಮ್ ದೇವತಾಃ ವೃಂಜೀರನ್ನ್** | ಈ ಯಜಮಾನನ ಅಗ್ನಿಯನ್ನು ಇಂದ್ರಾಗ್ನಿ-ಆಘಾರಾದಿ ದೇವತೆಗಳು ಪರಿತ್ಯಜಿಸಿ ಹೋಗುತ್ತಾರೆ. |
| **ಯತ್ ಸಯುಜಃ ಉಪದಧಾತಿ** | ಸಯುಜೇಷ್ಟಕೆಯನ್ನು ಉಪಧಾನ ಮಾಡಿದರೆ |

---

**ತಾತ್ಪರ್ಯ:-** ಚಯನ ಮಾಡುತ್ತಿರುವ ಅಗ್ನಿಯನ್ನು ದೇವತೆಗಳೊಡನೆ ಸೇರಿಸುವ ಮಂತ್ರಗಳೇ ಸಯುಜಗಳು. ಆ ಮಂತ್ರಗಳಿಂದ ಉಪಧಾನ ಮಾಡಲ್ಪಡುವ ಇಷ್ಟಕೆಗಳು ಸಯುಗಿಷ್ಟಕೆಗಳು.

ಈ ಇಷ್ಟಕೆಗಳನ್ನು ಉಪಧಾನ ಮಾಡುವುದರಿಂದ ಅಗ್ನಿಯ ಜತೆಗೂಡಿಯೇ ಯಜಮಾನನು ಚಯನವನ್ನು ಮಾಡಿದಂತಾಗಿ ಅಗ್ನಿಯ ವಿಯೋಗವಾಗುವುದಿಲ್ಲ.

-ತ್ಯಾತ್ಮನ್ನೈವೈನಗ್ಂ ಸಯುಜಂ ಚಿನುತೇ ನಾಗ್ನಿನಾ ವ್ಯೃಧ್ಯತೇಽಥೋ ಯಥಾ ಪುರುಷಸ್ಸ್ನಾವಭಿಸ್ಸಂತತ ಏವಮೇವೈತಾಭಿರಗ್ನಿಸ್ಸಂತತೋಽಗ್ನಿನಾ ವೈ ದೇವಾಸ್ಸುವರ್ಗಂ ಲೋಕಮಾಯನ್ತಾ ಅಮೂಃ ಕೃತ್ತಿಕಾ ಅಭವನ್,

---

ಆತ್ಮನಾ । ಏವ । ಏನಮ್ । ಸಯುಜಮಿತಿ ಸ-ಯುಜಮ್ । ಚಿನುತೇ । ನ । ಅಗ್ನಿನಾ । ವೀತಿ । ಋಧ್ಯತೇ । ಅಥೋ ಇತಿ । ಯಥಾ । ಪುರುಷಃ । ಸ್ನಾವಭಿರಿತಿ ಸ್ನಾವ-ಭಿಃ । ಸಂತತ ಇತಿ ಸಮ್-ತತಃ । ಏವಮ್ । ಏವ । ಏತಾಭಿಃ । ಅಗ್ನಿಃ । ಸಂತತ ಇತಿ ಸಮ್-ತತಃ । ಅಗ್ನಿನಾ । ವೈ । ದೇವಾಃ । ಸುವರ್ಗಮಿತಿ ಸುವಃ-ಗಮ್ । ಲೋಕಮ್ । ಆಯನ್ನ್ । ತಾಃ । ಅಮೂಃ । ಕೃತ್ತಿಕಾಃ । ಅಭವನ್ನ್ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಆತ್ಮನಾ ಸಯುಜಮ್ ಏವ ಏನಮ್ ಚಿನುತೇ** | [ಸಯುಜೇಷ್ಟಕೆಯನ್ನು ಉಪಧಾನ ಮಾಡುತ್ತಾನೆಂಬುದರಿಂದ] ತನ್ನೊಡನೆ ಜೊತೆಗೂಡಿರುವ ಅಗ್ನಿಯನ್ನೇ ಚಯನ ಮಾಡಿದವನಾಗುತ್ತಾನೆ. |
| **ಅಗ್ನಿನಾ ನ ವ್ಯೃಧ್ಯತೇ** | ಅಗ್ನಿಯಿಂದ ಬೇರ್ಪಡುವುದಿಲ್ಲ. |
| **ಅಥೋ ಯಥಾ ಪುರುಷಃ ಸ್ನಾವಭಿಃ ಸಂತತಃ** | ಮತ್ತು ಪುರುಷನು (ತನ್ನ ಶರೀರದಲ್ಲಿ) ಹೇಗೆ ನರಗಳಿಂದ ವ್ಯಾಪ್ತನಾಗಿರುವನೋ |
| **ಏವಮ್ ಏವ ಏತಾಭಿಃ ಅಗ್ನಿಃ ಸಂತತಃ** | ಹೀಗೆಯೇ ಈ ದೇವತೆಗಳಿಂದ ಕೂಡಿರುತ್ತಾನೆ/ಈ ಇಷ್ಟಕೆಗಳಿಂದ ಅಗ್ನಿಯು ವ್ಯಾಪ್ತನಾಗಿರುತ್ತಾನೆ./ ಹೀಗಾಗಿ ಎಲ್ಲ ಚಿತಿಗಳಲ್ಲಿಯೂ ಸಯುಗಿಷ್ಟಕೆಗಳ ಉಪಧಾನವನ್ನು ಮಾಡಬೇಕು.(ಭ. ಭಾ. ಭಾ) |

### ಕೃತ್ತಿಕೇಷ್ಟಕೋಪಧಾನ

| | |
|---|---|
| **ಅಗ್ನಿನಾ ವೈ ದೇವಾಃ ಸುವರ್ಗಮ್ ಲೋಕಮ್ ಆಯನ್** | ಪೂರ್ವದಲ್ಲಿ ಚಯನ ಮಾಡಿದ ಅಗ್ನಿಯೊಡನೆ/ಅಗ್ನಿಯಿಂದ ದೇವತೆಗಳು ಸ್ವರ್ಗಕ್ಕೆ ಹೋದರು. |
| **ತಾಃ ಅಮೂಃ ಕೃತ್ತಿಕಾಃ ಅಭವನ್** | ಆ ಇಷ್ಟಕೆಗಳು ಕಾಣುತ್ತಿರುವ ಕೃತ್ತಿಕೆಗಳಾದವು. |

ಯಸ್ಯೈತಾ ಉಪಧೀಯಂತೇ ಸುವರ್ಗಮೇವ [(೩೮)] ಲೋಕಮೇತಿ ಗಚ್ಛತಿ
ಪ್ರಕಾಶಂ ಚಿತ್ರಮೇವ ಭವತಿ ಮಂಡಲೇಷ್ಟಕಾ ಉಪದಧಾತೀಮೇ ವೈ ಲೋಕಾ
ಮಂಡಲೇಷ್ಟಕಾ ಇಮೇ ಖಲು ವೈ ಲೋಕಾ ದೇವಪುರಾ

---

ಯಸ್ಯ । ಏತಾಃ । ಉಪಧೀಯಂತ ಇತ್ಯುಪ-ಧೀಯಂತೇ । ಸುವರ್ಗಮಿತಿ ಸುವಃ-ಗಮ್ । ಏವ । (೩೮) । ಲೋಕಮ್ । ಏತಿ । ಗಚ್ಛತಿ । ಪ್ರಕಾಶಮಿತಿ ಪ್ರ-ಕಾಶಮ್ । ಚಿತ್ರಮ್ । ಏವ । ಭವತಿ । ಮಂಡಲೇಷ್ಟಕಾ ಇತಿ ಮಂಡಲ-ಇಷ್ಟಕಾಃ । ಉಪೇತಿ । ದಧಾತಿ । ಇಮೇ । ವೈ । ಲೋಕಾಃ । ಮಂಡಲೇಷ್ಟಕಾ ಇತಿ ಮಂಡಲ-ಇಷ್ಟಕಾಃ । ಇಮೇ । ಖಲು । ವೈ । ಲೋಕಾಃ । ದೇವಪುರಾ ಇತಿ ದೇವ-ಪುರಾಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯಸ್ಯ ಏತಾಃ ಉಪಧೀಯಂತೇ** | ಯಾವ ಯಜಮಾನನಿಗಾಗಿ ಅಧ್ವರ್ಯುವು ಕೃತ್ತಿಕೇಷ್ಟಕೆಗಳ ಉಪಧಾನವನ್ನು ಮಾಡುವನೋ |
| **ಸುವರ್ಗಮ್ ಲೋಕಮ್ ಏತಿ ಏವ** | ಆ ಯಜಮಾನನು ಸ್ವರ್ಗಲೋಕವನ್ನು ಹೊಂದಿಯೇ ಹೊಂದುವನು. |
| **ಪ್ರಕಾಶಮ್ ಗಚ್ಛತಿ** | ಸ್ವರ್ಗದಲ್ಲಿ ಪ್ರಕಾಶವನ್ನು ಹೊಂದುವನು. |
| **ಚಿತ್ರಮ್ ಭವತಿ ಏವ** | ಈ ಯಜಮಾನನಿಗೆ ಚಿತ್ರ ವಿಚಿತ್ರವಾದ ಆಭರಣಗಳು ಲಭಿಸುತ್ತವೆ. |

ಮಂಡಲೇಷ್ಟಕೋಪಧಾನ

| | |
|---|---|
| **ಮಂಡಲೇಷ್ಟಕಾಃ ಉಪದಧಾತಿ** | ಮಂಡಲೇಷ್ಟಕೆಗಳನ್ನು (ಪ್ರಥಮ, ಮಧ್ಯಮ ಮತ್ತು ಉತ್ತಮಚಿತಿಗಳಲ್ಲಿ) ಉಪಧಾನ ಮಾಡಬೇಕು. |
| **ಇಮೇ ವೈ ಲೋಕಾಃ ಮಂಡಲೇಷ್ಟಕಾಃ** | ಈ ಮೂರು ಮಂಡಲೇಷ್ಟಕೆಗಳು ಮೂರು ಲೋಕಗಳ ಸ್ವರೂಪವಾಗಿದೆ. |
| **ಇಮೇ ಖಲು ವೈ ಲೋಕಾಃ ದೇವಪುರಾಃ** | ಈ ಮೂರು ಲೋಕಗಳು ದೇವತೆಗಳ ನಗರಗಳಾಗಿವೆ/ ಆ ರೂಪದ ಇಷ್ಟಕೆಗಳೂ ದೇವಪುರಗಳೇ ಆಗಿವೆ. |

---

**'ಇಂದ್ರಾಗ್ನಿಭ್ಯಾಮ್'** ಎಂಬ ಮಂತ್ರದ ಬಳಿಕ **'ಅಘಾರಾಭ್ಯಾಮ್'** ಎಂದು ಆರಂಭವಾಗುವ ಮಂತ್ರಗಳಿಗೆ ಅನುಷಂಗವು ಸೇರಿದಾಗ ಎಂಟು ಮಂತ್ರಗಳಾಗುತ್ತವೆ. ಎಂಟನೆಯ ಮಂತ್ರಕ್ಕೆ ಅನುಷಂಗವಿಲ್ಲ. ಇವುಗಳಿಂದ

ದೇವಪುರಾ ಏವ ಪ್ರವಿಶತಿ ನಾರ್ತಿಮಾರ್ಛತ್ಯಗ್ನಿಂ ಚಿಕ್ಯಾನೋ ವಿಶ್ವಜ್ಯೋತಿಷ

ಉಪದಧಾತೀಮಾನೇವೈತಾಭಿರ್ಲೋಕಾಞ್ಜ್ಯೋತಿಷ್ಮತಃ ಕುರುತೇಽಥೋ

ಪ್ರಾಣಾನೇವೈತಾ ಯಜಮಾನಸ್ಯ ದಾಧ್ರ-

---

ದೇವಪುರಾ ಇತಿ ದೇವ-ಪುರಾಃ। ಏವ। ಪ್ರೇತಿ। ವಿಶತಿ। ನ। ಆರ್ತಿಮ್। ಏತಿ। ಋಚ್ಛತಿ। ಅಗ್ನಿಮ್। ಚಿಕ್ಯಾನಃ।

ವಿಶ್ವಜ್ಯೋತಿಷ ಇತಿ ವಿಶ್ವ-ಜ್ಯೋತಿಷಃ। ಉಪೇತಿ। ದಧಾತಿ। ಇಮಾನ್। ಏವ। ಏತಾಭಿಃ। ಲೋಕಾನ್।

ಜ್ಯೋತಿಷ್ಮತಃ। ಕುರುತೇ। ಅಥೋ ಇತಿ। ಪ್ರಾಣಾನಿತಿ ಪ್ರ-ಅನಾನ್। ಏವ। ಏತಾಃ। ಯಜಮಾನಸ್ಯ। ದಾಧ್ರತಿ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ದೇವಪುರಾಃ ಏವ ಪ್ರ ವಿಶತಿ | (ಈ ಮಂಡಲೇಷ್ಟಕೆಗಳಿಂದ ಚಯನ ಮಾಡಿದ ಯಜಮಾನನು) ದೇವತೆಗಳ ನಗರವನ್ನೇ ಪ್ರವೇಶಿದವನಾಗುತ್ತಾನೆ. |
| ಅಗ್ನಿಮ್ ಚಿಕ್ಯಾನಃ ಆರ್ತಿಮ್ ನ ಆರ್ಛತಿ | ಅಂತಹ ಅಗ್ನಿಯನ್ನು ಚಯನ ಮಾಡುವ ಯಜಮಾನನು ದುಃಖವನ್ನು ಹೊಂದುವುದಿಲ್ಲ. |

ವಿಶ್ವಜ್ಯೋತಿರಿಷ್ಟಕೋಪಧಾನ

| | |
|---|---|
| ವಿಶ್ವಜ್ಯೋತಿಷಃ ಉಪ ದಧಾತಿ | ಅಧ್ವರ್ಯುವು ವಿಶ್ವಜ್ಯೋತಿರಿಷ್ಟಕೆಗಳನ್ನು ಪ್ರಥಮ, ಮಧ್ಯಮ ಮತ್ತು ಉತ್ತಮಚಿತಿಗಳಲ್ಲಿ ಉಪಧಾನ ಮಾಡಬೇಕು. |
| ಇಮಾನ್ ಲೋಕಾನ್ ಏತಾಭಿಃ ಜ್ಯೋತಿಷ್ಮತಃ ಕುರುತೇ ಏವ | ಈ ಇಷ್ಟಕೆಗಳಿಂದ ಯಜಮಾನನು ಈ ಲೋಕಗಳನ್ನು ಪ್ರಕಾಶಯುಕ್ತವನ್ನಾಗಿ ಮಾಡುತ್ತಾನೆ. |
| ಅಥೋ ಏತಾಃ ಯಜಮಾನಸ್ಯ ಪ್ರಾಣಾನ್ ದಾಧ್ರತಿ ಏವ | ಮತ್ತು ಈ ಇಷ್ಟಕೆಗಳು ಯಜಮಾನನ ಪ್ರಾಣಗಳನ್ನು ದೃಢವನ್ನಾಗಿ ಮಾಡುತ್ತವೆ. |

---

ಉಪಧಾನ ಮಾಡುವ ಇಷ್ಟಕೆಗಳು ಸಯುಗಿಷ್ಟಕೆಗಳು.

'ಅಂಬಾ' 'ದುಲಾ' ಮುಂತಾದ ಏಳು ಮಂತ್ರಗಳಿಂದ ಉಪಧಾನ ಮಾಡುವ ಇಷ್ಟಕೆಗಳು 'ಕೃತ್ತಿಕೇಷ್ಟಕೆಗಳು'.

'ಪೃಥಿವ್ಯುದಪುರಮ್' 'ಅಧಿದ್ಯೌರಂತರಿಕ್ಷಮ್' 'ದ್ಯೌರಪರಾಜಿತಾ' ಈ ಮೂರು ಮಂತ್ರಗಳಿಂದ ಮಂಡಲ ಎಂಬ ಹೆಸರಿನ ಮೂರು ಇಷ್ಟಕೆಗಳನ್ನು ಪ್ರಥಮ, ಮಧ್ಯಮ ಮತ್ತು ಉತ್ತಮಚಿತಿಗಳಲ್ಲಿ ಉಪಧಾನ ಮಾಡಬೇಕು.

-ತ್ಯೇತಾ ವೈ ದೇವತಾಸ್ಸುವರ್ಗ್ಯಾಸ್ತಾ ಏವಾನ್ವಾರಭ್ಯ ಸುವರ್ಗಂ

ಲೋಕಮೇತಿ ॥ ೩೯-9 ॥

[ಸುವರ್ಗಮೇವ ತಾ ಏವ ಚತ್ವಾರಿ ಚ ॥]

---

ಏತಾಃ । ವೈ । ದೇವತಾಃ । ಸುವರ್ಗ್ಯಾ ಇತಿ ಸುವಃ-ಗ್ಯಾಃ । ತಾಃ । ಏವ । ಅನ್ವಾರಭ್ಯೇತ್ಯನು-ಆರಭ್ಯ । ಸುವರ್ಗಮಿತಿ ಸುವಃ-ಗಮ್ । ಲೋಕಮ್ । ಏತಿ ॥ ೩೯ ॥

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಏತಾಃ ವೈ ದೇವತಾಃ ಸುವರ್ಗ್ಯಾಃ** | ಈ ಮಂತ್ರಗಳಲ್ಲಿ ಹೇಳಲ್ಪಟ್ಟಿರುವ ಬೃಹಸ್ಪತಿ ಮುಂತಾದವರು ಸ್ವರ್ಗಯೋಗ್ಯರಾದ ದೇವತೆಗಳಾಗಿದ್ದಾರೆ. |
| **ತಾಃ ಅನ್ವಾರಭ್ಯ ಸುವರ್ಗಮ್ ಲೋಕಮ್ ಏತಿ ಏವ** | ಈ ಇಷ್ಟಕೆಗಳ ಉಪಧಾನದಿಂದ ಆ ದೇವತೆಗಳನ್ನು ಅನುಸರಿಸಿ ಯಜಮಾನನು ಸ್ವರ್ಗಲೋಕಕ್ಕೆ ಹೋಗುವನು. |

---

'ಬೃಹಸ್ಪತಿಸ್ತ್ವಾ' 'ವಿಶ್ವಕರ್ಮಾ ತ್ವಾ' 'ಪ್ರಜಾಪತಿಸ್ತ್ವಾ' ಈ ಮೂರು ಮಂತ್ರಗಳಿಂದ ವಿಶ್ವಜ್ಯೋತಿರಿಷ್ಟಕೆಗಳನ್ನು ಉಪಧಾನ ಮಾಡಬೇಕು. ಈ ಮಂತ್ರಗಳಲ್ಲಿ ವಿಶ್ವಶಬ್ದವೂ, ಜ್ಯೋತಿಃಶಬ್ದವೂ ಇರುವುದರಿಂದ, ಈ ಮಂತ್ರಗಳಿಂದ ಉಪಧಾನ ಮಾಡುವ ಇಷ್ಟಕೆಗಳು ವಿಶ್ವಜ್ಯೋತಿರಿಷ್ಟಕೆಗಳೆನಿಸಿವೆ.

ಈ ಮಂತ್ರಗಳಲ್ಲಿರುವ ಬೃಹಸ್ಪತಿ, ವಿಶ್ವಕರ್ಮ ಮತ್ತು ಪ್ರಜಾಪತಿದೇವತೆಗಳು ಸ್ವರ್ಗಪ್ರಾಪ್ತಿಗೆ ನಿಮಿತ್ತರಾದುದರಿಂದ ಈ ಇಷ್ಟಕೋಪಧಾನದಿಂದ ಅವರನ್ನು ಅನುಸರಿಸಿ ಯಜಮಾನನಿಗೆ ಸ್ವರ್ಗಲಾಭವಾಗುತ್ತದೆ. ಹೀಗಾಗಿ ಇದರ ಉಪಧಾನವು ಪ್ರಶಸ್ತವಾದುದು.

## ॥ ದಶಮೋಽನುವಾಕಃ ॥

ವೃಷ್ಟಿಸನೀರುಪ ದಧಾತಿ ವೃಷ್ಟಿಮೇವಾವ ರುಂಧೇ ಯದೇಕಧೋಪ

ದಧ್ಯಾದೇಕಮೃತುಂ ವರ್ಷೇದನುಪರಿಹಾರಗ್ಂ ಸಾದಯತಿ

ತಸ್ಮಾಥ್ಸರ್ವಾನೃತೂನ್, ವರ್ಷತಿ

---

ವೃಷ್ಟಿಸನೀರಿತಿ ವೃಷ್ಟಿ-ಸನೀಃ । ಉಪೇತಿ । ದಧಾತಿ । ವೃಷ್ಟಿಮ್ । ಏವ । ಅವೇತಿ । ರುಂಧೇ । ಯತ್ । ಏಕಧೇತ್ಯೇಕ-ಧಾ । ಉಪದಧ್ಯಾದಿತ್ಯುಪ-ದಧ್ಯಾತ್ । ಏಕಮ್ । ಋತುಮ್ । ವರ್ಷೇತ್ । ಅನುಪರಿಹಾರ ಮಿತ್ಯನು- ಪರಿಹಾರಮ್ । ಸಾದಯತಿ । ತಸ್ಮಾತ್ । ಸರ್ವಾನ್ । ಋತೂನ್ । ವರ್ಷತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ವೃಷ್ಟಿಸನೀಃ ಉಪದಧಾತಿ** | ಅಧ್ವರ್ಯುವು ವೃಷ್ಟಿಸನೀಷ್ಟಕೆಗಳನ್ನು ಉಪಧಾನ ಮಾಡಬೇಕು. |
| **ವೃಷ್ಟಿಮ್ ಅವರುಂಧೇ ಏವ** | ಇದರಿಂದ ಯಜಮಾನನು ಮಳೆಯನ್ನು ಪಡೆಯುತ್ತಾನೆ. |
| **ಯತ್ ಏಕಧಾ ಉಪದಧ್ಯಾತ್** | ಒಟ್ಟಿಗೇ ಎಲ್ಲ ಇಷ್ಟಕೆಗಳನ್ನೂ ಉಪಧಾನ ಮಾಡಿದರೆ |
| **ಏಕಮ್ ಋತುಮ್ ವರ್ಷೇತ್** | ಒಂದೇ ಋತುವಿನಲ್ಲಿ ಮಳೆಯಾಗುತ್ತದೆ. |
| **ಅನುಪರಿಹಾರಮ್ ಸಾದಯತಿ** | ಅದಕ್ಕಾಗಿ ಪ್ರದಕ್ಷಿಣಕ್ರಮದಲ್ಲಿ ಪ್ರತಿ ಸಲವೂ ಒಂದೊಂದು ಇಷ್ಟಕೆಯನ್ನು ತೆಗೆದುಕೊಂಡು ಸಾದನೆ ಮಾಡಬೇಕು. |
| **ತಸ್ಮಾತ್ ಸರ್ವಾನ್ ಋತೂನ್ ವರ್ಷತಿ** | ಇದರಿಂದ ಎಲ್ಲ ಋತುಗಳಲ್ಲಿಯೂ ಮಳೆಯಾಗುತ್ತದೆ. |

ಪುರೋವಾತಸನಿರಸೀತ್ಯಾಹೈತದ್ವೈ ವೃಷ್ಟ್ಯೈ ರೂಪಗ್‌ಂ ರೂಪೇಣೈವ ವೃಷ್ಟಿಮವರುಂಧೇ ಸಂಯಾನೀಭಿರ್ವೈ ದೇವಾ ಇಮಾಲ್ಲೋಕಾನ್ಥ್ಸಮಯು ಸ್ತಥ್ಸಂಯಾನೀನಾಗ್‌ಂ ಸಂಯಾನಿತ್ವಂ

---

ಪುರೋವಾತಸನಿರಿತಿ ಪುರೋವಾತ–ಸನಿಃ । ಅಸಿ । ಇತಿ । ಆಹ । ಏತತ್ । ವೈ । ವೃಷ್ಟ್ಯೈ । ರೂಪಮ್ । ರೂಪೇಣ । ಏವ । ವೃಷ್ಟಿಮ್ । ಅವೇತಿ । ರುಂಧೇ । ಸಂಯಾನೀಭಿರಿತಿ ಸಮ್–ಯಾನೀಭಿಃ । ವೈ । ದೇವಾಃ । ಇಮಾನ್ । ಲೋಕಾನ್ । ಸಮಿತಿ । ಅಯುಃ । ತತ್ । ಸಂಯಾನೀನಾಮಿತಿ ಸಮ್–ಯಾನೀನಾಮ್ । ಸಂಯಾನಿತ್ವಮಿತಿ ಸಂಯಾನಿ–ತ್ವಮ್ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಪುರೋವಾತಸನಿಃ ಅಸಿ ಇತಿ ಆಹ** | **'ಪುರೋವಾತಸನಿರಸಿ'** ಎಂದು ಇಷ್ಟಕೋಪಧಾನ ಮಂತ್ರವು ಹೇಳುತ್ತದೆ. |
| **ಏತತ್ ವೈ ವೃಷ್ಟ್ಯೈ ರೂಪಮ್** | ಈ ಪುರೋವಾತವು (ಮಳೆಗೆ ಮುನ್ನ ಬೀಸುವ ಗಾಳಿ) ಮಳೆಯ ರೂಪವಾಗಿದೆ. |
| **ರೂಪೇಣ ಏವ ವೃಷ್ಟಿಮ್ ಅವರುಂಧೇ** | *ಮಳೆಯ ಸ್ವರೂಪದಿಂದಲೇ ಮಳೆಯನ್ನು ಹೊಂದಿದವನಾಗುತ್ತಾನೆ. |

ಸಂಯಾನೀಷ್ಟಕೆಗಳ ವಿಧಿ; ಅರ್ಥವಾದ

| | |
|---|---|
| **ದೇವಾಃ ಸಂಯಾನೀಭಿಃ ವೈ ಇಮಾನ್ ಲೋಕಾನ್ ಸಮಯುಃ** | ದೇವತೆಗಳು ಈ ಸಂಯಾನೀಷ್ಟಕೆಗಳಿಂದ ಈ ಲೋಕಗಳನ್ನು ಚೆನ್ನಾಗಿ ಹೊಂದಿದರು. |
| **ತತ್ ಸಂಯಾನೀನಾಮ್ ಸಂಯಾನಿತ್ವಮ್** | ಅದೇ ಸಂಯಾನಿಗಳ ಸಂಯಾನಿತ್ವ. (ಅದು ಅನ್ವರ್ಥವಾಗಿದೆ) |

---

**ತಾತ್ಪರ್ಯ:–'ಪುರೋವಾತಸನಿರಸಿ'** ಮುಂತಾದ ಐದು ಮಂತ್ರಗಳಿಂದ ಈ ವೃಷ್ಟಿಸನೀಷ್ಟಕೆಗಳನ್ನು ಉಪಧಾನ ಮಾಡಬೇಕು. ಇವು ಐದು.

**'ವೃಷ್ಟಿಸನಿ'** ಎಂಬ ಶಬ್ದದಿಂದ ಕೂಡಿರುವ ಮಂತ್ರಗಳಿಂದ ಉಪಧಾನ ಮಾಡಲ್ಪಡುವುದರಿಂದ ಇವು **'ವೃಷ್ಟಿಸನೀಷ್ಟಕೆ'** ಗಳೆನಿಸಿವೆ.

---

* ಪುರೋವಾತ, ಅಭ್ರ(ಮೋಡ), ವಿದ್ಯುತ್(ಮಿಂಚು), ಸ್ತನಯಿತ್ನು(ಗುಡುಗು) ವೃಷ್ಟಿ (ಮಳೆ) ಈ ಐದೂ ಸೇರಿ ಮಳೆಯ ಸ್ವರೂಪವಾಗುತ್ತದೆ.

ಯಥ್ಸಂಯಾನೀರುಪದಧಾತಿ ಯಥಾಽಪ್ಸು ನಾವಾ
ಸಂಯಾತ್ಯೇವ[ಏವಮ್(೪೦)ಏವೈತಾಭಿಃ]ಮೇವೈತಾಭಿರ್ಯಜಮಾನ
ಇಮಾಲ್ಲೋಕಾನ್ಥ್ಸಂಯಾತಿ ಪ್ಲವೋ ವಾ ಏಷೋಽಗ್ನೇರ್ಯಥ್ಸಂಯಾನೀ
-ರ್ಯಥ್ಸಂಯಾನೀರುಪದಧಾತಿ ಪ್ಲವಮೇವೈತಮಗ್ನಯ ಉಪದಧಾ-

---

ಯತ್ । ಸಂಯಾನೀರಿತಿ ಸಮ್-ಯಾನೀಃ । ಉಪದಧಾತೀತ್ಯುಪ-ದಧಾತಿ । ಯಥಾ । ಅಪ್ಸ್ವಿತ್ಯಪ್-ಸು । ನಾವಾ । ಸಂಯಾತೀತಿ ಸಮ್-ಯಾತಿ । ಏವಮ್ । (೪೦) । ಏವ । ಏತಾಭಿಃ । ಯಜಮಾನಃ । ಇಮಾನ್ । ಲೋಕಾನ್ । ಸಮಿತಿ । ಯಾತಿ । ಪ್ಲವಃ । ವೈ । ಏಷಃ । ಅಗ್ನೇಃ । ಯತ್ । ಸಂಯಾನೀರಿತಿ ಸಮ್-ಯಾನೀಃ । ಯತ್ । ಸಂಯಾನೀರಿತಿ ಸಮ್-ಯಾನೀಃ । ಉಪದಧಾತೀತ್ಯುಪ-ದಧಾತಿ । ಪ್ಲವಮ್ । ಏವ । ಏತಮ್ । ಅಗ್ನಯೇ । ಉಪೇತಿ । ದಧಾತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯತ್ ಸಂಯಾನೀಃ ಉಪದಧಾತಿ** | ಸಂಯಾನೀಷ್ಟಕೆಗಳನ್ನು ಉಪಧಾನ ಮಾಡುತ್ತಾನೆಂಬುದು ಯಾವುದೋ (ಅದರಿಂದ) |
| **ಯಥಾ ಅಪ್ಸು ನಾವಾ ಸಂಯಾತಿ** | ಹೇಗೆ ನೀರಿನಲ್ಲಿ ನಾವೆಯಿಂದ ಒಂದು ತೀರದಿಂದ ಇನ್ನೊಂದು ತೀರಕ್ಕೆ ತೆರಳುವನೋ |
| **ಏವಮ್ ಏವ ಏತಾಭಿಃ ಯಜಮಾನಃ** | ಹಾಗೆಯೇ ಈ ಸಂಯಾನೀಷ್ಟಕೆಗಳಿಂದ ಯಜಮಾನನು |
| **ಇಮಾನ್ ಲೋಕಾನ್ ಸಂ ಯಾತಿ** | ಈ ಲೋಕಗಳನ್ನು ಚೆನ್ನಾಗಿ ಹೊಂದುವನು. |

ಪ್ರಕಾರಾಂತರದಿಂದ ಪ್ರಶಂಸೆ

| | |
|---|---|
| **ಯತ್ ಸಂಯಾನೀಃ ಏಷಃ ಅಗ್ನೇಃ ಪ್ಲವಃ ವೈ** | ಚಯನ ಮಾಡಲ್ಪಡುತ್ತಿರುವ ಅಗ್ನಿಯೆಂಬ ಸಮುದ್ರಕ್ಕೆ ಈ ಸಂಯಾನೀಷ್ಟಕೆಗಳು ತೆಪ್ಪದಂತೆಯೇ ಆಗಿವೆ. |
| **ಯತ್ ಸಂಯಾನೀಃ ಉಪದಧಾತಿ** | ಸಂಯಾನೀಷ್ಟಕೆಗಳನ್ನು ಯಜಮಾನನು ಉಪಧಾನ ಮಾಡುತ್ತಾನೆಂಬುದು |
| **ಅಗ್ನಯೇ ಏತಮ್ ಪ್ಲವಮ್ ಏವ ಉಪದಧಾತಿ** | ಅಗ್ನಿಗೆ ಈ ತೆಪ್ಪವನ್ನು ಕಲ್ಪಿಸಿದಂತೆಯೇ ಆಗುತ್ತದೆ. |

–ತ್ಯುತ ಯಸ್ಯೈತಾಸೂಪಹಿತಾಸ್ವಾಪೋಽಗ್ನಿಗ್ಂ ಹರಂತ್ಯಹೃತ ಏವಾಸ್ಯಾಗ್ನಿರಾದಿ

–ತ್ಯೇಷ್ಟಕಾ ಉಪದಧಾತ್ಯಾದಿತ್ಯಾ ವಾ ಏತಂ ಭೂತ್ಯೈ ಪ್ರತಿನುದಂತೇ

---

ಉತ । ಯಸ್ಯ । ಏತಾಸು । ಉಪಹಿತಾಸ್ವಿತ್ಯುಪ–ಹಿತಾಸು । ಆಪಃ । ಅಗ್ನಿಮ್ । ಹರಂತಿ । ಅಹೃತಃ । ಏವ । ಅಸ್ಯ । ಅಗ್ನಿಃ । ಆದಿತ್ಯೇಷ್ಟಕಾ ಇತ್ಯಾದಿತ್ಯ–ಇಷ್ಟಕಾಃ । ಉಪೇತಿ । ದಧಾತಿ । ಆದಿತ್ಯಾಃ । ವೈ । ಏತಮ್ । ಭೂತ್ಯೈ । ಪ್ರತೀತಿ । ನುದಂತೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|

**ಇನ್ನೊಂದು ರೀತಿಯ ಪ್ರಶಂಸೆ**

| | |
|---|---|
| **ಯಸ್ಯ ಏತಾಸು ಉಪಹಿತಾಸು** | ಯಾವ ಯಜಮಾನನಿಗಾಗಿ ಈ ಸಂಯಾನೀಷ್ಟಕೆಗಳು ಉಪಧಾನ ಮಾಡಲ್ಪಟ್ಟಿರುತ್ತವೆಯೋ, (ಉಪಧಾನ ಮಾಡಲ್ಪಟ್ಟಿದ್ದು) |
| **ಉತ ಆಪಃ ಅಗ್ನಿಮ್ ಹರಂತಿ** | ಮಳೆಯಿಂದ ನೀರು ಬಂದು ಅಗ್ನಿಯನ್ನು ಕೊಚ್ಚಿ ಕೊಂಡು ಹೋದರೂ |
| **ಅಸ್ಯ ಅಗ್ನಿಃ ಅಹೃತಃ ಏವ** | ಈ ಯಜಮಾನನ ಅಗ್ನಿಯು ತೆಗೆದುಕೊಂಡು ಹೋಗ ಲ್ಪಡದಂತೆಯೇ ಸರಿ. (ತೆಪ್ಪದಲ್ಲಿರುವವನನ್ನು ನೀರು ಒಯ್ಯದು) |

**ಆದಿತ್ಯೇಷ್ಟಕೋಪಧಾನ; ಅರ್ಥವಾದ**

| | |
|---|---|
| **ಆದಿತ್ಯೇಷ್ಟಕಾಃ ಉಪದಧಾತಿ** | ಅಧ್ವರ್ಯುವು ಯಜಮಾನನಿಗಾಗಿ ಆದಿತ್ಯೇಷ್ಟಕೆಗಳನ್ನು ಉಪಧಾನ ಮಾಡಬೇಕು. |
| **ಆದಿತ್ಯಾಃ ವೈ ಏತಮ್ ಭೂತ್ಯೈ ಪ್ರತಿನುದಂತೇ** | ಆದಿತ್ಯರೇ ಈ ಯಜಮಾನನಿಗೆ ಐಶ್ವರ್ಯವನ್ನು ಕೊಡುತ್ತಾರೆ. |

---

ಮಳೆಯೆಂಬುದು ಐದು ವಸ್ತುಗಳ ಮೇಲಿನ. ಹೀಗಾಗಿ ಪುರೋವಾತವೂ ಮಳೆಯ ಸ್ವರೂಪವೇ ಆಗಿದೆ.

**'ಸಮ್ಯಕ್ ಯಾಂತಿ ಆಭಿಃ ಇಮಾನ್ ಲೋಕಾನ್ ಇತಿ ಸಂಯಾನ್ಯಃ'** ಎಂಬ ವ್ಯುತ್ಪತ್ತಿಯಿಂದ (ಯಾವುದರ ಸಹಾಯದಿಂದ ಈ ಲೋಕಗಳನ್ನು ಚೆನ್ನಾಗಿ ಸೇರುವರೋ ಅವೇ ಸಂಯಾನಿಗಳು) **'ಸಂಯಾನೀ'** ಶಬ್ದವು ಅನ್ವರ್ಥವಾಗಿದೆ. ಸಂಯಾನೀಷ್ಟಕೆಗಳು ಎಂಟು.

ಯೋಽಲಂ ಭೂತ್ಯೈ ಸನ್ಭೂತಿಂ ನ ಪ್ರಾಪ್ನೋತ್ಯಾದಿತ್ಯಾ [ಆದಿತ್ಯಾಃ(೪೧)]

ಏವೈನಂ ಭೂತಿಂ ಗಮಯಂತ್ಯಸೌ ವಾ ಏತಸ್ಯಾದಿತ್ಯೋ ರುಚಮಾದತ್ತೇ

ಯೋಽಗ್ನಿಂ ಚಿತ್ವಾ ನ ರೋಚತೇ ಯದಾದಿತ್ಯೇಷ್ಟಕಾ

ಉಪದಧಾತ್ಯಸಾವೇವಾಸ್ಮಿನ್ನಾದಿತ್ಯೋ ರುಚಂ ದಧಾತಿ

---

ಯಃ । ಅಲಮ್ । ಭೂತ್ಯೈ । ಸನ್ನ್ । ಭೂತಿಮ್ । ನ । ಪ್ರಾಪ್ನೋತೀತಿ ಪ್ರ–ಆಪ್ನೋತಿ । ಆದಿತ್ಯಾಃ । (೪೧) । ಏವ । ಏನಮ್ । ಭೂತಿಮ್ । ಗಮಯಂತಿ । ಅಸೌ । ವೈ । ಏತಸ್ಯ । ಆದಿತ್ಯಃ । ರುಚಮ್ । ಏತಿ । ದತ್ತೇ । ಯಃ । ಅಗ್ನಿಮ್ । ಚಿತ್ವಾ । ನ । ರೋಚತೇ । ಯತ್ । ಆದಿತ್ಯೇಷ್ಟಕಾ ಇತ್ಯಾದಿತ್ಯ–ಇಷ್ಟಕಾಃ । ಉಪದಧಾತೀತ್ಯುಪ–ದಧಾತಿ । ಅಸೌ । ಏವ । ಅಸ್ಮಿನ್ನ್ । ಆದಿತ್ಯಃ । ರುಚಮ್ । ದಧಾತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯಃ ಭೂತ್ಯೈ ಅಲಮ್ ಸನ್** | ಯಾವ ಯಜಮಾನನು(ರಾಜ, ಅಮಾತ್ಯರ ಪುತ್ರರಾಗಿದ್ದೂ) ಐಶ್ವರ್ಯವನ್ನು ಹೊಂದಲು ಸಮರ್ಥರಾದರೂ, |
| **ಭೂತಿಮ್ ನ ಪ್ರಾಪ್ನೋತಿ** | ಐಶ್ವರ್ಯವನ್ನು ಹೊಂದುವುದಿಲ್ಲವೋ, |
| **ಆದಿತ್ಯಾಃ ಏವ ಏನಮ್ ಭೂತಿಮ್ ಗಮಯಂತಿ** | ಆದಿತ್ಯರೇ ಇವನಿಗೆ ಐಶ್ವರ್ಯವನ್ನು ಹೊಂದಿಸುತ್ತಾರೆ. |
| **ಯಃ ಅಗ್ನಿಮ್ ಚಿತ್ವಾ ನ ರೋಚತೇ** | ಯಾವ ಯಜಮಾನನು ಅಗ್ನಿಚಯನವನ್ನು ಮಾಡಿಯೂ ಪ್ರಕಾಶಮಾನನಾಗುವುದಿಲ್ಲವೋ/ಪ್ರೀತಿಯನ್ನು ಗಳಿಸುವುದಿಲ್ಲ. (ಅದಕ್ಕೆ ಕಾರಣ) |
| **ಅಸೌ ಆದಿತ್ಯಃ ವೈ ಏತಸ್ಯ ರುಚಮ್ ಆ ದತ್ತೇ** | ಅವನ ತೇಜಸ್ಸನ್ನು/ಪ್ರೀತಿಯನ್ನು ಆದಿತ್ಯನೇ ತೆಗೆದುಕೊಂಡುಬಿಡುತ್ತಾನೆ. |
| **ಯತ್ ಆದಿತ್ಯೇಷ್ಟಕಾಃ ಉಪದಧಾತಿ** | ಆದಿತ್ಯೇಷ್ಟಕೆಗಳನ್ನು ಉಪಧಾನ ಮಾಡುತ್ತಾನೆಂಬುದರಿಂದ |
| **ಅಸೌ ಆದಿತ್ಯಃ ಏವ ಅಸ್ಮಿನ್ ರುಚಮ್ ದಧಾತಿ** | (ಸುಪ್ರೀತನಾದ) ಆದಿತ್ಯದೇವನು ಈ ಯಜಮಾನನಲ್ಲಿ ಪ್ರೀತಿಯನ್ನು ಸ್ಥಾಪಿಸುತ್ತಾನೆ/ತೇಜಸ್ಸನ್ನು ಇಡುತ್ತಾನೆ. |

ಯಥಾಽಸೌ ದೇವಾನಾಗ್ಂ ರೋಚತ ಏವಮೇವೈಷ ಮನುಷ್ಯಾಣಾಗ್ಂ

ರೋಚತೇ ಘೃತೇಷ್ಟಕಾ ಉಪದಧಾತ್ಯೇತದ್ವಾ ಅಗ್ನೇಃ ಪ್ರಿಯಂ ಧಾಮ

ಯದ್ಘೃತಂ ಪ್ರಿಯೇಣೈವೈನಂ ಧಾಮ್ನಾ ಸಮರ್ಧಯತ್ಯಥೋ

---

ಯಥಾ । ಅಸೌ । ದೇವಾನಾಮ್ । ರೋಚತೇ । ಏವಮ್ । ಏವ । ಏಷಃ । ಮನುಷ್ಯಾಣಾಮ್ । ರೋಚತೇ ।

ಘೃತೇಷ್ಟಕಾ ಇತಿ ಘೃತ–ಇಷ್ಟಕಾಃ । ಉಪೇತಿ । ದಧಾತಿ । ಏತತ್ । ವೈ । ಅಗ್ನೇಃ । ಪ್ರಿಯಮ್ । ಧಾಮ । ಯತ್ ।

ಘೃತಮ್ । ಪ್ರಿಯೇಣ । ಏವ । ಏನಮ್ । ಧಾಮ್ನಾ । ಸಮಿತಿ । ಅರ್ಧಯತಿ । (೩೨) ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯಥಾ ಅಸೌ ದೇವಾನಾಮ್ ರೋಚತೇ** | ಆಗ ಯಜಮಾನನು (ಶಾಸ್ತ್ರೀಯಚಯನದಿಂದ)ಹೇಗೆ ದೇವತೆಗಳ ಮೆಚ್ಚುಗೆಗೆ ಪಾತ್ರನೋ/ಆದಿತ್ಯನು ಹೇಗೆ ದೇವತೆಗಳ ಪ್ರೀತಿಪಾತ್ರನಾಗಿರುವನೋ |
| **ಏವಮ್ ಏವ ಏಷಃ ಮನುಷ್ಯಾಣಾಮ್ ರೋಚತೇ** | ಹಾಗೆಯೇ ಈ ಆದಿತ್ಯೇಷ್ಟಕೋಪಧಾನ ಮಾಡಿದ ಯಜಮಾನನೂ ಮನುಷ್ಯರ ಪ್ರೀತಿಪಾತ್ರನಾಗುತ್ತಾನೆ. |

**ಘೃತೇಷ್ಟಕೋಪಧಾನ; ಪ್ರಶಂಸೆ**

| | |
|---|---|
| **ಘೃತೇಷ್ಟಕಾಃ ಉಪ ದಧಾತಿ** | (ಘೃತದ ಮುದ್ದೆಯಂತಿರುವ) ಘೃತೇಷ್ಟಕೆಗಳನ್ನು ಉಪಧಾನ ಮಾಡಬೇಕು. |
| **ಯತ್ ಘೃತಮ್ ಏತತ್ ಅಗ್ನೇಃ ಪ್ರಿಯಮ್ ಧಾಮ ವೈ** | ಈ ತುಪ್ಪವೆಂಬುದು ಅಗ್ನಿಗೆ ಪ್ರಿಯವಾದ ಸ್ಥಾನವಾಗಿದೆ/ ತುಪ್ಪವು ಮುಖ್ಯ ಸ್ಥಾನ. ಘೃತೇಷ್ಟಕೆಯು ಗೌಣಸ್ಥಾನ. |
| **ಏನಮ್ ಪ್ರಿಯೇಣ ಧಾಮ್ನಾ ಏವ ಸಮರ್ಧಯತಿ** | (ಘೃತೇಷ್ಟಕೋಪಧಾನವನ್ನು ಮಾಡಿದ ಯಜಮಾನನು) ಈ ಅಗ್ನಿಯನ್ನು ಪ್ರಿಯವಾದ ದ್ರವ್ಯದಿಂದ ಸಮೃದ್ಧನನ್ನಾಗಿ ಮಾಡುತ್ತಾನೆ. |

---

'ಸಲಿಲಾಯ ತ್ವಾ' ಮೊದಲಾದ ಎಂಟು ಮಂತ್ರಗಳು ಆದಿತ್ಯೇಷ್ಟಕೆಗಳಮಂತ್ರಗಳು. ಆದಿತ್ಯಶಬ್ದದಿಂದ ಕೂಡಿದ ಮಂತ್ರಗಳಿಂದ ಉಪಧಾನ ಮಾಡಲ್ಪಡುವ ಇಷ್ಟಕೆಗಳು ಆದಿತ್ಯೇಷ್ಟಕೆಗಳು. ಆದಿತ್ಯರೇ ಐಶ್ವರ್ಯವು ದೊರಕದಂತೆ ಮಾಡಿರುತ್ತಾರೆ. ಈ ಉಪಧಾನದಿಂದ ದೊರಕಿಸಿ ಕೊಡುತ್ತಾರೆ. ಮನುಷ್ಯರು ಈ ಚಯನ ಮಾಡಿದ ಯಜಮಾನನನ್ನು ಮೆಚ್ಚುವಂತೆಯೂ ಆ ಆದಿತ್ಯರೇ ಮಾಡುತ್ತಾರೆ.

[ಸಮರ್ಧಯತಿ(೩೨)ಅಥೋ]ತೇಜಸಾಽನುಪರಿಹಾರಗ್ಂ ಸಾದಯತ್ಯ ಪರಿವರ್ಗಮೇವಾಸ್ಮಿನ್ತೇಜೋ ದಧಾತಿ ಪ್ರಜಾಪತಿರಗ್ನಿಮಚಿನುತ ಸ ಯಶಸಾ ವ್ಯಾರ್ಧ್ಯತ ಸ ಏತಾ ಯಶೋದಾ ಅಪಶ್ಯತ್ತಾ ಉಪಾಧತ್ತ

---

ಅಥೋ ಇತಿ । ತೇಜಸಾ । ಅನುಪರಿಹಾರಮಿತ್ಯನು-ಪರಿಹಾರಮ್ । ಸಾದಯತಿ । ಅಪರಿವರ್ಗಮಿತ್ಯಪರಿ-ವರ್ಗಮ್ । ಏವ । ಅಸ್ಮಿನ್ನ್ । ತೇಜಃ । ದಧಾತಿ । ಪ್ರಜಾಪತಿರಿತಿ ಪ್ರಜಾ-ಪತಿಃ । ಅಗ್ನಿಮ್ । ಅಚಿನುತ । ಸಃ । ಯಶಸಾ । ವೀತಿ । ಆರ್ಧ್ಯತ । ಸಃ । ಏತಾಃ । ಯಶೋದಾ ಇತಿ ಯಶಃ-ದಾಃ । ಅಪಶ್ಯತ್ । ತಾಃ । ಉಪೇತಿ । ಅಧತ್ತ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಅಥೋ ತೇಜಸಾ** | ಮತ್ತು ಆ ಅಗ್ನಿಯು ತೇಜೋಯುಕ್ತನೂ ಆಗುತ್ತಾನೆ. |
| **ಅನುಪರಿಹಾರಮ್ ಸಾದಯತಿ** | ಘೃತೇಷ್ಟಕೆಗಳನ್ನೂ ವೃಷ್ಟಿಸನೀಷ್ಟಕೆಗಳಂತೆಯೇ ಒಂದೊಂದಾಗಿ ತೆಗೆದುಕೊಂಡು ಪ್ರದಕ್ಷಿಣಾಕಾರವಾಗಿ ಸಾದನೆ ಮಾಡಬೇಕು. |
| **ಅಸ್ಮಿನ್ ಅಪರಿವರ್ಗಮ್ ತೇಜಃ ದಧಾತಿ ಏವ** | ಅಗ್ನಿಯ ತೇಜಸ್ಸಿನ ಯಾವ ಭಾಗವನ್ನೂ ಬಿಡದೆ ಈ ಯಜಮಾನನಲ್ಲಿ ಎಲ್ಲ ತೇಜಸ್ಸನ್ನೂ ಸ್ಥಾಪಿಸಿದವನಾಗುತ್ತಾನೆ. |

ಯಶೋದೇಷ್ಟಕೋಪಧಾನ; ಪ್ರಶಂಸೆ; ಸಂಖ್ಯಾವಿಧಿ

| | |
|---|---|
| **ಪ್ರಜಾಪತಿಃ ಅಗ್ನಿಮ್ ಅಚಿನುತ** | ಪ್ರಜಾಪತಿದೇವನು ಅಗ್ನಿಚಯನವನ್ನು ಮಾಡಿದನು. |
| **ಸಃ ಯಶಸಾ ವ್ಯಾರ್ಧ್ಯತ** | (ಚಯನವನ್ನು ಅನುಷ್ಠಿಸಿದರೂ) ಅವನು ಯಶೋಹೀನನಾದನು. |
| **ಸಃ ಏತಾಃ ಯಶೋದಾಃ ಅಪಶ್ಯತ್** | (ಅವನು ಯಶಃಪ್ರಾಪ್ತಿಗಾಗಿ ಉಪಾಯವನ್ನು ಚಿಂತಿಸಿ) ಈ ಯಶೋದೇಷ್ಟಕೆಗಳನ್ನು ಉಪಾಯವಾಗಿ ತಿಳಿದುಕೊಂಡನು. |
| **ತಾಃ ಉಪಾಧತ್ತ** | ಬಳಿಕ ಆ ಇಷ್ಟಕೆಗಳನ್ನು ಉಪಧಾನ ಮಾಡಿದನು. |

---

'ಋಚೇ ತ್ವಾ' 'ರುಚೇ ತ್ವಾ' ಮುಂತಾದ ಐದು ಮಂತ್ರಗಳು ಘೃತೇಷ್ಟಕಾಮಂತ್ರಗಳು.
'ಯಶೋದಾಂ ತ್ವಾ' ಮುಂತಾದ ಐದು ಮಂತ್ರಗಳು ಯಶೋದೇಷ್ಟಕೆಗಳ ಉಪಧಾನದಲ್ಲಿ ವಿನಿಯೋಗಿಸಲ್ಪಡುತ್ತವೆ.

ತಾಭಿರ್ವೈ ಸ ಯಶ ಆತ್ಮನ್ನಧತ್ತ ಯದ್ಯಶೋದಾ ಉಪದಧಾತಿ ಯಶ ಏವ ತಾಭಿರ್ಯಜಮಾನ ಆತ್ಮನ್ಧತ್ತೇ ಪಂಚೋಪ ದಧಾತಿ ಪಾಂಕ್ತಃ ಪುರುಷೋ ಯಾವಾನೇವ ಪುರುಷಸ್ತಸ್ಮಿನ್, ಯಶೋ ದಧಾತಿ ॥ ೪೩–10 ॥

[ಏವಂ ಪ್ರಾಪ್ನೋತ್ಯಾದಿತ್ಯಾ ಅರ್ಧಯತ್ಯೇಕಾನ್ನ ಪಂಚಾಶಚ್ಚ ॥]

---

ತಾಭಿಃ । ವೈ । ಸಃ । ಯಶಃ । ಆತ್ಮನ್ನ್ । ಅಧತ್ತ । ಯತ್ । ಯಶೋದಾ ಇತಿ ಯಶಃ–ದಾಃ । ಉಪದಧಾತೀತ್ಯುಪ–ದಧಾತಿ । ಯಶಃ । ಏವ । ತಾಭಿಃ । ಯಜಮಾನಃ । ಆತ್ಮನ್ನ್ । ಧತ್ತೇ । ಪಂಚ । ಉಪೇತಿ । ದಧಾತಿ । ಪಾಂಕ್ತಃ । ಪುರುಷಃ । ಯಾವಾನ್ । ಏವ । ಪುರುಷಃ । ತಸ್ಮಿನ್ನ್ । ಯಶಃ । ದಧಾತಿ ॥ ೪೩ ॥

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ತಾಭಿಃ ವೈ ಸಃ ಆತ್ಮನ್ ಯಶಃ ಅಧತ್ತ** | ಆ ಯಶೋದೇಷ್ಟಕೆಗಳಿಂದ ಆ ಪ್ರಜಾಪತಿಯು ತನ್ನಲ್ಲಿ ಕೀರ್ತಿಯನ್ನು ಸ್ಥಾಪಿಸಿಕೊಂಡನು. |
| **ಯತ್ ಯಶೋದಾಃ ಉಪದಧಾತಿ** | ಯಶೋದೇಷ್ಟಕೆಗಳನ್ನು ಉಪಧಾನ ಮಾಡುತ್ತಾನೆಂಬುದು ಯಾವುದೋ (ಅದರಿಂದ) |
| **ತಾಭಿಃ ಯಜಮಾನಃ ಆತ್ಮನ್ ಯಶಃ ಧತ್ತೇ ಏವ** | ಆ ಯಶೋದೇಷ್ಟಕೆಗಳ ಉಪಧಾನದಿಂದ ಯಜಮಾನನು ತನ್ನಲ್ಲಿ ಕೀರ್ತಿಯನ್ನು ಸ್ಥಿರಗೊಳಿಸುತ್ತಾನೆ. |
| **ಪಂಚ ಉಪದಧಾತಿ** | ಐದು ಯಶೋದೇಷ್ಟಕೆಗಳನ್ನು ಉಪಧಾನ ಮಾಡಬೇಕು. |
| **ಪಾಂಕ್ತಃ ಪುರುಷಃ** | ಪುರುಷನು ಎರಡು ಹಸ್ತಗಳು, ಎರಡು ಪಾದಗಳು ಮತ್ತು ಶಿರಸ್ಸು–ಹೀಗೆ ಐದು ಅವಯವಗಳುಳ್ಳವನು. |
| **ಯಾವಾನ್ ಏವ ಪುರುಷಃ** | ಯಜಮಾನನು ಎಷ್ಟು ಪ್ರಮಾಣವುಳ್ಳವನೋ |
| **ತಸ್ಮಿನ್ ಯಶಃ ದಧಾತಿ** | ಅವನಲ್ಲಿ ಕೀರ್ತಿಯನ್ನು ಸ್ಥಾಪಿಸಿದವನಾಗುತ್ತಾನೆ. |

---

ಇದು ಯಶೋದೇಷ್ಟಕೆಗಳ ಸಂಖ್ಯಾವಿಧಿಯೂ ಆಗಿದೆ. ಅರ್ಥವಾದವೂ ಇದೆ.

## ॥ ಏಕಾದಶೋಽನುವಾಕಃ ॥

ದೇವಾಸುರಾಸ್ಸಂಯತ್ತಾ ಅಸನ್ಕನೀಯಾಗ್ಂಸೋ ದೇವಾ ಅಸನ್ಭೂಯಾಗ್ಂ

-ಸೋಽಸುರಾಸ್ತೇ ದೇವಾ ಏತಾ ಇಷ್ಟಕಾ ಅಪಶ್ಯನ್ತಾ ಉಪಾದಧತ

ಭೂಯಸ್ಕೃದಸೀತ್ಯೇವ ಭೂಯಾಗ್ಂಸೋಽಭವನ್ವನಸ್ಪತಿಭಿರೋಷಧೀಭಿ-

---

ದೇವಾಸುರಾ ಇತಿ ದೇವ-ಅಸುರಾಃ । ಸಂಯತ್ತಾ ಇತಿ ಸಮ್-ಯತ್ತಾಃ । ಅಸನ್ । ಕನೀಯಾಗ್ಂಸಃ । ದೇವಾಃ । ಅಸನ್ । ಭೂಯಾಗ್ಂಸಃ । ಅಸುರಾಃ । ತೇ । ದೇವಾಃ । ಏತಾಃ । ಇಷ್ಟಕಾಃ । ಅಪಶ್ಯನ್ । ತಾ । ಉಪೇತಿ । ಅದಧತ । ಭೂಯಸ್ಕೃದಿತಿ ಭೂಯಃ-ಕೃತ್ । ಅಸಿ । ಇತಿ । ಏವ । ಭೂಯಾಗ್ಂಸಃ । ಅಭವನ್ । ವನಸ್ಪತಿಭಿರಿತಿ ವನಸ್ಪತಿ-ಭಿಃ । ಓಷಧೀಭಿರಿತ್ಯೋಷಧಿ-ಭಿಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಭೂಯಸ್ಕೃದಿಷ್ಟಕಾವಿಧಿ; ಅರ್ಥವಾದ** | |
| **ದೇವಾಸುರಾಃ ಸಂಯತ್ತಾಃ ಅಸನ್** | ಪೂರ್ವಕಾಲದಲ್ಲಿ ದೇವತೆಗಳೂ, ಅಸುರರೂ ಯುದ್ಧ ಸನ್ನದ್ಧರಾದರು. |
| **ದೇವಾಃ ಕನೀಯಾಗ್ಂಸಃ ಅಸನ್** | (ಪುರುಷಸಂಖ್ಯೆಯಿಂದಲೂ, ದ್ರವ್ಯಸಂಪತ್ತಿನಿಂದಲೂ) ದೇವತೆಗಳು ಕನಿಷ್ಠರಾದರು |
| **ಅಸುರಾಃ ಭೂಯಾಗ್ಂಸಃ** ಅಸನ್ | ಅಸುರರು ಅಧಿಕರಾದರು. |
| **ತೇ ದೇವಾಃ ಏತಾಃ ಇಷ್ಟಕಾಃ ಅಪಶ್ಯನ್** | ಆಗ ದೇವತೆಗಳು (ಆಲೋಚಿಸಿ, ಉಪಾಯವಾಗಿ) ಈ ಭೂಯಸ್ಕೃದಿಷ್ಟಕೆಗಳನ್ನು ಕಂಡುಕೊಂಡರು. |
| **ತಾ ಉಪಾದಧತ** | ಆ ಇಷ್ಟಕೆಗಳನ್ನು ಉಪಧಾನ ಮಾಡಿದರು. |
| **ಭೂಯಸ್ಕೃದಸಿ ಇತಿ ವನಸ್ಪತಿಭಿಃ ಓಷಧೀಭಿಃ ಭೂಯಾಗ್ಂಸಃ ಏವ ಅಭವನ್** | **'ಭೂಯಸ್ಕೃದಸಿ'** ಎಂಬ ಮಂತ್ರದಿಂದ(ಇಷ್ಟಕೋಪಧಾನವನ್ನು ಮಾಡಿ)ವನಸ್ಪತಿಗಳಿಂದಲೂ ಓಷಧಿಗಳಿಂದಲೂ (ದ್ರವ್ಯಸಂಪತ್ತಿನಿಂದಲೂ, ಪುರುಷಸಂಪತ್ತಿನಿಂದಲೂ) ತುಂಬಿದವರಾದರು/ಹೆಚ್ಚಿನವರಾದರು. |

–ರ್ವರಿವಸ್ಕೃದಸೀತೀಮಾಮಜಯನ್ಪ್ರಾಚ್ಯಸೀತಿ ಪ್ರಾಚೀಂ ದಿಶಮಜಯನ್ನೂರ್ಧ್ವಾ–ಸೀತ್ಯಮೂಮಜಯನ್ನಂತರಿಕ್ಷಸದಸ್ಯಂತರಿಕ್ಷೇ ಸೀದೇತ್ಯಂತರಿಕ್ಷಮಜಯನ್ತತೋ ದೇವಾ ಅಭವನ್ಪ[ಅಭವನ್ (೪೪)ಪರಾ]ರಾಽಸುರಾ ಯಸ್ಯೈತಾ ಉಪಧೀಯಂತೇ

---

ವರಿವಸ್ಕೃದಿತಿ ವರಿವಃ–ಕೃತ್ । ಅಸಿ । ಇತಿ । ಇಮಾಮ್ । ಅಜಯನ್ । ಪ್ರಾಚೀ । ಅಸಿ । ಇತಿ । ಪ್ರಾಚೀಮ್ । ದಿಶಮ್ । ಅಜಯನ್ । ಊರ್ಧ್ವಾ । ಅಸಿ । ಇತಿ । ಅಮೂಮ್ । ಅಜಯನ್ । ಅಂತರಿಕ್ಷಸದಿತ್ಯಂತರಿಕ್ಷ–ಸತ್ । ಅಸಿ । ಅಂತರಿಕ್ಷೇ । ಸೀದ । ಇತಿ । ಅಂತರಿಕ್ಷಮ್ । ಅಜಯನ್ । ತತಃ । ದೇವಾಃ । ಅಭವನ್ । (೪೪) । ಪರೇತಿ । ಅಸುರಾಃ । ಯಸ್ಯ । ಏತಾಃ । ಉಪಧೀಯಂತ ಇತ್ಯುಪ–ಧೀಯಂತೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ವರಿವಸ್ಕೃತ್ ಅಸಿ ಇತಿ ಇಮಾಮ್ ಅಜಯನ್** | **'ವರಿವಸ್ಕೃದಸಿ'** ಎಂಬ ಮಂತ್ರದಿಂದ ಇಷ್ಟಕೋಪಧಾನವನ್ನು ಮಾಡಿ ಈ ಭೂಮಿಯನ್ನು ಜಯಸಿದರು. |
| **ಪ್ರಾಚೀ ಅಸಿ ಇತಿ ಪ್ರಾಚೀಮ್ ದಿಶಮ್ ಅಜಯನ್** | **'ಪ್ರಾಚ್ಯಸಿ'** ಎಂಬ ಮಂತ್ರದಿಂದ ಇಷ್ಟಕೋಪಧಾನವನ್ನು ಮಾಡಿ ಪೂರ್ವದಿಕ್ಕನ್ನು ಗೆದ್ದರು. |
| **ಊರ್ಧ್ವಾ ಅಸಿ ಇತಿ ಅಮೂಮ್ ಅಜಯನ್** | **'ಊರ್ಧ್ವಾಸಿ'** ಎಂಬ ಮಂತ್ರದಿಂದ ಇಷ್ಟಕೋಪಧಾನವನ್ನು ಮಾಡಿ ದ್ಯುಲೋಕವನ್ನು ಜಯಿಸಿದರು. |
| **ಅಂತರಿಕ್ಷಸದಸಿ ಅಂತರಿಕ್ಷೇ ಸೀದ ಇತಿ ಅಂತರಿಕ್ಷಮ್ ಅಜಯನ್** | **'ಅಂತರಿಕ್ಷಸದಸ್ಯಂತರಿಕ್ಷೇ ಸೀದ'** ಎಂಬ ಮಂತ್ರದಿಂದ ಭೂಯಸ್ಕೃದಿಷ್ಟಕೋಪಧಾನವನ್ನು ಮಾಡಿ ಅಂತರಿಕ್ಷಲೋಕವನ್ನು ಜಯಿಸಿದರು. |
| **ತತಃ ದೇವಾಃ ಅಭವನ್** | ಬಳಿಕ ದೇವತೆಗಳು (ವಿಜಯಿಗಳು) ಆದರು. |
| **ಅಸುರಾಃ ಪರಾ** ಅಭವನ್ | ಅಸುರರು ಪರಾಜಿತರಾಗಿ ಹೋದರು. |
| **ಯಸ್ಯ ಏತಾಃ ಉಪಧೀಯಂತೇ** | ಯಾವ ಯಜಮಾನನಿಗಾಗಿ ಈ ಭೂಯಸ್ಕೃದಿಷ್ಟಕೆಗಳು ಉಪಧಾನ ಮಾಡಲ್ಪಡುತ್ತವೆಯೋ |

---

**ತಾತ್ಪರ್ಯ:–'ಭೂಯಸ್ಕೃದಸಿ'** ಎಂದು ಆರಂಭಿಸಿ ಐದು ಮಂತ್ರಗಳಿಂದ ಈ ಭೂಯಸ್ಕೃದಿಷ್ಟಕೆಗಳನ್ನು ಉಪಧಾನ ಮಾಡಬೇಕು.

ಭೂಯಾನೇವ ಭವತ್ಯಭೀಮಾಲ್ಲೋಕಾಞ್ಜಯತಿ ಭವತ್ಯಾತ್ಮನಾ ಪರಾಽಸ್ಯ

ಭ್ರಾತೃವ್ಯೋ ಭವತ್ಯಪ್ಸುಷದಸಿ ಶ್ಯೇನಸದಸೀತ್ಯಾಹೈತದ್ವಾ ಅಗ್ನೇ ರೂಪಗ್ಂ

ರೂಪೇಣೈವಾಗ್ನಿಮವ ರುಂಧೇ

---

ಭೂಯಾನ್ । ಏವ । ಭವತಿ । ಅಭೀತಿ । ಇಮಾನ್ । ಲೋಕಾನ್ । ಜಯತಿ । ಭವತಿ । ಆತ್ಮನಾ । ಪರೇತಿ । ಅಸ್ಯ । ಭ್ರಾತೃವ್ಯಃ । ಭವತಿ । ಅಪ್ಸುಷದಿತ್ಯಪ್ಸು-ಸತ್ । ಅಸಿ । ಶ್ಯೇನಸದಿತಿ ಶ್ಯೇನ-ಸತ್ । ಅಸಿ । ಇತಿ । ಆಹ । ಏತತ್ । ವೈ । ಅಗ್ನೇಃ । ರೂಪಮ್ । ರೂಪೇಣ । ಏವ । ಅಗ್ನಿಮ್ । ಅವೇತಿ । ರುಂಧೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಭೂಯಾನ್ ಭವತಿ ಏವ | ಆ ಯಜಮಾನನು ನಿಶ್ಚಯವಾಗಿಯೂ ಅಧಿಕನೇ ಆಗುವನು. |
| ಇಮಾನ್ ಲೋಕಾನ್ ಅಭಿ ಜಯತಿ | ಈ ಪೃಥಿವ್ಯಾದಿ ಲೋಕಗಳನ್ನು ಜಯಿಸುತ್ತಾನೆ. |
| ಆತ್ಮನಾ ಭವತಿ | ತಾನು ಜಯಶೀಲನಾಗುತ್ತಾನೆ. |
| ಅಸ್ಯ ಭ್ರಾತೃವ್ಯಃ ಪರಾ ಭವತಿ | ಇವನ ಶತ್ರುವು ಸೋತುಹೋಗುವನು. |
| ಅಪ್ಸುಷತ್ ಅಸಿ ಶ್ಯೇನಸತ್ ಅಸಿ ಇತಿ ಆಹ | **'ಅಪ್ಸುಷದಸಿ' 'ಶ್ಯೇನಸದಸಿ'** ಎಂಬ ಮಂತ್ರವು 'ಎಲೈ! ಇಷ್ಟಕೆಯೇ! ನೀನು ನೀರಿನಲ್ಲಿರುವ ಅಗ್ನಿರೂಪನೂ ಆಗಿರುವೆ. ಶ್ಯೇನಾಕಾರದ ಅಗ್ನಿರೂಪನೂ ಆಗಿರುವೆ' ಎಂದು ಹೇಳುತ್ತದೆ. |
| ಏತತ್ ವೈ ಅಗ್ನೇಃ ರೂಪಮ್ | ಇದು ಅಗ್ನಿಯ ರೂಪವೇ ಆಗಿದೆ. |
| ರೂಪೇಣ ಏವ ಅಗ್ನಿಮ್ ಅವರುಂಧೇ | (ಆ ಕಾರಣದಿಂದ) (ಈ ಇಷ್ಟಕೋಪಧಾನವನ್ನು ಮಾಡಿದ ಯಜಮಾನನು) ರೂಪದಿಂದ ಕೂಡಿದ ಅಗ್ನಿಯನ್ನೇ (ಅಗ್ನಿಯ ರೂಪವನ್ನೇ)ಪಡೆಯುತ್ತಾನೆ. |

---

'ಅಪ್ಸುಷದಸಿ' ಎಂದು ಆರಂಭಿಸಿ ಐದು ಮಂತ್ರಗಳಿಂದ ಐದು ಅಗ್ನಿರೂಪೇಷ್ಟಕೆಗಳನ್ನು ಉಪಧಾನ ಮಾಡಬೇಕು. 'ಅಪ್ಸುಷದಸಿ' ಮುಂತಾದ ಮಂತ್ರಗಳಲ್ಲಿರುವ 'ಅಪ್ಸುಷತ್' ಮುಂತಾದವುಗಳು ಅಗ್ನಿಯ ಆಕಾರವಾಚಿಗಳು.

ಪೃಥಿವ್ಯಾಸ್ತ್ವಾ ದ್ರವಿಣೇಸಾದಯಾಮೀತ್ಯಾಹೇಮಾನೇವೈತಾಭಿ

ರ್ಲೋಕಾನ್ದ್ರವಿಣಾವತಃ ಕುರುತ ಆಯುಷ್ಯಾ ಉಪ ದಧಾತ್ಯಾಯುರೇವಾ

[ಏವ(೪೫)ಅಸ್ಮಿನ್ದಧಾತಿ]ಸ್ಮಿನ್ದಧಾ-

---

ಪೃಥಿವ್ಯಾಃ । ತ್ವಾ । ದ್ರವಿಣೇ । ಸಾದಯಾಮಿ । ಇತಿ । ಆಹ । ಇಮಾನ್ । ಏವ । ಏತಾಭಿಃ । ಲೋಕಾನ್ । ದ್ರವಿಣಾವತ ಇತಿ ದ್ರವಿಣ-ವತಃ । ಕುರುತೇ । ಆಯುಷ್ಯಾಃ । ಉಪೇತಿ । ದಧಾತಿ । ಆಯುಃ । ಏವ । (೪೫) । ಅಸ್ಮಿನ್ । ದಧಾತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಪೃಥಿವ್ಯಾಃ ತ್ವಾ ದ್ರವಿಣೇ ಸಾದಯಾಮಿ ಇತಿ ಆಹ** | 'ಎಲೈ! ಇಷ್ಟಕೆಯೇ! ನಿನ್ನನ್ನು ಪೃಥಿವೀಸಂಬಂಧಿಯಾದ ಧನದಲ್ಲಿ ಸಾದನೆ ಮಾಡುತ್ತೇನೆ.' ಎಂದು ಈ ಮಂತ್ರಭಾಗವು ಹೇಳುತ್ತದೆ. |
| **ಏತಾಭಿಃ ಇಮಾನ್ ಲೋಕಾನ್ ಏವ ದ್ರವಿಣಾವತಃ ಕುರುತೇ** | (ಈ ಮಂತ್ರಗಳಿಂದ ದ್ರವಿಣೋದಾನಾಮೇಷ್ಟಕೆಗಳನ್ನು ಉಪಧಾನ ಮಾಡಿದ ಯಜಮಾನನು) ಈ ಇಷ್ಟಕೆಗಳಿಂದ ಈ ಲೋಕಗಳನ್ನು ಧನಯುಕ್ತವಾದವುಗಳನ್ನಾಗಿ ಮಾಡುತ್ತಾನೆ. |

ಆಯುಷ್ಯೇಷ್ಟಕೋಪಧಾನ

| | |
|---|---|
| **ಆಯುಷ್ಯಾಃ ಉಪದಧಾತಿ** | ಅಧ್ವರ್ಯುವು ಬಳಿಕ ಆಯುಷ್ಯೇಷ್ಟಕೆಗಳನ್ನು ಉಪಧಾನ ಮಾಡಬೇಕು. |
| **ಅಸ್ಮಿನ್ ಆಯುಃ ದಧಾತಿ ಏವ** | ಈ ಉಪಧಾನದಿಂದ ಯಜಮಾನನಲ್ಲಿ ಆಯುಸ್ಸನ್ನು ಧಾರಣೆ ಮಾಡಿದವನಾಗುತ್ತಾನೆ. |

---

ದ್ರವಿಣೋದಾಶಬ್ದಗಳಿಂದ ಕೂಡಿರುವ ಮಂತ್ರಗಳಿಂದ ಉಪಧಾನ ಮಾಡಲ್ಪಡುವ ಇಷ್ಟಕೆಗಳು '**ದ್ರವಿಣೋದಾ**' ಎಂಬ ಹೆಸರಿನ ಇಷ್ಟಕೆಗಳು. ಇವೂ ಐದು.

–ತ್ಯಗ್ನೇ ಯತ್ತೇ ಪರಗ್ಂ ಹೃನ್ನಾಮೇತ್ಯಾಹೈತದ್ವಾ ಅಗ್ನೇಃ ಪ್ರಿಯಂ ಧಾಮ ಪ್ರಿಯಮೇವಾಸ್ಯ ಧಾಮೋಪಾಪ್ನೋತಿ ತಾವೇಹಿ ಸಗ್ಂ ರಭಾವಹಾ ಇತ್ಯಾಹ ವ್ಯೇವೈನೇನ ಪರಿಧತ್ತೇ

---

ಅಗ್ನೇ । ಯತ್ । ತೇ । ಪರಮ್ । ಹೃತ್ । ನಾಮ । ಇತಿ । ಆಹ । ಏತತ್ । ವೈ । ಅಗ್ನೇಃ । ಪ್ರಿಯಮ್ । ಧಾಮ । ಪ್ರಿಯಮ್ । ಏವ । ಅಸ್ಯ । ಧಾಮ । ಉಪೇತಿ । ಆಪ್ನೋತಿ । ತೌ । ಏತಿ । ಇಹಿ । ಸಮಿತಿ । ರಭಾವಹೈ । ಇತಿ । ಆಹ । ವೀತಿ । ಏವ । ಏನೇನ । ಪರೀತಿ । ಧತ್ತೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| | ಅಗ್ನಿಹೃದಯೇಷ್ಟಕೋಪಧಾನವಿಧಿ; ಅರ್ಥವಾದ |
| **ಅಗ್ನೇ ಯತ್ ತೇ ಪರಮ್ ಹೃತ್ ನಾಮ ಇತಿ ಆಹ** | 'ಹೇ! ಅಗ್ನಿಯೇ!/ಇಷ್ಟಕೆಯೇ! ಉತ್ಕೃಷ್ಟವಾದ **'ಹೃತ್'** ಎಂಬ ಪಾಪಹಾರಿಯಾದ ಪ್ರಿಯವಾದ ಹೆಸರು ನಿನ್ನದು. (ಆ ಹೆಸರಿನಿಂದ ಕೂಡಿ 'ನೀನು ನನ್ನೆಡೆಗೆ ಬಾ') ಎಂದು ಈ ಮಂತ್ರಭಾಗವು ಹೇಳುತ್ತದೆ. |
| **ಏತತ್ ವೈ ಅಗ್ನೇಃ ಪ್ರಿಯಮ್ ಧಾಮ** | ಪಾಪಹಾರಿಯಾದ ಸ್ವರೂಪವೇ ಅಗ್ನಿಯ ಪ್ರಿಯ ವಾದ ಸ್ಥಾನವಾಗಿದೆ. |
| **ಅಸ್ಯ ಪ್ರಿಯಮ್ ಧಾಮ ಏವ ಉಪಾಪ್ನೋತಿ** | ಇಷ್ಟಕೋಪಧಾನವನ್ನು ಮಾಡಿದ ಯಜಮಾನನು ಅಗ್ನಿಯ ಪ್ರಿಯವಾದ ಸ್ಥಾನವನ್ನೇ ಹೊಂದಿದವನಾ ಗುತ್ತಾನೆ. |
| **ತೌ ಏಹಿ ಸಮ್ ರಭಾವಹೈ ಇತಿ ಆಹ** | 'ನೀನು ನನ್ನ ಬಳಿಗೆ ಬಾ' 'ನಾವಿಬ್ಬರೂ ಜೊತೆಗೂಡಿ ಕೆಲಸ ಮಾಡೋಣ' ಎಂದು ಈ ಮಂತ್ರಭಾಗವು ಹೇಳುತ್ತದೆ. |
| **ಏನೇನ ವಿ ಪರಿ ಧತ್ತೇ ಏವ** | (ಹೀಗೆ ಹೇಳುವುದರಿಂದ) ಯಜಮಾನನು ಅಗ್ನಿಯ ಪ್ರಾವರಣವನ್ನು (ಸುತ್ತುವರೆಯುವಿಕೆ) ಹೊಂದಿದವ ನಾಗುತ್ತಾನೆ. |

---

**'ಪ್ರಾಣಂ ಮೇ ಪಾಹಿ'** ಮುಂತಾದ ಆರು ಮಂತ್ರಗಳಿಂದ ವಿಧಾನ ಮಾಡಿರುವ ಆಯುಷ್ಯೇಷ್ಟಕೆಗಳು ಆರು. **'ಅಗ್ನೇ ಯತ್ತೇ'** ಎಂಬ ಮಂತ್ರದಿಂದ ವಿಧಾನ ಮಾಡಿರುವ ಅಗ್ನಿಹೃದಯೇಷ್ಟಕೆಯು ಒಂದು.

ಪಾಂಚಜನ್ಯೇಷ್ವಪ್ಯೇಧ್ಯಗ್ನ ಇತ್ಯಾಹೈಷ ವಾ ಅಗ್ನಿಃ ಪಾಂಚಜನ್ಯೋ ಯಃ ಪಂಚಚಿತೀಕಸ್ತಸ್ಮಾದೇವಮಾಹರ್ತವ್ಯಾ ಉಪದಧಾತ್ಯೇತದ್ವಾ ಋತೂನಾಂ ಪ್ರಿಯಂ ಧಾಮ ಯದೃತವ್ಯಾ ಋತೂನಾಮೇವ ಪ್ರಿಯಂ ಧಾಮಾವರುಂಧೇ

---

ಪಾಂಚಜನ್ಯೇಷ್ವಿತಿ ಪಾಂಚ–ಜನ್ಯೇಷು । ಅಪೀತಿ । ಏಧಿ । ಅಗ್ನೇ । ಇತಿ । ಆಹ । ಏಷಃ । ವೈ । ಅಗ್ನಿಃ । ಪಾಂಚಜನ್ಯ ಇತಿ ಪಾಂಚ–ಜನ್ಯಃ । ಯಃ । ಪಂಚಚಿತೀಕ ಇತಿ ಪಂಚ–ಚಿತೀಕಃ । ತಸ್ಮಾತ್ । ಏವಮ್ । ಆಹ । ಋತವ್ಯಾಃ । ಉಪೇತಿ । ದಧಾತಿ । ಏತತ್ । ವೈ । ಋತೂನಾಮ್ । ಪ್ರಿಯಮ್ । ಧಾಮ । ಯತ್ । ಋತವ್ಯಾಃ । ಋತೂನಾಮ್ । ಏವ । ಪ್ರಿಯಮ್ । ಧಾಮ । ಅವೇತಿ । ರುಂಧೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಪಾಂಚಜನ್ಯೇಷು ಅಪಿ ಏಧಿ ಅಗ್ನೇ ಇತಿ ಆಹ** | 'ಅಗ್ನಿಯೇ! ನೀನು ಐದು ಚಿತಿಗಳಿಗೆ ಸಂಬಂಧಿಸಿದ ಎಲ್ಲ ಸ್ಥಾನಗಳಲ್ಲಿಯೂ ಇರುವವನಾಗು' ಎಂದು ಈ ಮಂತ್ರವು ಹೇಳುತ್ತದೆ. (ನೀನು ಹೀಗಾಗಿ ಪಾಂಚ ಜನ್ಯನಾಗಿರುವೆ) |
| **ಏಷಃ ವೈ ಅಗ್ನಿಃ ಪಾಂಚಜನ್ಯಃ** | ಈ ಅಗ್ನಿಯೇ ಪಾಂಚಜನ್ಯನಾಗಿರುತ್ತಾನೆ. (ಪಂಚ ಜನ=ಐದು ಚಿತಿಗಳು) |
| **ಯಃ ಪಂಚಚೀತೀಕಃ ತಸ್ಮಾತ್ ಏವಮ್ ಆಹ** | ಅವನು ಐದು ಚಿತಿಗಳನ್ನು ಹೊಂದಿರುವವನಾದುದರಿಂದ ಶ್ರುತಿಯು ಹೀಗೆ ಹೇಳುತ್ತಿದೆ. |

**ಋತವ್ಯೇಷ್ಟಕೋಪಧಾನ; ಅರ್ಥವಾದ**

| | |
|---|---|
| **ಋತವ್ಯಾಃ ಉಪದಧಾತಿ** | ಅಧ್ವರ್ಯುವು ಋತವ್ಯೇಷ್ಟಕೆಗಳನ್ನು ಉಪಧಾನ ಮಾಡಬೇಕು. |
| **ಯತ್ ಋತವ್ಯಾಃ ಏತತ್ ವೈ ಋತೂನಾಮ್ ಪ್ರಿಯಮ್ ಧಾಮ** | ಈ ಋತವ್ಯೇಷ್ಟಕೆಗಳೆಂಬುದು ಯಾವುದೋ ಅದು (ಅಂದರೆ) ಈ ಇಷ್ಟಕೆಗಳು ಋತುಗಳ ಪ್ರಿಯ ಸ್ಥಾನವಾಗಿವೆ. |
| **ಋತೂನಾಮ್ ಪ್ರಿಯಮ್ ಧಾಮ ಏವ ಅವರುಂಧೇ** | ಈ ಇಷ್ಟಕೋಪಧಾನವನ್ನು ಮಾಡಿದ ಯಜಮಾನನು ಋತುಗಳ ಪ್ರಿಯವಾದ ಸ್ಥಾನವನ್ನೇ ಹೊಂದುತ್ತಾನೆ. |

ಸುಮೇಕ ಇತ್ಯಾಹ ಸಂವಥ್ಸರೋ ವೈ ಸುಮೇಕಃ ಸಂವಥ್ಸರಸ್ಯೈವ ಪ್ರಿಯಂ

ಧಾಮೋಪಾಪ್ನೋತಿ ॥ ೪೬–11 ॥

[ಅಭವನ್ನಾಯುರೇವರ್ತವ್ಯಾ ಉಪ ಷಡ್ವಿಗ್ಂಶತಿಶ್ಚ ॥]

ಸುಮೇಕ ಇತಿ ಸು–ಮೇಕಃ । ಇತಿ । ಆಹ । ಸಂವಥ್ಸರ ಇತಿ ಸಮ್–ವಥ್ಸರಃ । ವೈ । ಸುಮೇಕ ಇತಿ ಸು–ಮೇಕಃ । ಸಂವಥ್ಸರಸ್ಯೇತಿ ಸಮ್–ವಥ್ಸರಸ್ಯ । ಏವ । ಪ್ರಿಯಮ್ । ಧಾಮ । ಉಪೇತಿ । ಆಪ್ನೋತಿ ॥ ೪೬–೧೧ ॥

| ಬ್ರಾಹ್ಮಣಭಾಗ | ವಿವರಣೆ |
|---|---|
| **ಸುಮೇಕಃ ಇತಿ ಆಹ** | ಈ ಮಂತ್ರಗಳಲ್ಲಿ **'ಸುಮೇಕ'** ಎಂಬ ಪದವು ಇದೆ. |
| **ಸಂವಥ್ಸರಃ ವೈ ಸುಮೇಕಃ** | ಸಂವತ್ಸರವೇ ಸುಮೇಕಶಬ್ದವಾಚ್ಯವಾಗಿದೆ. |
| **ಸಂವಥ್ಸರಸ್ಯ ಪ್ರಿಯಮ್ ಧಾಮ ಉಪಾಪ್ನೋತಿ ಏವ** | ಆದುದರಿಂದ ಯಜಮಾನನು ಸಂವತ್ಸರದ ಪ್ರಿಯವಾದ ಸ್ಥಾನವನ್ನೇ ಹೊಂದುವನು. |

**ಯಾವಾಃ, ಅಯಾವಾಃ, ಏವಾಃ, ಊಮಾಃ, ಸಬ್ದಃ, ಸಗರಃ** ಈ ಶಬ್ದಗಳು ವಸಂತವೇ ಮುಂತಾದ ಆರು ಋತುಗಳ ವಾಚಕಗಳು. ಸುಮೇಕಶಬ್ದವು ಸಂವತ್ಸರವಾಚಕವಾಗಿದೆ. ಈ ಏಳು ಮಂತ್ರಗಳಿಂದ ಏಳು ಋತವ್ಯೇಷ್ಟಕೆಗಳನ್ನು ಉಪಧಾನ ಮಾಡಬೇಕು. ಇದರಿಂದ ಸಂವತ್ಸರದ ಪ್ರಿಯ ಸ್ಥಾನವೇ ಲಭಿಸುತ್ತದೆ.

೫೦❀೧೫೦❀೧

## ॥ ದ್ವಾದಶೋಽನುವಾಕಃ ॥

ಪ್ರಜಾಪತೇರಕ್ಷ್ಯಶ್ವಯತ್ತತ್ಪರಾಽಪತತ್ತದಶ್ವೋಽಭವದ್ಯದಶ್ವಯತ್ತದಶ್ವಸ್ಯಾಶ್ವತ್ವಂ

---

ಪ್ರಜಾಪತೇರಿತಿ ಪ್ರಜಾ-ಪತೇಃ । ಅಕ್ಷಿ । ಅಶ್ವಯತ್ । ತತ್ । ಪರೇತಿ । ಅಪತತ್ । ತತ್ । ಅಶ್ವಃ । ಅಭವತ್ । ಯತ್ । ಅಶ್ವಯತ್ । ತತ್ । ಅಶ್ವಸ್ಯ । ಅಶ್ವತ್ವಮಿತ್ಯಶ್ವ-ತ್ವಮ್ ।

---

ಈ ಅನುವಾಕದಲ್ಲಿ ವೈಶ್ವದೇವಕಾಂಡಕ್ಕೆ ಸೇರಿದ ಅಶ್ವಮೇಧಯಾಗಕ್ಕೆ ಸಂಬಂಧಿಸಿದ ವಿಧಿಯೂ ಮತ್ತು ಆಖ್ಯಾನವೂ ಇದೆ.

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ಅಶ್ವಮೇಧಯಾಗದ ವಿಧಿ; ಜ್ಞಾನದ ಪ್ರಶಂಸೆ** |
| **ಪ್ರಜಾಪತೇಃ ಅಕ್ಷಿ ಅಶ್ವಯತ್** | ಪೂರ್ವದಲ್ಲಿ ಪ್ರಜಾಪತಿಬ್ರಹ್ಮನ ಕಣ್ಣುಗುಡ್ಡೆಯು ರೋಗಪೀಡಿತವಾಯಿತು. ಊದಿಕೊಂಡಿತು. |
| **ತತ್ ಪರಾ ಅಪತತ್** | ಅನಂತರ ಅದು ಭೂಮಿಯಲ್ಲಿ ಬಿದ್ದಿತು. |
| **ತತ್ ಅಶ್ವಃ ಅಭವತ್** | ಅದು ಕುದುರೆಯ ರೂಪವನ್ನು ತಾಳಿತು. |
| **ಯತ್ ಅಶ್ವಯತ್** | ಯಾವ ಕಾರಣದಿಂದ ಆ ಕಣ್ಣುಗುಡ್ಡೆಯು (ಅಶ್ವಯತ್ =ರೋಗಪೀಡಿತವಾಗಿ ಊದಿಕೊಂಡಿತೋ) ಆದರಿಂದ ಅಶ್ವವು ಜನಿಸಿತೋ, |
| **ತತ್ ಅಶ್ವಸ್ಯ ಅಶ್ವತ್ವಮ್** | ಅದರಿಂದ ಅದೇ ಅಶ್ವದ ಅಶ್ವತ್ವ. ಅನ್ವರ್ಥನಾಮ. ('ಅಶ್ವಯತ್' ಎಂಬಲ್ಲಿ '**ಯತ್**' ಎಂಬುದರ ಲೋಪ ದಿಂದ ಅಶ್ವಶಬ್ದದ ಸಿದ್ಧಿ) ಅಥವಾ (ಅ+ಶ್ವಿ+ಡ ಪ್ರತ್ಯಯ । ಅ+ಶ್ವಿ+ಅ=ಅ+ಶ್ವ್+ಅ=ಅಶ್ವಃ)ಭ.ಭಾ.ಭಾ |

---

**ತಾತ್ಪರ್ಯ:**-ಪ್ರಜಾಪತಿಬ್ರಹ್ಮನ ಕಣ್ಣುಗುಡ್ಡೆಯು ಭೂಮಿಯಲ್ಲಿ ಬಿದ್ದು ಅಶ್ವವಾಯಿತು. ದೇವತೆಗಳು ಅಶ್ವಮೇಧ ಯಾಗದಿಂದ ಮತ್ತೆ ಅದನ್ನು ಜೋಡಿಸಿದರು.

'**ಅಶ್ವ**'ವೆಂಬ ಹೆಸರು ಬರಲು ಇದು ಕಾರಣ ಎಂದು ಹೇಳಿದೆ.

ತದ್ದೇವಾ ಅಶ್ವಮೇಧೇನೈವ ಪ್ರತ್ಯದಧುರೇಷ ವೈ ಪ್ರಜಾಪತಿಗ್ಂ ಸರ್ವಂ ಕರೋತಿ ಯೋಽಶ್ವಮೇಧೇನ ಯಜತೇ ಸರ್ವ ಏವ ಭವತಿ ಸರ್ವಸ್ಯ ವಾ ಏಷಾ ಪ್ರಾಯಶ್ಚಿತ್ತಿಸ್ಸರ್ವಸ್ಯ ಭೇಷಜಗ್ಂ ಸರ್ವಂ ವಾ ಏತೇನ ಪಾಪ್ಮಾನಂ ದೇವಾ ಅತರ-

---

ತತ್ । ದೇವಾಃ । ಅಶ್ವಮೇಧೇನೇತ್ಯಶ್ವ-ಮೇಧೇನ । ಏವ । ಪ್ರತೀತಿ । ಅದಧುಃ । ಏಷಃ । ವೈ । ಪ್ರಜಾಪತಿಮಿತಿ ಪ್ರಜಾ-ಪತಿಮ್ । ಸರ್ವಮ್ । ಕರೋತಿ । ಯಃ । ಅಶ್ವಮೇಧೇನೇತ್ಯಶ್ವ-ಮೇಧೇನ । ಯಜತೇ । ಸರ್ವಃ । ಏವ । ಭವತಿ । ಸರ್ವಸ್ಯ । ವೈ । ಏಷಾ । ಪ್ರಾಯಶ್ಚಿತ್ತಿಃ । ಸರ್ವಸ್ಯ । ಭೇಷಜಮ್ । ಸರ್ವಮ್ । ವೈ । ಏತೇನ । ಪಾಪ್ಮಾನಮ್ । ದೇವಾಃ । ಅತರನ್ನ್ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ದೇವಾಃ ಅಶ್ವಮೇಧೇನ ಏವ ತತ್ ಪ್ರತ್ಯದಧುಃ | ದೇವತೆಗಳು ಆ ಕಣ್ಣುಗುಡ್ಡೆಯನ್ನು ಅಶ್ವಮೇಧಯಾಗದಿಂದಲೇ ಮತ್ತೆ ಜೋಡಿಸಿದರು. |
| ಯಃ ಅಶ್ವಮೇಧೇನ ಯಜತೇ | ಯಾವ ಯಜಮಾನನು ಅಶ್ವಮೇಧಯಾಗವನ್ನು ಅನುಷ್ಠಿಸುತ್ತಾನೆಯೋ |
| ಏಷಃ ಪ್ರಜಾಪತಿಮ್ ಸರ್ವಮ್ ಕರೋತಿ ವೈ | ಆತನು ಪ್ರಜಾಪತಿಯನ್ನು ಸಂಪೂರ್ಣಗೊಳಿಸಿದವನಾಗುತ್ತಾನೆ. |
| ಸರ್ವಃ ಏವ ಭವತಿ | ತಾನೂ ಸಂಪೂರ್ಣನೇ ಆಗುತ್ತಾನೆ. |

ಅಶ್ವಮೇಧಪ್ರಶಂಸೆ

| | |
|---|---|
| ಸರ್ವಸ್ಯ ವೈ ಏಷಾ ಪ್ರಾಯಶ್ಚಿತ್ತಿಃ | (ಈ ಅಶ್ವಮೇಧಯಾಗವು) ಎಲ್ಲ ಉಪಪಾತಕ-ಮಹಾಪಾತಕಗಳಿಗೂ ಪ್ರಾಯಶ್ಚಿತ್ತರೂಪವಾಗಿದೆ. |
| ಸರ್ವಸ್ಯ ಭೇಷಜಮ್ | ಎಲ್ಲ ವ್ಯಾಧಿಗಳಿಗೂ ಔಷಧರೂಪವಾಗಿದೆ. |
| ಸರ್ವಮ್ ಪಾಪ್ಮಾನಮ್ ದೇವಾಃ ಏತೇನ ಅತರನ್ ವೈ | ದೇವತೆಗಳು ಈ ಅಶ್ವಮೇಧಯಾಗದಿಂದ ಪಾಪವೆಲ್ಲವನ್ನೂ ದಾಟಿದರು./ಹೋಗಲಾಡಿಸಿಕೊಂಡರು. |

---

ಈ ಯಾಗವನ್ನು ಅನುಷ್ಠಿಸುವವನು ಸಂಪೂರ್ಣನಾಗುವನು ಎಂದು ಯಾಗದ ಪ್ರಶಂಸೆ ಇಲ್ಲಿದೆ.

–ನ್ನಪಿ ವಾ ಏತೇನ ಬ್ರಹ್ಮಹತ್ಯಾಮತರನ್ಥ್ಸರ್ವಂ ಪಾಪ್ಮಾನಂ[ಪಾಪ್ಮಾನಮ್(೪೭)

ತರತಿ ತರತಿ]ತರತಿ ತರತಿ ಬ್ರಹ್ಮಹತ್ಯಾಂ ಯೋಽಶ್ವಮೇಧೇನ ಯಜತೇ ಯ ಉ

ಚೈನಮೇವಂ ವೇದೋತ್ತರಂ ವೈ ತತ್ಪ್ರಜಾಪತೇರಕ್ಷ್ಯಶ್ವಯ–

---

ಅಪೀತಿ । ವೈ । ಏತೇನ । ಬ್ರಹ್ಮಹತ್ಯಾಮಿತಿ ಬ್ರಹ್ಮ–ಹತ್ಯಾಮ್ । ಅತರನ್ನ್ । ಸರ್ವಮ್ । ಪಾಪ್ಮಾನಮ್ । (೪೭) ।

ತರತಿ । ತರತಿ । ಬ್ರಹ್ಮಹತ್ಯಾಮಿತಿ ಬ್ರಹ್ಮ–ಹತ್ಯಾಮ್ । ಯಃ । ಅಶ್ವಮೇಧೇನೇತ್ಯಶ್ವ–ಮೇಧೇನ । ಯಜತೇ । ಯಃ ।

ಉ । ಚ । ಏನಮ್ । ಏವಮ್ । ವೇದ । ಉತ್ತರಮಿತ್ಯುತ್–ತರಮ್ । ವೈ । ತತ್ । ಪ್ರಜಾಪತೇರಿತಿ ಪ್ರಜಾ–ಪತೇಃ ।

ಅಕ್ಷಿ । ಅಶ್ವಯತ್ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಏತೇನ ಬ್ರಹ್ಮಹತ್ಯಾಮ್ ಅತರನ್ ಅಪಿ ವೈ | ಮತ್ತು ಈ ಯಾಗದಿಂದ ಬ್ರಹ್ಮಹತ್ಯಾಪಾಪವನ್ನೂ ಕಳೆದುಕೊಂಡರು. |
| ಯಃ ಅಶ್ವಮೇಧೇನ ಯಜತೇ | ಯಾವ ಯಜಮಾನನು ಈ ಅಶ್ವಮೇಧಯಾಗವನ್ನು ಅನುಷ್ಠಿಸುವನೋ, |
| ಯಃ ಉ ಚ ಏನಮ್ ಏವಮ್ ವೇದ | ಯಾರು ಈ ಅಶ್ವಮೇಧಯಾಗವನ್ನು ಚೆನ್ನಾಗಿ ತಿಳಿದುಕೊಳ್ಳುವನೋ |
| ಸರ್ವಮ್ ಪಾಪ್ಮಾನಮ್ ತರತಿ | ಅವನು ಎಲ್ಲ ಪಾಪಗಳನ್ನೂ ಹೋಗಲಾಡಿಸಿಕೊಳ್ಳುವನು. |
| ಬ್ರಹ್ಮಹತ್ಯಾಮ್ ತರತಿ | ಬ್ರಹ್ಮಹತ್ಯೆಯನ್ನೂ ಅದರ ಪಾಪವನ್ನೂ ದಾಟುವನು. |
| **ಉತ್ತರಾವದಾನವಿಧಿ; ಅರ್ಥವಾದ** | |
| ಪ್ರಜಾಪತೇಃ ತತ್ ಉತ್ತರಮ್ ಅಕ್ಷಿ ಅಶ್ವಯತ್ ವೈ | ಪ್ರಜಾಪತಿದೇವನ ಆ ಎಡಗಣ್ಣು ವ್ಯಾಧಿಪೀಡಿತವಾಯಿತು/ ಬಿದ್ದಿತು (ಅದೇ ಅಶ್ವವಾಯಿತು) |

---

ಅಶ್ವಮೇಧಯಾಗವು ಪಾಪಕ್ಷಯಾರ್ಥವಾಗಿಯೂ ಇದೆ. ಅದರ ಅನುಷ್ಠಾನ ಮತ್ತು ಉಪಾಸನೆಯು ಆ ಫಲವನ್ನು ನೀಡುವುದು. ದೇವತೆಗಳು ಅದನ್ನು ಅನುಷ್ಠಿಸಿ, ಆ ಫಲವನ್ನು ಪಡೆದಿರುವರು. ಈಗ ದೇವತೆಗಳಾಗಿರುವವರು ಹಿಂದಿನ ಜನ್ಮದಲ್ಲಿ ಈ ಯಜ್ಞವನ್ನು ಅನುಷ್ಠಿಸಿ, ಸಮಸ್ತಪಾಪವನ್ನೂ ಕಳೆದುಕೊಂಡಿರುವವರು. ಹೀಗೆ ಅಶ್ವಮೇಧವು

ತ್ತಸ್ಮಾದಶ್ವಸ್ಯೋತ್ತರತೋಽವದ್ಯಂತಿ ದಕ್ಷಿಣತೋಽನ್ಯೇಷಾಂ ಪಶೂನಾಂ
ವೈತಸಃ ಕಟೋ ಭವತ್ಯಪ್ಸುಯೋನಿರ್ವಾ ಅಶ್ವೋಽಪ್ಸುಜೋ ವೇತಸಸ್ಸ್ವ
ಏವೈನಂ ಯೋನೌ ಪ್ರತಿಷ್ಠಾಪಯತಿ

---

ತಸ್ಮಾತ್ । ಅಶ್ವಸ್ಯ । ಉತ್ತರತ ಇತ್ಯುತ್-ತರತಃ । ಅವೇತಿ । ದ್ಯಂತಿ । ದಕ್ಷಿಣತಃ । ಅನ್ಯೇಷಾಮ್ । ಪಶೂನಾಮ್ ।
ವೈತಸಃ । ಕಟಃ । ಭವತಿ । ಅಪ್ಸುಯೋನಿರಿತ್ಯಪ್ಸು-ಯೋನಿಃ । ವೈ । ಅಶ್ವಃ । ಅಪ್ಸುಜ ಇತ್ಯಪ್ಸು-ಜಃ । ವೇತಸಃ ।
ಸ್ವೇ । ಏವ । ಏನಮ್ । ಯೋನೌ । ಪ್ರತೀತಿ । ಸ್ಥಾಪಯತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ತಸ್ಮಾತ್ ಅಶ್ವಸ್ಯ ಉತ್ತರತಃ ಅವದ್ಯಂತಿ** | ಆದುದರಿಂದ (ಅಶ್ವಮೇಧಯಾಗದಲ್ಲಿ) ಕುದುರೆಯ ಎಡಭಾಗದಿಂದ ವಪಾರೂಪಹವಿಸ್ಸಿನ ಅವದಾನ ವನ್ನು ಮಾಡಬೇಕು. |
| **ಅನ್ಯೇಷಾಮ್ ಪಶೂನಾಮ್ ದಕ್ಷಿಣತಃ** ಅವದ್ಯಂತಿ | ಇತರ ಪಶುಗಳ ಬಲಭಾಗದಿಂದ ವಪಾದಿಹವಿಸ್ಸಿನ ಅವದಾನ ಮಾಡಬೇಕಷ್ಟೆ. |

**ಹವಿಃಸಾದನಪಾತ್ರೆಯ ವಿಧಾನ; ಅರ್ಥವಾದ**

| | |
|---|---|
| **ವೈತಸಃ ಕಟಃ ಭವತಿ** | ಹಬ್ಬೆ ಗಿಡದ ಚಾಪೆಯು ಹವಿಸ್ಸನ್ನು ಆಸಾದನ ಮಾಡುವ ಪಾತ್ರೆ/ಚಾಪೆಯಾಗಬೇಕು. |
| **ಅಪ್ಸುಯೋನಿಃ ವೈ ಅಶ್ವಃ** | ಕುದುರೆಯು ನೀರಿನಲ್ಲಿ ಜನಿಸಿದೆ. |
| **ಅಪ್ಸುಜಃ ವೇತಸಃ** | ಹಬ್ಬೆಗಿಡವೂ ನೀರಿನಲ್ಲಿಯೇ ಜನಿಸಿದೆ. |
| **ಸ್ವೇ ಯೋನೌ ಏವ ಏನಮ್ ಪ್ರತಿಷ್ಠಾಪಯತಿ** | (ಹೀಗೆ ಹವಿಸ್ಸಾದನಪಾತ್ರವೂ ವೇತಸವಾದುದರಿಂದ) ಅಶ್ವವನ್ನು ತನ್ನ ಉತ್ಪತ್ತಿಸ್ಥಾನದಲ್ಲಿಯೇ ಪ್ರತಿಷ್ಠಾಪನೆ ಮಾಡಿದಂತಾಗುವುದು. |

---

ಸರ್ವಫಲಪ್ರಾಪಕವೂ, ಸರ್ವಪಾಪ ಪರಿಹಾರಕವೂ ಆಗಿದೆ.

ಈ ಯಜ್ಞದ ಜ್ಞಾನವೂ ಅದೇ ಫಲವನ್ನೀಯುತ್ತದೆ. ಜ್ಞಾನವು ಎರಡು ಬಗೆ. ಅರ್ಥನಿರ್ಣಯ ಹಾಗೂ ಉಪಾಸನೆ. ಅರ್ಥನಿರ್ಣಯವು (**ಪದ**=ವ್ಯಾಕರಣ; **ವಾಕ್ಯ**=ಮೀಮಾಂಸಾ; **ಪ್ರಮಾಣ**=ನ್ಯಾಯ;) ಶಾಸ್ತ್ರದಿಂದ ಆಗುತ್ತದೆ. ಉಪಾಸನೆಯ ವಿಚಾರವು ಏಳನೆಯ ಕಾಂಡದ ಅಂತ್ಯದಲ್ಲಿ ಇದೆ.

ಪ್ರಕೃತಿಯಾಗದಲ್ಲಿ ಪಶುವಿನ ದಕ್ಷಿಣಭಾಗದಿಂದ ವಪಾದಿಹವಿಸ್ಸಿನ ಅವದಾನವು ವಿಹಿತವಾಗಿದೆ. ಅಶ್ವಮೇಧದಲ್ಲಿ

ಚತುಷ್ಟೋಮಃ ಸ್ತೋಮೋ ಭವತಿ ಸರಡ್ಢ ವಾ ಅಶ್ವಸ್ಯ ಸಕ್ಥ್ಯಾಽವೃಹತ್ತ

ದ್ದೇವಾಶ್ಚತುಷ್ಟೋಮೇನೈವ ಪ್ರತ್ಯದಧುರ್ಯಚ್ಚತುಷ್ಟೋಮಃ ಸ್ತೋಮೋ

ಭವತ್ಯಶ್ವಸ್ಯ ಸರ್ವತ್ವಾಯ ॥ ೪೮–12 ॥

[ಸರ್ವಂ ಪಾಪ್ಮಾನಮವೃಹದ್ದ್ವಾದಶ ಚ ॥]

---

ಚತುಷ್ಟೋಮ ಇತಿ ಚತುಃ–ಸ್ತೋಮಃ । ಸ್ತೋಮಃ । ಭವತಿ । ಸರಟ್ । ಹ । ವೈ । ಅಶ್ವಸ್ಯ । ಸಕ್ಥಿ । ಏತಿ । ಅವೃಹತ್ । ತತ್ । ದೇವಾಃ । ಚತುಷ್ಟೋಮೇನೇತಿ ಚತುಃ–ಸ್ತೋಮೇನ । ಏವ । ಪ್ರತೀತಿ । ಅದಧುಃ । ಯತ್ । ಚತುಷ್ಟೋಮ ಇತಿ ಚತುಃ–ಸ್ತೋಮಃ । ಸ್ತೋಮಃ । ಭವತಿ । ಅಶ್ವಸ್ಯ । ಸರ್ವತ್ವಾಯೇತಿ ಸರ್ವ–ತ್ವಾಯ ॥ ೪೮ ॥

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಚತುಷ್ಟೋಮವಿಧಿ; ಅರ್ಥವಾದ** | |
| **ಚತುಷ್ಟೋಮಃ ಸ್ತೋಮಃ ಭವತಿ** | ಅಶ್ವಮೇಧಯಾಗದ ಪ್ರಥಮ ಅಹಸ್ಸಿನಲ್ಲಿ/ದಿನದಲ್ಲಿ ನಾಲ್ಕು ಸ್ತೋಮಗಳುಳ್ಳ ಅಗ್ನಿಷ್ಟೋಮಯಾಗವನ್ನು ಅನುಷ್ಠಿಸಬೇಕು. |
| **ಸರಟ್ ಹ ವೈ ಅಶ್ವಸ್ಯ ಸಕ್ಥಿ ಆ ಅವೃಹತ್** | ಓತಿಕೇತವು/(ಗುಬ್ಬಚ್ಚಿ. ಭ. ಭಾ. ಭಾ) ಕುದುರೆಯ ತೊಡೆಯನ್ನು ಹತ್ತಿ ಆ ಮಾಂಸವನ್ನು ಕಿತ್ತು ತಿಂದಿತಲ್ಲವೇ! |
| **ತತ್ ದೇವಾಃ ಚತುಷ್ಟೋಮೇನ ಏವ ಪ್ರತ್ಯದಧುಃ** | ಅದನ್ನು ದೇವತೆಗಳು ಚತುಷ್ಟೋಮ–ಅಗ್ನಿಷ್ಟೋಮದ ಅನುಷ್ಠಾನದಿಂದಲೇ ಸರಿಪಡಿಸಿ ಪೂರ್ಣಾಂಗವಾಗುವಂತೆ ಮಾಡಿದರು. |
| **ಯತ್ ಚತುಷ್ಟೋಮಃ ಸ್ತೋಮಃ ಭವತಿ** | ಚತುಷ್ಟೋಮ–ಅಗ್ನಿಷ್ಟೋಮವನ್ನು ಅನುಷ್ಠಿಸುವುದೆಂಬುದು ಯಾವುದೋ (ಅದರಿಂದ) (ಅದು) |
| **ಅಶ್ವಸ್ಯ ಸರ್ವತ್ವಾಯ** ಭವತಿ | ಅಶ್ವವು ಅವಿಕಲಾಂಗವಾಗಿ ಸರ್ವಾಂಗಪೂರ್ಣವಾಗುವಂತಾಗುತ್ತದೆ. |

---

ಆ ಚೋದಕಪ್ರಾಪ್ತ(ಪ್ರಕೃತಿಪ್ರಾಪ್ತ)ವಾದುದರ ಸ್ಥಾನದಲ್ಲಿ ಉತ್ತರಾವದಾನವಿಧಿಯೂ, ಅರ್ಥವಾದವೂ ಉಕ್ತವಾಗಿದೆ.ಹಾಗೆಯೇ ಹವಿಸ್ಸನ್ನು ಆಸಾದನ ಮಾಡಲು ಹಬ್ಬೆಗಿಡದ ಚಾಪೆಯನ್ನು ಇಡಬೇಕು.

ತಾತ್ಪರ್ಯ:-ಅಶ್ವವೂ, ಹಬ್ಬೆಯ ಗಿಡವೂ ನೀರಿನಲ್ಲಿಯೇ ಜನಿಸಿದವುಗಳಾದುದರಿಂದ ತನ್ನ ಉತ್ಪತ್ತಿಸ್ಥಾನದಲ್ಲಿಯೇ ಅಶ್ವದ ಹವಿಸ್ಸನ್ನು ಪ್ರತಿಷ್ಠಾಪನೆ ಮಾಡಿದಂತಾಗುತ್ತದೆ. ವಡವಾಶ್ವವು ಸಮುದ್ರದಲ್ಲಿಯೇ ಇದೆ. ಹಬ್ಬೆಗಿಡವೂ ನೀರಿನಲ್ಲಿಯೇ ಇರುತ್ತದೆಯಷ್ಟೆ.

ಯಾವ ಅಗ್ನಿಷ್ಟೋಮಯಾಗದಲ್ಲಿ ತ್ರಿವೃತ್, ಪಂಚದಶ, ಸಪ್ತದಶ, ಏಕವಿಂಶವೆಂಬ ನಾಲ್ಕು ಸ್ತೋಮಗಳು ಇರುತ್ತವೆಯೋ ಅದು ಚತುಷ್ಟೋಮ ಅಗ್ನಿಷ್ಟೋಮವೆನಿಸುವುದು. ಶ್ರುತಿಯಲ್ಲಿ 'ಚತುಷ್ಟೋಮಃ ಸ್ತೋಮಃ ಭವತಿ' ಎಂದು ಹೇಳಿದೆ. ಅಲ್ಲಿ **ಸ್ತೋಮ** ಎಂಬ ಪದವು **ಅಗ್ನಿಷ್ಟೋಮ** ಎಂಬ ಅಭಿಪ್ರಾಯವುಳ್ಳದ್ದಾಗಿದೆ, 'ಭೀಮಸೇನ-ಭೀಮ', 'ಸತ್ಯಭಾಮಾ-ಭಾಮಾ' ಎಂಬಂತೆ ಪದೈಕದೇಶಪ್ರಯೋಗವಾಗಿದೆ. 'ತ್ರಿವೃತ್ ಅಗ್ನಿ ಷ್ಟೋಮ'ವೂ ಏಕಸ್ತೋಮಕವಾದ ಅಗ್ನಿಷ್ಟೋಮವೂ ಇದೆ. ಹೀಗಾಗಿ ಶ್ರುತಿಯು ಚತುಷ್ಟೋಮವೆಂಬ ವಿಶೇಷಣವನ್ನು ತಿಳಿಸುತ್ತಿದೆ.

**'ಸರಟ್'** ಪ್ರಾಣಿಯಿಂದ ವಿಕಲಾಂಗವಾದ ಅಶ್ವವನ್ನು ದೇವತೆಗಳು ಚತುಷ್ಟೋಮ-ಅಗ್ನಿಷ್ಟೋಮದ ಅನುಷ್ಠಾನ ದಿಂದ ಪೂರ್ಣಾಂಗವನ್ನಾಗಿ ಮಾಡಿದುದರಿಂದ ಅಶ್ವಮೇಧದ ಪ್ರಥಮ ಅಹಸ್ಸಿನಲ್ಲಿ ಅನುಷ್ಠಿಸುವ ಚತುಷ್ಟೋಮ-ಅಗ್ನಿಷ್ಟೋಮಯಾಗವು ಅಶ್ವಮೇಧಯಾಗವನ್ನು ಸಂಪೂರ್ಣಾಂಗಯುಕ್ತವಾದದ್ದನ್ನಾಗಿ ಮಾಡುತ್ತದೆ ಎಂದು ಶ್ರುತಿಯ ತಾತ್ಪರ್ಯ.

---

ಉಥ್ಸನ್ನಯಜ್ಞ ಇಂದ್ರಾಗ್ನೀ ದೇವಾ ವಾ ಅಕ್ಷ್ಣಯಾಸ್ತೋಮೀಯಾ ಅಗ್ನೇರ್ಭಾಗೋಽಸ್ಯಗ್ನೇ ಜಾತಾನ್ತ್ರಿಶ್ಮಿರಿತಿ ನಾಕಸದ್ಭಿಶ್ಛಂದಾಗ್ಂಸಿ ಸರ್ವಾಭ್ಯೋ ವೃಷ್ಟಿಸನೀರ್ದೇವಾಸುರಾಃ ಕನೀಯಾಗ್ಂಸಃ ಪ್ರಜಾಪತೇರಕ್ಷಿ ದ್ವಾದಶ ॥ 12 ॥

ಉಥ್ಸನ್ನಯಜ್ಞೋ ದೇವಾ ವೈ ಯಸ್ಯ ಮುಖ್ಯವತೀರ್ನಾಕಸದ್ಭಿರೇವೈತಾಭಿರಷ್ಟಾ ಚತ್ವಾರಿಗ್ಂಶತ್ ॥ 48 ॥

ಉಥ್ಸನ್ನಯಜ್ಞಸ್ಸರ್ವತ್ವಾಯ ॥

ಹರಿಃ ಓಮ್ ॥

ಶ್ರೀ ಕೃಷ್ಣಾರ್ಪಣಮಸ್ತು ॥

ಇತಿ ಪಂಚಮಕಾಂಡೇ ತೃತೀಯಃ ಪ್ರಶ್ನಃ

# ತೈತ್ತಿರೀಯ ಸಂಹಿತಾ

## ಪಂಚಮಃ ಕಾಂಡಃ ಚತುರ್ಥಃ ಪ್ರಶ್ನಃ

## ॥ ಪ್ರಥಮೋಽನುವಾಕಃ ॥

ದೇವಾಸುರಾಸ್ಸಂಯತ್ತಾ ಆಸನ್ತೇ ನ ವ್ಯಜಯಂತ

---

ದೇವಾಸುರಾ ಇತಿ ದೇವ-ಅಸುರಾಃ । ಸಂಯತ್ತಾ ಇತಿ ಸಮ್-ಯತ್ತಾಃ । ಆಸನ್ನ್ । ತೇ । ನ । ವೀತಿ । ಅಜಯಂತ ।

---

### ಪೀಠಿಕೆ

ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಮ್ ॥ ೧ ॥

ಪ್ರಪಾಠಕೇ ತೃತೀಯೇ ತು ವರ್ಣಿತಾಶ್ಚಿತಯೋಽಖಿಲಾಃ ।
ಚತುರ್ಥೇ ಚಿತಿಸಂಸ್ಕಾರೋ ದ್ವಾದಶಾತ್ರಾನುಕಕಾಃ ॥ ೨ ॥

ಇಷ್ಟಕಾ ಇಂದ್ರತನ್ವಾಖ್ಯಾ ಯಜ್ಞತನ್ವಭಿಧಾಸ್ತಥಾ ।
ನಕ್ಷತ್ರಾಖ್ಯಾಶ್ಚ ವಿಹಿತಾಃ [1]ಪ್ರಥಮೇಽಪ್ಯನುವಾಕಕೇ ॥ ೩ ॥

ಋತವ್ಯಾ ವೈಶ್ವದೇವ್ಯಾಶ್ಚ [2]ದ್ವಿತೀಯೇ ಪ್ರೋಕ್ಷಣಂ ತಥಾ ।
ಶತರುದ್ರೀಯಹೋಮಸ್ತು [3]ತೃತೀಯೇ ಸಮುದೀರಿತಃ ॥ ೪ ॥

---

ಮೂರನೆಯ ಪ್ರಪಾಠಕದಲ್ಲಿ ಎಲ್ಲ ಚಿತಿಗಳನ್ನೂ ತಿಳಿಸಿಯಾಯಿತು. ಈ ನಾಲ್ಕನೆಯ ಪ್ರಶ್ನದಲ್ಲಿ ಚಿತಿ ಸಂಸ್ಕಾರವು ಹೇಳಲ್ಪಡುತ್ತದೆ. ಇದರಲ್ಲಿ ಹನ್ನೆರಡು ಅನುವಾಕಗಳು ಇವೆ.

ಪ್ರಥಮಾನುವಾಕದಲ್ಲಿ ಇಂದ್ರತನ್ವಿಷ್ಟಕೆಗಳು, ಯಜ್ಞತನ್ವಿಷ್ಟಕೆಗಳು ಮತ್ತು ನಕ್ಷತ್ರೇಷ್ಟಕೆಗಳಿಗೆ ಸಂಬಂಧಿಸಿದ ವಿಧಿಯು ಇದೆ.

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ದೇವಾಸುರಾಃ ಸಂಯತ್ತಾಃ ಆಸನ್** | ಪೂರ್ವದಲ್ಲಿ ದೇವತೆಗಳೂ ಅಸುರರೂ ಯುದ್ಧ ಸನ್ನದ್ಧರಾದರು. |
| **ತೇ ನ ವ್ಯಜಯಂತ** | ಅವರು ಪರಸ್ಪರವಾಗಿ ಜಯಶಾಲಿಗಳಾಗಲಿಲ್ಲ. |

ಸ ಏತಾ ಇಂದ್ರಸ್ತನೂರಪಶ್ಯತ್ತಾ ಉಪಾಧತ್ತ ತಾಭಿರ್ವೈ ಸ
ತನುವಮಿಂದ್ರಿಯಂ ವೀರ್ಯಮಾತ್ಮನ್ನಧತ್ತ ತತೋ ದೇವಾ
ಅಭವನ್ಪರಾಽಸುರಾ ಯದಿಂದ್ರತನೂರುಪದಧಾತಿ

---

ಸಃ । ಏತಾಃ । ಇಂದ್ರಃ । ತನೂಃ । ಅಪಶ್ಯತ್ । ತಾಃ । ಉಪೇತಿ । ಅಧತ್ತ । ತಾಭಿಃ । ವೈ । ಸಃ । ತನುವಮ್ । ಇಂದ್ರಿಯಮ್ । ವೀರ್ಯಮ್ । ಆತ್ಮನ್ನ್ । ಅಧತ್ತ । ತತಃ । ದೇವಾಃ । ಅಭವನ್ನ್ । ಪರೇತಿ । ಅಸುರಾಃ । ಯತ್ । ಇಂದ್ರತನೂರಿತೀಂದ್ರ–ತನೂಃ । ಉಪದಧಾತೀತ್ಯುಪ–ದಧಾತಿ ।

---

ಪರಿಷೇಚನಮಪ್ಯುಕ್ತಂ [4]ತುರ್ಯೇ ತದ್ವದ್ವಿಕರ್ಷಣಮ್ ।
ವ್ಯಾಘಾರಣಂ ವೈಶ್ವಕರ್ಮಣಾಽಽಹುತಿಶ್ಚಾತ್ರ [5]ಪಂಚಮೇ ॥ ೫ ॥
[6]ಷಷ್ಠೇ ತು ಸಮಿದಾಧಾನಮಗ್ನಿಪ್ರಣಯನಂ ತಥಾ ।
ಹೋತಾಽನ್ವಾಹಾಪ್ರತಿರಥಂ ದಶರ್ಚಂ ಸವಿಕಲ್ಪಕಮ್ ॥ ೬ ॥
[7]ಸಪ್ತಮೇ ಚಿತಿಮಾರುಹ್ಯ ವಹ್ನಿಂ ತತ್ರ ವಿನಿಕ್ಷಿಪೇತ್ ।
ವಸೋರ್ಧಾರಾಽಷ್ಟಮೇ[8] ವಾಜಪ್ರಸವೀಯೋಽಪ್ಯನಂತರೇ[9] ॥ ೭ ॥

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಸಃ ಇಂದ್ರಃ ಏತಾಃ ತನೂಃ ಅಪಶ್ಯತ್** | ಆಗ ಇಂದ್ರನು ಇಂದ್ರತನೂನಾಮಕವಾದ ಇಷ್ಟಕೆಗಳನ್ನು ಆಲೋಚಿಸಿ ತಿಳಿದುಕೊಂಡನು. |
| **ತಾಃ ಉಪಾಧತ್ತ** | ಆ ಇಷ್ಟಕೆಗಳನ್ನು ಉಪಧಾನ ಮಾಡಿದನು. |
| **ತಾಭಿಃ ವೈ ಸಃ ತನುವಮ್ ಇಂದ್ರಿಯಮ್ ವೀರ್ಯಮ್ ಆತ್ಮನ್ ಅಧತ್ತ** | ಆ ಇಂದ್ರತನೂ ಇಷ್ಟಕೆಗಳ ಉಪಧಾನದಿಂದ ಆ ಇಂದ್ರನು ಶರೀರಪುಷ್ಟಿಯನ್ನೂ, ಇಂದ್ರಿಯಪಾಠವನ್ನೂ, ಬಲವನ್ನೂ ತನ್ನಲ್ಲಿ ಧರಿಸಿದನು. |
| **ತತಃ ದೇವಾಃ ಅಭವನ್** | ಬಳಿಕ ದೇವತೆಗಳು ವಿಜಯಿಗಳಾದರು. |
| **ಅಸುರಾಃ ಪರಾ** ಅಭವನ್ | ಅಸುರರು ಪರಾಜಿತರಾದರು. |
| **ಯತ್ ಇಂದ್ರತನೂಃ ಉಪದಧಾತಿ** | ಯಾವ ಯಜಮಾನನು ಇಂದ್ರತನೂನಾಮಕವಾದ ಇಷ್ಟಕೆಗಳನ್ನು ಉಪಧಾನ ಮಾಡುತ್ತಾನೆಂಬುದು ಯಾವುದೋ (ಅದರಿಂದ) |

ತನುವಮೇವ ತಾಭಿರಿಂದ್ರಿಯಂ ವೀರ್ಯಂ ಯಜಮಾನ ಆತ್ಮನ್ಧತ್ತೇಽಥೋ ಸೇಂದ್ರಮೇವಾಗ್ನಿಗ್ಂ ಸತನುಂ ಚಿನುತೇ ಭವತ್ಯಾತ್ಮನಾ ಪರಾಽಸ್ಯ ಭ್ರಾತೃವ್ಯೋ [ಭ್ರಾತೃವ್ಯಃ(೧) ಭವತಿ] ಭವತಿ

---

ತನುವಮ್ । ಏವ । ತಾಭಿಃ । ಇಂದ್ರಿಯಮ್ । ವೀರ್ಯಮ್ । ಯಜಮಾನಃ । ಆತ್ಮನ್ । ಧತ್ತೇ । ಅಥೋ ಇತಿ । ಸೇಂದ್ರಮಿತಿ ಸ-ಇಂದ್ರಮ್ । ಏವ । ಅಗ್ನಿಮ್ । ಸತನುಮಿತಿ ಸ-ತನುಮ್ । ಚಿನುತೇ । ಭವತಿ । ಆತ್ಮನಾ । ಪರೇತಿ । ಅಸ್ಯ । ಭ್ರಾತೃವ್ಯಃ । (೧) । ಭವತಿ ।

---

ದಶಮೇ[10] ವಹ್ನಿಯೋಗಶ್ಚ ಪುನಶ್ಚಿತಿರಿತೀರಿತಃ ।
ಏಕಾದಶೇ[11] ತು ಕಾಮ್ಯಾನಿ ವಿಹವ್ಯಾಶ್ಚ ಸಮೀರಿತಾಃ ॥ ೮ ॥

ದ್ವಾದಶೇ[12] ತ್ವಶ್ವಮೇಧೀಯಸ್ತೋತ್ರೇ ತ್ರಯಮುದೀರಿತಮ್ ।
ಋಕ್ಸ್ತೋಮ ಸಾಮ ಚೇತ್ಯೇವ ಪ್ರಪಾಠಕ ಉದೀರಿತಃ ॥ ೯ ॥

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯಜಮಾನಃ ತಾಭಿಃ ತನುವಮ್ ವೀರ್ಯಮ್ ಇಂದ್ರಿಯಮ್ ಆತ್ಮನ್ ಧತ್ತೇ ಏವ** | ಯಜಮಾನನು ಆ ಇಷ್ಟಕೆಗಳಿಂದ ತನ್ನಲ್ಲಿ ಶರೀರ ಪುಷ್ಟಿಯನ್ನೂ ಇಂದ್ರಿಯ-ಬಲ-ವೀರ್ಯಗಳನ್ನೂ ಧರಿಸಿಯೇ ಧರಿಸುತ್ತಾನೆ. |
| **ಅಥೋ ಸೇಂದ್ರಮ್ ಸತನುಮ್ ಏವ ಅಗ್ನಿಮ್ ಚಿನುತೇ** | ಮತ್ತು ಇಂದ್ರಸಹಿತನಾದ, ಶರೀರಸಹಿತನಾಗಿಯೇ ಇರುವ ಅಗ್ನಿಯನ್ನು ಚಯನ ಮಾಡಿದವನಾಗುತ್ತಾನೆ. |
| **ಆತ್ಮನಾ ಭವತಿ** | ಅವನು ವಿಜಯಿಯೂ ಆಗುತ್ತಾನೆ. |
| **ಅಸ್ಯ ಭ್ರಾತೃವ್ಯಃ ಪರಾ ಭವತಿ** | ಇವನ ಶತ್ರುವು ಪರಾಜಿತನಾಗುತ್ತಾನೆ. |

---

**ತಾತ್ಪರ್ಯ:-*****'ಅಗ್ನಿನಾ ವಿಶ್ವಾಷಾಟ್'** ಮುಂತಾದ ಇಪ್ಪತ್ತೆರಡು ಮಂತ್ರಗಳಿಂದ ಇಂದ್ರತನ್ವಿಷ್ಟಕೆಗಳನ್ನು ಉಪಧಾನ ಮಾಡಬೇಕು.

'ವಿಶ್ವಾಷಾಟ್' ಮುಂತಾದವುಗಳು ಇಂದ್ರತನೂವಿಶೇಷಗಳ ಹೆಸರುಗಳು. ಅವುಗಳಿಂದ ಕೂಡಿದ ಮಂತ್ರಗಳಿಂದ ಉಪಧಾನ ಮಾಡಲ್ಪಡುವ ಇಷ್ಟಕೆಗಳು ಇಂದ್ರತನ್ವಿಷ್ಟಕೆಗಳು.

---

* ಈ ಪ್ರಪಾಠಕದಲ್ಲಿ ಬರುವ ಇಷ್ಟಕೋಪಧಾನದ ಬ್ರಾಹ್ಮಣಕ್ಕೆ ಸಂಬಂಧಿಸಿದ ಮಂತ್ರಗಳು ಚತುರ್ಥಕಾಂಡದ ನಾಲ್ಕನೆಯ ಪ್ರಪಾಠಕದಲ್ಲಿ ಇವೆ. ವಿಶೇಷವಿಧಿಯ ಮಂತ್ರಗಳು ಬೇರೆಡೆಯಲ್ಲಿ ಇವೆ.

ಯಜ್ಞೋ ದೇವೇಭ್ಯೋಽಪಾಕ್ರಾಮತ್ತಮವರುಧನ್ನಾಶಕ್ನುವನ್ತ ಏತಾ ಯಜ್ಞತನೂರಪಶ್ಯನ್ತಾ ಉಪಾದಧತ ತಾಭಿರ್ವೈ ತೇ ಯಜ್ಞಮವಾರುಂಧತ ಯದ್ಯಜ್ಞತನೂರುಪದಧಾತಿ ಯಜ್ಞಮೇವ ತಾಭಿರ್ಯಜಮಾನೋಽವ ರುಂಧೇ

---

ಯಜ್ಞಃ । ದೇವೇಭ್ಯಃ । ಅಪೇತಿ । ಅಕ್ರಾಮತ್ । ತಮ್ । ಅವರುಧಮಿತ್ಯವ-ರುಧಮ್ । ನ । ಅಶಕ್ನುವನ್ನ್ । ತೇ । ಏತಾಃ । ಯಜ್ಞತನೂರಿತಿ ಯಜ್ಞ-ತನೂಃ । ಅಪಶ್ಯನ್ನ್ । ತಾಃ । ಉಪೇತಿ । ಅದಧತ । ತಾಭಿಃ । ವೈ । ತೇ । ಯಜ್ಞಮ್ । ಅವೇತಿ । ಅರುಂಧತ । ಯತ್ । ಯಜ್ಞತನೂರಿತಿ ಯಜ್ಞ-ತನೂಃ । ಉಪದಧಾತೀತ್ಯುಪ-ದಧಾತಿ । ಯಜ್ಞಮ್ । ಏವ । ತಾಭಿಃ । ಯಜಮಾನಃ । ಅವೇತಿ । ರುಂಧೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| | ಯಜ್ಞತನ್ವಿಷ್ಟಕೋಪಧಾನವಿಧಿ; ಉಪಾಖ್ಯಾನ; ಅರ್ಥವಾದ |
| **ಯಜ್ಞಃ ದೇವೇಭ್ಯಃ ಅಪಾಕ್ರಾಮತ್** | ಒಂದು ಕಾಲದಲ್ಲಿ ಯಾವುದೋ ಒಂದು ಕಾರಣದಿಂದ ಯಜ್ಞವು ದೇವತೆಗಳಲ್ಲಿ ವಿರಕ್ತಿ ಹೊಂದಿ ಅವರನ್ನು ತ್ಯಜಿಸಿ ಹೊರಟುಹೋಯಿತು. |
| **ತಮ್ ಅವರುಧಮ್ ನ ಅಶಕ್ನುವನ್** | ಆ ಯಜ್ಞಪುರುಷನನ್ನು ತಡೆಯಲು ದೇವತೆಗಳು ಅಶಕ್ತರಾದರು. |
| **ತೇ ಏತಾಃ ಯಜ್ಞತನೂಃ ಅಪಶ್ಯನ್** | ಆಗ ಆ ದೇವತೆಗಳು ಆಲೋಚಿಸಿ ಈ ಯಜ್ಞತನೂ ನಾಮಕವಾದ ಇಷ್ಟಕೆಗಳನ್ನು ಕಂಡುಕೊಂಡರು. |
| **ತಾಃ ಉಪಾದಧತ** | ಅವುಗಳನ್ನು ಉಪಧಾನ ಮಾಡಿದರು. |
| **ತಾಭಿಃ ವೈ ತೇ ಯಜ್ಞಮ್ ಅವಾರುಂಧತ** | ಆ ಇಷ್ಟಕೆಗಳ ಉಪಧಾನದಿಂದ ಆ ದೇವತೆಗಳು ಯಜ್ಞವನ್ನು (ತಡೆಯಲು ಸಮರ್ಥರಾಗಿ) ಹೊಂದಿದರು. |
| **ಯತ್ ಯಜ್ಞತನೂಃ ಉಪದಧಾತಿ** | ಯಜ್ಞತನೂನಾಮಕವಾದ ಇಷ್ಟಕೆಗಳ ಉಪಧಾನವೆಂಬುದು ಯಾವುದೋ |
| **ಯಜಮಾನಃ ತಾಭಿಃ ಯಜ್ಞಮ್ ಅವರುಂಧೇ ಏವ** | (ಅದರಿಂದ) ಯಜಮಾನನು ಆ ಇಷ್ಟಕೆಗಳಿಂದ ಯಜ್ಞವನ್ನು ಹೊಂದಿಯೇ ಹೊಂದುವನು. |

ತ್ರಯಸ್ತ್ರಿಗ್ಂಶತಮುಪ ದಧಾತಿ ತ್ರಯಸ್ತ್ರಿಗ್ಂಶದ್ವೈ ದೇವತಾ ದೇವತಾ

ಏವಾವರುಂಧೇಽಥೋ ಸಾತ್ಮಾನಮೇವಾಗ್ನಿಗ್ಂ ಸತನುಂ ಚಿನುತೇ

ಸಾತ್ಮಾಽಮುಷ್ಮಿಲ್ಲೋಕೇ [(೨) ಭವತಿ] ಭವತಿ ಯ ಏವಂ ವೇದ

---

ತ್ರಯಸ್ತ್ರಿಗ್ಂಶತಮಿತಿ ತ್ರಯಃ-ತ್ರಿಗ್ಂಶತಮ್ । ಉಪೇತಿ । ದಧಾತಿ । ತ್ರಯಸ್ತ್ರಿಗ್ಂಶದಿತಿ ತ್ರಯಃ-ತ್ರಿಗ್ಂಶತ್ ।

ವೈ । ದೇವತಾಃ । ದೇವತಾಃ । ಏವ । ಅವೇತಿ । ರುಂಧೇ । ಅಥೋ ಇತಿ । ಸಾತ್ಮಾನಮಿತಿ ಸ-ಆತ್ಮಾನಮ್ । ಏವ ।

ಅಗ್ನಿಮ್ । ಸತನುಮಿತಿ ಸ-ತನುಮ್ । ಚಿನುತೇ । ಸಾತ್ಮೇತಿ ಸ-ಆತ್ಮಾ । ಅಮುಷ್ಮಿನ್ । ಲೋಕೇ । (೨) । ಭವತಿ ।

ಯಃ । ಏವಮ್ । ವೇದ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ತ್ರಯಸ್ತ್ರಿಗ್ಂಶತಮ್ ಉಪದಧಾತಿ** | ಮೂವತ್ತುಮೂರು ಯಜ್ಞತನೂನಾಮಕೇಷ್ಟಕೆಗಳನ್ನು ಉಪಧಾನ ಮಾಡಬೇಕು. |
| **ದೇವತಾಃ ತ್ರಯಸ್ತ್ರಿಗ್ಂಶತ್ ವೈ** | ದೇವತೆಗಳ ಸಂಖ್ಯೆಯೂ ಮೂವತ್ತುಮೂರು. |
| **ದೇವತಾಃ ಅವರುಂಧೇ ಏವ** | ಈ ಸಂಖ್ಯಾಸಾಮ್ಯದಿಂದ ಇಷ್ಟಕೋಪಧಾನವನ್ನು ಮಾಡಿದ ಯಜಮಾನನು ನಿಶ್ಚಯವಾಗಿಯೂ ದೇವತೆಗಳನ್ನು ಹೊಂದುವನು. (ತನೂಪಧಾನವನ್ನು ಮಾಡಿರುವುದರಿಂದ) |
| **ಅಥೋ ಸಾತ್ಮಾನಮ್ ಏವ ಅಗ್ನಿಮ್ ಸತನುಮ್ ಚಿನುತೇ** | ಆತ್ಮಸಹಿತನೂ, ಶರೀರಸಹಿತನೂ ಆದ ಅಗ್ನಿಯನ್ನೇ ಚಯನ ಮಾಡಿದವನಾಗುತ್ತಾನೆ. |
| **ಯಃ ಏವಮ್ ವೇದ** | ಯಾರು ಈ ರೀತಿಯಾಗಿ ತಿಳಿಯುತ್ತಾನೆಯೋ |
| **ಅಮುಷ್ಮಿನ್ ಲೋಕೇ ಸಾತ್ಮಾ ಭವತಿ** | ಅವನು ಸ್ವರ್ಗಲೋಕದಲ್ಲಿ ಸಶರೀರನಾಗಿರುತ್ತಾನೆ/ ಪೂರ್ಣಫಲವನ್ನು ಹೊಂದುವನು(ಭ.ಭಾ.ಭಾ) |

---

ಈ ಯಜ್ಞತನೂನಾಮಕವಾದ ಇಷ್ಟಕೆಗಳು ಮೂವತ್ತುಮೂರು. ಇವುಗಳನ್ನು ಉಪಧಾನ ಮಾಡುವಾಗ ವಿನಿಯೋಗಿಸುವ ಮಂತ್ರಗಳು 'ಪ್ರಜಾಪತಿರ್ಮನಸಾ' ಎಂದು ಆರಂಭಗೊಂಡಿವೆ. ಇಲ್ಲಿ ಸಂಕಲ್ಪದಿಂದ ಆರಂಭಿಸಿ ಸಮಾಪ್ತಿಯವರೆಗಿನ ಸೋಮಯಾಗಗಳೇ ಯಜ್ಞಪುರುಷನ ಶರೀರಗಳು. **'ಪ್ರಜಾಪತಿರ್ಮನಸಾ'** ಎಂಬಲ್ಲಿ ಯಜಮಾನನ -ಯಜ್ಞವನ್ನು ಅನುಷ್ಠಿಸುವೆನೆಂಬ ಒಂದು-ಸಂಕಲ್ಪವೇ ಸಂಕಲ್ಪಸ್ಥಿತಿಯನ್ನು ಹೊಂದಿರುವ ಯಜ್ಞದ ಶರೀರ. ಅದಕ್ಕೆ

ಜ್ಯೋತಿಷ್ಮತೀರುಪ ದಧಾತಿ ಜ್ಯೋತಿರೇವಾಸ್ಮಿನ್ದಧಾತ್ಯೇತಾಭಿರ್ವಾ ಅಗ್ನಿಶ್ಚಿತೋ ಜ್ವಲತಿ ತಾಭಿರೇವೈನಗ್ಂ ಸಮಿಂಧ ಉಭಯೋರಸ್ಮೈ ಲೋಕಯೋರ್ಜ್ಯೋತಿರ್ಭವತಿ

---

ಜ್ಯೋತಿಷ್ಮತೀಃ । ಉಪೇತಿ । ದಧಾತಿ । ಜ್ಯೋತಿಃ । ಏವ । ಅಸ್ಮಿನ್ನ್ । ದಧಾತಿ । ಏತಾಭಿಃ । ವೈ । ಅಗ್ನಿಃ । ಚಿತಃ । ಜ್ವಲತಿ । ತಾಭಿಃ । ಏವ । ಏನಮ್ । ಸಮಿತಿ । ಇಂಧೇ । ಉಭಯೋಃ । ಅಸ್ಮೈ । ಲೋಕಯೋಃ । ಜ್ಯೋತಿಃ । ಭವತಿ ।

---

ಬ್ರಾಹ್ಮಣಭಾಗ — ವಿವರಣೆ

ಜ್ಯೋತಿಷ್ಮತೀಷ್ಟಕೋಪಧಾನ; ವಿಧಿ; ಅರ್ಥವಾದ

| ಬ್ರಾಹ್ಮಣಭಾಗ | ವಿವರಣೆ |
|---|---|
| **ಜ್ಯೋತಿಷ್ಮತೀಃ ಉಪದಧಾತಿ** | *'ಜ್ಯೋತಿಷ್ಮತೀಂ ತ್ವಾ ಸಾದಯಾಮಿ' ಮೊದಲಾದ ಮಂತ್ರಗಳಿಂದ ಜ್ಯೋತಿಷ್ಮತೀಷ್ಟಕೋಪಧಾನವನ್ನು ಮಾಡಬೇಕು. |
| **ಜ್ಯೋತಿಃ ಏವ ಅಸ್ಮಿನ್ ದಧಾತಿ** | ಈ ಇಷ್ಟಕೋಪಧಾನವನ್ನು ಮಾಡಿದ ಯಜಮಾನನು ಈ ಉಪಧಾನದಿಂದ ಈ ಅಗ್ನಿಯಲ್ಲಿ ಜ್ಯೋತಿಸ್ಸನ್ನೇ ಸ್ಥಾಪಿಸಿದವನಾಗುತ್ತಾನೆ. |
| **ಏತಾಭಿಃ ಚಿತಃ ಅಗ್ನಿಃ ಜ್ವಲತಿ ವೈ** | ಈ ಇಷ್ಟಕೆಗಳ ಉಪಧಾನದಿಂದ ಚಿತನಾದ ಅಗ್ನಿಯು ನಿಜವಾಗಿಯೂ ಪ್ರಜ್ವಲಿಸುತ್ತಾನೆ. |
| **ತಾಭಿಃ ಏವ ಏನಮ್ ಸಮಿಂಧೇ** | ಜ್ಯೋತಿಷ್ಮತೀಷ್ಟಕೆಗಳಿಂದಲೇ ಈ ಅಗ್ನಿಯನ್ನು ದೀಪ್ತನನ್ನಾಗಿಸುತ್ತಾನೆ. |
| **ಅಸ್ಮೈ ಉಭಯೋಃ ಲೋಕಯೋಃ ಜ್ಯೋತಿಃ ಭವತಿ** | ಈ ಇಷ್ಟಕೆಗಳಿಂದಲೇ ಈ ಯಜಮಾನನಿಗಾಗಿ ಇಹ–ಪರಗಳೆಂಬ ಉಭಯಲೋಕಗಳಲ್ಲಿಯೂ ಜ್ಯೋತಿಸ್ಸು ಸಂಪನ್ನವಾಗುತ್ತದೆ. |

---

**ಪ್ರಜಾಪತಿ** ಎಂಬ ಹೆಸರು. ಹೀಗೆಯೇ ಈ ಅನುವಾಕದ ಉಳಿದ ಯಜ್ಞತನುಗಳು. ಯಜ್ಞಶರೀರವನ್ನು ಪ್ರತಿಪಾದಿಸುವ ಮಂತ್ರಗಳಿಂದ ಉಪಧಾನ ಮಾಡಬೇಕಾದ ಇಷ್ಟಕೆಗಳಾದುದರಿಂದ ಅವುಗಳಿಗೂ ಯಜ್ಞತನುಗಳೆಂದು ಹೆಸರು. ಇವು 33.

---

* ಈ ಮಂತ್ರಗಳು ಹನ್ನೆರಡು ಇವೆ. ಈ ಮಂತ್ರಗಳು ಆರಣ್ಯಕಭಾಗದಲ್ಲಿ ಪಠಿತವಾಗಿವೆ. [ತೈ.ಆ. 3.19]

ನಕ್ಷತ್ರೇಷ್ಟಕಾ ಉಪ ದಧಾತ್ಯೇತಾನಿ ವೈ ದಿವೋ ಜ್ಯೋತೀಗ್ಂಷಿ ತಾನ್ಯೇವಾವ

ರುಂಧೇ ಸುಕೃತಾಂ ವಾ ಏತಾನಿ ಜ್ಯೋತೀಗ್ಂಷಿ ಯನ್ನಕ್ಷತ್ರಾಣಿ

ತಾನ್ಯೇವಾಽಽಪ್ನೋತ್ಯಥೋ ಅನೂಕಾಶಮೇವೈತಾನಿ [ಏತಾನಿ(೩)]

ಜ್ಯೋತೀಗ್ಂಷಿ ಕುರುತೇ ಸುವರ್ಗಸ್ಯ ಲೋಕಸ್ಯಾನುಖ್ಯಾತ್ಯೈ

---

ನಕ್ಷತ್ರೇಷ್ಟಕಾ ಇತಿ ನಕ್ಷತ್ರ-ಇಷ್ಟಕಾಃ । ಉಪೇತಿ । ದಧಾತಿ । ಏತಾನಿ । ವೈ । ದಿವಃ । ಜ್ಯೋತೀಗ್ಂಷಿ । ತಾನಿ । ಏವ । ಅವೇತಿ । ರುಂಧೇ । ಸುಕೃತಾಮಿತಿ ಸು-ಕೃತಾಮ್ । ವೈ । ಏತಾನಿ । ಜ್ಯೋತೀಗ್ಂಷಿ । ಯತ್ । ನಕ್ಷತ್ರಾಣಿ । ತಾನಿ । ಏವ । ಆಪ್ನೋತಿ । ಅಥೋ ಇತಿ । ಅನೂಕಾಶಮಿತ್ಯನು-ಕಾಶಮ್ । ಏವ । ಏತಾನಿ । (೩) । ಜ್ಯೋತೀಗ್ಂಷಿ । ಕುರುತೇ । ಸುವರ್ಗಸ್ಯೇತಿ ಸುವಃ-ಗಸ್ಯ । ಲೋಕಸ್ಯ । ಅನುಖ್ಯಾತ್ಯಾ ಇತ್ಯನು-ಖ್ಯಾತ್ಯೈ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ನಕ್ಷತ್ರೇಷ್ಟಕೋಪಧಾನವಿಧಿ; ಅರ್ಥವಾದ** | |
| ನಕ್ಷತ್ರೇಷ್ಟಕಾಃ ಉಪದಧಾತಿ ಏತಾನಿ ದಿವಃ ಜ್ಯೋತೀಗ್ಂಷಿ ವೈ | ನಕ್ಷತ್ರೇಷ್ಟಕೆಗಳನ್ನು ಉಪಧಾನ ಮಾಡಬೇಕು. ಈ ನಕ್ಷತ್ರಗಳು ದೇವಲೋಕದ ಬೆಳಕಾಗಿವೆಯಷ್ಟೆ. |
| ತಾನಿ ಅವರುಂಧೇ ಏವ | (ಈ ಇಷ್ಟಕೋಪಧಾನದಿಂದ ಯಜಮಾನನು) ಆ ನಕ್ಷತ್ರಗಳನ್ನೇ ಹೊಂದುವನು. |
| ಯತ್ ನಕ್ಷತ್ರಾಣಿ | ನಕ್ಷತ್ರಗಳೆಂಬುವುಗಳು |
| ಏತಾನಿ ಸುಕೃತಾಮ್ ಜ್ಯೋತೀಗ್ಂಷಿ ವೈ | ಇವು ಪುಣ್ಯವಂತರ ಜ್ಯೋತೀರೂಪವಾಗಿವೆ. |
| ತಾನಿ ಏವ ಆಪ್ನೋತಿ | (ಈ ಇಷ್ಟಕೋಪಧಾನದಿಂದ ಯಜಮಾನನು) ನಕ್ಷತ್ರ ರೂಪಜ್ಯೋತಿಸ್ಸುಗಳನ್ನೇ ಹೊಂದುವನು. |
| ಅಥೋ ಅನೂಕಾಶಮ್ ಏವ ಏತಾನಿ ಜ್ಯೋತೀಗ್ಂಷಿ ಕುರುತೇ | ಈ ಉಪಧಾನದಿಂದ ನಕ್ಷತ್ರದ ಜ್ಯೋತಿಸ್ಸುಗಳು ಕುಗ್ಗುವಂತೆ ಮಾಡುತ್ತಾನೆ. |
| ಸುವರ್ಗಸ್ಯ ಲೋಕಸ್ಯ ಅನುಖ್ಯಾತ್ಯೈ | ಈ ಪ್ರಕಾಶವು ಸ್ವರ್ಗಲೋಕವು ಪ್ರಕಟವಾಗಿ ತೋರಲು ಕಾರಣವಾಗುತ್ತದೆ. |

ಯಥ್ಸಗ್ಗ್ಂಸ್ಪೃಷ್ಟಾ ಉಪದಧ್ಯಾದ್ವೃಷ್ಟ್ಯೈ ಲೋಕಮಪಿ ದಧ್ಯಾದವರ್ಷುಕಃ
ಪರ್ಜನ್ಯಸ್ಸ್ಯಾದಸಗ್ಗ್ಂಸ್ಪೃಷ್ಟಾ ಉಪ ದಧಾತಿ ವೃಷ್ಟ್ಯಾ ಏವ ಲೋಕಂ ಕರೋತಿ
ವರ್ಷುಕಃ ಪರ್ಜನ್ಯೋ ಭವತಿ ಪುರಸ್ತಾದನ್ಯಾಃ ಪ್ರತೀಚೀರುಪ ದಧಾತಿ

---

ಯತ್ । ಸಗ್ಗ್ಂಸ್ಪೃಷ್ಟಾ ಇತಿ ಸಮ್-ಸ್ಪೃಷ್ಟಾಃ । ಉಪದಧ್ಯಾದಿತ್ಯುಪ-ದಧ್ಯಾತ್ । ವೃಷ್ಟ್ಯೈ । ಲೋಕಮ್ । ಅಪೀತಿ । ದಧ್ಯಾತ್ । ಅವರ್ಷುಕಃ । ಪರ್ಜನ್ಯಃ । ಸ್ಯಾತ್ । ಅಸಗ್ಗ್ಂಸ್ಪೃಷ್ಟಾ ಇತ್ಯಸಮ್-ಸ್ಪೃಷ್ಟಾಃ । ಉಪೇತಿ । ದಧಾತಿ । ವೃಷ್ಟ್ಯೈ । ಏವ । ಲೋಕಮ್ । ಕರೋತಿ । ವರ್ಷುಕಃ । ಪರ್ಜನ್ಯಃ । ಭವತಿ । ಪುರಸ್ತಾತ್ । ಅನ್ಯಾಃ । ಪ್ರತೀಚೀಃ । ಉಪೇತಿ । ದಧಾತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯತ್ ಸಂಸ್ಪೃಷ್ಟಾಃ ಉಪದಧ್ಯಾತ್** | ನಕ್ಷತ್ರೇಷ್ಟಕೆಗಳನ್ನು ಪರಸ್ಪರಸ್ಪರ್ಶವಿರುವಂತೆ ಉಪಧಾನ ಮಾಡಿದರೆ |
| **ವೃಷ್ಟ್ಯೈ ಲೋಕಮ್ ಅಪಿ ದಧ್ಯಾತ್** | ಮಳೆಯ ಸ್ಥಾನವನ್ನು ಮುಚ್ಚಿದಂತೆ ಆಗುತ್ತದೆ. |
| **ಪರ್ಜನ್ಯಃ ಅವರ್ಷುಕಃ ಸ್ಯಾತ್** | ಇದರಿಂದ ಮೋಡವು ಮಳೆಯನ್ನು ಸುರಿಸುವುದಿಲ್ಲ. |
| **ಅಸಂಸ್ಪೃಷ್ಟಾಃ ಉಪದಧಾತಿ** | ಪರಸ್ಪರಸ್ಪರ್ಶವಿಲ್ಲದಿರುವಂತೆ ಈ ನಕ್ಷತ್ರೇಷ್ಟಕೆಗಳ ಉಪಧಾನವನ್ನು ಮಾಡಬೇಕು. |
| **ವೃಷ್ಟ್ಯೈ ಲೋಕಮ್ ಏವ ಕರೋತಿ** | ಹೀಗೆ ಮಾಡುವುದರಿಂದ ಯಜಮಾನನು ಮಳೆಗೆ ಅವಕಾಶವನ್ನು ಕಲ್ಪಿಸಿದವನಾಗುತ್ತಾನೆ. |
| **ಪರ್ಜನ್ಯಃ ವರ್ಷುಕಃ ಭವತಿ** | ಮೇಘರಾಜನು ಮಳೆಯನ್ನು ಸುರಿಸುತ್ತಾನೆ. |
| **ಅನ್ಯಾಃ ಪುರಸ್ತಾತ್ ಪ್ರತೀಚೀಃ ಉಪದಧಾತಿ** | ಕೆಲವು ಇಷ್ಟಕೆಗಳನ್ನು ಪೂರ್ವದಿಕ್ಕಿನಲ್ಲಿ ಪ್ರಾರಂಭಿಸಿ ಪಶ್ಚಿಮಾಭಿಮುಖವಾಗಿ ಉಪಧಾನ ಮಾಡಬೇಕು. |

---

**'ಕೃತ್ತಿಕಾ ನಕ್ಷತ್ರಮ್'** ಎಂದು ಆರಂಭಗೊಳ್ಳುವ ಮಂತ್ರಗಳು ನಕ್ಷತ್ರೇಷ್ಟಕೆಗಳ ಉಪಧಾನಕ್ಕಾಗಿ ಇವೆ. ಇವು ಇಪ್ಪತ್ತೇಳು. ಪೌರ್ಣಮಾಸೀಷ್ಟಕೆ ಮತ್ತು ಅಮಾವಾಸ್ಯೇಷ್ಟಕೆಗಳ ಉಪಧಾನವೂ ಇದೆ.

ನಕ್ಷತೇಷ್ಟಕೆಗಳ ಉಪಧಾನವನ್ನು ಮಾಡುವ ಕ್ರಮವು ಹೀಗಿದೆ. ಸ್ವಯಮಾತೃಣ್ಣೇಷ್ಟಕೆಯ ದಕ್ಷಿಣಭಾಗದಲ್ಲಿ ಪೂರ್ವದಿಕ್ಕಿನಿಂದ ಮೊದಲು ಮಾಡಿ ಪಶ್ಚಿಮದಲ್ಲಿ ಮುಗಿಯುವಂತೆ ಕೃತ್ತಿಕೇಷ್ಟಕೆಯಿಂದ ಆರಂಭಿಸಿ, ವಿಶಾಖಾ ನಕ್ಷತ್ರೇಷ್ಟಕೆಯವರೆಗೆ ಇಷ್ಟಕೆಗಳನ್ನು ಉಪಧಾನ ಮಾಡಬೇಕು.

ಪಶ್ಚಾದನ್ಯಾಃ ಪ್ರಾಚೀಸ್ತಸ್ಮಾತ್ಪ್ರಾಚೀನಾನಿ ಚ ಪ್ರತೀಚೀನಾನಿ ಚ

ನಕ್ಷತ್ರಾಣ್ಯಾವರ್ತಂತೇ ॥ ೪-1 ॥

[ಭ್ರಾತೃವ್ಯೋ ಲೋಕ ಏವೈತಾನ್ಯೇಕಚತ್ವಾರಿಗ್‌ಂಶಚ್ಚ ॥]

---

ಪಶ್ಚಾತ್ । ಅನ್ಯಾಃ । ಪ್ರಾಚೀಃ । ತಸ್ಮಾತ್ । ಪ್ರಾಚೀನಾನಿ । ಚ । ಪ್ರತೀಚೀನಾನಿ । ಚ । ನಕ್ಷತ್ರಾಣಿ । ಏತಿ । ವರ್ತಂತೇ

॥ (೪) ॥

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಅನ್ಯಾಃ ಪಶ್ಚಾತ್ ಪ್ರಾಚೀಃ** ಉಪದಧಾತಿ | ಕೆಲವು ಇಷ್ಟಕೆಗಳನ್ನು ಪಶ್ಚಿಮದಿಕ್ಕಿನಲ್ಲಿ ಪ್ರಾರಂಭಿಸಿ ಪೂರ್ವಾಭಿಮುಖವಾಗಿ/ಪೂರ್ವದಿಕ್ಕಿನಲ್ಲಿ ಮುಗಿಯುವಂತೆ ಉಪಧಾನ ಮಾಡಬೇಕು. |
| **ತಸ್ಮಾತ್ ಪ್ರಾಚೀನಾನಿ ಚ ಪ್ರತೀಚೀನಾನಿ ಚ ನಕ್ಷತ್ರಾಣಿ ಆವರ್ತಂತೇ** | ಆದುದರಿಂದ ಲೋಕದಲ್ಲಿಯೂ ನಕ್ಷತ್ರಗಳು ಪೂರ್ವಾಭಿಮುಖವಾಗಿಯೂ,ಪಶ್ಚಿಮಾಭಿಮುಖವಾಗಿಯೂ ಸುತ್ತುತ್ತಿರುತ್ತವೆ. |

---

ಸ್ವಯಮಾತೃಣ್ಣೇಷ್ಟಕೆಯ ಉತ್ತರಭಾಗದಲ್ಲಿ ಪಶ್ಚಿಮದಿಕ್ಕಿನಿಂದ ಮೊದಲು ಮಾಡಿ ಪೂರ್ವದಲ್ಲಿ ಮುಗಿಯುವಂತೆ ಅನೂರಾಧೇಷ್ಟಕೆಯಿಂದ ಆರಂಭಿಸಿ, ಭರಣೀಷ್ಟಕೆಯವರೆಗೆ ಇಷ್ಟಕೆಗಳನ್ನು ಉಪಧಾನ ಮಾಡಬೇಕು.

ಹಾಗೆಯೇ ಸ್ವಯಮಾತೃಣ್ಣೇಷ್ಟಕೆಯ ದಕ್ಷಿಣೋತ್ತರಪಂಕ್ತಿಗಳ ಮಧ್ಯದಲ್ಲಿ ಪಶ್ಚಿಮದಿಕ್ಕಿನಲ್ಲಿ ಅಮಾವಾಸ್ಯೇಷ್ಟಕೆಯ ಉಪಧಾನವನ್ನು ಮಾಡಬೇಕು.

ಹಾಗೆಯೇ ಸ್ವಯಮಾತೃಣ್ಣೇಷ್ಟಕೆಯ ದಕ್ಷಿಣೋತ್ತರ ಪಂಕ್ತಿಗಳ ಮಧ್ಯದಲ್ಲಿ ಪೂರ್ವದಿಕ್ಕಿನಲ್ಲಿ ಪೌರ್ಣಮಾಸೀಷ್ಟಕೆಯ ಉಪಧಾನವನ್ನು ಮಾಡಬೇಕು.

ಆದುದರಿಂದ ಲೋಕದಲ್ಲಿಯೂ ನಕ್ಷತ್ರಗಳು ಗೋಳದ ಉತ್ತರಭಾಗದಲ್ಲಿ ಪೂರ್ವಾಭಿಮುಖವಾಗಿಯೂ, ಗೋಳದ ದಕ್ಷಿಣಭಾಗದಲ್ಲಿ ಪಶ್ಚಿಮಾಭಿಮುಖವಾಗಿಯೂ ಸುತ್ತುತ್ತಿರುತ್ತವೆ.

ಅಮಾವಾಸ್ಯೇಷ್ಟಕೆ ಮತ್ತು ಪೌರ್ಣಮಾಸೀಷ್ಟಕೆಗಳ ಉಪಧಾನವು ಭಾಷ್ಯಾನುಸಾರಿಯಾಗಿದೆ.

ಹೀಗೆ ನಕ್ಷತ್ರೇಷ್ಟಕೆಗಳ ಉಪಧಾನ-ಪ್ರಶಂಸೆ ಮತ್ತು ಸ್ಥಾನವು ಇದೆ.

## ॥ ದ್ವಿತೀಯೋಽನುವಾಕಃ ॥

ಋತವ್ಯಾ ಉಪ ದಧಾತ್ಯೃತೂನಾಂ ಕ್ಲೃಪ್ತ್ಯೈ ದ್ವಂದ್ವಮುಪದಧಾತಿ
ತಸ್ಮಾದ್ದ್ವಂದ್ವಮೃತವೋಽಧೃತೇವ ವಾ ಏಷಾ ಯನ್ಮಧ್ಯಮಾ ಚಿತಿ

---

ಋತವ್ಯಾಃ । ಉಪೇತಿ । ದಧಾತಿ । ಋತೂನಾಮ್ । ಕ್ಲೃಪ್ತ್ಯೈ । ದ್ವಂದ್ವಮಿತಿ ದ್ವಮ್-ದ್ವಮ್ । ಉಪೇತಿ । ದಧಾತಿ ।
ತಸ್ಮಾತ್ । ದ್ವಂದ್ವಮಿತಿ ದ್ವಮ್-ದ್ವಮ್ । ಋತವಃ । ಅಧೃತಾ । ಇವ । ವೈ । ಏಷಾ । ಯತ್ । ಮಧ್ಯಮಾ । ಚಿತಿಃ ।

---

ಈ ಎರಡನೆಯ ಅನುವಾಕದಲ್ಲಿ ಋತವ್ಯಾದಿ ಇಷ್ಟಕಾವಿಧಿಯೂ ಅವುಗಳ ಪ್ರೋಕ್ಷಣವಿಧಿಯೂ ಉಕ್ತವಾಗಿದೆ.

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಋತವ್ಯಾಃ ಉಪದಧಾತಿ** | ಋತವ್ಯೇಷ್ಟಕೆಗಳನ್ನು ಉಪಧಾನ ಮಾಡಬೇಕು. |
| **ಋತೂನಾಮ್ ಕ್ಲೃಪ್ತ್ಯೈ** | ಇದು ಋತುಗಳ ಸ್ವರೂಪಸಿದ್ಧಿಗಾಗಿ ಆಗುತ್ತದೆ. |
| **ದ್ವಂದ್ವಮ್ ಉಪದಧಾತಿ** | **'ಮಧುಶ್ಚ ಮಾಧವಶ್ಚ'** ಮೊದಲಾದ ಎರಡೆರಡು **ಮಂತ್ರಗಳಿಂದ ಎರೆಡೆರಡು** ಋತವ್ಯೇಷ್ಟಕೆಗಳನ್ನು ಉಪಧಾನ ಮಾಡಬೇಕು. |
| **ತಸ್ಮಾತ್ ದ್ವಂದ್ವಮ್ ಋತವಃ** | ಆದ್ದರಿಂದ ಋತುಗಳು ಎರಡೆರಡು ತಿಂಗಳುಗಳಿಂದ ಪ್ರಕಟವಾಗುತ್ತವೆ. |
| **ಯತ್ ಮಧ್ಯಮಾ ಚಿತಿಃ ಏಷಾ ಅಧೃತಾ ಇವ ವೈ** | ಮಧ್ಯಮಚಿತಿಯು (ಭೂಮಿಯನ್ನೂ ದ್ಯುಲೋಕವನ್ನೂ ಮುಟ್ಟದಿರುವುದರಿಂದ)ಆಧಾರವಿಲ್ಲದಿರುವಂತೆ ಇದೆ. |

---

**ತಾತ್ಪರ್ಯ:**-ಋತವ್ಯೇಷ್ಟಕೆಗಳ ಉಪಧಾನದ ಕ್ರಮವು ಹೀಗಿದೆ **'ಮಧುಶ್ಚ ಮಾಧವಶ್ಚ ವಾಸಂತಿಕಾವೃತೂ'** ಎಂಬ ಎರಡು ಮಂತ್ರಗಳನ್ನು ಹೇಳಿ **'ತಯಾ ದೇವತಯಾ...ಸೀದ'** ಎಂಬ ಶೇಷಭಾಗವನ್ನು ಒಮ್ಮೆ ಹೇಳಿ ಎರಡು ಇಷ್ಟಕೆಗಳನ್ನು ಮೊದಲನೆಯ ಚಿತಿಯಲ್ಲಿ ಉಪಧಾನ ಮಾಡಬೇಕು. **'ಅಗ್ನೇರಂತಃ...ಸಂವಿಶಂತು'** ಎಂಬ ಅನುಷಂಗವನ್ನೂ ಸೇರಿಸಿಕೊಳ್ಳಬೇಕು.

-ರಂತರಿಕ್ಷಮಿವ ವಾ ಏಷಾ ದ್ವಂದ್ವಮನ್ಯಾಸು ಚಿತೀಷೂಪ ದಧಾತಿ ಚತಸ್ರೋ ಮಧ್ಯೇ ಧೃತ್ಯಾ ಅಂತಶ್ಶ್ಲೇಷಣಂ ವಾ ಏತಾಶ್ಚಿತೀನಾಂ ಯದೃತವ್ಯಾ ಯದೃತವ್ಯಾ ಉಪದಧಾತಿ ಚಿತೀನಾಂ ವಿಧೃತ್ಯಾ

---

ಅಂತರಿಕ್ಷಮ್ । ಇವ । ವೈ । ಏಷಾ । ದ್ವಂದ್ವಮಿತಿ ದ್ವಮ್-ದ್ವಮ್ । ಅನ್ಯಾಸು । ಚಿತೀಷು । ಉಪೇತಿ । ದಧಾತಿ । ಚತಸ್ರಃ । ಮಧ್ಯೇ । ಧೃತ್ಯೈ । ಅಂತಶ್ಶ್ಲೇಷಣಮಿತ್ಯಂತಃ-ಶ್ಲೇಷಣಮ್ । ವೈ । ಏತಾಃ । ಚಿತೀನಾಮ್ । ಯತ್ । ಋತವ್ಯಾಃ । ಯತ್ । ಋತವ್ಯಾಃ । ಉಪದಧಾತೀತ್ಯುಪ-ದಧಾತಿ । ಚಿತೀನಾಮ್ । ವಿಧೃತ್ಯಾ ಇತಿ ವಿ-ಧೃತ್ಯೈ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಏಷಾ ಅಂತರಿಕ್ಷಮ್ ಇವ ವೈ | ಇದು ಶೂನ್ಯವಾದ ಅಂತರಿಕ್ಷದಂತೆ ಇದೆ. |
| ಅನ್ಯಾಸು ಚಿತೀಷು ದ್ವಂದ್ವಮ್ ಉಪದಧಾತಿ | ಉಳಿದ ಚಿತಿಗಳಲ್ಲಿ (ಪ್ರಥಮ, ದ್ವಿತೀಯ, ಚತುರ್ಥ ಮತ್ತು ಪಂಚಮಚಿತಿಗಳಲ್ಲಿ) ಎರಡೆರಡು ಇಷ್ಟಕೆಗಳ ಉಪಧಾನವನ್ನು ಮಾಡಬೇಕು. |
| ಮಧ್ಯೇ ಚತಸ್ರಃ ಧೃತ್ಯೈ | ಮಧ್ಯಮಚಿತಿಯಲ್ಲಿ (ಮೂರನೆಯ ಚಿತಿಯಲ್ಲಿ) ದೃಢತೆಗಾಗಿ ನಾಲ್ಕು ಇಷ್ಟಕೆಗಳ ಉಪಧಾನವನ್ನು ಮಾಡಬೇಕು. |

ಋತವ್ಯೇಷ್ಟಕೋಪಧಾನದ ಪ್ರಶಂಸೆ

| | |
|---|---|
| ಯತ್ ಋತವ್ಯಾಃ ಏತಾಃ ಚಿತೀನಾಮ್ ಅಂತಃ ಶ್ಲೇಷಣಮ್ ವೈ | ಋತವ್ಯೇಷ್ಟಕೆಗಳೆಂಬುವುಗಳು ಯಾವುವೋ ಪ್ರಥಮಮಧ್ಯಮಾದಿಚಿತಿಗಳ ಮಧ್ಯದಲ್ಲಿ ಗಟ್ಟಿಗೊಳಿಸುವ ವಸ್ತುವಿನಂತೆ ಇವೆ. |
| ಯತ್ ಋತವ್ಯಾಃ ಉಪದಧಾತಿ | ಋತವ್ಯೇಷ್ಟಕೆಗಳನ್ನು ಉಪಧಾನ ಮಾಡುವುದೆಂಬುದು ಯಾವುದೋ |
| ಚಿತೀನಾಮ್ ವಿಧೃತ್ಯೈ | ಅದು (ಗೋಡೆಗಳ ಮಧ್ಯದಲ್ಲಿ ಗಟ್ಟಿಯಾಗಿರಲು ಸೇರಿಸುವ ಕಲ್ಲು ಮುಂತಾದವುಗಳಂತೆ) ಚಿತಿಗಳು ವಿಶೇಷವಾಗಿ ದೃಢವಾಗಲು ಅನುಕೂಲವಾಗುತ್ತದೆ. |

---

ಎರಡನೆಯ ಚಿತಿಯಲ್ಲಿ 'ಶುಕ್ರಶ್ಚ ಶುಚಿಶ್ಚ' ಎಂಬುದರಿಂದ ಎರಡು ಇಷ್ಟಕೆಗಳನ್ನೂ ಮೂರನೆಯ ಹಾಗೂ ಮಧ್ಯಮ ಚಿತಿಯಲ್ಲಿ 'ನಭಶ್ಚ ನಭಸ್ಯಶ್ಚ ವಾರ್‌ಷಿಕಾವೃತೂ' 'ಇಷಶ್ಚೋರ್ಜಶ್ಚ ಶಾರದಾವೃತೂ' ಎಂಬ ಮಂತ್ರಗಳಿಂದ

ಅವಕಾಮನೂಪ ದಧಾತ್ಯೇಷಾ ವಾ ಅಗ್ನೇರ್ಯೋನಿಸ್ಸಯೋನಿ[ಯೋನಿಮ್(೫)

ಏವಾಗ್ನಿಂ]ಮೇವಾಗ್ನಿಂ ಚಿನುತ ಉವಾಚ ಹ ವಿಶ್ವಾಮಿತ್ರೋಽದದಿತ್ಸ ಬ್ರಹ್ಮಣಾಽನ್ನಂ

ಯಸ್ಯೈತಾ ಉಪಧೀಯಾಂತೈ ಯ ಉ ಚೈನಾ ಏವಂ ವೇದದಿತಿ

---

ಅವಕಾಮ್ । ಅನು । ಉಪೇತಿ । ದಧಾತಿ । ಏಷಾ । ವೈ । ಅಗ್ನೇಃ । ಯೋನಿಃ । ಸಯೋನಿಮಿತಿ ಸ–ಯೋನಿಮ್ ।

(೫) । ಏವ । ಅಗ್ನಿಮ್ । ಚಿನುತೇ । ಉವಾಚ । ಹ । ವಿಶ್ವಾಮಿತ್ರ ಇತಿ ವಿಶ್ವ–ಮಿತ್ರಃ । ಅದತ್ । ಇತ್ । ಸಃ ।

ಬ್ರಹ್ಮಣಾ । ಅನ್ನಮ್ । ಯಸ್ಯ । ಏತಾಃ । ಉಪಧೀಯಾಂತಾ ಇತ್ಯುಪ–ಧೀಯಾಂತೈ । ಯಃ । ಉ । ಚ । ಏನಾಃ ।

ಏವಮ್ । ವೇದತ್ । ಇತಿ ।

---

| ಬ್ರಾಹ್ಮಣಭಾಗ | ವಿವರಣೆ |
| --- | --- |
| **ಅವಕಾಮ್ ಅನೂಪದಧಾತಿ** | (ಋತವ್ಯೇಷ್ಟಕೆಗಳ ಮೇಲ್ಭಾಗದಲ್ಲಿ) ಪಾಚಿಯನ್ನು ಉಪಧಾನ ಮಾಡಬೇಕು. |
| **ಏಷಾ ವೈ ಅಗ್ನೇಃ ಯೋನಿಃ** | (ಅಗ್ನಿಯು ನೀರನ್ನು ಪ್ರವೇಶಿಸಿರುವುದರಿಂದ, ನೀರಿನಿಂದ ಪಾಚಿಯು ಹುಟ್ಟುವುದರಿಂದ)ಪಾಚಿಯೂ ನೀರು ಒಂದೇ ಎನಿಸಿ ಅದೂ ಅಗ್ನಿಯ ಉತ್ಪತ್ತಿಸ್ಥಾನವಾಗಿದೆ. |
| **ಸಯೋನಿಮ್ ಏವ ಅಗ್ನಿಮ್ ಚಿನುತೇ** | ಇದರ ಉಪಧಾನದಿಂದ ಯಜಮಾನನು ಸ್ಥಾನಸಹಿತವಾಗಿ ಅಗ್ನಿಯ ಚಯನವನ್ನು ಮಾಡಿದವನಾಗುತ್ತಾನೆ. |

**ಅವಕಾಸಹಿತವಾದ ಋತವ್ಯೇಷ್ಟಕೆಗಳ ಪ್ರಶಂಸೆ–ಇನ್ನೊಂದು ರೀತಿ**

| | |
| --- | --- |
| **ಯಸ್ಯ ಏತಾಃ ಉಪಧೀಯಾಂತೈ** | ಯಾವ ಯಜಮಾನನ ನಿಮಿತ್ತವಾಗಿ ಅವಕಾಸಹಿತವಾದ ಈ ಋತವ್ಯೇಷ್ಟಕೆಗಳು ಉಪಧಾನ ಮಾಡಲ್ಪಡುತ್ತವೆಯೋ |
| **ಯಃ ಉ ಚ ಏನಾಃ ಏವಮ್ ವೇದತ್** | ಯಾರು ಈ ಇಷ್ಟಕೆಗಳನ್ನು ಈ ರೀತಿಯಾಗಿ ತಿಳಿಯುತ್ತಾನೆಯೋ |
| **ಸಃ ಬ್ರಹ್ಮಣಾ ಇತ್ ಅನ್ನಮ್ ಅದತ್** | ಆ ಯಜಮಾನನು ಮುಖ್ಯವಾದ ಬ್ರಾಹ್ಮಣವೃತ್ತಿಯಿಂದಲೇ ಸಂಪಾದಿಸಿದ ಅನ್ನವನ್ನು ತಿನ್ನುತ್ತಾನೆ. |
| **ಇತಿ ವಿಶ್ವಾಮಿತ್ರಃ ಉವಾಚ ಹ** | ಎಂಬುದಾಗಿ ಮಹರ್ಷಿಯಾದ ವಿಶ್ವಾಮಿತ್ರನು ಹೇಳುತ್ತಾನೆ. |

# ಸಂವಥ್ಸರೋ ವಾ ಏತಂ ಪ್ರತಿಷ್ಠಾಯೈ ನುದತೇ ಯೋಽಗ್ನಿಂ ಚಿತ್ವಾ ನ ಪ್ರತಿತಿಷ್ಠತಿ ಪಂಚ ಪೂರ್ವಾಶ್ಚಿತಯೋ ಭವಂತ್ಯಥ ಷಷ್ಠೀಂ ಚಿತಿಂ ಚಿನುತೇ ಷಡ್ವಾ ಋತವಸ್ಸಂವಥ್ಸರ

---

ಸಂವಥ್ಸರ ಇತಿ ಸಮ್-ವಥ್ಸರಃ । ವೈ । ಏತಮ್ । ಪ್ರತಿಷ್ಠಾಯಾ ಇತಿ ಪ್ರತಿ-ಸ್ಥಾಯೈ । ನುದತೇ । ಯಃ । ಅಗ್ನಿಮ್ । ಚಿತ್ವಾ । ನ । ಪ್ರತಿತಿಷ್ಠತೀತಿ ಪ್ರತಿ-ತಿಷ್ಠತಿ । ಪಂಚ । ಪೂರ್ವಾಃ । ಚಿತಯಃ । ಭವಂತಿ । ಅಥ । ಷಷ್ಠೀಮ್ । ಚಿತಿಮ್ । ಚಿನುತೇ । ಷಟ್ । ವೈ । ಋತವಃ । ಸಂವಥ್ಸರ ಇತಿ ಸಮ್-ವಥ್ಸರಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|

## ಷಷ್ಠಚಿತಿಯ ವಿಧಿ; ಅರ್ಥವಾದ

| | |
|---|---|
| **ಯಃ ಅಗ್ನಿಮ್ ಚಿತ್ವಾ ನ ಪ್ರತಿತಿಷ್ಠತಿ** | ಯಾವ ಯಜಮಾನನು (ಹಿಂದೆ ಹೇಳಿದ ಐದು ಚಿತಿಗಳುಳ್ಳ) ಅಗ್ನಿಯನ್ನು ಚಯನ ಮಾಡಿಯೂ (ಮುಂದಿನ ಯಾಗಗಳ ಅನುಷ್ಠಾನಕ್ಕೆ ಬೇಕಾದ ದ್ರವ್ಯಸಂಪತ್ತಿ ರೂಪವಾದ) ಪ್ರತಿಷ್ಠೆಯನ್ನು ಪಡೆಯುವುದಿಲ್ಲವೋ |
| **ಏತಮ್ ಸಂವಥ್ಸರಃ ಪ್ರತಿಷ್ಠಾಯೈ ನುದತೇ ವೈ** | ಇವನನ್ನು ಸಂವತ್ಸರಾಭಿಮಾನಿದೇವತೆಯು ಪ್ರತಿಷ್ಠೆಯಿಂದ ದೂರ ಮಾಡುತ್ತದೆ. |
| **ಪೂರ್ವಾಃ ಪಂಚ ಚಿತಯಃ ಭವಂತಿ** | ಆ ಯಜಮಾನನು ಮೊದಲು ಮಾಡಿದ ಐದು ಚಿತಿಗಳು ಇರುತ್ತವೆ. |
| **ಅಥ ಷಷ್ಠೀಮ್ ಚಿತಿಮ್ ಚಿನುತೇ** | ಹೀಗಿರುವಾಗ (ಪ್ರತಿಷ್ಠಾಪ್ರಾಪ್ತಿಗಾಗಿ) ಆರನೆಯ ಚಿತಿಯನ್ನು ಚಯನ ಮಾಡಬೇಕು. |
| **ಷಟ್ ಋತವಃ ಸಂವಥ್ಸರಃ ವೈ** | ಆರು ಋತುಗಳು ಸಂವತ್ಸರರೂಪವಾಗಿದೆ. (ಆರನೆಯ ಚಿತಿಯಲ್ಲಿರುವ ಆರು ಎಂಬ ಸಂಖ್ಯೆಯ ಸಾಮ್ಯವು ಋತುಗಳಿಗೆ ಇದೆ.) |

---

ನಾಲ್ಕು ಇಷ್ಟಕೆಗಳನ್ನೂ, **'ಸಹಶ್ಚ ಸಹಸ್ಯಶ್ಚ'** ಎಂಬುದರಿಂದ ನಾಲ್ಕನೆಯ ಚಿತಿಯಲ್ಲಿ ಎರಡು ಇಷ್ಟಕೆಗಳನ್ನೂ, **'ತಪಶ್ಚ ತಪಸ್ಯಶ್ಚ'** ಎಂಬ ಮಂತ್ರಗಳಿಂದ ಐದನೆಯ ಚಿತಿಯಲ್ಲಿ ಎರಡು ಇಷ್ಟಕೆಗಳನ್ನೂ ಉಪಧಾನ ಮಾಡಬೇಕು.

ಋತುಷ್ವೇವ ಸಂವಥ್ಸರೇ ಪ್ರತಿ ತಿಷ್ಠತ್ಯೇತಾ ವಾ[ವೈ(೬)]ಅಧಿಪತ್ನೀರ್ನಾಮೇಷ್ಟಕಾ ಯಸ್ಯೈತಾ ಉಪಧೀಯಂತೇಽಧಿಪತಿರೇವ ಸಮಾನಾನಾಂ ಭವತಿ ಯಂ ದ್ವಿಷ್ಯಾತ್ತಮುಪದಧದ್ಧ್ಯಾಯೇದೇತಾಭ್ಯ ಏವೈನಂ ದೇವತಾಭ್ಯ ಆ ವೃಶ್ಚತಿ

---

ಋತುಷು । ಏವ । ಸಂವಥ್ಸರ ಇತಿ ಸಮ್-ವಥ್ಸರೇ । ಪ್ರತೀತಿ । ತಿಷ್ಠತಿ । ಏತಾಃ । ವೈ । (೬) । ಅಧಿಪತ್ನೀರಿತ್ಯಧಿ-ಪತ್ನೀಃ । ನಾಮ । ಇಷ್ಟಕಾಃ । ಯಸ್ಯ । ಏತಾಃ । ಉಪಧೀಯಂತ ಇತ್ಯುಪ-ಧೀಯಂತೇ । ಅಧಿಪತಿರಿತ್ಯಧಿ-ಪತಿಃ । ಏವ । ಸಮಾನಾನಾಮ್ । ಭವತಿ । ಯಮ್ । ದ್ವಿಷ್ಯಾತ್ । ತಮ್ । ಉಪದಧದಿತ್ಯುಪ-ದಧತ್ । ಧ್ಯಾಯೇತ್ । ಏತಾಭ್ಯಃ । ಏವ । ಏನಮ್ । ದೇವತಾಭ್ಯಃ । ಏತಿ । ವೃಶ್ಚತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಋತುಷು ಏವ ಸಂವಥ್ಸರೇ ಪ್ರತಿತಿಷ್ಠತಿ** | (ಈ ಆರನೆಯ ಚಿತಿಯನ್ನು ಉಪಧಾನ ಮಾಡಿದ ಯಜಮಾನನು) ಋತುರೂಪವಾದ ಸಂವತ್ಸರದಲ್ಲಿ ಪ್ರತಿಷ್ಠಿತನಾಗುವನು. |
| **ಏತಾಃ ವೈ ಅಧಿಪತ್ನೀಃ ನಾಮ ಇಷ್ಟಕಾಃ** | ಈ ಷಷ್ಠಚಿತಿಯ ಇಷ್ಟಕೆಗಳೇ ಅಧಿಪತ್ನಿ ಎಂಬ ಹೆಸರಿನವುಗಳು. |
| **ಯಸ್ಯ ಏತಾಃ ಉಪಧೀಯಂತೇ** | ಯಾವ ಯಜಮಾನನಿಗಾಗಿ ಈ ಇಷ್ಟಕೆಗಳು ಉಪಧಾನ ಮಾಡಲ್ಪಡುತ್ತವೆಯೋ |
| **ಸಮಾನಾನಾಮ್ ಅಧಿಪತಿಃ ಏವ ಭವತಿ** | ಆ ಯಜಮಾನನು ಸಮಾನರಾದ ಯಾಗ ಮಾಡುವವರ ಮಧ್ಯದಲ್ಲಿ ಅಧಿಪತಿಯೇ ಆಗುವನು. |
| **ಯಮ್ ದ್ವಿಷ್ಯಾತ್ ಉಪದಧತ್ ತಮ್ ಧ್ಯಾಯೇತ್** | ಯಾವ ಪುರುಷನನ್ನು ಯಜಮಾನನು ದ್ವೇಷಿಸುತ್ತಾನೆಯೋ ಅಧ್ವರ್ಯುವು ಅಧಿಪತ್ನೀಷ್ಟಕೆಗಳನ್ನು ಉಪಧಾನ ಮಾಡುತ್ತಾ ಅವನನ್ನು ಧ್ಯಾನಿಸಬೇಕು. |
| **ಏತಾಭ್ಯಃ ದೇವತಾಭ್ಯಃ ಏನಮ್ ಆವೃಶ್ಚತಿ ಏವ** | ಈ ಮಂತ್ರೋಕ್ತವಾದ ದೇವತೆಗಳಿಂದ ಆ ಶತ್ರುವನ್ನು ದೇವತಾನುಗ್ರಹವಿಲ್ಲದಂತೆ ಮಾಡುತ್ತಾನೆ. |

ತಾಜಗಾರ್ತಿಮಾರ್ಚ್ಛತ್ಯಂಗಿರಸಸ್ಸುವರ್ಗಂ ಲೋಕಂ ಯಂತೋ ಯಾ ಯಜ್ಞಸ್ಯ ನಿಷ್ಕೃತಿರಾಸೀತ್ತಾಮೃಷಿಭ್ಯಃ ಪ್ರತ್ಯೌಹನ್ತದ್ಧಿರಣ್ಯಮಭವದ್ಯದ್ಧಿರಣ್ಯಶಲ್ಕೈಃ ಪ್ರೋಕ್ಷತಿ ಯಜ್ಞಸ್ಯ ನಿಷ್ಕೃತ್ಯಾ

---

ತಾಜಕ್ । ಆರ್ತಿಮ್ । ಏತಿ । ಋಚ್ಛತಿ । ಅಂಗಿರಸಃ । ಸುವರ್ಗಮಿತಿ ಸುವಃ-ಗಮ್ । ಲೋಕಮ್ । ಯಂತಃ । ಯಾ । ಯಜ್ಞಸ್ಯ । ನಿಷ್ಕೃತಿರಿತಿ ನಿಃ-ಕೃತಿಃ । ಆಸೀತ್ । ತಾಮ್ । ಋಷಿಭ್ಯ ಇತ್ಯೃಷಿ-ಭ್ಯಃ । ಪ್ರತೀತಿ । ಔಹನ್ನ್ । ತತ್ । ಹಿರಣ್ಯಮ್ । ಅಭವತ್ । ಯತ್ । ಹಿರಣ್ಯಶಲ್ಕೈರಿತಿ ಹಿರಣ್ಯ-ಶಲ್ಕೈಃ । ಪ್ರೋಕ್ಷತೀತಿ ಪ್ರ-ಉಕ್ಷತಿ । ಯಜ್ಞಸ್ಯ । ನಿಷ್ಕೃತ್ಯಾ ಇತಿ ನಿಃ-ಕೃತ್ಯೈ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ತಾಜಕ್ ಆರ್ತಿಮ್ ಆರ್ಚ್ಛತಿ** | ಇದರಿಂದ ಆ ಶತ್ರುವು ಒಡನೆಯೇ ನಾಶವನ್ನು/ ಪೀಡೆಯನ್ನು ಹೊಂದುವನು. |
| | **ಪ್ರೋಕ್ಷಣವಿಧಿ; ಅರ್ಥವಾದ** |
| **ಸುವರ್ಗಮ್ ಲೋಕಮ್ ಯಂತಃ ಅಂಗಿರಸಃ** | ಮಹರ್ಷಿಗಳಾದ ಅಂಗಿರಸರು ಕರ್ಮಾನುಷ್ಠಾನ ಮಾಡಿ ಸ್ವರ್ಗಲೋಕಕ್ಕೆ ಹೋಗುವವರಾಗಿ |
| **ಯಾ ಯಜ್ಞಸ್ಯ ನಿಷ್ಕೃತಿಃ ಆಸೀತ್** | ಯಜ್ಞವನ್ನು ಸ್ವಾಧೀನಪಡಿಸಿಕೊಳ್ಳುವುದಕ್ಕಾಗಿ ಯಾವ ದ್ರವ್ಯವು ಇದ್ದಿತೋ |
| **ತಾಮ್ ಋಷಿಭ್ಯಃ ಪ್ರತ್ಯೌಹನ್** | ಅದನ್ನು ಋಷಿಗಳಿಗೆ ಕೊಟ್ಟರು. |
| **ತತ್ ಹಿರಣ್ಯಮ್ ಅಭವತ್** | ಆ ದ್ರವ್ಯವು ಹಿರಣ್ಯವಾಯಿತು. |
| **ಯತ್ ಹಿರಣ್ಯಶಲ್ಕೈಃ ಪ್ರೋಕ್ಷತಿ** | ಹಿರಣ್ಯಶಕಲಗಳಿಂದ ಪ್ರೋಕ್ಷಣ ಮಾಡುವುದೆಂಬುದು ಯಾವುದೋ ಅದು |
| **ಯಜ್ಞಸ್ಯ ನಿಷ್ಕೃತ್ಯೈ** | ಯಜಮಾನನು ಯಜ್ಞದ ಮೂಲ್ಯವನ್ನಿತ್ತು ಅದನ್ನು ಸ್ವಾಧೀನ ಮಾಡಿಕೊಂಡಂತಾಗುತ್ತದೆ. |

---

ಋತವ್ಯೇಷ್ಟಕೆಗಳು ಚಿತಿಗಳ ದಾರ್ಢ್ಯಕ್ಕಾಗಿ ಇವೆ. ಋತವ್ಯೇಷ್ಟಕೆಗಳನ್ನು ಬಗೆಬಗೆಯಾಗಿ ಪ್ರಶಂಸಿಸಲಾಗಿದೆ. ಋತವ್ಯೇಷ್ಟಕೆಗಳ ಉಪಧಾನಕ್ಕೆ ಮೊದಲು ಪ್ರತಿಷ್ಠಾರ್ಥವಾಗಿ ಷಷ್ಠಚಿತಿಯನ್ನು ಉಪಧಾನ ಮಾಡುವ ವಿಧಿ ಇದು. **'ಸಂಯಚ್ಚ ಪ್ರಚೇತಾಶ್ಚ'** ಮುಂತಾದ ಮಂತ್ರಗಳಲ್ಲಿ ಶೇಷದಲ್ಲಿ **ಅಧಿಪತಿ** ಎಂಬ ಶಬ್ದವಿರುವುದರಿಂದ ಈ ಮಂತ್ರ

ಅಥೋ ಭೇಷಜಮೇವಾಸ್ಮೈ ಕರೋತ್ಯಥೋ[ಕರೋತಿ(೭)ಅಥೋ]
ರೂಪೇಣೈವೈನಗ್‌ಂ ಸಮರ್ಧಯತ್ಯಥೋ ಹಿರಣ್ಯಜ್ಯೋತಿಷೈವ ಸುವರ್ಗಂ
ಲೋಕಮೇತಿ ಸಾಹಸ್ರವತಾ ಪ್ರೋಕ್ಷತಿ ಸಾಹಸ್ರಃ ಪ್ರಜಾಪತಿಃ

---

ಅಥೋ ಇತಿ। ಭೇಷಜಮ್। ಏವ। ಅಸ್ಮೈ। ಕರೋತಿ। (೭)। ಅಥೋ ಇತಿ। ರೂಪೇಣ। ಏವ। ಏನಮ್। ಸಮಿತಿ। ಅರ್ಧಯತಿ। ಅಥೋ ಇತಿ। ಹಿರಣ್ಯಜ್ಯೋತಿಷೇತಿ ಹಿರಣ್ಯ-ಜ್ಯೋತಿಷಾ। ಏವ। ಸುವರ್ಗಮಿತಿ ಸುವಃ-ಗಮ್। ಲೋಕಮ್। ಏತಿ। ಸಾಹಸ್ರವತೇತಿ ಸಾಹಸ್ರ-ವತಾ। ಪ್ರೇತಿ। ಉಕ್ಷತಿ। ಸಾಹಸ್ರಃ। ಪ್ರಜಾಪತಿರಿತಿ ಪ್ರಜಾ-ಪತಿಃ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಅಥೋ ಅಸ್ಮೈ ಭೇಷಜಮ್ ಏವ ಕರೋತಿ** | ಈ ಪ್ರೋಕ್ಷಣದಿಂದ ಯಜಮಾನನು ಅಗ್ನಿಯ ವೈಕಲ್ಯ ಪರಿಹಾರರೂಪವಾದ ಓಷಧವನ್ನೇ/ಭೇಷಜವನ್ನೇ ಮಾಡಿದವನಾಗುತ್ತಾನೆ. |
| **ಅಥೋ ರೂಪೇಣ ಏನಮ್ ಸಮರ್ಧಯತಿ ಏವ** | ಮತ್ತು ಹಿರಣ್ಯಸಂಬಂಧದಿಂದ ಈ ಅಗ್ನಿಯನ್ನು ರೂಪದಿಂದ ಸಮೃದ್ಧನನ್ನಾಗಿ ಮಾಡಿದವನಾಗುತ್ತಾನೆ. |
| **ಅಥೋ ಹಿರಣ್ಯಜ್ಯೋತಿಷಾ ಏವ ಸುವರ್ಗಮ್ ಲೋಕಮ್ ಏತಿ** | ಮತ್ತು ಈ ಯಜಮಾನನು ಹಿರಣ್ಯರೂಪವಾದ ಜ್ಯೋತಿಸ್ಸಿನಿಂದ ಮಾರ್ಗವನ್ನು ತಿಳಿದು ಸ್ವರ್ಗ ಲೋಕಕ್ಕೆ ಹೋಗುತ್ತಾನೆ. |
| **ಸಾಹಸ್ರವತಾ ಪ್ರೋಕ್ಷತಿ** | 'ಸಹಸ್ರಸ್ಯ ಪ್ರಮಾ ಅಸಿ' ಮೊದಲಾದ ಸಹಸ್ರಶಬ್ದ ಯುಕ್ತವಾದ ಮಂತ್ರಗಳಿಂದ ಹಿರಣ್ಯಶಕಲಪ್ರೋಕ್ಷಣವನ್ನು ಮಾಡಬೇಕು. |
| **ಪ್ರಜಾಪತಿಃ ಸಾಹಸ್ರಃ** | ಸಹಸ್ರಸಂಖ್ಯಾಕವಾದ ಜಗತ್ತಿನ ದ್ರವ್ಯಗಳ ಉತ್ಪಾದಕನಾದುದರಿಂದ ಪ್ರಜಾಪತಿದೇವನು ಸಾಹಸ್ರನೆನಿಸಿದ್ದಾನೆ. |

---

ಗಳಿಂದ ಉಪಧಾನ ಮಾಡಲ್ಪಡುವ ಇಷ್ಟಕೆಗಳು ಅಧಿಪತ್ನೀಷ್ಟಕೆಗಳು.

ಹಿರಣ್ಯಶಕಲಗಳಿಂದ ಪ್ರೋಕ್ಷಣವಿಧಿಯನ್ನು ಇಲ್ಲಿ ಹೇಳಲಾಗಿದೆ. ಅಂಗಿರಸರು ಯಜ್ಞದ ನಿಷ್ಕೃತಿ(ಕರ್ಮಫಲವನ್ನು ಪಡೆಯಲು ನೀಡುವ ವಿನಿಮಯದ್ರವ್ಯ)ಗಾಗಿ ಋಷಿಗಳಿಗೆ ನೀಡಿದ ದ್ರವ್ಯವೇ ಹಿರಣ್ಯವಾಯಿತು.

ಪ್ರಜಾಪತೇರಾಪ್ತ್ಯೈ ಇಮಾ ಮೇ ಅಗ್ನ ಇಷ್ಟಕಾ ಧೇನವಸ್ಸಂತ್ವಿತ್ಯಾಹ ಧೇನೂರೇವೈನಾಃ ಕುರುತೇ ತಾ ಏನಂ ಕಾಮದುಘಾ ಅಮುತ್ರಾಮುಷ್ಮಿಲ್ಲೋಕ ಉಪ ತಿಷ್ಠಂತೇ ॥ ೮-2 ॥

[ಸಯೋನಿಮೇತಾ ವೈ ಕರೋತ್ಯೇಕಾನ್ನ ಚತ್ವಾರಿಗ್‌ಂಶಚ್ಚ ॥]

---

ಪ್ರಜಾಪತೇರಿತಿ ಪ್ರಜಾ-ಪತೇಃ । ಆಪ್ತ್ಯೈ । ಇಮಾಃ । ಮೇ । ಅಗ್ನೇ । ಇಷ್ಟಕಾಃ । ಧೇನವಃ । ಸಂತು । ಇತಿ । ಆಹ । ಧೇನೂಃ । ಏವ । ಏನಾಃ । ಕುರುತೇ । ತಾಃ । ಏನಮ್ । ಕಾಮದುಘಾ ಇತಿ ಕಾಮ-ದುಘಾಃ । ಅಮುತ್ರ । ಅಮುಷ್ಮಿನ್ । ಲೋಕೇ । ಉಪೇತಿ । ತಿಷ್ಠಂತೇ ॥ (೮) ॥

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಪ್ರಜಾಪತೇಃ ಆಪ್ತ್ಯೈ** | ಆದುದರಿಂದ ಈ ಮಂತ್ರವು ಪ್ರಜಾಪತಿದೇವನ ಪ್ರಾಪ್ತಿಗೆ/ಅನುಗ್ರಹಪ್ರಾಪ್ತಿಗೆ ಕಾರಣವಾಗುತ್ತದೆ. |
| **ಇಮಾಃ ಮೇ ಅಗ್ನೇ ಇಷ್ಟಕಾಃ ಧೇನವಃ ಸಂತು ಇತಿ ಆಹ** | ಶ್ರುತಿಯು 'ಅಗ್ನಿಯೇ! ಈ ಇಷ್ಟಕೆಗಳು ನನ್ನ ಪಾಲಿಗೆ ಕಾಮಧೇನುಗಳಾಗಲಿ' ಎಂದು ಹೇಳುತ್ತದೆ. |
| **ಏನಾಃ ಧೇನೂಃ ಏವ ಕುರುತೇ** | ಈ ಮಂತ್ರದಿಂದ ಇಷ್ಟಕೆಗಳನ್ನು ಕೇಳಿದ್ದನ್ನು ಕೊಡ ಬಲ್ಲ ಕಾಮಧೇನುಗಳನ್ನಾಗಿಯೇ ಮಾಡುತ್ತಾನೆ. |
| **ತಾಃ ಕಾಮದುಘಾಃ** | ಬಯಸಿದ್ದನ್ನು ಕೊಡುವ ಆ ಇಷ್ಟಕೆಗಳು |
| **ಏನಮ್ ಅಮುತ್ರ ಅಮುಷ್ಮಿನ್ ಲೋಕೇಉಪತಿಷ್ಠಂತೇ** | ಈ ಯಜಮಾನನನ್ನು ಸ್ವರ್ಗಲೋಕದಲ್ಲಿಯೂ, ಇಂದ್ರಲೋಕವೇ ಮುಂತಾದ ವಿಶಿಷ್ಟಲೋಕದಲ್ಲಿಯೂ ಕಾಮಧೇನುಗಳಾಗಿ ಪರಿಣಮಿಸಿ ಪರಿಚರ್ಯೆಯನ್ನು ಮಾಡುತ್ತವೆ. |

---

ಇಲ್ಲಿ ಹಿರಣ್ಯಶಕಲಗಳಿಂದ (ಬಂಗಾರದ ಚೂರುಗಳು) ಪ್ರೋಕ್ಷಣವಿಧಿಯು ಇದೆ.

ಹಿರಣ್ಯವು/ಬಂಗಾರವು ರೂಪಸಮೃದ್ಧಿಗೆ ಕಾರಣವೆಂದು **'ಯಥಾ ಹ ವೈ ಸುವರ್ಣಂ..ರೂಪಾಣ್ಯಾಸ್ತೇ'** (ತೈ.ಬ್ರಾ. 3.3) ಎಂದು ಶ್ರುತಿಯಲ್ಲಿ ಇನ್ನೊಂದು ಕಡೆ ಇದೆ.

ಸಹಸ್ರಶಬ್ದಯುಕ್ತವಾದ ಮಂತ್ರದಿಂದ ಹಿರಣ್ಯಶಕಲಪ್ರೋಕ್ಷಣವನ್ನು ಮಾಡುವುದರಿಂದ ಪ್ರಜಾಪತಿದೇವನ ಅನುಗ್ರಹಪ್ರಾಪ್ತಿಯಾಗುವುದು.

ಇಷ್ಟಕೆಗಳು ಮಂತ್ರಪ್ರಭಾವದಿಂದ ಪರಲೋಕದಲ್ಲಿ ಬಯಸಿದ್ದನ್ನು ನೀಡುವಂತಾಗುತ್ತವೆ.

## ॥ ತೃತೀಯೋऽನುವಾಕಃ ॥

ರುದ್ರೋ ವಾ ಏಷ ಯದಗ್ನಿಸ್ಸ ಏತರ್ಹಿ ಜಾತೋ ಯರ್ಹಿ ಸರ್ವಶ್ಚಿತಸ್ಸ
ಯಥಾ ವಥ್ಸೋ ಜಾತಃ ಸ್ತನಂ ಪ್ರೇಫ್ಸತ್ಯೇವಂ ವಾ ಏಷ

ರುದ್ರಃ । ವೈ । ಏಷಃ । ಯತ್ । ಅಗ್ನಿಃ । ಸಃ । ಏತರ್ಹಿ । ಜಾತಃ । ಯರ್ಹಿ । ಸರ್ವಃ । ಚಿತಃ । ಸಃ । ಯಥಾ । ವಥ್ಸಃ । ಜಾತಃ । ಸ್ತನಮ್ । ಪ್ರೇಫ್ಸತೀತಿ ಪ್ರ–ಈಫ್ಸತಿ । ಏವಮ್ । ವೈ । ಏಷಃ ।

ಈ ಮೂರನೆಯ ಅನುವಾಕದಲ್ಲಿ ರುದ್ರಹೋಮವು ಹೇಳಲ್ಪಟ್ಟಿದೆ. ಇದಕ್ಕೆ ಸಂಬಂಧಿಸಿದ ಕಲ್ಪಸೂತ್ರವು ಹೀಗೆ ಆರಂಭಗೊಳ್ಳುತ್ತದೆ.* **'ಶತರುದ್ರೀಯಂ ಜುಹೋತಿ...ನಮಸ್ತೇ ರುದ್ರ...ತಸ್ಯ ಸಂಚರೇ' [ಆಪಸ್ತಂಬ ಶ್ರೌತಸೂತ್ರ 17.11.3-6]**. ಅದರಲ್ಲಿ ರುದ್ರಹೋಮದ್ರವ್ಯವನ್ನೂ, ಹೋಮವನ್ನು ಅನುಷ್ಠಿಸಬೇಕಾದ ಸ್ಥಾನವನ್ನೂ, ರುದ್ರಾಧ್ಯಾಯದ ಮಂತ್ರವಿಭಾಗದ ಕ್ರಮವನ್ನೂ, ಮಂತ್ರಪ್ರಾರಂಭ ಮತ್ತು ಮುಕ್ತಾಯ ಮಾಡಬೇಕಾದ ಸ್ಥಾನವನ್ನೂ, ಶೇಷಕಾರ್ಯವನ್ನೂ ತಿಳಿಸಿದ್ದಾರೆ. ಶ್ರೀ ಸಾಯಣಾಚಾರ್ಯರು ರುದ್ರಾಧ್ಯಾಯದ ಭಾಷ್ಯದಲ್ಲಿ ಉಪೋದ್ಘಾತದ ಬಳಿಕ ಈ ಸೂತ್ರವನ್ನು ಉಲ್ಲೇಖಿಸಿದ್ದಾರೆ.

| ಬ್ರಾಹ್ಮಣಭಾಗ | ವಿವರಣೆ |
|---|---|

**ಶತರುದ್ರೀಯಹೋಮವಿಧಿ; ಅರ್ಥವಾದ**

| | |
|---|---|
| **ಯತ್ ಅಗ್ನಿಃ ಏಷಃ ರುದ್ರಃ ವೈ** | (ಉತ್ಪನ್ನನಾಗುವ) ಈ ಅಗ್ನಿಯು ರುದ್ರನೇ ಆಗಿರುತ್ತಾನೆ. |
| **ಯರ್ಹಿ ಸರ್ವಃ ಚಿತಃ** | ಯಾವಾಗ ಎಲ್ಲ ಚಯನವೂ ಅನುಷ್ಠಿಸಲ್ಪಡುತ್ತದೆಯೋ |
| **ಏತರ್ಹಿ ಸಃ ಜಾತಃ** | ಈಗ ಅವನು ಜನಿಸಿದವನಾಗಿರುತ್ತಾನೆ. |
| **ಸಃ ಏಷಃ ಯಥಾ ಜಾತಃ ವತ್ಸಃ** | ಆ ಜನಿಸಿದಂತಹ ಈ ಅಗ್ನಿಯು ಹೇಗೆ ಹುಟ್ಟಿದ |
| **ಸ್ತನಮ್ ಪ್ರೇಫ್ಸತಿ** | ಮಗುವು ಮೊಲೆಯ (ಹಾಲನ್ನು)ಅಪೇಕ್ಷಿಸುತ್ತದೆಯೋ |
| **ಏವಮ್ ವೈ** | ಹೀಗೆಯೇ |

* ಈ ಕಲ್ಪಸೂತ್ರದ ಪೂರ್ಣಪಾಠವು ಕೃ. ಯ. ವೇದ ಕನ್ನಡಪ್ರಕಾಶನದ 11ನೆಯ ಸಂಪುಟದಲ್ಲಿ ಪುಟ ೨ (ಸಾಯಣಭಾಷ್ಯ ಉಪೋದ್ಘಾತ)ರಲ್ಲಿ ಇದೆ. ವಿವರಣೆಯನ್ನೂ ಅಲ್ಲಿಯೇ ನೀಡಲಾಗಿದೆ.

ಏತರ್ಹಿ ಭಾಗಧೇಯಂ ಪ್ರೇಪ್ಸತಿ ತಸ್ಮೈ ಯದಾಹುತಿಂ ನ ಜುಹುಯಾದಧ್ವರ್ಯುಂ ಚ ಯಜಮಾನಂ ಚ ಧ್ಯಾಯೇಚ್ಛತರುದ್ರೀಯಂ ಜುಹೋತಿ ಭಾಗಧೇಯೇನೈವೈನಗ್ಂ ಶಮಯತಿ ನಾಽಽರ್ತಿಮಾರ್ಚ್ಛತ್ಯಧ್ವರ್ಯುರ್ನ ಯಜಮಾನೋ

---

ಏತರ್ಹಿ । ಭಾಗಧೇಯಮಿತಿ ಭಾಗ-ಧೇಯಮ್ । ಪ್ರೇತಿ । ಈಪ್ಸತಿ । ತಸ್ಮೈ । ಯತ್ । ಆಹುತಿಮಿತ್ಯಾ-ಹುತಿಮ್ । ನ । ಜುಹುಯಾತ್ । ಅಧ್ವರ್ಯುಮ್ । ಚ । ಯಜಮಾನಮ್ । ಚ । ಧ್ಯಾಯೇತ್ । ಶತರುದ್ರೀಯಮಿತಿ ಶತ-ರುದ್ರೀಯಮ್ । ಜುಹೋತಿ । ಭಾಗಧೇಯೇನೇತಿ ಭಾಗ-ಧೇಯೇನ । ಏವ । ಏನಮ್ । ಶಮಯತಿ । ನ । ಆರ್ತಿಮ್ । ಏತಿ । ಋಚ್ಛತಿ । ಅಧ್ವರ್ಯುಃ । ನ । ಯಜಮಾನಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಏತರ್ಹಿ ಭಾಗಧೇಯಮ್ ಪ್ರ ಈಪ್ಸತಿ** | ಇದೇ ಸಮಯದಲ್ಲಿಯೇ(ತನ್ನ)ಭಾಗವನ್ನು ಬಯಸುತ್ತಾನೆ. |
| **ತಸ್ಮೈ ಯತ್ ಆಹುತಿಮ್** | ಅಂತಹ ಅಗ್ನಿಯನ್ನು (ಉದ್ದೇಶಿಸಿ) ಒಂದು ವೇಳೆ ಆಹುತಿಯನ್ನು (ಹವಿಸ್ಸನ್ನು) |
| **ನ ಜುಹುಯಾತ್** | ಹೋಮ ಮಾಡದೆ ಇದ್ದರೆ (ಅಗ್ನಿಯು) |
| **ಅಧ್ವರ್ಯುಮ್ ಚ** | ಅಧ್ವರ್ಯುವನ್ನೂ |
| **ಯಜಮಾನಮ್ ಚ ಧ್ಯಾಯೇತ್** | ಯಜಮಾನನನ್ನೂ(ಭಕ್ಷಿಸಲು) ಆಲೋಚಿಸುತ್ತಾನೆ. |
| **ಶತರುದ್ರೀಯಮ್ ಜುಹೋತಿ** | ಇದರ ಪರಿಹಾರಕ್ಕಾಗಿ ಶತರುದ್ರೀಯಹೋಮವನ್ನು ಮಾಡಬೇಕು. |
| **ಏನಮ್ ಭಾಗಧೇಯೇನ ಏವ ಶಮಯತಿ** | (ಇದರಿಂದ) ಈ ಅಗ್ನಿಯನ್ನು (ಅವನ) ಭಾಗದಿಂದಲೇ ಸಮಾಧಾನಗೊಳಿಸಿದಂತಾಗುತ್ತದೆ. |
| **ಅಧ್ವರ್ಯುಃ ಆರ್ತಿಮ್ ನ ಆರ್ಚ್ಛತಿ** | ಅಧ್ವರ್ಯುವು ಪೀಡೆಯನ್ನು ಹೊಂದುವುದಿಲ್ಲ. |
| **ಯಜಮಾನಃ** ಆರ್ತಿಮ್ ನ ಆರ್ಚ್ಛತಿ | ಯಜಮಾನನೂ ಪೀಡೆಯನ್ನು ಹೊಂದುವುದಿಲ್ಲ. |

ಯದ್ಗ್ರಾಮ್ಯಾಣಾಂ ಪಶೂನಾಂ [(೯)] ಪಯಸಾ ಜುಹುಯಾದ್ಗ್ರಾಮ್ಯಾನ್ಪಶೂ

ಞ್ಛುಚಾಽರ್ಪಯೇದ್ಯದಾರಣ್ಯಾನಾಮಾರಣ್ಯಾಞ್ಜರ್ತಿಲಯವಾಗ್ವಾ ವಾ

ಜುಹುಯಾದ್ಗವೀಧುಕಯವಾಗ್ವಾ ವಾ ನ ಗ್ರಾಮ್ಯಾನ್ಪಶೂನ್, ಹಿನಸ್ತಿ ನಾಽಽರಣ್ಯಾ-

---

ಯತ್ । ಗ್ರಾಮ್ಯಾಣಾಮ್ । ಪಶೂನಾಮ್ । (೯) । ಪಯಸಾ । ಜುಹುಯಾತ್ । ಗ್ರಾಮ್ಯಾನ್ । ಪಶೂನ್ । ಶುಚಾ । ಅರ್ಪಯೇತ್ । ಯತ್ । ಆರಣ್ಯಾನಾಮ್ । ಆರಣ್ಯಾನ್ । ಜರ್ತಿಲಯವಾಗ್ವೇತಿ ಜರ್ತಿಲ-ಯವಾಗ್ವಾ । ವಾ । ಜುಹುಯಾತ್ । ಗವೀಧುಕಯವಾಗ್ವೇತಿ ಗವೀಧುಕ-ಯವಾಗ್ವಾ । ವಾ । ನ । ಗ್ರಾಮ್ಯಾನ್ । ಪಶೂನ್ । ಹಿನಸ್ತಿ । ನ । ಆರಣ್ಯಾನ್ ।

---

| ಬ್ರಾಹ್ಮಣಭಾಗ | ವಿವರಣೆ |
|---|---|

### ಹೋಮದ್ರವ್ಯವಿಧಿ

| | |
|---|---|
| **ಯತ್ ಗ್ರಾಮ್ಯಾಣಾಮ್ ಪಶೂನಾಮ್ ಪಯಸಾ ಜುಹುಯಾತ್** | ಒಮ್ಮೆ ಗ್ರಾಮ್ಯಪಶುಗಳಾದ ಹಸು ಮುಂತಾದವುಗಳ ಹಾಲಿನಿಂದ ಶತರುದ್ರೀಯಹೋಮವನ್ನು ಮಾಡಿದರೆ |
| **ಗ್ರಾಮ್ಯಾನ್ ಪಶೂನ್ ಶುಚಾ ಅರ್ಪಯೇತ್** | ಗ್ರಾಮ್ಯಪಶುಗಳನ್ನು ಸಂತಾಪರೂಪವಾದ ರೋಗದಿಂದ ಪೀಡಿಸಿದಂತೆ ಆಗುತ್ತದೆ. |
| **ಯತ್ ಆರಣ್ಯಾನಾಮ್** ಪಶೂನಾಮ್ ಪಯಸಾ ಜುಹುಯಾತ್ | ಆರಣ್ಯಪಶುಗಳಾದ ಸಿಂಹಾದಿಗಳ ಹಾಲಿನಿಂದ ಹೋಮವನ್ನು ಮಾಡಿದರೆ |
| **ಆರಣ್ಯಾನ್** ಪಶೂನ್ ಶುಚಾ ಅರ್ಪಯೇತ್ | ಆರಣ್ಯಪಶುಗಳನ್ನು ಪೀಡೆಗೆ ಗುರಿ ಮಾಡಿದಂತೆ ಆಗುತ್ತದೆ. |
| **ಜರ್ತಿಲಯವಾಗ್ವಾ ವಾ ಜುಹುಯಾತ್** | (ಆದುದರಿಂದ) ಆರಣ್ಯತಿಲದ ಹಿಟ್ಟಿನಿಂದ/ಗಂಜಿಯಿಂದಲಾಗಲೀ ಹೋಮ ಮಾಡಬೇಕು. |
| **ಗವೀಧುಕಯವಾಗ್ವಾ ವಾ** ಜುಹುಯಾತ್ | ಕಾಡಿನ ಗೋಧಿಯ ಹಿಟ್ಟಿನಿಂದಾಗಲೀ/ಗಂಜಿಯಿಂದಲಾಗಲೀ ಹೋಮವನ್ನು ಮಾಡಬೇಕು. |
| **ಗ್ರಾಮ್ಯಾನ್ ಪಶೂನ್ ನ ಹಿನಸ್ತಿ** | ಇದರಿಂದ ಗ್ರಾಮ್ಯಪಶುಗಳನ್ನು ಹಿಂಸಿಸಿದಂತಾಗುವುದಿಲ್ಲ. |
| **ಆರಣ್ಯಾನ್** ಪಶೂನ್ **ನ** ಹಿನಸ್ತಿ | ಆರಣ್ಯಪಶುಗಳನ್ನೂ ಹಿಂಸಿಸಿದಂತಾಗುವುದಿಲ್ಲ. |

–ನಥೋ ಖಲ್ವಾಹುರನಾಹುತಿರ್ವೈ ಜರ್ತಿಲಾಶ್ಚ ಗವೀಧುಕಾಶ್ಚೇತ್ಯಜಕ್ಷೀರೇಣ ಜುಹೋತ್ಯಾಗ್ನೇಯೀ ವಾ ಏಷಾ ಯದಜಾऽऽಹುತ್ಯೈವ ಜುಹೋತಿ ನ ಗ್ರಾಮ್ಯಾನ್ಪಶೂನ್, ಹಿನಸ್ತಿ ನಾऽऽರಣ್ಯಾ–

---

ಅಥೋ ಇತಿ । ಖಲು । ಆಹುಃ । ಅನಾಹುತಿರಿತ್ಯನಾ–ಹುತಿಃ । ವೈ । ಜರ್ತಿಲಾಃ । ಚ । ಗವೀಧುಕಾಃ । ಚ । ಇತಿ । ಅಜಕ್ಷೀರೇಣೇತ್ಯಜ–ಕ್ಷೀರೇಣ । ಜುಹೋತಿ । ಆಗ್ನೇಯೀ । ವೈ । ಏಷಾ । ಯತ್ । ಅಜಾ । ಆಹುತ್ಯೇತ್ಯಾ–ಹುತ್ಯಾ । ಏವ । ಜುಹೋತಿ । ನ । ಗ್ರಾಮ್ಯಾನ್ । ಪಶೂನ್ । ಹಿನಸ್ತಿ । ನ । ಆರಣ್ಯಾನ್ ।

---

| ಬ್ರಾಹ್ಮಣಭಾಗ | ವಿವರಣೆ |
|---|---|

**ಪಕ್ಷಾಂತರವಿಧಿ**

| | |
|---|---|
| **ಅಥೋ ಖಲು ಆಹುಃ** | ಈ ವಿಷಯದಲ್ಲಿ ಅಭಿಜ್ಞರು ಹೀಗೆ ಹೇಳುತ್ತಾರೆ. |
| **ಜರ್ತಿಲಾಃ ಚ ಗವೀಧುಕಾಃ ಚ ಅನಾಹುತಿಃ ವೈ ಇತಿ** | ಆರಣ್ಯತಿಲಪಿಷ್ಟವೂ, ಆರಣ್ಯಗೋಧೂಮಪಿಷ್ಟವೂ *ಮನುಷ್ಯರು ತಿನ್ನದಿರುವುದರಿಂದ ಆಹುತಿಯೋಗ್ಯವಲ್ಲ. (ಎಂಬುದಾಗಿ ಹೇಳುತ್ತಾರೆ.) |
| **ಅಜಕ್ಷೀರೇಣ ಜುಹೋತಿ** | (ಆದುದರಿಂದ)ಮೇಕೆಯ ಹಾಲಿನಿಂದ ಶತರುದ್ರೀಯ ಹೋಮವನ್ನು ಮಾಡಬೇಕು. |
| **ಯತ್ ಅಜಾ ಏಷಾ ಆಗ್ನೇಯೀ ವೈ** | ಈ ಮೇಕೆಯೆಂಬುದು +(ಅಗ್ನಿಯೊಡನೆಯೇ ಜನಿಸಿ) ಆಗ್ನೇಯೀ ಎನಿಸಿದೆ. |
| **ಆಹುತ್ಯಾ ಏವ ಜುಹೋತಿ** | ಆಹುತಿಯೋಗ್ಯವಾದ ದ್ರವ್ಯದಿಂದಲೇ ಹೋಮವನ್ನು ಮಾಡುತ್ತಾನೆ. |
| **ಗ್ರಾಮ್ಯಾನ್ ಪಶೂನ್ ನ ಹಿನಸ್ತಿ** | (ಇದರಿಂದ) ಗ್ರಾಮ್ಯಪಶುಗಳನ್ನು ಹಿಂಸಿಸುವುದಿಲ್ಲ. |
| **ಆರಣ್ಯಾನ್** ಪಶೂನ್ ನ ಹಿನಸ್ತಿ | ಆರಣ್ಯಪಶುಗಳನ್ನೂ ಹಿಂಸಿಸುವುದಿಲ್ಲ. (ಅಜಕ್ಷೀರದಿಂದಲೇ ಶತರುದ್ರೀಯಹೋಮವು ಯುಕ್ತ.) |

---

* ಯದನ್ನಃ ಪುರುಷೋ ಭವತಿ ತದನ್ನಾಸ್ತಸ್ಯ ದೇವತಾಃ ॥ ವಾಲ್ಮೀಕೀಯ ರಾಮಾಯಣ –2.95.31
ಮನುಷ್ಯನು ಯಾವ ಅನ್ನವನ್ನು ತಿನ್ನುವನೋ ಅವನು ಆರಾಧಿಸುವ ದೇವತೆಗಳಿಗೂ ಅದೇ (ಶಾಸ್ತ್ರನಿಷಿದ್ಧವಲ್ಲದ) ಅನ್ನವು ಆಗುತ್ತದೆ.
+ತೈ. ಸಂ. 7.1.1

ನಙ್ಗಿರಸಸ್ಸುವರ್ಗಂ ಲೋಕಂ ಯಂತೋಽ[ಯಂತಃ(೧೦)ಅಜಾಯಾಂ]ಜಾಯಾಂ ಘರ್ಮಂ ಪ್ರಾಸಿಞ್ಚನ್ತ್ಸಾ ಶೋಚಂತೀ ಪರ್ಣಂ ಪರಾಽಜಿಹೀತ ಸೋಽರ್ಕೋಽಭವತ್ತದರ್ಕಸ್ಯಾರ್ಕತ್ವಮರ್ಕಪರ್ಣೇನ ಜುಹೋತಿ ಸಯೋನಿತ್ವಾಯೋ–

---

ಅಙ್ಗಿರಸಃ । ಸುವರ್ಗಮಿತಿ ಸುವಃ– ಗಮ್ । ಲೋಕಮ್ । ಯಂತಃ । (೧೦) । ಅಜಾಯಾಮ್ । ಘರ್ಮಮ್ । ಪ್ರೇತಿ । ಆಸಿಞ್ಚನ್ನ್ । ಸಾ । ಶೋಚಂತೀ । ಪರ್ಣಮ್ । ಪರೇತಿ । ಅಜಿಹೀತ । ಸಃ । ಅರ್ಕಃ । ಅಭವತ್ । ತತ್ । ಅರ್ಕಸ್ಯ । ಅರ್ಕತ್ವಮಿತ್ಯರ್ಕ–ತ್ವಮ್ । ಅರ್ಕಪರ್ಣೇನೇತ್ಯರ್ಕ–ಪರ್ಣೇನ । ಜುಹೋತಿ । ಸಯೋನಿತ್ವಾಯೇತಿ ಸಯೋನಿ–ತ್ವಾಯ ।

---

| ಬ್ರಾಹ್ಮಣಭಾಗ | ವಿವರಣೆ |
|---|---|

**ಹೋಮಸಾಧನವಾಗಿ ಸ್ರುವಸ್ಥಾನದಲ್ಲಿ ಅರ್ಕಪರ್ಣದ ವಿಧಿ; ಅರ್ಥವಾದ**

| | |
|---|---|
| **ಅಙ್ಗಿರಸಃ ಸುವರ್ಗಮ್ ಲೋಕಮ್ ಯಂತಃ** | ಅಂಗಿರೋಮಹರ್ಷಿಗಳು ಸ್ವರ್ಗಲೋಕಕ್ಕೆ ಹೋಗುವವರಾಗಿ |
| **ಅಜಾಯಾಮ್ ಘರ್ಮಮ್ ಪ್ರಾಸಿಞ್ಚನ್** | ಮೇಕೆಯ ಮೇಲೆ (ಪ್ರವರ್ಗ್ಯದ) ಬಿಸಿ ಹಾಲಿನಿಂದ ಕೂಡಿದ ತುಪ್ಪವನ್ನು ಹೆಚ್ಚಾಗಿ ಸೇಚನ ಮಾಡಿದರು. |
| **ಸಾ ಶೋಚಂತೀ ಪರ್ಣಮ್ ಪರಾ ಅಜಿಹೀತ** | ಪೀಡಿತವಾದ ಆ ಮೇಕೆಯು ಎಲೆಯಂತಿರುವ ತನ್ನ ರೋಮಸಮೂಹವನ್ನು ಭೂಮಿಯಲ್ಲಿ ಬೀಳಿಸಿತು. |
| **ಸಃ ಅರ್ಕಃ ಅಭವತ್** | ಅದು ಅರ್ಚನೀಯವಾದ ಅರ್ಕಪರ್ಣ(ಎಕ್ಕದ ಎಲೆ)ವಾಗಿ ಪರಿಣಮಿಸಿತು. |
| **ತತ್ ಅರ್ಕಸ್ಯ ಅರ್ಕತ್ವಮ್** | ಅದು ಅರ್ಚನೀಯವಾದ ಪ್ರವರ್ಗ್ಯದಿಂದ ಹುಟ್ಟಿದುದರಿಂದ ಅರ್ಕವು ಅನ್ವರ್ಥವಾಯಿತು. |
| **ಅರ್ಕಪರ್ಣೇನ ಜುಹೋತಿ** | ಈ ಅರ್ಕಪರ್ಣದಿಂದ ಶತರುದ್ರೀಯಹೋಮವನ್ನು ಮಾಡಬೇಕು. |
| **ಸಯೋನಿತ್ವಾಯ** | (ಅರ್ಕಪರ್ಣವೂ, ಅಜಕ್ಷೀರವೂ ಅಜದಿಂದ ಜನಿಸಿದುದರಿಂದ) ಸಮಾನವಾದ ಉತ್ಪತ್ತಿಸ್ಥಾನವನ್ನೇ ಹೊಂದಿದಂತಾಗುತ್ತದೆ. |

–ದಙ್ತಿಷ್ಠಞ್ಜುಹೋತ್ಯೇಷಾ ವೈ ರುದ್ರಸ್ಯ ದಿಕ್ಸ್ವಾಯಾಮೇವ ದಿಶಿ
ರುದ್ರನ್ನಿರವದಯತೇ ಚರಮಾಯಾಮಿಷ್ಟಕಾಯಾಞ್ಜುಹೋತ್ಯಂತತ ಏವ
ರುದ್ರನ್ನಿರವದಯತೇ ತ್ರೇಧಾವಿಭಕ್ತಂ ಜುಹೋತಿ ತ್ರಯ ಇಮೇ ಲೋಕಾ

---

ಉದಙ್ಙ್ । ತಿಷ್ಠನ್ನ್ । ಜುಹೋತಿ । ಏಷಾ । ವೈ । ರುದ್ರಸ್ಯ । ದಿಕ್ । ಸ್ವಾಯಾಮ್ । ಏವ । ದಿಶಿ । ರುದ್ರಮ್ । ನಿರವದಯತ ಇತಿ ನಿಃ–ಅವದಯತೇ । ಚರಮಾಯಾಮ್ । ಇಷ್ಟಕಾಯಾಮ್ । ಜುಹೋತಿ । ಅಂತತಃ । ಏವ । ರುದ್ರಮ್ । ನಿರವದಯತ ಇತಿ ನಿಃ–ಅವದಯತೇ । ತ್ರೇಧಾವಿಭಕ್ತಮಿತಿ ತ್ರೇಧಾ–ವಿಭಕ್ತಮ್ । ಜುಹೋತಿ । ತ್ರಯಃ । ಇಮೇ । ಲೋಕಾಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಉದಙ್ ತಿಷ್ಠನ್ ಜುಹೋತಿ** | ಉತ್ತರದಿಕ್ಕಿನಲ್ಲಿ/ಉತ್ತರಾಭಿಮುಖವಾಗಿ ನಿಂತುಕೊಂಡು ಶತರುದ್ರೀಯಹೋಮವನ್ನು ಅನುಷ್ಠಿಸಬೇಕು. |
| **ಏಷಾ ರುದ್ರಸ್ಯ ದಿಕ್ ವೈ** | ಉತ್ತರದಿಕ್ಕು ರುದ್ರನಿಗೆ ತನ್ನದಾದ ದಿಕ್ಕಾಗಿದೆ. |
| **ಸ್ವಾಯಾಮ್ ದಿಶಿ ಏವ ರುದ್ರಮ್ ನಿರವದಯತೇ** | ಹೀಗೆ ಹೋಮ ಮಾಡುವುದರಿಂದ ತನ್ನ ದಿಕ್ಕಿನಲ್ಲಿಯೇ ರುದ್ರನನ್ನು ಬೇರ್ಪಡಿಸಿ, ಶಾಂತಗೊಳಿಸಿ ದೂರಮಾಡಿ ದಂತಾಗುತ್ತದೆ. |
| **ಚರಮಾಯಾಮ್ ಇಷ್ಟಕಾಯಾಮ್ ಜುಹೋತಿ** | ಕೊನೆಯ ಇಷ್ಟಕೆಯಾದ ಸ್ವಯಮಾತೃಣ್ಣೆಯಲ್ಲಿ ಈ ಹೋಮವನ್ನು ಅನುಷ್ಠಿಸಬೇಕು. |
| **ಅಂತತಃ ಏವ ರುದ್ರಮ್ ನಿರವದಯತೇ** | (ಇದರಿಂದ) ಕ್ರೂರನಾದ ರುದ್ರನನ್ನು ಅಂತ್ಯಭಾಗದಲ್ಲಿಯೇ ತೃಪ್ತಿಪಡಿಸಿ ದೂರಮಾಡಿದಂತಾಗುತ್ತದೆ. |

ರುದ್ರಹೋಮದ ವಿಶೇಷವಿಧಿ

| | |
|---|---|
| **ತ್ರೇಧಾವಿಭಕ್ತಮ್ ಜುಹೋತಿ** | (ರುದ್ರಾಧ್ಯಾಯವನ್ನು) ಮೂರು ಭಾಗವಾಗಿ ವಿಭಾಗಿಸಿ ಹೋಮವನ್ನು ಮಾಡಬೇಕು. |
| **ಇಮೇ ಲೋಕಾಃ ತ್ರಯಃ** | ಈ ಲೋಕಗಳು ಮೂರು ಇವೆ. |

---

**ತಾತ್ಪರ್ಯ:–** ಅಂಗಿರೋಮಹರ್ಷಿಗಳ ಆಖ್ಯಾನದಿಂದ ಶತರುದ್ರೀಯಹೋಮದ ಅನುಷ್ಠಾನದಲ್ಲಿ ಸ್ರುವದ ಸ್ಥಾನದಲ್ಲಿ ಅರ್ಕಪರ್ಣದ ವಿಧಿಯು ಇದಾಗಿದೆ.

ಇಮಾನೇವ ಲೋಕಾನ್ತ್ಸಮಾವದ್ವೀರ್ಯಾನ್ಕರೋತೀಯತ್ಯಗ್ರೇ ಜುಹೋತ್ಯ

[ಜುಹೋತಿ(೧೧)ಅಥೇ...]ಥೇಯತ್ಯಥೇಯತಿ ತ್ರಯ ಇಮೇ ಲೋಕಾ ಏಭ್ಯ

ಏವೈನಂ ಲೋಕೇಭ್ಯಃ ಶಮಯತಿ ತಿಸ್ರ ಉತ್ತರಾ ಆಹುತೀರ್ಜುಹೋತಿ

---

ಇಮಾನ್ । ಏವ । ಲೋಕಾನ್ । ಸಮಾವದ್ವೀರ್ಯಾನಿತಿ ಸಮಾವತ್-ವೀರ್ಯಾನ್ । ಕರೋತಿ । ಇಯತಿ । ಅಗ್ರೇ । ಜುಹೋತಿ । (೧೧) । ಅಥ । ಇಯತಿ । ಅಥ । ಇಯತಿ । ತ್ರಯಃ । ಇಮೇ । ಲೋಕಾಃ । ಏಭ್ಯಃ । ಏವ । ಏನಮ್ । ಲೋಕೇಭ್ಯಃ । ಶಮಯತಿ । ತಿಸ್ರಃ । ಉತ್ತರಾ ಇತ್ಯುತ್-ತರಾಃ । ಆಹುತೀರಿತ್ಯಾ-ಹುತೀಃ । ಜುಹೋತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಇಮಾನ್ ಏವ ಲೋಕಾನ್ ಸಮಾವತ್ ವೀರ್ಯಾನ್ ಕರೋತಿ** | ಹೀಗೆ ಮಾಡುವುದರಿಂದ ಈ ಮೂರು ಲೋಕಗಳನ್ನೂ ಸಮಾನಶಕ್ತಿಯುಳ್ಳವುಗಳನ್ನಾಗಿ ಅಧ್ವರ್ಯುವು/ ಯಜಮಾನನು ಮಾಡುತ್ತಾನೆ. |
| **ಇಯತಿ ಅಗ್ರೇ ಜುಹೋತಿ** | ಇಷ್ಟು ಅಗ್ರಭಾಗದಲ್ಲಿ ಹೋಮ ಮಾಡಬೇಕು./ ಇಷ್ಟು ಎತ್ತರದಲ್ಲಿ ಹೋಮ ಮಾಡಬೇಕು. |
| **ಅಥ ಇಯತಿ ಅಥ ಇಯತಿ** | ಬಳಿಕ ಇಷ್ಟು ಎತ್ತರದಲ್ಲಿ, ಬಳಿಕ ಇಷ್ಟು ಎತ್ತರದಲ್ಲಿ ಎಂದು ನಿರ್ದೇಶಿಸಿದಂತೆ ಮೂರು ಬಾರಿ ಹೋಮ ಮಾಡಬೇಕು. |
| **ತ್ರಯಃ ಇಮೇ ಲೋಕಾಃ** | ಈ ಲೋಕಗಳು ಮೂರಷ್ಟೆ. |
| **ಏಭ್ಯಃ ಲೋಕೇಭ್ಯಃ ಏವ ಏನಮ್ ಶಮಯತಿ** | ಈ ಮೂರು ಸಂಖ್ಯೆಯ ಹೋಮಗಳಿಂದ ಈ ಮೂರು ಲೋಕಗಳಿಂದಲೂ ರುದ್ರನನ್ನು ಶಾಂತನನ್ನಾಗಿ ಯಜಮಾನನು ಮಾಡುತ್ತಾನೆ. |
| **ತಿಸ್ರಃ ಉತ್ತರಾಃ ಆಹುತೀಃ ಜುಹೋತಿ** | 'ನಮೋ ರುದ್ರೇಭ್ಯಃ ಯೇ ಪೃಥಿವ್ಯಾಮ್' 'ಯೇಽಂತರಿಕ್ಷೇ' 'ಯೇ ದಿವಿ' ಎಂದು ಮೂರು ಆಹುತಿಗಳನ್ನು ಮಾಡಬೇಕು. |

---

ರುದ್ರಾಧ್ಯಾಯದ ತ್ರೇಧಾವಿಭಾಗ ಹೀಗಿದೆ. ೧) ನಮಸ್ತೇ ರುದ್ರ...ಸಭಾಪತಿಭ್ಯಶ್ಚ ವೋ ನಮಃ ೨) ನಮೋ ಅಶ್ವೇಭ್ಯಃ..ಅವಾರ್ಯಾಯ ಚ ೩) ನಮಃ ಪ್ರತರಣಾಯ ಚ ...ಯ ಏತಾವಂತಶ್ಚ..ತನ್ಮಸಿ ॥ ಭ.ಭಾ.ಭಾಷ್ಯದಲ್ಲಿ

ಷಟ್ಥ್ಸಂಪದ್ಯಂತೇ ಷಡ್ವಾ ಋತವ ಋತುಭಿರೇವೈನಗ್‌ಂ ಶಮಯತಿ

ಯದನುಪರಿಕ್ರಾಮಂ ಜುಹುಯಾದಂತರವಚಾರಿಣಗ್‌ಂ ರುದ್ರಂ

ಕುರ್ಯಾದಥೋ ಖಲ್ವಾಹುಃ

---

ಷಟ್ । ಸಮಿತಿ । ಪದ್ಯಂತೇ । ಷಟ್ । ವೈ । ಋತವಃ । ಋತುಭಿರಿತ್ಯೃತು–ಭಿಃ । ಏವ । ಏನಮ್ । ಶಮಯತಿ ।

ಯತ್ । ಅನುಪರಿಕ್ರಾಮಮಿತ್ಯನು–ಪರಿಕ್ರಾಮಮ್ । ಜುಹುಯಾತ್ । ಅಂತರವಚಾರಿಣಮಿತ್ಯಂತಃ–ಅವಚಾರಿಣಮ್ ।

ರುದ್ರಮ್ । ಕುರ್ಯಾತ್ । ಅಥೋ ಇತಿ । ಖಲು । ಆಹುಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಷಟ್ ಸಂಪದ್ಯಂತೇ** | ಹೀಗೆ ಒಟ್ಟು ಆರು ಆಹುತಿಗಳಾಗುತ್ತವೆ. |
| **ಷಟ್ ವೈ ಋತವಃ ಋತುಭಿಃ** | ಋತುಗಳು ಆರಷ್ಟೆ. ಯಜಮಾನನು ಋತುಗಳಿಂದಲೂ |
| **ಏವ ಏನಮ್ ಶಮಯತಿ** | ಈ ರುದ್ರನನ್ನು ಶಾಂತಗೊಳಿಸುತ್ತಾನೆ. |

**ಹೋಮ ಮಾಡಬೇಕಾದ ಕ್ರಮ; ಪೂರ್ವಪಕ್ಷ; ಸಿದ್ಧಾಂತ**

| | |
|---|---|
| **ಯತ್ ಅನುಪರಿಕ್ರಾಮಮ್** | ಅನುಕ್ರಮವಾಗಿ ಸುತ್ತಲೂ ಸಂಚರಿಸುತ್ತಾ ಹೋಮ |
| **ಜುಹುಯಾತ್** | ವನ್ನು ಅನುಷ್ಠಿಸಿದರೆ |
| **ರುದ್ರಮ್ ಅಂತರವಚಾರಿಣಮ್** | ಅಗ್ನಿಕ್ಷೇತ್ರದ ಒಳಗೆ ರುದ್ರನನ್ನು ಸಂಚಾರವುಳ್ಳವನ |
| **ಕುರ್ಯಾತ್** | ನ್ನಾಗಿ ಮಾಡಿದವನಾಗುತ್ತಾನೆ (ಅದರಿಂದ ರುದ್ರನು ಪ್ರವೇಶಿಸಿ ತೊಂದರೆಯನ್ನುಂಟುಮಾಡಬಹುದು) ಆದಕ್ಕೆ ಅವಕಾಶವಿಲ್ಲದಂತೆ ಹೋಮ ಮಾಡಬೇಕೆಂಬುದು **ಪೂರ್ವಪಕ್ಷ.** |
| **ಅಥೋ ಖಲು ಆಹುಃ** | ಆದರೆ ಸಿದ್ಧಾಂತರೂಪವಾಗಿ ತಿಳಿದವರು ಹೀಗೆ ಹೇಳುತ್ತಾರೆ. |

---

ತ್ರೇಧಾವಿಭಾಗವನ್ನು ೧) ನಮಸ್ತೇ ರುದ್ರ..ನಮಃ ಕ್ಷತ್ತೃಭ್ಯಃ ೨) ಸಂಗ್ರಹೀತೃಭ್ಯಶ್ಚ...ನಮೋ ವರ್ಷ್ಯಾಯ ಚ ೩) ಅವರ್ಷ್ಯಾಯ ಚ...ತನ್ಮಸಿ ॥ ಎಂದು ಮಾಡಿ ಮೂರು ಭಾಗದಲ್ಲಿಯೂ ೬೬ ಮಂತ್ರಗಳಾಗುವುದರಿಂದ ಸಮಾನವೀರ್ಯಗಳು ಎಂದು ಹೇಳಿದ್ದಾರೆ.*

---

* ತ್ರೇಧಾವಿಭಾಗದ ಕೋಷ್ಟಕವು ಕೃ.ಯ. ವೇದ ಕನ್ನಡ ಪ್ರಕಾಶನ ಸಂಪುಟ–೧೧ರಲ್ಲಿದೆ.

ಕಸ್ಯಾಂ ವಾಽಹ ದಿಶಿ ರುದ್ರಃ ಕಸ್ಯಾಂ ವೇತ್ಯನುಪರಿಕ್ರಾಮಮೇವ ಹೋತವ್ಯ
ಮಪರಿವರ್ಗಮೇವೈನಗ್ಂ ಶಮಯತ್ಯೇ[ಶಮಯತಿ(೧೨)ಏತಾ]ತಾ ವೈ
ದೇವತಾಸ್ಸುವರ್ಗ್ಯಾ ಯಾ ಉತ್ತಮಾಸ್ತಾ ಯಜಮಾನಂ ವಾಚಯತಿ
ತಾಭಿರೇವೈನಗ್ಂ ಸುವರ್ಗಂ ಲೋಕಂ ಗಮಯತಿ

---

ಕಸ್ಯಾಮ್ । ವಾ । ಅಹ । ದಿಶಿ । ರುದ್ರಃ । ಕಸ್ಯಾಮ್ । ವಾ । ಇತಿ । ಅನುಪರಿಕ್ರಾಮಮಿತ್ಯನು-ಪರಿಕ್ರಾಮಮ್ । ಏವ । ಹೋತವ್ಯಮ್ । ಅಪರಿವರ್ಗಮಿತ್ಯಪರಿ-ವರ್ಗಮ್ । ಏವ । ಏನಮ್ । ಶಮಯತಿ । (೧೨) । ಏತಾಃ । ವೈ । ದೇವತಾಃ । ಸುವರ್ಗ್ಯಾ ಇತಿ ಸುವಃ-ಗ್ಯಾಃ । ಯಾಃ । ಉತ್ತಮಾ ಇತ್ಯುತ್-ತಮಾಃ । ತಾಃ । ಯಜಮಾನಮ್ । ವಾಚಯತಿ । ತಾಭಿಃ । ಏವ । ಏನಮ್ । ಸುವರ್ಗಮಿತಿ ಸುವಃ-ಗಮ್ । ಲೋಕಮ್ । ಗಮಯತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಕಸ್ಯಾಮ್ ವಾ ದಿಶಿ ರುದ್ರಃ ಅಹ ಕಸ್ಯಾಮ್ ವಾ ಇತಿ** | ರುದ್ರದೇವನು ಯಾವ ದಿಕ್ಕಿನಲ್ಲಿ ಇರುತ್ತಾನೆ, ಯಾವ ದಿಕ್ಕಿನಲ್ಲಿ ಇಲ್ಲವೆಂದು ಯಾರೂ ತಿಳಿಯಲಾರರು. |
| **ಅನುಪರಿಕ್ರಾಮಮ್ ಏವ ಹೋತವ್ಯಮ್** | (ಆದುದರಿಂದ) ಅನುಕ್ರಮವಾಗಿ ಸುತ್ತಾಡುತ್ತಲೇ ಹೋಮವನ್ನು ಮಾಡಬೇಕು. |
| **ಅಪರಿವರ್ಗಮ್ ಏನಮ್ ಶಮಯತಿ ಏವ** | ಹೀಗೆ ಮಾಡುವುದರಿಂದ ಎಲ್ಲೆಲ್ಲಿಯೂ ಇರುವ ರುದ್ರದೇವನನ್ನು ಶಾಂತನನ್ನಾಗಿ ಮಾಡುತ್ತಾನೆ. |
| **ಯಾಃ ಉತ್ತಮಾಃ ಏತಾಃ ವೈ ಸುವರ್ಗ್ಯಾಃ ದೇವತಾಃ** | 'ನಮೋ...ಪೃಥಿವ್ಯಾಮ್' 'ನಮೋ ರುದ್ರೇಭ್ಯಃ.. ಅಂತರಿಕ್ಷೇ' 'ನಮೋ...ದಿವಿ' ಎಂಬ ಈ ಅಂತ್ಯ ಮಂತ್ರಗಳಿಂದ/ಶ್ರೇಷ್ಠಮಂತ್ರಗಳಿಂದ ಪ್ರತಿಪಾದ್ಯರಾದ ದೇವತೆಗಳು ಸ್ವರ್ಗಹೇತುಗಳಾಗಿರುತ್ತಾರೆ. |
| **ತಾಃ ಯಜಮಾನಮ್ ವಾಚಯತಿ** | ಆ ಮಂತ್ರಗಳನ್ನು ಅಧ್ವರ್ಯುವು ಯಜಮಾನನಿಂದ ಹೇಳಿಸಬೇಕು. |
| **ತಾಭಿಃ ಏವ ಏನಮ್ ಸುವರ್ಗಮ್ ಲೋಕಮ್ ಗಮಯತಿ** | ಆ ದೇವತೆಗಳಿಂದಲೇ ಅಧ್ವರ್ಯುವು ಈ ಯಜಮಾನ ನನ್ನೂ ಸ್ವರ್ಗಲೋಕವನ್ನೂ ಹೊಂದಿಸುತ್ತಾನೆ (ಸ್ವರ್ಗ ಪ್ರಾಪ್ತಿಯಾಗುತ್ತದೆ) |

ಯಂ ದ್ವಿಷ್ಯಾತ್ತಸ್ಯ ಸಂಚರೇ ಪಶೂನಾಂ ನ್ಯಸ್ಯೇದ್ಯಃ ಪ್ರಥಮಃ ಪಶುರಭಿತಿಷ್ಠತಿ

ಸ ಆರ್ತಿಮಾರ್ಚ್ಛತಿ ॥ ೧೩-3 ॥

[ಪಶೂನಾಂ ಯಂತೋಽಗ್ರೇ ಜುಹೋತ್ಯಪರಿವರ್ಗಮೇವೈನಗ್‌ಂ ಶಮಯತಿ ತ್ರಿಗ್‌ಂಶಚ್ಚ ॥]

---

ಯಮ್ । ದ್ವಿಷ್ಯಾತ್ । ತಸ್ಯ । ಸಂಚರ ಇತಿ ಸಮ್-ಚರೇ । ಪಶೂನಾಮ್ । ನೀತಿ । ಅಸ್ಯೇತ್ । ಯಃ । ಪ್ರಥಮಃ ।

ಪಶುಃ । ಅಭಿತಿಷ್ಠತೀತ್ಯಭಿ-ತಿಷ್ಠತಿ । ಸಃ । ಆರ್ತಿಮ್ । ಏತಿ । ಋಚ್ಛತಿ ॥ (೧೩) ॥

---

| ಬ್ರಾಹ್ಮಣಭಾಗ | ವಿವರಣೆ |
|---|---|

ಅರ್ಕಪರ್ಣವಿಸರ್ಜನವಿಧಿ

| | |
|---|---|
| **ಯಮ್ ದ್ವಿಷ್ಯಾತ್** | ಯಜಮಾನನು ಯಾರನ್ನು ದ್ವೇಷಿಸುವನೋ |
| **ತಸ್ಯ ಪಶೂನಾಮ್ ಸಂಚರೇ ನ್ಯಸ್ಯೇತ್** | ಆ ಶತ್ರುವಿನ ಪಶುಗಳು ಸಂಚರಿಸುವ ಮಾರ್ಗದಲ್ಲಿ (ಅರ್ಕಪರ್ಣವನ್ನು ಹಾಕಬೇಕು) |
| **ಯಃ ಪ್ರಥಮಃ ಪಶುಃ ಅಭಿತಿಷ್ಠತಿ** | ಯಜಮಾನನ ಶತ್ರುವಿನ ಪಶುಗಳಲ್ಲಿ ಯಾವ ಪಶುವು ಮೊದಲು ಅದನ್ನು ಸ್ಪರ್ಶಿಸುತ್ತದೆಯೋ |
| **ಸಃ ಆರ್ತಿಮ್ ಆರ್ಚ್ಛತಿ** | ಅದು ಪೀಡೆಗೆ ಒಳಗಾಗುತ್ತದೆ. |

---

ಆರು ಆಹುತಿಗಳನ್ನು ಸುತ್ತಲೂ ಸಂಚರಿಸುತ್ತಾ ಮಾಡಬೇಕೆಂಬ ಪಕ್ಷವನ್ನು ಹೇಳಿ ಅದರಲ್ಲಿ ದೋಷವನ್ನು ಹೇಳಿ ಪೂರ್ವಪಕ್ಷವನ್ನು ನಿರಾಕರಿಸಿ ಪುನಃ ಸುತ್ತಲೂ ಸಂಚರಿಸುತ್ತಾ ಹವನವನ್ನು ಮಾಡಬೇಕೆಂಬ ಪಕ್ಷವನ್ನೇ ಹೇಳಲಾಗಿದೆ. ಹೀಗೆ ಮಾಡುವುದರಿಂದ ಎಲ್ಲೆಲ್ಲಿಯೂ ಇರುವ ರುದ್ರನು ಶಾಂತನಾಗುವನು. **'ಅಥೋ'** ಎಂಬ ಶಬ್ದವು ಪಕ್ಷಾಂತರಸೂಚಕವಾಗಿದೆ.

ಕಡೆಯ ಮೂರು ಮಂತ್ರಗಳನ್ನು ಯಜಮಾನನು ಹೇಳಬೇಕು. ಇದು ವಾಚನವಿಧಿ. ಯಜಮಾನನು ತಿಳಿದವನಾದರೂ ವಾಚನ ಮಾಡಿಸಬೇಕು. ಇದು ಶಾಸ್ತ್ರಸಿದ್ಧಾಂತವಾಗಿದೆ.

ರುದ್ರಹೋಮವನ್ನು ಮಾಡಲು ಸಾಧನವಾದ ಅರ್ಕಪರ್ಣವನ್ನು ಯಜಮಾನನ ದ್ವೇಷಿಯ ಪಶುಗಳ ಸಂಚಾರ ಮಾರ್ಗದಲ್ಲಿ ಹಾಕಬೇಕು. ಅದನ್ನು ಸ್ಪರ್ಶಿಸುವ ಪಶುವು ಪೀಡಿತವಾಗುತ್ತದೆ.

## ॥ ಚತುರ್ಥೋಽನುವಾಕಃ ॥

ಅಶ್ಮನ್ನೂರ್ಜಮಿತಿ ಪರಿಷಿಂಚತಿ ಮಾರ್ಜಯತ್ಯೇವೈನಮಥೋ ತರ್ಪಯತ್ಯೇವ
ಸ ಏನಂ ತೃಪ್ತೋಽಕ್ಷುಧ್ಯನ್ನಶೋಚನ್ನಮುಷ್ಮಿಲ್ಲೋಕ ಉಪ ತಿಷ್ಠತೇ

---

ಅಶ್ಮನ್ । ಊರ್ಜಮ್ । ಇತಿ । ಪರೀತಿ । ಸಿಂಚತಿ । ಮಾರ್ಜಯತಿ । ಏವ । ಏನಮ್ । ಅಥೋ ಇತಿ । ತರ್ಪಯತಿ । ಏವ । ಸಃ । ಏನಮ್ । ತೃಪ್ತಃ । ಅಕ್ಷುಧ್ಯನ್ । ಅಶೋಚನ್ । ಅಮುಷ್ಮಿನ್ । ಲೋಕೇ । ಉಪೇತಿ । ತಿಷ್ಠತೇ ।

---

ಮೂರನೆಯ ಅನುವಾಕದಲ್ಲಿ ಶತರುದ್ರೀಯಹೋಮಕ್ಕೆ ಸಂಬಂಧಿಸಿದ ವಿಷಯಗಳು ಉಕ್ತವಾಗಿವೆ. ಈ ನಾಲ್ಕನೆಯ ಅನುವಾಕದಲ್ಲಿ ಪರಿಷೇಚನ, ವಿಕರ್ಷಣ–ಮುಂತಾದವುಗಳು ಉಕ್ತವಾಗಿವೆ. ಅದಕ್ಕೆ ಸಂಬಂಧಿಸಿದ ಮಂತ್ರಗಳು ನಾಲ್ಕನೆಯ ಕಾಂಡದ ಆರನೆಯ ಪ್ರಪಾಠಕದಲ್ಲಿ ಇವೆ. ಅವುಗಳ ವಿನಿಯೋಗವು ಇಲ್ಲಿ ಉಕ್ತವಾಗಿದೆ.

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ಪರಿಷೇಚನವಿಧಿ; ಅರ್ಥವಾದ** |
| **ಅಶ್ಮನ್ನೂರ್ಜಮ್ ಇತಿ ಪರಿಷಿಂಚತಿ** | **'ಅಶ್ಮನ್ನೂರ್ಜಮ್'** ಎಂಬ ಮಂತ್ರದಿಂದ ಪಕ್ಷಿರೂಪವಾದ ಅಗ್ನಿಗೆ/ಚಿತಿಗೆ ಪರಿಷೇಚನ ಮಾಡಬೇಕು. |
| **ಏನಮ್ ಮಾರ್ಜಯತಿ ಏವ** | ಈ ಪರಿಷೇಚನದಿಂದ ಯಜಮಾನನು ಅಗ್ನಿಯನ್ನು ಶುದ್ಧಗೊಳಿಸಿದವನೇ ಆಗುತ್ತಾನೆ. |
| **ಅಥೋ ತರ್ಪಯತಿ ಏವ** | ಮತ್ತು ಅಗ್ನಿಯನ್ನು ತೃಪ್ತಿಪಡಿಸಿದವನಾಗುತ್ತಾನೆ. |
| **ತೃಪ್ತಃ ಅಕ್ಷುಧ್ಯನ್ ಅಶೋಚನ್ ಸಃ** | ತೃಪ್ತನಾದವನೂ, ಹಸಿವನ್ನು ನೀಗಿಕೊಂಡು ಇರುವವನೂ, ತಾಪರಹಿತನಾಗಿಯೂ ಇರುವ ಅಗ್ನಿಯು |
| **ಏನಮ್ ಅಮುಷ್ಮಿನ್ ಲೋಕೇ ಉಪತಿಷ್ಠತೇ** | ಈ ಯಜಮಾನನನ್ನು ಸ್ವರ್ಗಲೋಕದಲ್ಲಿ ಸೇವಿಸುತ್ತಾನೆ. |

ತೃಪ್ಯತಿ ಪ್ರಜಯಾ ಪಶುಭಿರ್ಯ ಏವಂ ವೇದ ತಾಂ ನ ಇಷಮೂರ್ಜಂ ಧತ್ತ ಮರುತಸ್ಸಗ್ಂರರಾಣಾ ಇತ್ಯಾಹಾನ್ನಂ ವಾ ಊರ್ಗನ್ನಂ ಮರುತೋಽನ್ನಮೇವಾವ ರುಂಧೇಽಶ್ಮಗ್ಗ್ಂಸ್ತೇ ಕ್ಷುದಮುಂ ತೇ ಶುಗೃಚ್ಛತು[ಶುಕ್(೧೪)ಋಚ್ಛತು] ಯಂ ದ್ವಿಷ್ಮ ಇತ್ಯಾಹ

---

ತೃಪ್ಯತಿ । ಪ್ರಜಯೇತಿ ಪ್ರ–ಜಯಾ । ಪಶುಭಿರಿತಿ ಪಶು–ಭಿಃ । ಯಃ । ಏವಮ್ । ವೇದ । ತಾಮ್ । ನಃ । ಇಷಮ್ । ಊರ್ಜಮ್ । ಧತ್ತ । ಮರುತಃ । ಸಗ್ಂರರಾಣಾ ಇತಿ ಸಮ್–ರರಾಣಾಃ । ಇತಿ । ಆಹ । ಅನ್ನಮ್ । ವೈ । ಊರ್ಕ್ । ಅನ್ನಮ್ । ಮರುತಃ । ಅನ್ನಮ್ । ಏವ । ಅವೇತಿ । ರುಂಧೇ । ಅಶ್ಮನ್ನ್ । ತೇ । ಕ್ಷುತ್ । ಅಮುಮ್ । ತೇ । ಶುಕ್ । (೧೪) । ಋಚ್ಛತು । ಯಮ್ । ದ್ವಿಷ್ಮಃ । ಇತಿ । ಆಹ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯಃ ಏವಮ್ ವೇದ ಪ್ರಜಯಾ ಪಶುಭಿಃ ತೃಪ್ಯತಿ** | ಯಾವನು ಹೀಗೆ ತಿಳಿದಿರುತ್ತಾನೆಯೋ ಅವನು ಪ್ರಜೆ ಯಿಂದಲೂ(ಮಕ್ಕಳಿಂದಲೂ)ಗವಾದಿಪಶುಗಳಿಂದಲೂ ಸಂಪನ್ನನಾಗುತ್ತಾನೆ. |

ಮಂತ್ರಾಂಶದ ವಿವರಣೆ

| | |
|---|---|
| **ತಾಮ್ ನಃ ಇಷಮ್ ಊರ್ಜಮ್ ಧತ್ತ ಮರುತಃ ಸಗ್ಂರರಾಣಾಃ ಇತಿ ಆಹ** | 'ಅಗ್ನ್ಯಾದಿದೇವತೆಗಳೇ! ನೀವು ಚೆನ್ನಾಗಿರುವ ದಾನ ಶೀಲರು. ಅನ್ನದಾತರೂ, ಬಲದಾತರೂ ಆಗಿರುತ್ತೀರಿ. ನಮಗೆ ಅನ್ನವೂ ಬಲವೂ ಸಿಗುವಂತೆ ಮಾಡಿರಿ.' ಎಂದು ಈ ಮಂತ್ರಭಾಗವು ಹೇಳುತ್ತದೆ. |
| **ಅನ್ನಮ್ ವೈ ಊರ್ಕ್** | ಅನ್ನರಸವೇ ಬಲವಾಗಿದೆ/ಬಲಕ್ಕೆ ಕಾರಣವಾಗಿದೆ. |
| **ಅನ್ನಮ್ ಮರುತಃ** | (ಅನ್ನಸಂಪಾದಕರಾದುದರಿಂದ)ಮರುತರೂ ಅನ್ನವೇ. |
| **ಅನ್ನಮ್ ಏವ ಅವರುಂಧೇ** | ('ಊರ್ಕ್' 'ಮರುತಃ' ಎಂಬ ಎರಡು ಶಬ್ದಗಳ ಪಾಠವಿ ರುವುದರಿಂದ)ಯಜಮಾನನು ಅನ್ನವನ್ನು ಹೊಂದುವನು. |
| **ಅಶ್ಮಗ್ಗ್ಂಸ್ತೇ ಕ್ಷುದಮುಂ ತೇ ಶುಗೃಚ್ಛತು ಯಂ ದ್ವಿಷ್ಮಃ ಇತಿ ಆಹ** | 'ಕಲ್ಲಿನಂತಿರುವ ಅಗ್ನಿಯೇ! ನಾವು ಯಾವನನ್ನು ದ್ವೇಷಿ ಸುವೆವೋ ಅವನನ್ನು ನಿನ್ನ ಹಸಿವೂ, ಸಂತಾಪವೂ ಬಾಧಿಸಲಿ' ಎಂದು ಈ ಮಂತ್ರಭಾಗವು ಹೇಳುತ್ತದೆ. |

ಯಮೇವ ದ್ವೇಷ್ಟಿ ತಮಸ್ಯ ಕ್ಷುಧಾ ಚ ಶುಚಾ ಚಾರ್ಪಯತಿ ತ್ರಿಃ ಪರಿಷಿಂಚನ್ಪರ್ಯೇತಿ ತ್ರಿವೃದ್ವಾ ಅಗ್ನಿರ್ಯಾವಾನೇವಾಗ್ನಿಸ್ತಸ್ಯ ಶುಚಗ್ಂ ಶಮಯತಿ ತ್ರಿಃ ಪುನಃ ಪರ್ಯೇತಿ ಷಟ್ಥ್ಸಂಪದ್ಯಂತೇ

---

ಯಮ್ । ಏವ । ದ್ವೇಷ್ಟಿ । ತಮ್ । ಅಸ್ಯ । ಕ್ಷುಧಾ । ಚ । ಶುಚಾ । ಚ । ಅರ್ಪಯತಿ । ತ್ರಿಃ । ಪರಿಷಿಂಚನ್ನಿತಿ ಪರಿ–ಸಿಂಚನ್ನ್ । ಪರೀತಿ । ಏತಿ । ತ್ರಿವೃದಿತಿ ತ್ರಿ–ವೃತ್ । ವೈ । ಅಗ್ನಿಃ । ಯಾವಾನ್ । ಏವ । ಅಗ್ನಿಃ । ತಸ್ಯ । ಶುಚಮ್ । ಶಮಯತಿ । ತ್ರಿಃ । ಪುನಃ । ಪರೀತಿ । ಏತಿ । ಷಟ್ । ಸಮಿತಿ । ಪದ್ಯಂತೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಯಮ್ ಏವ ದ್ವೇಷ್ಟಿ | ಯಜಮಾನನು ಯಾರನ್ನು ದ್ವೇಷಿಸುತ್ತಾನೆಯೋ |
| ತಮ್ ಅಸ್ಯ ಕ್ಷುಧಾ ಚ ಶುಚಾ ಚ ಅರ್ಪಯತಿ | ಅವನನ್ನು ಈ ಯಜಮಾನನ ಹಸಿವು ಮತ್ತು ಸಂತಾಪಗಳಿಂದ ಜೋಡಿಸುತ್ತಾನೆ. |

ಪರಿಷೇಚನಕಾಲದ ಪ್ರದಕ್ಷಿಣಾವೃತ್ತಿಯ ವಿಧಿ; ಅರ್ಥವಾದ

| ಬ್ರಾಹ್ಮಣಭಾಗ | ವಿವರಣೆ |
|---|---|
| ಪರಿಷಿಂಚನ್ ತ್ರಿಃ ಪರ್ಯೇತಿ | ಯಜಮಾನನು ಮೂರು ಬಾರಿ ಅಗ್ನಿಯನ್ನು ಪರಿಷೇಚನ ಮಾಡುತ್ತಾ ಪ್ರದಕ್ಷಿಣೆ ಮಾಡುತ್ತಾನೆ./ ಮಾಡಬೇಕು. |
| ಅಗ್ನಿಃ ತ್ರಿವೃತ್ ವೈ | ಅಗ್ನಿಯು ಆಹವನೀಯ, ಗಾರ್ಹಪತ್ಯ, ದಕ್ಷಿಣಾಗ್ನಿಗಳೆಂದು ತ್ರಿಗುಣಾತ್ಮಕನಾಗಿರುತ್ತಾನೆ. |
| ಯಾವಾನ್ ಏವ ಅಗ್ನಿಃ | ಅಗ್ನಿಯು ಎಷ್ಟು ಪ್ರಮಾಣದಲ್ಲಿರುವನೋ |
| ತಸ್ಯ ಶುಚಮ್ ಶಮಯತಿ | ಆ ತ್ರಿಗುಣಾತ್ಮಕನಾದ ಅಗ್ನಿಯ ಸಂತಾಪವನ್ನೇ ಹೋಗಲಾಡಿಸಿದವನಾಗುತ್ತಾನೆ. |

ಪರಿಷೇಚನರಹಿತವಾದ ಪ್ರದಕ್ಷಿಣವಿಧಿ; ಅರ್ಥವಾದ

| ಬ್ರಾಹ್ಮಣಭಾಗ | ವಿವರಣೆ |
|---|---|
| ತ್ರಿಃ ಪುನಃ ಪರ್ಯೇತಿ ಷಟ್ ಸಂಪದ್ಯಂತೇ | ಯಜಮಾನನು ಪರಿಷೇಚನವಿಲ್ಲದೆ ಮೂರು ಬಾರಿ ಪ್ರದಕ್ಷಿಣೆ ಮಾಡಬೇಕು. ಹೀಗಾಗಿ ಆರು ಪ್ರದಕ್ಷಿಣೆಗಳು ಆಗುತ್ತವೆ. |

ಷಡ್ವಾ ಋತವ ಋತುಭಿರೇವಾಸ್ಯ ಶುಚಗ್‌ಂ ಶಮಯತ್ಯಪಾಂ ವಾ ಏತತ್ಪುಷ್ಪಂ

ಯದ್ವೇತಸೋಽಪಾಗ್‌ಂ [..ಸೋಽಪಾಮ್(೧೫)] ಶರೋಽವಕಾ

ವೇತಸಶಾಖಯಾ ಚಾವಕಾಭಿಶ್ಚ ವಿ ಕರ್‌ಷತ್ಯಾಪೋ ವೈ

ಶಾಂತಾಶ್ಶಾಂತಾಭಿರೇವಾಸ್ಯ ಶುಚಗ್‌ಂ ಶಮಯತಿ

---

ಷಟ್ । ವೈ । ಋತವಃ । ಋತುಭಿರಿತ್ಯೃತು-ಭಿಃ । ಏವ । ಅಸ್ಯ । ಶುಚಮ್ । ಶಮಯತಿ । ಅಪಾಮ್ । ವೈ । ಏತತ್ ।

ಪುಷ್ಪಮ್ । ಯತ್ । ವೇತಸಃ । ಅಪಾಮ್ । (೧೫) । ಶರಃ । ಅವಕಾಃ । ವೇತಸಶಾಖಯೇತಿ ವೇತಸ-ಶಾಖಯಾ ।

ಚ । ಅವಕಾಭಿಃ । ಚ । ವೀತಿ । ಕರ್‌ಷತಿ । ಆಪಃ । ವೈ । ಶಾಂತಾಃ । ಶಾಂತಾಭಿಃ । ಏವ । ಅಸ್ಯ । ಶುಚಮ್ । ಶಮಯತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಋತವಃ ಷಟ್ ವೈ** | ಋತುಗಳು ಆರಷ್ಟೆ. |
| **ಋತುಭಿಃ ಏವ ಅಸ್ಯ ಶುಚಮ್ ಶಮಯತಿ** | ಆದುದರಿಂದ ಯಜಮಾನನು ಋತುಗಳಿಂದಲೇ ಅಗ್ನಿಯ ತಾಪವನ್ನು ಪರಿಹರಿಸಿದವನಾಗುತ್ತಾನೆ. |

**ವಿಕರ್ಷಣದ ವಿಧಿ; ಅರ್ಥವಾದ**

| | |
|---|---|
| **ಯತ್ ವೇತಸಃ ಏತತ್ ಅಪಾಮ್ ಪುಷ್ಪಮ್ ವೈ** | ವೇತಸವೆಂಬುದು (ನೀರಿರುವ ಪ್ರದೇಶದಲ್ಲಿ ಬೆಳೆಯುವ ಪೌಂಸೆ ಗಿಡ) ನೀರಿನ ಹೂವಿದ್ದಂತೆ. |
| **ಅಪಾಮ್ ಶರಃ ಅವಕಾಃ** | ಪಾಚಿಯು ನೀರಿನ ಸಾರವಾಗಿದೆ. |
| **ವೇತಸಶಾಖಯಾ ಚ ಅವಕಾಭಿಃ ಚ ವಿಕರ್‌ಷತಿ** | ಅಧ್ವರ್ಯುವು ವೇತಸಶಾಖೆಯಿಂದಲೂ, ಪಾಚಿಯಿಂದಲೂ (ಅಗ್ನಿಚಿತಿಯ ಮೇಲ್ಭಾಗವನ್ನು ಒಟ್ಟುಗೂಡಿಸುವಂತೆ) ಗುಡಿಸಬೇಕು. |
| **ಆಪಃ ಶಾಂತಾಃ ವೈ** | ನೀರು ಶಾಂತವಾದುದಷ್ಟೆ. |
| **ಶಾಂತಾಭಿಃ ಏವ ಅಸ್ಯ ಶುಚಮ್ ಶಮಯತಿ** | ಶಾಂತವಾಗಿರುವ/ತಾಪ ಹಾರಕವಾಗಿರುವ ನೀರಿನಿಂದ ಮಾಡುವ (ಈ ವಿಕರ್ಷಣದಿಂದ) ಶಾಂತಿಪ್ರತಿಪಾದಕವಾದ ಋಕ್ಕುಗಳಿಂದ ಅಗ್ನಿಯ ಸಂತಾಪವನ್ನು ಅಧ್ವರ್ಯುವು ಪರಿಹರಿಸುತ್ತಾನೆ. |

ಯೋ ವಾ ಅಗ್ನಿಂ ಚಿತಂ ಪ್ರಥಮಃ ಪಶುರಧಿಕ್ರಾಮತೀಶ್ವರೋ ವೈ ತಗ್ಂ ಶುಚಾ ಪ್ರದಹೋ ಮಂಡೂಕೇನ ವಿ ಕರ್ಷತ್ಯೇಷ ವೈ ಪಶೂನಾಮನುಪಜೀವನೀಯೋ ನ ವಾ ಏಷ ಗ್ರಾಮ್ಯೇಷು ಪಶುಷು ಹಿತೋ ನಾऽऽರಣ್ಯೇಷು ತಮೇವ ಶುಚಾऽರ್ಪಯ–

---

ಯಃ। ವೈ। ಅಗ್ನಿಮ್। ಚಿತಮ್। ಪ್ರಥಮಃ। ಪಶುಃ। ಅಧಿಕ್ರಾಮತೀತ್ಯಧಿ–ಕ್ರಾಮತಿ। ಈಶ್ವರಃ। ವೈ। ತಮ್। ಶುಚಾ। ಪ್ರದಹ ಇತಿ ಪ್ರ–ದಹಃ। ಮಂಡೂಕೇನ। ವೀತಿ। ಕರ್ಷತಿ। ಏಷಃ। ವೈ। ಪಶೂನಾಮ್। ಅನುಪಜೀವನೀಯ ಇತ್ಯನುಪ–ಜೀವನೀಯಃ। ನ। ವೈ। ಏಷಃ। ಗ್ರಾಮ್ಯೇಷು। ಪಶುಷು। ಹಿತಃ। ನ। ಆರಣ್ಯೇಷು। ತಮ್। ಏವ। ಶುಚಾ। ಅರ್ಪಯತಿ।

---

ಬ್ರಾಹ್ಮಣಭಾಗ ವಿವರಣೆ

ಮಂಡೂಕವಿಕರ್ಷಣವಿಧಿ; ಅರ್ಥವಾದ

| | |
|---|---|
| **ಯಃ ವೈ ಚಿತಮ್ ಅಗ್ನಿಮ್ ಪ್ರಥಮಃ ಪಶುಃ ಅಧಿಕ್ರಾಮತಿ** | ಯಾವ ಪಶುವು ಚಯನ ಮಾಡಿರುವ ಅಗ್ನಿಯನ್ನು ಮೊದಲು ಮೆಟ್ಟುತ್ತದೆಯೋ |
| **ತಮ್ ಶುಚಾ ಪ್ರದಹಃ ಈಶ್ವರಃ ವೈ** | (ಅಗ್ನಿಯು) ಆ ಪಶುವನ್ನು ಸುಡಲು/ಸಂಕಟಪಡಿಸಲು ಸಮರ್ಥನಾಗಿರುತ್ತಾನೆ. |
| **ಮಂಡೂಕೇನ ವಿ ಕರ್ಷತಿ** | (ಈ ತೊಂದರೆಯನ್ನು ಪರಿಹರಿಸಲು) ಕಪ್ಪೆಯಿಂದ ವಿಕರ್ಷಣ ಮಾಡಬೇಕು. |
| **ಏಷಃ ಪಶೂನಾಮ್ ಅನುಪಜೀವನೀಯಃ ವೈ** | ಪಶುಗಳ ಪೈಕಿ ಕಪ್ಪೆಯು ಯಾರಿಂದಲೂ(ಹಸು, ಎಮ್ಮೆಗಳಂತೆ)ಜೀವನಾಶ್ರಯವಾಗಿ ಆಶ್ರಯಿಸಲ್ಪಡುವುದಿಲ್ಲ. |
| **ಏಷಃ ಗ್ರಾಮ್ಯೇಷು ಪಶುಷು ನ ವೈ ಹಿತಃ** | ಈ ಮಂಡೂಕವು ಗ್ರಾಮ್ಯಪಶುಗಳಲ್ಲಿ (ಸೇರಿ) (ಮಾನವನಿಗೆ) ಹಿತಕಾರಿಯಲ್ಲ. |
| **ಆರಣ್ಯೇಷು ನ** ಹಿತಃ | ಆರಣ್ಯಪಶುಗಳಲ್ಲಿ (ಸೇರಿ) (ಮಾನವನಿಗೆ) ಹಿತಕಾರಿಯಲ್ಲ. |
| **ತಮ್ ಏವ ಶುಚಾ ಅರ್ಪಯತಿ** | ಅದನ್ನೇ ಅಧ್ವರ್ಯುವು ಸಂತಾಪಪಡುವಂತೆ ಮಾಡುತ್ತಾನೆ. |

-ತ್ಯಷ್ಟಾಭಿರ್ವಿ ಕರ್ಷ[ಕರ್ಷತಿ(೧೬)ಅಷ್ಟಾಕ್ಷರಾ]ತ್ಯಷ್ಟಾಕ್ಷರಾ ಗಾಯತ್ರೀ

ಗಾಯತ್ರೋಽಗ್ನಿರ್ಯಾವಾನೇವಾಗ್ನಿಸ್ತಸ್ಯ ಶುಚಗ್ಂ ಶಮಯತಿ

ಪಾವಕವತೀಭಿರನ್ನಂ ವೈ ಪಾವಕೋಽನ್ನೇನೈವಾಸ್ಯ ಶುಚಗ್ಂ ಶಮಯತಿ

---

ಅಷ್ಟಾಭಿಃ । ವೀತಿ । ಕರ್ಷತಿ । (೧೬) । ಅಷ್ಟಾಕ್ಷರೇತ್ಯಷ್ಟಾ-ಅಕ್ಷರಾ । ಗಾಯತ್ರೀ । ಗಾಯತ್ರಃ । ಅಗ್ನಿಃ । ಯಾವಾನ್ । ಏವ । ಅಗ್ನಿಃ । ತಸ್ಯ । ಶುಚಮ್ । ಶಮಯತಿ । ಪಾವಕವತೀಭಿರಿತಿ ಪಾವಕ-ವತೀಭಿಃ । ಅನ್ನಮ್ । ವೈ । ಪಾವಕಃ । ಅನ್ನೇನ । ಏವ । ಅಸ್ಯ । ಶುಚಮ್ । ಶಮಯತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ವಿಕರ್ಷಣಮಂತ್ರಸಂಖ್ಯಾವಿಧಿ; ಅರ್ಥವಾದ** |
| **ಅಷ್ಟಾಭಿಃ ವಿಕರ್ಷತಿ** | **'ಸಮುದ್ರಸ್ಯ ತ್ವಾ'** ಮುಂತಾದ ಎಂಟು ಮಂತ್ರಗಳಿಂದ ವಿಕರ್ಷಣವನ್ನು ಅನುಷ್ಠಿಸಬೇಕು. |
| **ಅಷ್ಟಾಕ್ಷರಾ ಗಾಯತ್ರೀ** | ಗಾಯತ್ರಿಯು ಎಂಟು ಅಕ್ಷರಗಳಿಂದ ಕೂಡಿದೆ. |
| **ಅಗ್ನಿಃ ಗಾಯತ್ರಃ** | ಅಗ್ನಿಯೂ (ಪ್ರಜಾಪತಿಯ ಮುಖದಿಂದ ಜನಿಸಿರುವುದರಿಂದ) ಗಾಯತ್ರೀಸಂಬಂಧಿಯಾಗಿದೆ. |
| **ಯಾವಾನ್ ಏವ ಅಗ್ನಿಃ** | ಅಗ್ನಿಯು ಎಷ್ಟಿರುವನೋ(ಆಹವನೀಯ, ಗಾರ್ಹಪತ್ಯ ಮತ್ತು ದಕ್ಷಿಣಾಗ್ನಿ ಎಂದು ತ್ರಿಗುಣಾತ್ಮಕ) |
| **ತಸ್ಯ ಶುಚಮ್ ಶಮಯತಿ** | ಅಂತಹ ಗುಣಸಂಪನ್ನನಾದ ಅಗ್ನಿಯ ಸಂತಾಪವನ್ನು ಯಜಮಾನನು ಸಂಪೂರ್ಣವಾಗಿ ಪರಿಹರಿಸಿದವನಾಗುತ್ತಾನೆ. |
| **ಪಾವಕವತೀಭಿಃ** ವಿಕರ್ಷತಿ | **'ಪಾವಕೋ ಅಸ್ಮಭ್ಯಗ್ಂ ಶಿವೋ ಭವ'** ಮೊದಲಾದ ಪಾವಕಶಬ್ದಯುಕ್ತವಾದ ಮಂತ್ರಗಳಿಂದ ವಿಕರ್ಷಣವನ್ನು ಮಾಡಬೇಕು. |
| **ಪಾವಕಃ ಅನ್ನಮ್ ವೈ** | ಅಗ್ನಿಯು ಅನ್ನಪಚನಹೇತುವಾಗಿ ಅನ್ನಸ್ವರೂಪನಾಗಿರುತ್ತಾನೆ. |
| **ಅನ್ನೇನ ಏವ ಅಸ್ಯ ಶುಚಮ್ ಶಮಯತಿ** | (ಈ ಮಂತ್ರಗಳಿಂದ ವಿಕರ್ಷಣವನ್ನು ಮಾಡಿದ ಯಜಮಾನನು) ಅನ್ನದಿಂದಲೇ ಈ ಅಗ್ನಿಯ ಸಂತಾಪವನ್ನು ಹೋಗಲಾಡಿಸಿದವನಾಗುತ್ತಾನೆ. |

ಮೃತ್ಯುರ್ವಾ ಏಷ ಯದಗ್ನಿರ್ಬ್ರಹ್ಮಣ ಏತದ್ರೂಪಂ ಯತ್ಕೃಷ್ಣಾಜಿನಂ ಕಾರ್ಷ್ಣೀ

ಉಪಾನಹಾವುಪ ಮುಂಚತೇ ಬ್ರಹ್ಮಣೈವ ಮೃತ್ಯೋರಂತರ್ಧತ್ತೇಽಂತ

ರ್ಮೃತ್ಯೋರ್ಧತ್ತೇಽಂತರನ್ನಾದ್ಯಾದಿತ್ಯಾಹುರನ್ಯಾಮುಪಮುಂಚತೇಽನ್ಯಾ-

---

ಮೃತ್ಯುಃ । ವೈ । ಏಷಃ । ಯತ್ । ಅಗ್ನಿಃ । ಬ್ರಹ್ಮಣಃ । ಏತತ್ । ರೂಪಮ್ । ಯತ್ । ಕೃಷ್ಣಾಜಿನಮಿತಿ ಕೃಷ್ಣ-ಅಜಿನಮ್ । ಕಾರ್ಷ್ಣೀ ಇತಿ । ಉಪಾನಹೌ । ಉಪೇತಿ । ಮುಂಚತೇ । ಬ್ರಹ್ಮಣಾ । ಏವ । ಮೃತ್ಯೋಃ । ಅಂತಃ । ಧತ್ತೇ । ಅಂತಃ । ಮೃತ್ಯೋಃ । ಧತ್ತೇ । ಅಂತಃ । ಅನ್ನಾದ್ಯಾದಿತ್ಯನ್ನ-ಅದ್ಯಾತ್ । ಇತಿ । ಆಹುಃ । ಅನ್ಯಾಮ್ । ಉಪಮುಂಚತ ಇತ್ಯುಪ-ಮುಂಚತೇ । ಅನ್ಯಾಮ್ । ನ ।

---

ಬ್ರಾಹ್ಮಣಭಾಗ ವಿವರಣೆ

ಕೃಷ್ಣಾಜಿನದ ಪಾದುಕೆಗಳನ್ನು ಧರಿಸುವ ವಿಧಿ; ಅರ್ಥವಾದ

| | |
|---|---|
| ಯತ್ ಅಗ್ನಿಃ ಏಷಃ ಮೃತ್ಯುಃ ವೈ | ಈ ಅಗ್ನಿಯೆಂಬುದು ಮೃತ್ಯುಸ್ವರೂಪವಾಗಿದೆ. |
| ಯತ್ ಕೃಷ್ಣಾಜಿನಮ್ ಏತತ್ ಬ್ರಹ್ಮಣಃ ರೂಪಮ್ | ಕೃಷ್ಣಾಜಿನವೆಂಬುದು ವೇದದ ಸ್ವರೂಪವಾಗಿದೆ. |
| ಕಾರ್ಷ್ಣೀ ಉಪಾನಹೌ ಉಪ ಮುಂಚತೇ | ಯಜಮಾನನು ಕೃಷ್ಣಾಜಿನದಿಂದ ಮಾಡಿರುವ ಪಾದುಕೆಗಳನ್ನು ಧರಿಸಬೇಕು. |
| ಬ್ರಹ್ಮಣಾ ಏವ ಮೃತ್ಯೋಃ ಅಂತಃ ಧತ್ತೇ | ಯಜಮಾನನು ಹೀಗೆ ಮಾಡುವುದರಿಂದ ಮೃತ್ಯುವಿಗೆ ಕಾಣಿಸದವನಾಗುತ್ತಾನೆ/ಅಡಗುತ್ತಾನೆ. |

ಒಂದು ಪಾದುಕೆಯನ್ನು ಧಾರಣ ಮಾಡುವ ವಿಧಿ; ಅರ್ಥವಾದ

| | |
|---|---|
| ಮೃತ್ಯೋಃ ಅಂತಃ ಧತ್ತೇ | (ಬಲ್ಲವರು) (ಕೃಷ್ಣಾಜಿನದ ಪಾದುಕೆಗಳ ಧಾರಣದಿಂದ) 'ಮೃತ್ಯುವಿಗೆ ಕಾಣದಂತಾಗುತ್ತಾನೆ. |
| ಅನ್ನಾದ್ಯಾತ್ ಅಂತಃ ಧತ್ತೇ ಇತಿ ಆಹುಃ | (ಆದರೆ ಶ್ರೇಷ್ಠವಾದ) ಅನ್ನಾದಿಗಳಿಂದಲೂ ಅಡಗಿದವನಾಗಿ ಅವು ಇಲ್ಲದಂತೆಯೂ ಮಾಡಿಕೊಳ್ಳುತ್ತಾನೆ, ಎಂದು ಹೇಳುತ್ತಾರೆ. |
| ಅನ್ಯಾಮ್ ಉಪಮುಂಚತೇ | (ಆದುದರಿಂದ ಈ ದೋಷಪರಿಹಾರಕ್ಕಾಗಿ) ಒಂದು ಪಾದುಕೆಯನ್ನು ಧರಿಸಬೇಕು. |
| ಅನ್ಯಾಮ್ ನ ಉಪಮುಂಚತೇ | ಇನ್ನೊಂದು ಪಾದುಕೆಯನ್ನು ಧರಿಸಬಾರದು. |

–ನ್ನಾಂತ[ಅಂತಃ(೧೭)ಏವ]ರೇವ ಮೃತ್ಯೋರ್ಧತ್ತೇಽವಾನ್ನಾದ್ಯಗ್ಂ ರುಂಧೇ ನಮಸ್ತೇ ಹರಸೇ ಶೋಚಿಷ ಇತ್ಯಾಹ ನಮಸ್ಕೃತ್ಯ ಹಿ ವಸೀಯಾಗ್ಂಸ ಮುಪಚರಂತ್ಯನ್ಯಂ ತೇ ಅಸ್ಮತ್ತಪಂತು ಹೇತಯ ಇತ್ಯಾಹ ಯಮೇವ ದ್ವೇಷ್ಟಿ

---

ಅಂತಃ । (೧೭) । ಏವ । ಮೃತ್ಯೋಃ । ಧತ್ತೇ । ಅವೇತಿ । ಅನ್ನಾದ್ಯಮಿತ್ಯನ್ನ–ಅದ್ಯಮ್ । ರುಂಧೇ । ನಮಃ । ತೇ । ಹರಸೇ । ಶೋಚಿಷೇ । ಇತಿ । ಆಹ । ನಮಸ್ಕೃತ್ಯೇತಿ ನಮಃ–ಕೃತ್ಯ । ಹಿ । ವಸೀಯಾಗ್ಂಸಮ್ । ಉಪಚರಂತೀತ್ಯುಪ–ಚರಂತಿ । ಅನ್ಯಮ್ । ತೇ । ಅಸ್ಮತ್ । ತಪಂತು । ಹೇತಯಃ । ಇತಿ । ಆಹ । ಯಮ್ । ಏವ । ದ್ವೇಷ್ಟಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಮೃತ್ಯೋಃ ಅಂತಃ ಧತ್ತೇ ಏವ** | (ಹೀಗೆ ಮಾಡುವುದರಿಂದ) ಮೃತ್ಯುವಿನಿಂದ ದೂರವಾಗುತ್ತಾನೆ. |
| **ಅನ್ನಾದ್ಯಮ್ ಅವರುಂಧೇ** | ಶ್ರೇಷ್ಠವಾದ ಅನ್ನವನ್ನು ಪಡೆದವನಾಗುತ್ತಾನೆ. |

'ನಮಸ್ತೇ ಹರಸೇ...ಭವ' ಎಂಬ ಮಂತ್ರದ ವಿವರಣೆ

| | |
|---|---|
| **ನಮಃ ತೇ ಹರಸೇ ಶೋಚಿಷೇ ಇತಿ ಆಹ** | 'ಅಗ್ನಿದೇವನೇ! ರಸವನ್ನು ಹೀರುವ ಮತ್ತು ಒಣಗಿಸುವ ನಿನ್ನ ತೇಜಸ್ಸಿಗೆ ನಮಸ್ಕಾರವು' ಎಂದು ಈ ಮಂತ್ರಭಾಗವು ಹೇಳುತ್ತದೆ. |
| **ವಸೀಯಾಗ್ಂಸಮ್ ನಮಸ್ಕೃತ್ಯ ಹಿ ಉಪಚರಂತಿ** | ಲೋಕದಲ್ಲಿ ಅತಿಶ್ರೀಮಂತನನ್ನು (ಶ್ರೇಷ್ಠನನ್ನು) ನಮಸ್ಕರಿಸಿ(ಬಳಿಕ) ಅವನ ಸೇವಕರು ಉಪಚರಿಸುತ್ತಾರಷ್ಟೆ. |
| **ಅನ್ಯಮ್ ತೇ ಅಸ್ಮತ್ ತಪಂತು ಹೇತಯಃ ಇತಿ ಆಹ** | 'ಅಗ್ನಿಯೇ! ನಿನ್ನ ಜ್ವಾಲೆಗಳು ನಮಗಿಂತಲೂ ಬೇರೆಯವನನ್ನು (ನಮ್ಮ ಶತ್ರುವನ್ನು) ಸಂತಾಪಗೊಳಿಸಲಿ' ಎಂದು ಈ ಮಂತ್ರಭಾಗವು ಹೇಳುತ್ತದೆ. |
| **ಯಮ್ ದ್ವೇಷ್ಟಿ ಏವ** | ಯಾರನ್ನು ಯಜಮಾನನು ದ್ವೇಷಿಸುವನೋ |

ತಮಸ್ಯ ಶುಚಾऽರ್ಪಯತಿ ಪಾವಕೋ ಅಸ್ಮಭ್ಯಗ್ಂ ಶಿವೋ ಭವೇತ್ಯಾಹಾನ್ನಂ ವೈ ಪಾವಕೋऽನ್ನಮೇವಾವ ರುಂಧೇ ದ್ವಾಭ್ಯಾಮಧಿ ಕ್ರಾಮತಿ ಪ್ರತಿಷ್ಠಿತ್ಯಾ

---

ತಮ್ । ಅಸ್ಯ । ಶುಚಾ । ಅರ್ಪಯತಿ । ಪಾವಕಃ । ಅಸ್ಮಭ್ಯಮಿತ್ಯಸ್ಮ-ಭ್ಯಮ್ । ಶಿವಃ । ಭವ । ಇತಿ । ಆಹ । ಅನ್ನಮ್ । ವೈ । ಪಾವಕಃ । ಅನ್ನಮ್ । ಏವ । ಅವೇತಿ । ರುಂಧೇ । ದ್ವಾಭ್ಯಾಮ್ । ಅಧೀತಿ । ಕ್ರಾಮತಿ । ಪ್ರತಿಷ್ಠಿತ್ಯಾ ಇತಿ ಪ್ರತಿ-ಸ್ಥಿತ್ಯೈ ॥

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ತಮ್ ಅಸ್ಯ ಶುಚಾ ಅರ್ಪಯತಿ** | (ಈ ಮಂತ್ರಪಾಠದಿಂದ) ಯಜಮಾನನು ತನ್ನ ಹಗೆಯನ್ನು ಈ ಅಗ್ನಿಯ ಜ್ವಾಲೆಯಿಂದ ಸಂತಾಪಪಡುವಂತೆ ಮಾಡುತ್ತಾನೆ. |

ಮಂತ್ರದ ಚತುರ್ಥಭಾಗದ ವಿವರಣೆ

| | |
|---|---|
| **ಪಾವಕಃ ಅಸ್ಮಭ್ಯಮ್ ಶಿವಃ ಭವ ಇತಿ ಆಹ** | 'ಎಲೈ! ಅಗ್ನಿದೇವನೇ! ನೀನು ನಮ್ಮನ್ನು ಪರಿಶುದ್ಧಿಗೊಳಿಸುವವನೂ, ನಮ್ಮ ವಿಷಯದಲ್ಲಿ ಶಾಂತನೂ ಆಗು' ಎಂದು ಈ ಮಂತ್ರಭಾಗವು ಹೇಳುತ್ತದೆ. |
| **ಪಾವಕಃ ಅನ್ನಮ್ ವೈ** | ಅಗ್ನಿದೇವನು ಅನ್ನಪಾಕಹೇತುವಾದುದರಿಂದ ಅನ್ನವೇ ಆಗಿರುತ್ತಾನೆ. |
| **ಅನ್ನಮ್ ಅವರುಂಧೇ ಏವ** | ಆದುದರಿಂದ ಯಜಮಾನನು ಈ ಮಂತ್ರಪಾಠದಿಂದ ನಿಶ್ಚಯವಾಗಿಯೂ ಅನ್ನವನ್ನು ಹೊಂದುವನು. |
| **ದ್ವಾಭ್ಯಾಮ್ ಅಧಿಕ್ರಾಮತಿ** | **'ಅಪಾಮಿದಂ ನ್ಯಯನಮ್' 'ನಮಸ್ತೇ ಹರಸೇ'** ಈ ಎರಡು ಋಕ್ಕುಗಳನ್ನು ಹೇಳಿ ಅಗ್ನಿಚಯನವನ್ನು ಏರಬೇಕು. |
| **ಪ್ರತಿಷ್ಠಿತ್ಯೈ** | ಇದರಿಂದ ಯಜಮಾನನು ಲೋಕದಲ್ಲಿ ಪ್ರತಿಷ್ಠೆಯನ್ನು ಪಡೆಯುತ್ತಾನೆ. |

---

**ತಾತ್ಪರ್ಯ:-**ಲೋಕದಲ್ಲಿ ಅತಿಶ್ರೀಮಂತನನ್ನೂ ಶ್ರೇಷ್ಠನನ್ನೂ ಅವನ ಸೇವಕರು ನಮಸ್ಕರಿಸಿ ಉಪಚರಿಸುತ್ತಾರೆ. ಅದರಂತೆ ಅಧಿಕತೇಜಸ್ವಿಯಾದ ಅಗ್ನಿಗೆ, ಅವನ ತೇಜಸ್ಸಿಗೆ ಈ 'ನಮಸ್ತೇ' ಎಂಬ ಮಂತ್ರವು ನಮಸ್ಕಾರವಾಗಿದೆ.

## ಅಪಸ್ಯವತೀಭ್ಯಾಗ್ಂ ಶಾಂತ್ಯೈ ॥ ೧೮–4 ॥

[ಶುಗ್ವೇತಸೋಽಪಾಮಷ್ಟಾಭಿರ್ವಿಕರ್‌ಷತಿ ನಾಂತರೇಕಾನ್ನ ಪಂಚಾಶಚ್ಚ ॥]

ಅಪಸ್ಯವತೀಭ್ಯಾಮಿತ್ಯಪಸ್ಯ–ವತೀಭ್ಯಾಮ್ । ಶಾಂತ್ಯೈ ॥ (೧೮) ॥

| ಬ್ರಾಹ್ಮಣಭಾಗ | ವಿವರಣೆ |
|---|---|
| **ಅಪಸ್ಯವತೀಭ್ಯಾಮ್** ಅಧಿಕ್ರಾಮತಿ | **'ಅಪ್'** ಶಬ್ದದಿಂದ ಕೂಡಿರುವ **'ಅಪಾಮಿದಂ'** ಎಂಬ **'ನಮಸ್ತೇ ಹರಸೇ'** ಎಂಬ ಋಕ್ಕುಗಳಿಂದ ಇಷ್ಟಕಾ ಅಗ್ನಿಚಿತಿಯನ್ನು ಏರಬೇಕು. |
| **ಶಾಂತ್ಯೈ** | ನೀರು ಶಾಂತವಾದುದರಿಂದ ಈ ಮಂತ್ರಪಾಠವು ಶಾಂತಿಗೆ ಕಾರಣವಾಗುತ್ತದೆ. |

**'ಅಪಾಮಿದಮ್'** ಎಂಬ ಋಕ್ಕಿನಲ್ಲಿ **'ಅಪ್'** ಶಬ್ದವಿದೆ. ಅದರ ಸಾಹಚರ್ಯದಿಂದ **'ನಮಸ್ತೇ'** ಎಂಬ ಋಕ್ಕನ್ನೂ ಅಪಸ್ಯವತೀ ಎಂದು ಶ್ರುತಿಯು ಹೇಳಿದೆ.

## ॥ ಪಂಚಮೋಽನುವಾಕಃ ॥

ನೃಷದೇ ವಡಿತಿ ವ್ಯಾಘಾರಯತಿ ಪಂಕ್ತ್ಯಾಽಽಹುತ್ಯಾ

ಯಜ್ಞಮುಖಮಾರಭತೇಽಕ್ಷ್ಣಯಾ ವ್ಯಾಘಾರಯತಿ ತಸ್ಮಾದಕ್ಷ್ಣಯಾ

ಪಶವೋಽಙ್ಗಾನಿ ಪ್ರ ಹರಂತಿ

---

ನೃಷದ ಇತಿ ನೃ–ಸದೇ । ವಟ್ । ಇತಿ । ವ್ಯಾಘಾರಯತೀತಿ ವಿ–ಆಘಾರಯತಿ । ಪಂಕ್ತ್ಯಾ । ಆಹುತ್ಯೇತ್ಯಾ–ಹುತ್ಯಾ ।

ಯಜ್ಞಮುಖಮಿತಿ ಯಜ್ಞ–ಮುಖಮ್ । ಏತಿ । ರಭತೇ । ಅಕ್ಷ್ಣಯಾ । ವ್ಯಾಘಾರಯತೀತಿ ವಿ–ಆಘಾರಯತಿ ।

ತಸ್ಮಾತ್ । ಅಕ್ಷ್ಣಯಾ । ಪಶವಃ । ಅಂಗಾನಿ । ಪ್ರೇತಿ । ಹರಂತಿ ।

---

ನಾಲ್ಕನೆಯ ಅನುವಾಕದಲ್ಲಿ ಚಿತ್ಯಗ್ನಿಯ ಪರಿಷೇಚನ ಮುಂತಾದವುಗಳು ಉಕ್ತವಾಗಿವೆ. ಈ ಐದನೆಯ ಅನುವಾಕದಲ್ಲಿ ವ್ಯಾಘಾರಾದಿಹೋಮಗಳು ಉಕ್ತವಾಗಿವೆ. ಇದಕ್ಕೆ ಸಂಬಂಧಿಸಿದ ಮಂತ್ರಗಳು ನಾಲ್ಕನೆಯ ಕಾಂಡದ ಆರನೆಯ ಪ್ರಪಾಠಕದಲ್ಲಿವೆ.

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ವ್ಯಾಘಾರವಿಧಿ; ಅರ್ಥವಾದ** |
| **ನೃಷದೇ ವಟ್ ಇತಿ ವ್ಯಾಘಾರಯತಿ** | **'ನೃಷದೇ ವಟ್'** ಎಂದು ಆರಂಭವಾಗುವ ಮಂತ್ರಗಳಿಂದ ವ್ಯಾಘಾರಹೋಮವನ್ನು ಮಾಡಬೇಕು. |
| **ಪಂಕ್ತ್ಯಾ ಆಹುತ್ಯಾ ಯಜ್ಞಮುಖಮ್ ಆ ರಭತೇ** | ಐದು ಆಹುತಿಗಳಿಂದ ಯಜ್ಞವನ್ನು ಅಧ್ವರ್ಯುವು ಆರಂಭಿಸುತ್ತಾನೆ. |
| **ಅಕ್ಷ್ಣಯಾ ವ್ಯಾಘಾರಯತಿ** | ವಕ್ರಕ್ರಮದಿಂದ ಒಂದು ಮೂಲೆಯಿಂದ ಮತ್ತೊಂದು ಮೂಲೆಯವರೆಗೆ ಈ ವ್ಯಾಘಾರಹೋಮವನ್ನು ಮಾಡಬೇಕು. |
| **ತಸ್ಮಾತ್ ಪಶವಃ ಅಕ್ಷ್ಣಯಾ ಅಂಗಾನಿ ಪ್ರಹರಂತಿ** | ಆದುದರಿಂದಲೇ ಪಶುಗಳು ತಮ್ಮ ಅವಯವಗಳನ್ನು ವಕ್ರವಾಗಿ ಚಲಿಸುವಂತೆ ಮಾಡುತ್ತವೆ. |

ಪ್ರತಿಷ್ಠಿತ್ಯೈ ಯದ್ವಷಟ್ಕುರ್ಯಾದ್ಯಾತಯಾಮಾಽಸ್ಯ ವಷಟ್ಕಾರಸ್ಸ್ಯಾದ್ಯನ್ನ ವಷಟ್ಕುರ್ಯಾದ್ರಕ್ಷಾಗ್ಂಸಿ ಯಜ್ಞಗ್ಂ ಹನ್ಯುರ್ವಡಿತ್ಯಾಹ ಪರೋಕ್ಷಮೇವ ವಷಟ್ಕರೋತಿ ನಾಸ್ಯ ಯಾತಯಾಮಾ ವಷಟ್ಕಾರೋ ಭವತಿ

---

ಪ್ರತಿಷ್ಠಿತ್ಯಾ ಇತಿ ಪ್ರತಿ–ಸ್ಥಿತ್ಯೈ । ಯತ್ । ವಷಟ್ಕುರ್ಯಾದಿತಿ ವಷಟ್–ಕುರ್ಯಾತ್ । ಯಾತಯಾಮೇತಿ ಯಾತ–ಯಾಮಾ । ಅಸ್ಯ । ವಷಟ್ಕಾರ ಇತಿ ವಷಟ್–ಕಾರಃ । ಸ್ಯಾತ್ । ಯತ್ । ನ । ವಷಟ್ಕುರ್ಯಾದಿತಿ ವಷಟ್–ಕುರ್ಯಾತ್ । ರಕ್ಷಾಗ್ಂಸಿ । ಯಜ್ಞಮ್ । ಹನ್ಯುಃ । ವಟ್ । ಇತಿ । ಆಹ । ಪರೋಕ್ಷಮಿತಿ ಪರಃ–ಅಕ್ಷಮ್ । ಏವ । ವಷಟ್ । ಕರೋತಿ । ನ । ಅಸ್ಯ । ಯಾತಯಾಮೇತಿ ಯಾತ–ಯಾಮಾ । ವಷಟ್ಕಾರ ಇತಿ ವಷಟ್–ಕಾರಃ । ಭವತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಪ್ರತಿಷ್ಠಿತ್ಯೈ** | ಇದು ಅವುಗಳ ಸ್ಥಿರತೆಗೂ ಕಾರಣವಾಗುತ್ತದೆ. |
| **ಯತ್ ವಷಟ್ಕುರ್ಯಾತ್** | ಒಮ್ಮೆ ವಷಟ್ಕಾರವನ್ನು ಹೇಳಿ ಹೋಮವನ್ನು ಮಾಡಿದರೆ, |
| **ಅಸ್ಯ ವಷಟ್ಕಾರಃ ಯಾತಯಾಮಾ ಸ್ಯಾತ್** | ಹೋಮದ ವಷಟ್ಕಾರವು ಸಾರರಹಿತವಾಗುತ್ತದೆ. |
| **ಯತ್ ನ ವಷಟ್ಕುರ್ಯಾತ್** | ವಷಟ್ಕಾರವನ್ನು ಮಾಡದೆ ಇದ್ದರೆ |
| **ರಕ್ಷಾಗ್ಂಸಿ ಯಜ್ಞಮ್ ಹನ್ಯುಃ** | ರಕ್ಷೋಗಣಗಳು ಯಜ್ಞವನ್ನು ನಾಶಪಡಿಸಿಯಾವು. |
| **ವಟ್ ಇತಿ ಆಹ** | ಆದುದರಿಂದ **'ವಟ್'** ಎಂದು ಹೇಳಿ ಹೋಮವನ್ನು ಅನುಷ್ಠಿಸಬೇಕು. |
| **ಪರೋಕ್ಷಮ್ ಏವ ವಷಟ್ಕರೋತಿ** | ಹೀಗೆ ಮಾಡುವುದರಿಂದ ಪರೋಕ್ಷವಾಗಿ ವಷಟ್ಕಾರವನ್ನು ಮಾಡಿದಂತಾಗುತ್ತದೆ. |
| **ಅಸ್ಯ ವಷಟ್ಕಾರಃ ಯಾತಯಾಮಾ ನ ಭವತಿ** | ಈ ಯಜಮಾನನ ಯಾಗದ ವಷಟ್ಕಾರವು ಯಾತಯಾಮ (ಗತರಸ)ವಾಗುವುದಿಲ್ಲ. |

---

**ತಾತ್ಪರ್ಯ:**–ಯಜಮಾನನು ಉತ್ತರವೇದಿಯಂತೆ ಅಗ್ನಿಯನ್ನಾಗಲೀ, ಸ್ವಯಮಾತೃಣ್ಣೇಷ್ಟಕೆಯನ್ನಾಗಲೀ ಮಂತ್ರಪಂಚಕದಿಂದ ವ್ಯಾಘರಣ ಮಾಡುತ್ತಾನೆ.

ವ್ಯಾಘಾರವೆಂದರೆ ದೀರ್ಘವಾದ ಆಘಾರಹೋಮ.

ನ ಯಜ್ಞಗ್ಂ ರಕ್ಷಾಗ್ಂಸಿ ಘ್ನಂತಿ ಹುತಾದೋ ವಾ ಅನ್ಯೇ ದೇವಾ[ದೇವಾಃ(೧೯)
ಅಹುತಾದೋಽನ್ಯೇ] ಅಹುತಾದೋಽನ್ಯೇ ತಾನಗ್ನಿಚಿದೇವೋಭಯಾನ್ಪ್ರೀಣಾತಿ
ಯೇ ದೇವಾ ದೇವಾನಾಮಿತಿ ದಧ್ನಾ ಮಧುಮಿಶ್ರೇಣಾವೋಕ್ಷತಿ

---

ನ । ಯಜ್ಞಮ್ । ರಕ್ಷಾಗ್ಂಸಿ । ಘ್ನಂತಿ । ಹುತಾದ ಇತಿ ಹುತ-ಅದಃ । ವೈ । ಅನ್ಯೇ । ದೇವಾಃ । (೧೯) । ಅಹುತಾದ ಇತ್ಯಹುತ-ಅದಃ । ಅನ್ಯೇ । ತಾನ್ । ಅಗ್ನಿಚಿದಿತ್ಯಗ್ನಿ-ಚಿತ್ । ಏವ । ಉಭಯಾನ್ । ಪ್ರೀಣಾತಿ । ಯೇ । ದೇವಾಃ । ದೇವಾನಾಮ್ । ಇತಿ । ದಧ್ನಾ । ಮಧುಮಿಶ್ರೇಣೇತಿ ಮಧು-ಮಿಶ್ರೇಣ । ಅವೇತಿ । ಉಕ್ಷತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಯಜ್ಞಮ್ ರಕ್ಷಾಗ್ಂಸಿ ನ ಘ್ನಂತಿ | (ಪರೋಕ್ಷವಾಗಿ ವಷಟ್ಕಾರವನ್ನು ಹೇಳುವುದರಿಂದ) ರಕ್ಷೋಗಣಗಳು ಯಜ್ಞವನ್ನು ಹಾಳುಮಾಡಲು ಆಗುವುದಿಲ್ಲ. (ಆದುದರಿಂದ ಇಲ್ಲಿ 'ವಟ್' ಎಂದು ಹೇಳಿ ವ್ಯಾಘಾರಹೋಮವನ್ನು ಮಾಡಬೇಕು) |

**ಅವೋಕ್ಷಣವಿಧಿ; ಅರ್ಥವಾದ**

| | |
|---|---|
| ಅನ್ಯೇ ದೇವಾಃ ಹುತಾದಃ ವೈ | ದೇವತೆಗಳಲ್ಲಿ ಕೆಲವರು ಅಗ್ನಿಯಲ್ಲಿ ಹೋಮ ಮಾಡಿದ ಹವಿಸ್ಸನ್ನು ಭಕ್ಷಿಸುವರು. |
| ಅನ್ಯೇ ಅಹುತಾದಃ | ಮತ್ತೆ ಕೆಲವರು ಹೋಮ ಮಾಡದ ಬಲಿಹರಣಾದಿ ಹವಿಸ್ಸುಗಳನ್ನು ಭಕ್ಷಿಸುವರು. |
| ತಾನ್ ಉಭಯಾನ್ ಅಗ್ನಿಚಿತ್ ಏವ ಪ್ರೀಣಾತಿ | ಆ ಎರಡು ಬಗೆಯ ದೇವತೆಗಳನ್ನೂ ಅಗ್ನಿಚಯನ ಕರ್ತನೇ ಸಂತೋಷಪಡಿಸಬೇಕು. |
| ಯೇ ದೇವಾಃ ದೇವಾನಾಮ್ ಇತಿ | (ಆದುದರಿಂದ ಯಜಮಾನನು) **'ಯೇ ದೇವಾ ದೇವಾನಾಮ್'** ('ಯೇ ದೇವಾ ದೇವೇಷು') ಎಂಬ (ಎರಡು ಮಂತ್ರಗಳಿಂದ) |
| ಮಧುಮಿಶ್ರೇಣ ದಧ್ನಾ | ಮಧುಮಿಶ್ರಿತವಾದ ಮೊಸರಿನಿಂದ |
| ಅವೋಕ್ಷತಿ | ಅಗ್ನಿಯನ್ನು ಅವೋಕ್ಷಿಸಬೇಕು. |

---

ಯಜ್ಞವು ಪಂಚಸಂಖ್ಯಾಯುಕ್ತವಾಗಿ ಪಾಂಕ್ತವೆನಿಸಿದೆ. ಆದುದರಿಂದ ಐದು ಮಂತ್ರಗಳಿಂದ ವ್ಯಾಘಾರ ಹೋಮವನ್ನು ಮಾಡಿ, ಆಹುತಿಯಿಂದಲೇ ಯಜ್ಞವನ್ನು ಯಜಮಾನನು ಆರಂಭಿಸಿದಂತಾಗುತ್ತದೆ.

ಹುತಾದಶ್ಚೈವ ದೇವಾನಹುತಾದಶ್ಚ ಯಜಮಾನಃ ಪ್ರೀಣಾತಿ ತೇ ಯಜಮಾನಂ ಪ್ರೀಣಂತಿ ದಧ್ನೈವ ಹುತಾದಃ ಪ್ರೀಣಾತಿ ಮಧುಷಾಽಹುತಾದೋ ಗ್ರಾಮ್ಯಂ ವಾ ಏತದನ್ನಂ ಯದ್ದಧ್ಯಾರಣ್ಯಂ ಮಧು

---

ಹುತಾದ ಇತಿ ಹುತ- ಅದಃ । ಚ । ಏವ । ದೇವಾನ್ । ಅಹುತಾದ ಇತ್ಯಹುತ-ಅದಃ । ಚ । ಯಜಮಾನಃ । ಪ್ರೀಣಾತಿ । ತೇ । ಯಜಮಾನಮ್ । ಪ್ರೀಣಂತಿ । ದಧ್ನಾ । ಏವ । ಹುತಾದ ಇತಿ ಹುತ-ಅದಃ । ಪ್ರೀಣಾತಿ । ಮಧುಷಾ । ಅಹುತಾದ ಇತ್ಯಹುತ-ಅದಃ । ಗ್ರಾಮ್ಯಮ್ । ವೈ । ಏತತ್ । ಅನ್ನಮ್ । ಯತ್ । ದಧಿ । ಆರಣ್ಯಮ್ । ಮಧು ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯಜಮಾನಃ ಹುತಾದಃ ದೇವಾನ್ ಏವ ಚ** | ಯಜಮಾನನು (ಈ ಅವೋಕ್ಷಣದಿಂದ) ಹುತಾದರಾದ ಇಂದ್ರಾದಿದೇವತೆಗಳನ್ನೂ |
| **ಅಹುತಾದಃ** ದೇವಾನ್ **ಚ** | ಹುತಾದರಲ್ಲದ ಪ್ರಾಣಾದಿದೇವತೆಗಳನ್ನೂ |
| **ಪ್ರೀಣಾತಿ** | ಸಂತೋಷಪಡಿಸುತ್ತಾನೆ. |
| **ತೇ ಯಜಮಾನಮ್ ಪ್ರೀಣಂತಿ** | ತೃಪ್ತರಾದ ಆ ದೇವತೆಗಳು ಯಜಮಾನನನ್ನು ಸಂತೋಷಪಡುವಂತೆ ಮಾಡುತ್ತಾರೆ. |
| **ದಧ್ನಾ ಏವ ಹುತಾದಃ ಪ್ರೀಣಾತಿ** | ಯಜಮಾನನು ಮೊಸರಿನಿಂದಲೇ ಹುತಾದರಾದ ದೇವತೆಗಳನ್ನು ಸಂತೋಷಪಡಿಸುತ್ತಾನೆ. |
| ***ಮಧುಷಾ ಅಹುತಾದಃ** ಪ್ರೀಣಾತಿ | ಜೇನುತುಪ್ಪದಿಂದ ಅಹುತಾದರಾದ ಪ್ರಾಣಾದಿ ದೇವತೆಗಳನ್ನು ತೃಪ್ತಿಪಡಿಸುತ್ತಾನೆ. |
| **ಯತ್ ದಧಿ ಏತತ್ ಗ್ರಾಮ್ಯಮ್ ಅನ್ನಮ್ ವೈ** | ಮೊಸರೆಂಬುದು ಗ್ರಾಮಲಭ್ಯವಾದ ಅನ್ನವಾಗಿದೆ. |
| ಯತ್ **ಮಧು** ಏತತ್ **ಆರಣ್ಯಮ್** ಅನ್ನಮ್ ವೈ | ಜೇನುತುಪ್ಪವೆಂಬುದು ಅರಣ್ಯಲಭ್ಯವಾದ ಅನ್ನವಾಗಿದೆ. |

---

ವ್ಯಾಘಾರಹೋಮದ ಮಂತ್ರಾರ್ಥವು ಹೀಗಿದೆ; ಮನುಷ್ಯರಲ್ಲಿಯೂ, ಸಮುದ್ರದಲ್ಲಿಯೂ, ಕಾಡಿನಲ್ಲಿಯೂ, ಯಜ್ಞದಲ್ಲಿಯೂ, ಸೂರ್ಯರೂಪದಲ್ಲಿಯೂ ಇರುವ ಅಗ್ನಿದೇವನಿಗೆ ಈ ಆಹುತಿಯು ಹುತವಾಗಲಿ.

---

* **'ಮಧುಸ್'** ಎಂಬ ಸಕಾರಾಂತವಾದ ವೈದಿಕಪ್ರಯೋಗ.

ಯದ್ದಧ್ನಾ ಮಧುಮಿಶ್ರೇಣಾವೋಕ್ಷತ್ಯುಭಯಸ್ಯಾವರುದ್ಧ್ಯೈ

ಗ್ರುಮುಷ್ಟಿನಾಽವೋಕ್ಷತಿ ಪ್ರಾಜಾಪತ್ಯೋ[..ಪತ್ಯಃ (೨೦)] ವೈ

ಗ್ರುಮುಷ್ಟಿಸ್ಸಯೋನಿತ್ವಾಯ ದ್ವಾಭ್ಯಾಂ ಪ್ರತಿಷ್ಠಿತ್ಯಾ ಅನುಪರಿಚಾರಮವೋಕ್ಷ-

---

ಯತ್ । ದಧ್ನಾ । ಮಧುಮಿಶ್ರೇಣೇತಿ ಮಧು-ಮಿಶ್ರೇಣ । ಅವೋಕ್ಷತೀತ್ಯವ-ಉಕ್ಷತಿ । ಉಭಯಸ್ಯ । ಅವರುದ್ಧ್ಯಾ ಇತ್ಯವ-ರುದ್ಧ್ಯೈ । ಗ್ರುಮುಷ್ಟಿನಾ । ಅವೇತಿ । ಉಕ್ಷತಿ । ಪ್ರಾಜಾಪತ್ಯಇತಿ ಪ್ರಾಜಾ-ಪತ್ಯಃ । (೨೦) । ವೈ । ಗ್ರುಮುಷ್ಟಿಃ । ಸಯೋನಿತ್ವಾಯೇತಿ ಸಯೋನಿ-ತ್ವಾಯ । ದ್ವಾಭ್ಯಾಮ್ । ಪ್ರತಿಷ್ಠಿತ್ಯಾ ಇತಿ ಪ್ರತಿ-ಸ್ಥಿತ್ಯೈ । ಅನುಪರಿಚಾರಮಿತ್ಯನು-ಪರಿಚಾರಮ್ । ಅವೇತಿ । ಉಕ್ಷತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯತ್ ಮಧುಮಿಶ್ರೇಣ ದಧ್ನಾ ಅವೋಕ್ಷತಿ** | ಮಧುಮಿಶ್ರವಾದ ಮೊಸರಿನಿಂದ ಅವೋಕ್ಷಣ ಮಾಡುವುದೆಂಬುದು |
| **ಉಭಯಸ್ಯ ಅವರುದ್ಧ್ಯೈ** | ಯಜಮಾನನು ಎರಡು ಬಗೆಯ (ಗ್ರಾಮ್ಯ-ಆರಣ್ಯಗಳು) ಅನ್ನವನ್ನೂ ಪಡೆಯುವುದಕ್ಕಾಗುತ್ತದೆ. |

**ಅವೋಕ್ಷಣಸಾಧನವಾದ ಗ್ರುಮುಷ್ಟಿಯ ವಿಧಿ; ಅರ್ಥವಾದ**

| | |
|---|---|
| **ಗ್ರುಮುಷ್ಟಿನಾ ಅವೋಕ್ಷತಿ** | ದರ್ಭೆಗಳ ಗುರು(ದೊಡ್ಡದಾದ)ಮುಷ್ಟಿಯಿಂದ ಅವೋಕ್ಷಿಸಬೇಕು. |
| **ಗ್ರುಮುಷ್ಟಿಃ ಪ್ರಾಜಾಪತ್ಯಃ ವೈ** | ದರ್ಭಮುಷ್ಟಿಯೂ ಪ್ರೌಢವಾಗಿ ಪ್ರಜಾಪತಿದೇವತಾಕವಾಗಿದೆ. |
| **ಸಯೋನಿತ್ವಾಯ** | (ಅಗ್ನಿಯೂ ಪ್ರಜಾಪತಿಯ ಮುಖದಿಂದ ಜನಿಸಿ ಪ್ರಜಾಪತಿ ಸಂಬಂಧಿಯಾಗಿರುವುದರಿಂದ) ಈ ಅವೋಕ್ಷಣವು ಸಮಾನ ಸ್ಥಾನತ್ವವನ್ನು ಹೊಂದಿಸಲು ಕಾರಣವಾಗುತ್ತದೆ. |
| **ದ್ವಾಭ್ಯಾಮ್ ಪ್ರತಿಷ್ಠಿತ್ಯೈ** | (ಇಲ್ಲಿ ಅವೋಕ್ಷಣಮಂತ್ರಗಳು ಎರಡು ಇವೆ) ಈ ದ್ವಿತ್ವ ಸಂಖ್ಯೆಯು ಎರಡು ಪಾದಗಳುಳ್ಳ ಯಜಮಾನನ ಪ್ರಕೃಷ್ಟ ಸ್ಥಿತಿಗೆ ಕಾರಣವಾಗುತ್ತದೆ. |
| **ಅನುಪರಿಚಾರಮ್ ಅವೋಕ್ಷತಿ** | ಪೂರ್ವಾದಿಕ್ರಮದಿಂದ ಸುತ್ತಲೂ ತಿರುಗುತ್ತಾ ಅವೋಕ್ಷಣವನ್ನು ಮಾಡಬೇಕು. |

–ತ್ಯಪರಿವರ್ಗಮೇವೈನಾನ್ಪ್ರೀಣಾತಿ ವಿ ವಾ ಏಷ ಪ್ರಾಣೈಃ ಪ್ರಜಯಾ ಪಶುಭಿರ್

ಋಧ್ಯತೇ ಯೋಽಗ್ನಿಂ ಚಿನ್ವನ್ನಧಿಕ್ರಾಮತಿ ಪ್ರಾಣದಾ ಅಪಾನದಾ ಇತ್ಯಾಹ

ಪ್ರಾಣಾನೇವಾಽಽತ್ಮನ್ಧತ್ತೇ ವರ್ಚೋದಾ ವರಿವೋದಾ ಇತ್ಯಾಹ

---

ಅಪರಿವರ್ಗಮಿತ್ಯಪರಿ–ವರ್ಗಮ್ । ಏವ । ಏನಾನ್ । ಪ್ರೀಣಾತಿ । ವೀತಿ । ವೈ । ಏಷಃ । ಪ್ರಾಣೈರಿತಿ ಪ್ರ–ಅನೈಃ । ಪ್ರಜಯೇತಿ ಪ್ರ–ಜಯಾ । ಪಶುಭಿರಿತಿ ಪಶು–ಭಿಃ । ಋಧ್ಯತೇ । ಯಃ । ಅಗ್ನಿಮ್ । ಚಿನ್ವನ್ । ಅಧಿಕ್ರಾಮತೀತ್ಯಧಿ–ಕ್ರಾಮತಿ । ಪ್ರಾಣದಾ ಇತಿ ಪ್ರಾಣ–ದಾಃ । ಅಪಾನದಾ ಇತ್ಯಪಾನ–ದಾಃ । ಇತಿ । ಆಹ । ಪ್ರಾಣಾನಿತಿ ಪ್ರ–ಅನಾನ್ । ಏವ । ಆತ್ಮನ್ । ಧತ್ತೇ । ವರ್ಚೋದಾ ಇತಿ ವರ್ಚಃ–ದಾಃ । ವರಿವೋದಾ ಇತಿ ವರಿವಃ–ದಾಃ । ಇತಿ । ಆಹ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಏನಾನ್ ಅಪರಿವರ್ಗಮ್ ಏವ ಪ್ರೀಣಾತಿ** | ಇದರಿಂದ ಅಗ್ನಿಯ(ಎಲ್ಲ ಅವಯವಗಳನ್ನೂ) ಯಾವ ಭಾಗವನ್ನೂ ಬಿಡದೆ ಸಂತೋಷಪಡಿಸಿದಂತಾಗುತ್ತದೆ. |

'ಪ್ರಾಣದಾ...'ಮಂತ್ರದ ವಿವರಣೆ

| | |
|---|---|
| **ಅಗ್ನಿಮ್ ಚಿನ್ವನ್ ಯಃ ಅಧಿಕ್ರಾಮತಿ** | ಯಾವ ಯಜಮಾನನು ಚಯನಕರ್ತನಾಗಿ ಚಯನ ಸ್ಥಾನವನ್ನು ಏರಿ ಅವೋಕ್ಷಣವನ್ನು ಮಾಡುತ್ತಾನೆಯೋ |
| **ಏಷಃ ಪ್ರಾಣೈಃ ಪ್ರಜಯಾ ಪಶುಭಿಃ ವಿ ಋಧ್ಯತೇ ವೈ** | ಆ ಯಜಮಾನನು ಪ್ರಾಣಗಳಿಂದಲೂ, ಪ್ರಜೆಯಿಂದಲೂ, ಪಶುಗಳಿಂದಲೂ ವಿಯೋಗವನ್ನು ಹೊಂದುತ್ತಾನೆ. |
| **ಪ್ರಾಣದಾಃ ಅಪಾನದಾಃ ಇತಿ ಆಹ** | (ಆ ದೋಷಪರಿಹಾರಾರ್ಥವಾಗಿ) 'ಈ ಅಗ್ನಿದೇವನು ಪ್ರಾಣದಾತೃವೂ, ಅಪಾನದಾತೃವೂ ಆಗಲಿ' ಎಂದು ಈ ಮಂತ್ರಭಾಗವು ಹೇಳುತ್ತದೆ. |
| **ಆತ್ಮನ್ ಪ್ರಾಣಾನ್ ಏವ ಧತ್ತೇ** | ಈ ಪ್ರಾರ್ಥನಾಮಂತ್ರದಿಂದ ಯಜಮಾನನು ಪ್ರಾಣಗಳನ್ನು ತನ್ನಲ್ಲಿ ಸ್ಥಿರಗೊಳಿಸುತ್ತಾನೆ. |
| **ವರ್ಚೋದಾಃ ವರಿವೋದಾಃ ಇತಿ ಆಹ** | 'ಅಗ್ನಿದೇವನು ಬಲವನ್ನೂ, ಪಶುಗಳನ್ನೂ ಕೊಡುವನಾಗಲಿ' ಎಂದು ಈ ಮಂತ್ರಭಾಗವು ಹೇಳುತ್ತದೆ. |

ಪ್ರಜಾ ವೈ ವರ್ಚಃ ಪಶವೋ ವರಿವಃ ಪ್ರಜಾಮೇವ ಪಶೂನಾತ್ಮನ್ಧತ್ತೆ ಇಂದ್ರೋ ವೃತ್ರಮಹನ್ತಂ ವೃತ್ರೋ[ವೃತ್ರಃ(೨೧)] ಹತಷ್ಟೋಡಶಭಿರ್ಭೋಗೈರಸಿನಾತ್ಸ ಏತಾಮಗ್ನಯೇಽನೀಕವತ ಆಹುತಿಮಪಶ್ಯತ್ತಾಮಜುಹೋ-

---

ಪ್ರಜೇತಿ ಪ್ರ-ಜಾ । ವೈ । ವರ್ಚಃ । ಪಶವಃ । ವರಿವಃ । ಪ್ರಜಾಮಿತಿ ಪ್ರ-ಜಾಮ್ । ಏವ । ಪಶೂನ್ । ಆತ್ಮನ್ । ಧತ್ತೇ । ಇಂದ್ರಃ । ವೃತ್ರಮ್ । ಅಹನ್ । ತಮ್ । ವೃತ್ರಃ । (೨೧) । ಹತಃ । ಷೋಡಶಭಿರಿತಿ ಷೋಡಶ-ಭಿಃ । ಭೋಗೈಃ । ಅಸಿನಾತ್ । ಸಃ । ಏತಾಮ್ । ಅಗ್ನಯೇ । ಅನೀಕವತ ಇತ್ಯನೀಕ-ವತೇ । ಆಹುತಿಮಿತ್ಯಾ-ಹುತಿಮ್ । ಅಪಶ್ಯತ್ । ತಾಮ್ । ಅಜುಹೋತ್ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಪ್ರಜಾ ವೈ ವರ್ಚಃ | ಮಕ್ಕಳು-ಮೊಮ್ಮಕ್ಕಳೆಂಬ ಸಂತತಿಯೇ ಬಲ. (ಅವರಿಂದಲೇ ವ್ಯವಹಾರವು ನಡೆಯುವುದು) |
| ಪಶವಃ ವರಿವಃ | ಪಶುಗಳೇ ಪೂಜ್ಯವಾದವು (ಅವುಗಳಿಂದಲೇ ಕ್ಷೀರಾದಿ ಸಂಪತ್ತು ಉಂಟಾಗುವುದು. ಅದರಿಂದ ಯಜಮಾನನು ಪೂಜ್ಯನೆನಿಸುವನು) |
| ಪ್ರಜಾಮ್ ಪಶೂನ್ ಏವ ಆತ್ಮನ್ ಧತ್ತೇ | ಈ ಮಂತ್ರದಿಂದ ಯಜಮಾನನು ಪ್ರಜೆಗಳನ್ನೂ, ಪಶುಗಳನ್ನೂ ತನ್ನಲ್ಲಿ ಸ್ಥಿರಗೊಳಿಸುತ್ತಾನೆ. |

ಮಂತ್ರದ್ವಯದಿಂದ ಹೋಮವಿಧಿ; ವೈಶ್ವಕರ್ಮಣಹೋಮವಿಧಿ

| | |
|---|---|
| ಇಂದ್ರಃ ವೃತ್ರಮ್ ಅಹನ್ | ಇಂದ್ರನು ತನ್ನ ವಜ್ರಾಯುಧದಿಂದ ವೃತ್ರಾಸುರನನ್ನು ಪ್ರಹರಿಸಿದನು. |
| ಹತಃ ವೃತ್ರಃ ತಮ್ ಷೋಡಶಭಿಃ ಭೋಗೈಃ ಅಸಿನಾತ್ | ಹೀಗೆ ಪ್ರಹೃತನಾದ ವೃತ್ರನು ಕೂಡಲೇ ತನ್ನ ಆಸುರೀಮಾಯೆಯಿಂದ ಉಂಟಾದ ಸರ್ಪಾಕೃತಿಯ ಹದಿನಾರು ಶರೀರಗಳಿಂದ ಇಂದ್ರನನ್ನು ಬಂಧಿಸಿದನು. |
| ಸಃ ಅಗ್ನಯೇ ಅನೀಕವತೇ ಏತಾಮ್ ಆಹುತಿಮ್ ಅಪಶ್ಯತ್ | ಆಗ ಇಂದ್ರನು ಇದಕ್ಕೆ ಪರಿಹಾರವಾಗಿ ಸೈನ್ಯದಿಂದ ಕೂಡಿರುವ ಅಗ್ನಿದೇವನಿಗಾಗಿ ಮಾಡಬೇಕಾದ ಈ ಆಹುತಿಯನ್ನು ಆಲೋಚಿಸಿ ತಿಳಿದನು. |
| ತಾಮ್ ಅಜುಹೋತ್ | ಆ ಹೋಮವನ್ನು ಮಾಡಿದನು. |

ತಸ್ಯಾಗ್ನಿರನೀಕವಾನ್ತ್ಸ್ವೇನ ಭಾಗಧೇಯೇನ ಪ್ರೀತಷ್ಷೋಡಶಧಾ ವೃತ್ರಸ್ಯ ಭೋಗಾನಪ್ಯದಹದ್ವೈಶ್ವಕರ್ಮಣೇನ ಪಾಪ್ಮನೋ ನಿರಮುಚ್ಯತ ಯದಗ್ನಯೇಽನೀಕವತ ಆಹುತಿಂ ಜುಹೋತ್ಯಗ್ನಿರೇವಾಸ್ಯಾನೀಕವಾನ್ತ್ಸ್ವೇನ ಭಾಗಧೇಯೇನ ಪ್ರೀತಃ ಪಾಪ್ಮಾನಮಪಿ ದಹತಿ

---

ತಸ್ಯ । ಅಗ್ನಿಃ । ಅನೀಕವಾನಿತ್ಯನೀಕ-ವಾನ್ । ಸ್ವೇನ । ಭಾಗಧೇಯೇನೇತಿ ಭಾಗ-ಧೇಯೇನ । ಪ್ರೀತಃ । ಷೋಡಶಧೇತಿ ಷೋಡಶ-ಧಾ । ವೃತ್ರಸ್ಯ । ಭೋಗಾನ್ । ಅಪೀತಿ । ಅದಹತ್ । ವೈಶ್ವಕರ್ಮಣೇನೇತಿ ವೈಶ್ವ-ಕರ್ಮಣೇನ । ಪಾಪ್ಮನಃ । ನಿರಿತಿ । ಅಮುಚ್ಯತ । ಯತ್ । ಅಗ್ನಯೇ । ಅನೀಕವತ ಇತ್ಯನೀಕ-ವತೇ । ಆಹುತಿಮಿತ್ಯಾ-ಹುತಿಮ್ । ಜುಹೋತಿ । ಅಗ್ನಿಃ । ಏವ । ಅಸ್ಯ । ಅನೀಕವಾನಿತ್ಯನೀಕ-ವಾನ್ । ಸ್ವೇನ । ಭಾಗಧೇಯೇನೇತಿ ಭಾಗ-ಧೇಯೇನ । ಪ್ರೀತಃ । ಪಾಪ್ಮಾನಮ್ । ಅಪೀತಿ । ದಹತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ತಸ್ಯ ಅನೀಕವಾನ್ ಅಗ್ನಿಃ ಸ್ವೇನ ಭಾಗಧೇಯೇನ ಪ್ರೀತಃ** | ಅನೀಕವಂತನಾದ ಆ ಅಗ್ನಿಯು (ಆ ಹೋಮದಿಂದ) ತನ್ನ ಭಾಗವನ್ನು ಹೊಂದಿ ಸುಪ್ರೀತನಾದನು. |
| **ವೃತ್ರಸ್ಯ ಷೋಡಶಧಾ ಭೋಗಾನ್ ಅಪಿ ಅದಹತ್** | (ಬಳಿಕ) ವೃತ್ರಾಸುರನ ಹದಿನಾರು ಸರ್ಪಶರೀರಗಳನ್ನೂ ಸುಟ್ಟನು. |
| **ವೈಶ್ವಕರ್ಮಣೇನ ಪಾಪ್ಮನಃ ನಿರಮುಚ್ಯತ** | (ಬಳಿಕ ಇಂದ್ರನು 'ಯ ಇಮಾ ವಿಶ್ವಾ' ಮುಂತಾದ ಮಂತ್ರಗಳಿಂದ) ವೈಶ್ವಕರ್ಮಣಹೋಮವನ್ನು ಅನುಷ್ಠಿಸಿ, ವೃತ್ರಾಹತ್ಯಾಪಾಪದಿಂದ ವಿಮುಕ್ತನಾದನು. |
| **ಯತ್ ಅನೀಕವತೇ ಅಗ್ನಯೇ ಆಹುತಿಮ್ ಜುಹೋತಿ** | ಯಜಮಾನನು ಅನೀಕವದಗ್ನಿಯನ್ನುದ್ದೇಶಿಸಿ ಆಹುತಿಯನ್ನು ನೀಡುವುದೆಂಬುದು ಯಾವುದೋ (ಆದರಿಂದ) |
| **ಅಸ್ಯ ಅನೀಕವಾನ್ ಅಗ್ನಿಃ ಸ್ವೇನ ಭಾಗಧೇಯೇನ ಪ್ರೀತಃ ಏವ ಪಾಪ್ಮಾನಮ್ ಅಪಿ ದಹತಿ** | ಈ ಯಜಮಾನನಿಗೆ ಅನೀಕವಂತನಾದ ಅಗ್ನಿಯು ತನ್ನ ಹವಿರ್ಭಾಗದಿಂದ ಪ್ರೀತನಾಗಿಯೇ (ರೋಗಾದಿಗಳೆಂಬ ಕಾಣುವ ತೊಂದರೆಗಳಿಗೆ ಕಾರಣವಾದ) ಪಾಪಗಳನ್ನು ಹೋಗಲಾಡಿಸುತ್ತಾನೆ. |

ವೈಶ್ವಕರ್ಮಣೇನ ಪಾಪ್ಮನೋ ನಿರ್ಮುಚ್ಯತೇ ಯಂ ಕಾಮಯೇತ ಚಿರಂ ಪಾಪ್ಮನೋ [ಪಾಪ್ಮನಃ(೨೨)] ನಿರ್ಮುಚ್ಯೇತೇತ್ಯೇಕೈಕಂ ತಸ್ಯ ಜುಹುಯಾಚ್ಚಿರಮೇವ ಪಾಪ್ಮನೋ ನಿರ್ಮುಚ್ಯತೇ ಯಂ ಕಾಮಯೇತ ತಾಜಕ್ಪಾಪ್ಮನೋ ನಿರ್ಮುಚ್ಯೇತೇತಿ

---

ವೈಶ್ವಕರ್ಮಣೇನೇತಿ ವೈಶ್ವ-ಕರ್ಮಣೇನ । ಪಾಪ್ಮನಃ । ನಿರಿತಿ । ಮುಚ್ಯತೇ । ಯಮ್ । ಕಾಮಯೇತ । ಚಿರಮ್ । ಪಾಪ್ಮನಃ । (೨೨) । ನಿರಿತಿ । ಮುಚ್ಯೇತ । ಇತಿ । ಏಕೈಕಮಿತ್ಯೇಕಮ್-ಏಕಮ್ । ತಸ್ಯ । ಜುಹುಯಾತ್ । ಚಿರಮ್ । ಏವ । ಪಾಪ್ಮನಃ । ನಿರಿತಿ । ಮುಚ್ಯತೇ । ಯಮ್ । ಕಾಮಯೇತ । ತಾಜಕ್ । ಪಾಪ್ಮನಃ । ನಿರಿತಿ । ಮುಚ್ಯೇತ । ಇತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ವೈಶ್ವಕರ್ಮಣೇನ ಪಾಪ್ಮನಃ ನಿರ್ಮುಚ್ಯತೇ | (ನರಕವೆಂಬ ಕಾಣದ ತೊಂದರೆಗಳಿಗೆ ಕಾರಣವಾದ) ಪಾಪಗಳನ್ನು ವೈಶ್ವಕರ್ಮಣಹೋಮದಿಂದ ದೂರ ಮಾಡುತ್ತಾನೆ. |

ಪ್ರತಿಮಂತ್ರ-ಪ್ರತಿಸೂಕ್ತ-ಸಂಯುಕ್ತಸೂಕ್ತಹೋಮಪಕ್ಷಗಳ ವಿವರಣೆ

| | |
|---|---|
| ಯಮ್ ಚಿರಮ್ ಪಾಪ್ಮನಃ ನಿರ್ಮುಚ್ಯೇತ ಇತಿ ಕಾಮಯೇತ | ಅಧ್ವರ್ಯುವು ಯಾವ ಯಜಮಾನನು ನಿಧಾನವಾಗಿ/ಚಿರಕಾಲದವರೆಗೆ ಪಾಪಗಳಿಂದ ಮುಕ್ತನಾಗಲೆಂದು ಬಯಸುವನೋ |
| ತಸ್ಯ ಏಕೈಕಮ್ ಜುಹುಯಾತ್ | ಆ ಯಜಮಾನನಿಗಾಗಿ ಒಂದೊಂದು ಮಂತ್ರದಿಂದ ಒಂದೊಂದು ಹೋಮವನ್ನು ಅನುಷ್ಠಿಸಬೇಕು. |
| ಚಿರಮ್ ಏವ ಪಾಪ್ಮನಃ ನಿರ್ಮುಚ್ಯತೇ | ಆ ಯಜಮಾನನು (ಒಂದೊಂದೇ ಮಂತ್ರದಿಂದ ಹೋಮವಾಗುವುದರಿಂದ) ನಿಧಾನವಾಗಿ/ಚಿರಕಾಲದ ವರೆಗೆ ಪಾಪಮುಕ್ತನಾಗುತ್ತಾನೆ. |
| ಯಮ್ ತಾಜಕ್ ಪಾಪ್ಮನಃ ನಿರ್ಮುಚ್ಯೇತ ಇತಿ ಕಾಮಯೇತ | ಅಧ್ವರ್ಯುವು ಯಾವ ಯಜಮಾನನು ಶೀಘ್ರವಾಗಿಯೇ ಪಾಪಗಳಿಂದ ಮುಕ್ತನಾಗಬೇಕೆಂದು ಇಚ್ಛಿಸುವನೋ |

---

ಇಲ್ಲಿ ವೈಶ್ವಕರ್ಮಣಹೋಮದ ವಿಷಯದಲ್ಲಿ ಬೇರೆಬೇರೆಯ ಪಕ್ಷಗಳು ಉಕ್ತವಾಗಿವೆ.

ಸರ್ವಾಣಿ ತಸ್ಯಾನುದ್ರುತ್ಯ ಜುಹುಯಾತ್ತಾಜಗೇವ ಪಾಪ್ಮನೋ

ನಿರ್ಮುಚ್ಯತೇಽಥೋ ಖಲು ನಾನ್ಯೈವ ಸೂಕ್ತಾಭ್ಯಾಂ ಜುಹೋತಿ ನಾನ್ಯೈವ

ಸೂಕ್ತಯೋರ್ವೀರ್ಯಂ ದಧಾತ್ಯಥೋ ಪ್ರತಿಷ್ಠಿತ್ಯೈ ॥ ೨೩–5 ॥

[ದೇವಾಃ ಪ್ರಾಜಾಪತ್ಯೋ ವೃತ್ರಶ್ಚಿರಂ ಪಾಪ್ಮನಶ್ಚತ್ವಾರಿಗ್ಂಶಚ್ಚ ॥]

---

ಸರ್ವಾಣಿ । ತಸ್ಯ । ಅನುದ್ರುತ್ಯೇತ್ಯನು–ದ್ರುತ್ಯ । ಜುಹುಯಾತ್ । ತಾಜಕ್ । ಏವ । ಪಾಪ್ಮನಃ । ನಿರಿತಿ । ಮುಚ್ಯತೇ । ಅಥೋ ಇತಿ । ಖಲು । ನಾನಾ । ಏವ । ಸೂಕ್ತಾಭ್ಯಾಮಿತಿ ಸು–ಉಕ್ತಾಭ್ಯಾಮ್ । ಜುಹೋತಿ । ನಾನಾ । ಏವ । ಸೂಕ್ತಯೋರಿತಿ ಸು–ಉಕ್ತಯೋಃ । ವೀರ್ಯಮ್ । ದಧಾತಿ । ಅಥೋ ಇತಿ । ಪ್ರತಿಷ್ಠಿತ್ಯಾ ಇತಿ ಪ್ರತಿ–ಸ್ಥಿತ್ಯೈ ॥ (೨೩) ॥

---

| ಬ್ರಾಹ್ಮಣಭಾಗ | ವಿವರಣೆ |
|---|---|
| ತಸ್ಯ ಸರ್ವಾಣಿ ಅನುದ್ರುತ್ಯ ಜುಹುಯಾತ್ | ಅವನಿಗಾಗಿ ಎಲ್ಲ ಮಂತ್ರಗಳನ್ನೂ ಉಚ್ಚರಿಸಿ ಕೊನೆಯಲ್ಲಿ ಒಂದು ಹೋಮವನ್ನು ಅನುಷ್ಠಿಸಬೇಕು. |
| ತಾಜಕ್ ಏವ ಪಾಪ್ಮನಃ ನಿರ್ಮುಚ್ಯತೇ | ಇದರಿಂದ ಆ ಯಜಮಾನನು ಶೀಘ್ರವಾಗಿ ಪಾಪಮುಕ್ತನಾಗುತ್ತಾನೆ. |
| ಅಥೋ ಖಲು | ಅಥವಾ |
| ಸೂಕ್ತಾಭ್ಯಾಮ್ ನಾನಾ ಏವ ಜುಹೋತಿ | ಎರಡು ಸೂಕ್ತಗಳಿಂದ ಬೇರೆಬೇರೆಯಾಗಿಯೇ ಹೋಮ ಮಾಡಬೇಕು. |
| ಸೂಕ್ತಯೋಃ ವೀರ್ಯಮ್ ನಾನಾ ಏವ ದಧಾತಿ | (ಇದರಿಂದ ಅಧ್ವರ್ಯುವು) ಸೂಕ್ತಗಳಿಗೆ ಸಂಬಂಧಿಸಿದ ಸಾಮರ್ಥ್ಯವನ್ನು (ಯಜಮಾನನಿಗೆ) ಬೇರೆ ಬೇರೆಯಾಗಿಯೇ ಹೊಂದಿಸಿಕೊಟ್ಟವನಾಗುತ್ತಾನೆ. |
| ಅಥೋ ಪ್ರತಿಷ್ಠಿತ್ಯೈ | ಮತ್ತು ಇದು ಯಜಮಾನನ ಪ್ರಕೃಷ್ಟಸ್ಥಿತಿಗೂ ಕಾರಣವಾಗುತ್ತದೆ. |

## ॥ ಷಷ್ಠೋಽನುವಾಕಃ ॥

ಉದೇನಮುತ್ತರಾಂ ನಯೇತಿ ಸಮಿಧ ಆ ದಧಾತಿ ಯಥಾ ಜನಂ
ಯತೇಽವಸಂ ಕರೋತಿ ತಾದೃಗೇವ ತತ್ತ್ರಿಸ್ರ ಆ ದಧಾತಿ

---

ಉದಿತಿ । ಏನಮ್ । ಉತ್ತರಾಮಿತ್ಯುತ್-ತರಾಮ್ । ನಯ । ಇತಿ । ಸಮಿಧ ಇತಿ ಸಮ್-ಇಧಃ । ಏತಿ । ದಧಾತಿ ।
ಯಥಾ । ಜನಮ್ । ಯತೇ । ಅವಸಮ್ । ಕರೋತಿ । ತಾದೃಕ್ । ಏವ । ತತ್ । ತ್ರಿಸ್ರಃ । ಏತಿ । ದಧಾತಿ ।

---

ಈ ಆರನೆಯ ಅನುವಾಕದಲ್ಲಿ ಆಗ್ನೀಧ್ರಸ್ಥಾನದಲ್ಲಿರುವ ಅಗ್ನಿಯಲ್ಲಿ ಸಮಿದಾಧಾನ, ಅನಂತರ ಪಶುಬಂಧಪ್ರದೇಶಕ್ಕೆ ಅಗ್ನಿಯನ್ನು ತೆಗೆದುಕೊಂಡು ಹೋಗುವುದು ಮುಂತಾದವುಗಳು ಉಕ್ತವಾಗಿವೆ.

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ಸಮಿದಾಧಾನವಿಧಿ; ಅರ್ಥವಾದ** |
| **ಉತ್ ಏನಮ್ ಉತ್ತರಾಮ್ ನಯ ಇತಿ ಸಮಿಧಮ್ ಆದಧಾತಿ** | 'ಅಗ್ನಿಯೇ! ಈ ಯಜಮಾನನಿಗೆ ಉತ್ಕೃಷ್ಟವಾದ ಐಶ್ವರ್ಯವನ್ನು ಉಂಟುಮಾಡು/ಯಜಮಾನನನ್ನೂ ಐಶ್ವರ್ಯವನ್ನೂ ಹೊಂದಿಸು' ಎಂಬ ಅರ್ಥದ ಈ ಮಂತ್ರದಿಂದ ಸಮಿತ್ತುಗಳನ್ನು ಅಗ್ನಿಯಲ್ಲಿ ಹಾಕಬೇಕು. |
| **ಯಥಾ ಜನಮ್ ಯತೇ ಅವಸಮ್ ಕರೋತಿ** | ಹೇಗೆ (ದೂರಪ್ರದೇಶದಲ್ಲಿರುವ)ಬಂಧುವನ್ನು/ಜನರನ್ನು ನೋಡಲು ಹೋಗುವವನಿಗೆ ಬುತ್ತಿಯನ್ನು ಕಟ್ಟಿಕೊಡುವರೋ |
| **ತತ್ ತಾದೃಕ್ ಏವ** | ಆ ಸಮಿದಾಧಾನವೂ ಕೂಡ ಅಗ್ನಿಗೆ ಹಾಗೆಯೇ ಆಗುತ್ತದೆ. |
| | **ಸಮಿತ್ಸಂಖ್ಯಾವಿಧಿ-ಅರ್ಥವಾದ** |
| **ತ್ರಿಸ್ರಃ ಆದಧಾತಿ** | ಮೂರು ಸಮಿತ್ತುಗಳನ್ನು ಹಾಕಬೇಕು. |

ತ್ರಿವೃದ್ವಾ ಅಗ್ನಿರ್ಯಾವಾನೇವಾಗ್ನಿಸ್ತಸ್ಮೈ ಭಾಗಧೇಯಂ ಕರೋತ್ಯೌದುಂಬರೀ

ರ್ಭವಂತ್ಯೂರ್ಗ್ವಾ ಉದುಂಬರ ಊರ್ಜಮೇವಾಸ್ಮಾ ಅಪಿ ದಧಾತ್ಯುದು ತ್ವಾ

ವಿಶ್ವೇ ದೇವಾ ಇತ್ಯಾಹ ಪ್ರಾಣಾ ವೈ ವಿಶ್ವೇ ದೇವಾಃ

---

ತ್ರಿವೃದಿತಿ ತ್ರಿ–ವೃತ್ । ವೈ । ಅಗ್ನಿಃ । ಯಾವಾನ್ । ಏವ । ಅಗ್ನಿಃ । ತಸ್ಮೈ । ಭಾಗಧೇಯಮಿತಿ ಭಾಗ–ಧೇಯಮ್ । ಕರೋತಿ । ಔದುಂಬರೀಃ । ಭವಂತಿ । ಊರ್ಕ್ । ವೈ । ಉದುಂಬರಃ । ಊರ್ಜಮ್ । ಏವ । ಅಸ್ಮೈ । ಅಪೀತಿ । ದಧಾತಿ । ಉದಿತಿ । ಉ । ತ್ವಾ । ವಿಶ್ವೇ । ದೇವಾಃ । ಇತಿ । ಆಹ । ಪ್ರಾಣಾ ಇತಿ ಪ್ರ–ಅನಾಃ । ವೈ । ವಿಶ್ವೇ । ದೇವಾಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಅಗ್ನಿಃ ತ್ರಿವೃತ್ ವೈ | ಅಗ್ನಿಯು ಆಹವನೀಯ, ಗಾರ್ಹಪತ್ಯ, ದಕ್ಷಿಣಾಗ್ನಿ ರೂಪನಾಗಿ ತ್ರಿಗುಣಾತ್ಮಕನಾಗಿದ್ದಾನೆ. |
| ಯಾವಾನ್ ಏವ ಅಗ್ನಿಃ | ಅಗ್ನಿಯು ಎಷ್ಟು ಪ್ರಮಾಣದಲ್ಲಿರುವನೋ |
| ತಸ್ಮೈ ಭಾಗಧೇಯಮ್ ಕರೋತಿ | (ಮೂರು ಸಮಿತ್ತುಗಳನ್ನು ಹಾಕುವುದರಿಂದ ಆ ತ್ರಿಗುಣಾತ್ಮಕನಾದ)ಅಗ್ನಿಗೆ ಅಧ್ವರ್ಯುವು ಸಮಿದ್ರೂಪ ವಾದ ಹವಿರ್ಭಾಗವನ್ನು ಸಮರ್ಪಿಸಿದವನಾಗುತ್ತಾನೆ. |

**ಸಮಿತ್ತುಗಳ ಪ್ರಕೃತಿವೃಕ್ಷವಿಧಿ; ಅರ್ಥವಾದ**

| | |
|---|---|
| ಔದುಂಬರೀಃ ಭವಂತಿ | ಸಮಿತ್ತುಗಳು ಅತ್ತಿಯ ಮರದವುಗಳಾಗಿರಬೇಕು. |
| ಊರ್ಕ್ ವೈ ಉದುಂಬರಃ | ಉದುಂಬರವು ಬಲಸ್ವರೂಪವಾಗಿದೆ. |
| ಅಸ್ಮೈ ಊರ್ಜಮ್ ಏವ ಅಪಿ ದಧಾತಿ | (ಈ ಔದುಂಬರಸಮಿದಾಧಾನದಿಂದ) ಅಧ್ವರ್ಯುವು ಈ ಅಗ್ನಿಗೆ ಬಲವನ್ನು ಹೊಂದಿಸಿಕೊಟ್ಟವನಾಗುತ್ತಾನೆ. |

**ಅಗ್ನಿಯ ಉದ್ಯಮನ (ಮೇಲಕ್ಕೆ ಎತ್ತುವುದು)ವಿಧಿ**

| | |
|---|---|
| ಉದು ತ್ವಾ ವಿಶ್ವೇ ದೇವಾಃ ಇತಿ ಆಹ | 'ಅಗ್ನಿಯೇ! ಸರ್ವಪ್ರಾಣಸ್ವರೂಪರಾದ ದೇವತೆಗಳು ಮೇಲೆತ್ತುವುದರಲ್ಲಿ ಕುಶಲವಾದ ಇಂದ್ರಿಯವೃತ್ತಿಗ ಳಿಂದ ನಿನ್ನನ್ನು ಮೇಲಕ್ಕೆತ್ತಲಿ' ಎಂದು ಈ ಮಂತ್ರ ಭಾಗವು ಹೇಳುತ್ತದೆ. |
| ವಿಶ್ವೇ ದೇವಾಃ ಪ್ರಾಣಾಃ ವೈ | ಸರ್ವದೇವತೆಗಳೂ ಪ್ರಾಣಸ್ವರೂಪರೇ. |

ಪ್ರಾಣೈ[ಪ್ರಾಣೈಃ(೨೪)ಏವ] ರೇವೈನಮುದ್ಯಚ್ಛತೇಽಗ್ನೇ ಭರಂತು ಚಿತ್ತಿಭಿರಿತ್ಯಾಹ ಯಸ್ಮಾ ಏವೈನಂ ಚಿತ್ತಾಯೋದ್ಯಚ್ಛತೇ ತೇನೈವೈನಗ್ಂ ಸಮರ್ಧಯತಿ ಪಂಚ ದಿಶೋ ದೈವೀರ್ಯಜ್ಞಮವಂತು ದೇವೀರಿತ್ಯಾಹ ದಿಶೋ ಹ್ಯೇಷೋಽನು

---

ಪ್ರಾಣೈರಿತಿ ಪ್ರ–ಅನೈಃ। (೨೪)। ಏವ। ಏನಮ್। ಉದಿತಿ। ಯಚ್ಛತೇ। ಅಗ್ನೇ। ಭರಂತು। ಚಿತ್ತಿಭಿರಿತಿ ಚಿತ್ತಿ–ಭಿಃ। ಇತಿ। ಆಹ। ಯಸ್ಮೈ। ಏವ। ಏನಮ್। ಚಿತ್ತಾಯ। ಉದ್ಯಚ್ಛತ ಇತ್ಯುತ್–ಯಚ್ಛತೇ। ತೇನ। ಏವ। ಏನಮ್। ಸಮಿತಿ। ಅರ್ಧಯತಿ। ಪಂಚ। ದಿಶಃ। ದೈವೀಃ। ಯಜ್ಞಮ್। ಅವಂತು। ದೇವೀಃ। ಇತಿ। ಆಹ। ದಿಶಃ। ಹಿ। ಏಷಃ। ಅನ್ವಿತಿ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಪ್ರಾಣೈಃ ಏವ ಏನಮ್ ಉದ್ಯಚ್ಛತೇ | ಈ ಮಂತ್ರಪಾಠದಿಂದ ಅಧ್ವರ್ಯುವು ಪ್ರಾಣಗಳಿಂದಲೇ ಈ ಅಗ್ನಿಯನ್ನು ಮೇಲಕ್ಕೆ ಎತ್ತಿದವನಾಗುತ್ತಾನೆ. |
| ಅಗ್ನೇ ಭರಂತು ಚಿತ್ತಿಭಿಃ ಇತಿ ಆಹ | 'ಅಗ್ನಿಯೇ! ಪ್ರಾಣದೇವತೆಗಳು ನಿನ್ನನ್ನು ಚಕ್ಷುವೇ ಮೊದಲಾದ ಇಂದ್ರಿಯವೃತ್ತಿಗಳಿಂದ ಭರಿಸಲಿ' ಎಂದು ಈ ಮಂತ್ರಭಾಗವು ಹೇಳುತ್ತದೆ. |
| ಯಸ್ಮೈ ಚಿತ್ತಾಯ ಏವ ಏನಮ್ ಉದ್ಯಚ್ಛತೇ | ಅಧ್ವರ್ಯುವು ಯಾವ ಕಾರ್ಯಕ್ಕಾಗಿ ಈ ಅಗ್ನಿಯನ್ನು ಮೇಲಕ್ಕೆ ಎತ್ತುವನೋ |
| ತೇನ ಏವ ಏನಮ್ ಸಮರ್ಧಯತಿ | ಆ ಕಾರ್ಯದಿಂದಲೇ ಈ ಅಗ್ನಿಯನ್ನು ಸಮೃದ್ಧಿಗೊಳಿಸಿದವನಾಗುತ್ತಾನೆ. |
| ಪಂಚ ದಿಶಃ ದೈವೀಃ ಯಜ್ಞಮ್ ಅವಂತು ದೇವೀಃ ಇತಿ ಆಹ | 'ಐದು ದಿಕ್ಕುಗಳು ಇಂದ್ರಾದಿದೇವತೆಗಳಿಗೆ ಸಂಬಂಧಿಸಿವೆ. ತಾವೂ ದೇವತಾಸ್ವರೂಪಗಳೇ ಆಗಿವೆ. ಅವು ಯಜ್ಞವನ್ನು ರಕ್ಷಿಸಲಿ' ಎಂದು ಈ ಮಂತ್ರಭಾಗವು ಹೇಳುತ್ತದೆ. |
| ಏಷಃ ದಿಶಃ ಅನು | ಈ ಯಜಮಾನನು ಪೂರ್ವ ಮೊದಲಾದ ದಿಕ್ಕುಗಳ ದೇವತೆಗಳನ್ನು ಕ್ರಮವಾಗಿ ಯಜ್ಞದ ರಕ್ಷಣೆಗಾಗಿ |

ಪ್ರಚ್ಯವತೇಽಪಾಮತಿಂ ದುರ್ಮತಿಂ ಬಾಧಮಾನಾ ಇತ್ಯಾಹ ರಕ್ಷಸಾಮಪಹತ್ಯೈ

ರಾಯಸ್ಪೋಷೇ ಯಜ್ಞಪತಿಮಾಭಜಂತೀರಿತ್ಯಾಹ ಪಶವೋ ವೈ ರಾಯಸ್ಪೋಷಃ

[(೨೫)] ಪಶೂನೇವಾವ ರುಂಧೇ ಷಡ್ಭಿರ್, ಹರತಿ ಷಡ್ವಾ ಋತವ

---

ಪ್ರಚ್ಯವತ ಇತಿ ಪ್ರ–ಚ್ಯವತೇ । ಅಪೇತಿ । ಅಮತಿಮ್ । ದುರ್ಮತಿಮಿತಿ ದುಃ–ಮತಿಮ್ । ಬಾಧಮಾನಾಃ । ಇತಿ । ಆಹ । ರಕ್ಷಸಾಮ್ । ಅಪಹತ್ಯಾ ಇತ್ಯಪ–ಹತ್ಯೈ । ರಾಯಃ । ಪೋಷೇ । ಯಜ್ಞಪತಿಮಿತಿ ಯಜ್ಞ–ಪತಿಮ್ । ಆಭಜಂತೀರಿತ್ಯಾ–ಭಜಂತೀಃ । ಇತಿ । ಆಹ । ಪಶವಃ । ವೈ । ರಾಯಃ । ಪೋಷಃ । (೨೫) । ಪಶೂನ್ । ಏವ । ಅವೇತಿ । ರುಂಧೇ । ಷಡ್ಭಿರಿತಿ ಷಟ್–ಭಿಃ । ಹರತಿ । ಷಟ್ । ವೈ । ಋತವಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಪ್ರಚ್ಯವತೇ ಹಿ** | ಪ್ರೇರಿಸಿದವನಾಗುತ್ತಾನೆ. |
| **ಅಪಾಮತಿಮ್ ದುರ್ಮತಿಮ್ ಬಾಧಮಾನಾಃ ಇತಿ ಆಹ** | 'ಪ್ರಜ್ಞಾಮಾಂದ್ಯ, ಪಾಪಬುದ್ಧಿ ಮೊದಲಾದವುಗಳು ರಾಕ್ಷಸಕಲ್ಪಿತವಾದವುಗಳು. ದಿಗ್ದೇವತೆಗಳು ಇವುಗಳನ್ನು ಹೋಗಲಾಡಿಸಿ ಯಜ್ಞವನ್ನು ರಕ್ಷಿಸಲಿ' ಎಂದು 'ಅಪಾಮತಿಂ' ಎಂಬ ಮಂತ್ರಭಾಗವು ಹೇಳುತ್ತದೆ. |
| **ರಕ್ಷಸಾಮ್ ಅಪಹತ್ಯೈ** | ಇದು ರಾಕ್ಷಸರನ್ನು ದೂರಮಾಡುವುದಕ್ಕಾಗಿ ಆಗುತ್ತದೆ. |
| **ರಾಯಃ ಪೋಷೇ ಯಜ್ಞಪತಿಮ್ ಆಭಜಂತೀಃ ಇತಿ ಆಹ** | 'ದೇವತೆಗಳು ಧನಸಮೃದ್ಧಿಯಿಂದ ಯಜ್ಞಪತಿಯಾದ ಯಜಮಾನನನ್ನು ಸೇವಿಸುತ್ತಾ/ಧನವನ್ನು ಕೊಡುತ್ತಾ ಯಜ್ಞವನ್ನು ರಕ್ಷಿಸಲಿ', ಎಂದು **'ರಾಯಸ್ಪೋಷೇ'** ಎಂಬ ಮಂತ್ರಭಾಗವು ಹೇಳುತ್ತದೆ. |
| **ಪಶವಃ ವೈ ರಾಯಃ ಪೋಷಃ** | ಪಶುಗಳೇ ಧನಸಮೃದ್ಧಿಯಾಗಿವೆ. |
| **ಪಶೂನ್ ಅವರುಂಧೇ ಏವ** | ಈ ಮಂತ್ರಪಾಠದಿಂದ ಯಜಮಾನನು ಪಶುಗಳನ್ನು ಹೊಂದಿದವನಾಗುತ್ತಾನೆ. |

**ಅಗ್ನಿಹರಣವಿಧಿ; ಅರ್ಥವಾದ**

| | |
|---|---|
| **ಷಡ್ಭಿಃ ಹರತಿ** | ಆರು ಮಂತ್ರಗಳಿಂದ ಅಗ್ನಿಯನ್ನು ತೆಗೆದುಕೊಂಡು ಹೋಗಬೇಕು. |
| **ಋತವಃ ಷಟ್ ವೈ** | ಋತುಗಳು ಆರು, |

ಋತುಭಿರೇವೈನಗ್ಂ ಹರತಿ ದ್ವೇ ಪರಿಗೃಹ್ಯವತೀ ಭವತೋ ರಕ್ಷಸಾಮಪಹತ್ಯೈ

ಸೂರ್ಯರಶ್ಮಿರ್ ಹರಿಕೇಶಃ ಪುರಸ್ತಾದಿತ್ಯಾಹ ಪ್ರಸೂತ್ಯೈ

ಋತುಭಿರಿತ್ಯೃತು-ಭಿಃ। ಏವ। ಏನಮ್। ಹರತಿ। ದ್ವೇ ಇತಿ। ಪರಿಗೃಹ್ಯವತೀ ಇತಿ ಪರಿಗೃಹ್ಯ-ವತೀ। ಭವತಃ। ರಕ್ಷಸಾಮ್। ಅಪಹತ್ಯಾ ಇತ್ಯಪ-ಹತ್ಯೈ। ಸೂರ್ಯರಶ್ಮಿರಿತಿ ಸೂರ್ಯ-ರಶ್ಮಿಃ। ಹರಿಕೇಶ ಇತಿ ಹರಿ-ಕೇಶಃ। ಪುರಸ್ತಾತ್। ಇತಿ। ಆಹ। ಪ್ರಸೂತ್ಯಾ ಇತಿ ಪ್ರ-ಸೂತ್ಯೈ।

| ಬ್ರಾಹ್ಮಣಭಾಗ | ವಿವರಣೆ |
|---|---|
| **ಋತುಭಿಃ ಏವ ಏನಮ್ ಹರತಿ** | (ಆರು ಸಂಖ್ಯೆಯ ಮಂತ್ರಗಳಿಂದ ಅಗ್ನಿಹರಣ ಮಾಡುವುದರಿಂದ ಸಂಖ್ಯಾಸಾಮ್ಯವಾಗಿ) ಯಜಮಾನನು ಋತುಗಳಿಂದಲೇ ಅಗ್ನಿಯನ್ನು ತೆಗೆದುಕೊಂಡು ಹೋದವನಾಗುತ್ತಾನೆ. |
| **ದ್ವೇ ಪರಿಗೃಹ್ಯವತೀ ಭವತಃ** | ಎರಡು ಮಂತ್ರಗಳು ಪರಿಗ್ರಹ ಎಂಬ ಶಬ್ದದಿಂದ ಕೂಡಿವೆ. |
| **ರಕ್ಷಸಾಮ್ ಅಪಹತ್ಯೈ** | (ಹೀಗೆ ದೇವಪರಿಗೃಹೀತವಾದುದರಿಂದ ರಾಕ್ಷಸರು ಯಜ್ಞವನ್ನು ನಾಶಪಡಿಸಲಾರದೆ) ತಾವೇ ನಾಶ ಹೊಂದುವಂತಾಗುತ್ತದೆ./ಈ ಮಂತ್ರಪಾಠದಿಂದ ರಕ್ಷೋನಾಶವಾಗುತ್ತದೆ. |
| **ಸೂರ್ಯರಶ್ಮಿಃ ಹರಿಕೇಶಃ ಪುರಸ್ತಾತ್ ಇತಿ ಆಹ** | 'ಬಂಗಾರದ ಬಣ್ಣದ ಶಿಖೆ/ಜ್ವಾಲೆಗಳುಳ್ಳ ಈ ಅಗ್ನಿದೇವನು ಜಗತ್ತಿನ ಪೋಷಕನು. ಪೂರ್ವದಿಕ್ಕಿನಲ್ಲಿ ಉದಯಿಸಿ ಜಗತ್ತನ್ನೇ ತಮ್ಮ ತಮ್ಮ ಕೆಲಸಗಳಲ್ಲಿ ಪ್ರವರ್ತಿಸುವಂತೆ ಪ್ರೇರಿಸುವ ದೇವನೇ ಅವನಾಗಿರುತ್ತಾನೆ.' ಎಂದು **'ಸೂರ್ಯರಶ್ಮಿಃ'** ಎಂಬ ಮಂತ್ರವು ಹೇಳುತ್ತದೆ. |
| **ಪ್ರಸೂತ್ಯೈ** | ಇದು ಜಗತ್ತಿನ ಪ್ರೇರಣೆಗೆ ಕಾರಣವಾಗುತ್ತದೆ. |

**ತಾತ್ಪರ್ಯ:-'ಉದು ತ್ವಾ...ವಿಭಾವಸುಃ'** ಎಂಬ ಮಂತ್ರದಿಂದ ಅಗ್ನಿಯನ್ನು ಮೇಲಕ್ಕೆ ಎತ್ತಬೇಕು. ಬಳಿಕ **'ಪಂಚ ದಿಶಃ' 'ರಾಯಸ್ಪೋಷೇ' 'ಊರ್ಜಾ' 'ಸೂರ್ಯರಶ್ಮಿಃ' 'ದೇವಾ ದೇವೇಭ್ಯಃ'** ಎಂಬ ಐದು ಮಂತ್ರಗಳಿಂದ ಅಗ್ನಿಯನ್ನು ಒಯ್ಯಬೇಕು. ಉದ್ಯಮನಮಂತ್ರವನ್ನೂ ಸೇರಿ ಮಂತ್ರಗಳು ಆರಾಗುತ್ತವೆ. **'ಷಡ್ಭಿಃ ಹರತಿ'** ಎಂದು ಶ್ರುತಿವಚನ.

ತತಃ ಪಾವಕಾ ಆಶಿಷೋ ನೋ ಜುಷಂತಾಮಿತ್ಯಾಹಾನ್ನಂ ವೈ

ಪಾವಕೋಽನ್ನಮೇವಾವ ರುಂಧೇ ದೇವಾಸುರಾಸ್ಸಂಯತ್ತಾ

ಆಸನ್ತೇ ದೇವಾ ಏತದಪ್ರತಿರಥಮಪಶ್ಯ–

---

ತತಃ । ಪಾವಕಾಃ । ಆಶಿಷ ಇತ್ಯಾ–ಶಿಷಃ । ನಃ । ಜುಷಂತಾಮ್ । ಇತಿ । ಆಹ । ಅನ್ನಮ್ । ವೈ । ಪಾವಕಃ । ಅನ್ನಮ್ । ಏವ । ಅವೇತಿ । ರುಂಧೇ । ದೇವಾಸುರಾ ಇತಿ ದೇವ–ಅಸುರಾಃ । ಸಂಯತ್ತಾ ಇತಿ ಸಮ್–ಯತ್ತಾಃ । ಆಸನ್ನ್ । ತೇ । ದೇವಾಃ । ಏತತ್ । ಅಪ್ರತಿರಥಮಿತ್ಯಪ್ರತಿ–ರಥಮ್ । ಅಪಶ್ಯನ್ನ್ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ತತಃ ಪಾವಕಾಃ ಆಶಿಷಃ ನಃ ಜುಷಂತಾಮ್ ಇತಿ ಆಹ** | ಆಹವನೀಯಾದಿ ಅಗ್ನಿಗಳು (ಉಪಾಕರಣ, ಸ್ಥಿತಿ, ಸಂಸ್ಕಾರ, ಹವಿಷ್ಪ್ರದಾನ ಎಂಬ ನಾಲ್ಕು ಬಗೆಯಿಂದ ಹವಿಸ್ಸಿನಿಂದ ಅನುಷ್ಠಿಸುವ ಯಜ್ಞದಿಂದ) ನಾವು ಬಯಸುವ ಫಲವನ್ನು ನೀಡಲಿ ಎಂದು ಆರನೆಯ ಮಂತ್ರದ ನಾಲ್ಕನೆಯ ಪಾದವು ಹೇಳುತ್ತದೆ. |
| **ಅನ್ನಮ್ ವೈ ಪಾವಕಃ** | ಅಗ್ನಿಯು ಶುದ್ಧಗೊಳಿಸುವ ಪಾವಕನು. ಅನ್ನಪಾಕ ಸಾಧಕನಾದುದರಿಂದ ಅವನೇ ಅನ್ನಸ್ವರೂಪನೂ ಆಗಿರುತ್ತಾನೆ. |
| **ಅನ್ನಮ್ ಅವರುಂಧೇ ಏವ** | ಈ ಮಂತ್ರಪಾಠದಿಂದ ಯಜಮಾನನು ನಿಶ್ಚಯವಾಗಿಯೂ ಅನ್ನವನ್ನು ಹೊಂದುವನು. |

### ಅಪ್ರತಿರಥಸೂಕ್ತದ ವಿನಿಯೋಗ; ಅರ್ಥವಾದ

| | |
|---|---|
| **ದೇವಾಸುರಾಃ ಸಂಯತ್ತಾಃ ಆಸನ್** | ದೇವತೆಗಳು ಮತ್ತು ರಾಕ್ಷಸರು ಒಮ್ಮೆ ಯುದ್ಧಸನ್ನದ್ಧರಾದರು. |
| **ತೇ ದೇವಾಃ ಏತತ್ ಅಪ್ರತಿರಥಮ್ ಅಪಶ್ಯನ್** | ಆಗ ದೇವತೆಗಳು ಜಯಸಾಧನವಾಗಿ ಈ ಅಪ್ರತಿರಥ ಸೂಕ್ತವನ್ನು ಆಲೋಚಿಸಿ ತಿಳಿದುಕೊಂಡರು. |

---

ಅವುಗಳಲ್ಲಿ '**ರಾಯಸ್ಪೋಷೇ '** '**ಊರ್ಜಾ**' ಈ ಎರಡು ಮಂತ್ರಗಳಲ್ಲಿ '**ಪರಿಗೃಹ್ಯ**'ಶಬ್ದವಿದೆ. ಹೀಗಾಗಿ ಈ ಎರಡು ಋಕ್‌ಗಳು '**ಪರಿಗೃಹ್ಯವತಿ**'ಗಳಾಗಿವೆ. ಋತ್ವಿಗ್ಯಜಮಾನರು '**ದೇವಶ್ರೀಃ**' ಮೊದಲಾದ ವಿಶೇಷಣಗಳುಳ್ಳ ಅಗ್ನಿಯನ್ನು ಸ್ವೀಕರಿಸಿ ಈ ಯಜ್ಞವನ್ನು ಹೊಂದುವರು ಎಂದು ತಾತ್ಪರ್ಯವಿದೆ.

ನ್ತೇನ ವೈ ತೇಽಪ್ರ[ಽಪ್ರತಿ(೨೬)ಅಸುರಾ]ತ್ಯಸುರಾನಜಯನ್ತದಪ್ರತಿರಥಸ್ಯಾ

ಪ್ರತಿರಥತ್ವಂ ಯದಪ್ರತಿರಥಂ ದ್ವಿತೀಯೋ ಹೋತಾಽನ್ವಾಹಾಪ್ರತ್ಯೇವ ತೇನ

ಯಜಮಾನೋ ಭ್ರಾತೃವ್ಯಾಞ್ಜಯತ್ಯಥೋ ಅನಭಿಜಿತಮೇವಾಭಿ ಜಯತಿ

ದಶರ್ಚಂ ಭವತಿ

---

ತೇನ । ವೈ । ತೇ । ಅಪ್ರತಿ । (೨೬) । ಅಸುರಾನ್ । ಅಜಯನ್ನ್ । ತತ್ । ಅಪ್ರತಿರಥಸ್ಯೇತ್ಯಪ್ರತಿ-ರಥಸ್ಯ ।

ಅಪ್ರತಿರಥತ್ವಮಿತ್ಯಪ್ರತಿರಥ-ತ್ವಮ್ । ಯತ್ । ಅಪ್ರತಿರಥಮಿತ್ಯಪ್ರತಿ-ರಥಮ್ । ದ್ವಿತೀಯಃ । ಹೋತಾ ।

ಅನ್ವಾಹೇತ್ಯನು-ಆಹ । ಅಪ್ರತಿ । ಏವ । ತೇನ । ಯಜಮಾನಃ । ಭ್ರಾತೃವ್ಯಾನ್ । ಜಯತಿ । ಅಥೋ ಇತಿ ।

ಅನಭಿಜಿತಮಿತ್ಯನಭಿ-ಜಿತಮ್ । ಏವ । ಅಭೀತಿ । ಜಯತಿ । ದಶರ್ಚಮಿತಿ ದಶ-ಋಚಮ್ । ಭವತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ತೇನ ವೈ ತೇ ಅಪ್ರತಿ ಅಸುರಾನ್ ಅಜಯನ್** | ಆ ದೇವತೆಗಳು ಆ ಅಪ್ರತಿರಥಸೂಕ್ತದಿಂದ ಎದುರಿಲ್ಲದಂತೆ ಎಲ್ಲ ಅಸುರರನ್ನು ಜಯಿಸಿದರು. |
| ***ತತ್ ಅಪ್ರತಿರಥಸ್ಯ ಅಪ್ರತಿರಥತ್ವಮ್** | ಹೀಗೆ ಜಯಸಾಧನವಾಗಿರುವುದೇ ಆ ಸೂಕ್ತದ ಅಪ್ರತಿರಥತ್ವ. ಸೂಕ್ತವು ಅನ್ವರ್ಥವಾಗಿದೆ. |
| **ದ್ವಿತೀಯಃ ಹೋತಾ ಯತ್ ಅಪ್ರತಿರಥಮ್ ಅನ್ವಾಹ** | ಎರಡನೆಯ ಹೋತೃವಾದ ಮೈತ್ರಾವರುಣನು ಅನುವಚನ ಮಾಡುವುದರಿಂದ (ಆ ಪ್ರಭಾವದಿಂದ) |
| **ತೇನ ಯಜಮಾನಃ ಅಪ್ರತಿ ಏವ ಭ್ರಾತೃವ್ಯಾನ್ ಜಯತಿ** | ಯಜಮಾನನು ಎದುರಾಳಿಯಿಲ್ಲದಂತೆಯೇ ಹಗೆಗಳನ್ನು ಗೆಲ್ಲುವನು. |
| **ಅಥೋ ಅನಭಿಜಿತಮ್ ಏವ ಅಭಿಜಯತಿ** | ಮತ್ತು ಮೊದಲು ತಾನು ಗೆಲ್ಲದಿರುವ ಧನ-ದೇಶಾದಿಗಳನ್ನೂ ಗೆಲ್ಲುವನು. |

ಸೂಕ್ತದ ಸಂಖ್ಯಾಪ್ರಶಂಸೆ

| | |
|---|---|
| **ದಶರ್ಚಮ್ ಭವತಿ** | ಈ ಸೂಕ್ತವು ಹತ್ತು ಋಕ್ಕುಗಳಿಂದ ಕೂಡಿದೆ. |

---

* **ಪ್ರತಿಕೂಲಃ ರಥಃ ಯತ್ರ ನಾಸ್ತಿ ತತ್ ಅಪ್ರತಿರಥಮ್ ।**
ಯಾವ ಸೂಕ್ತದ ಪಾಠದಿಂದ ಎದುರಾಳಿಯಾದ ರಥವೇ ಇರುವುದಿಲ್ಲವೋ ಅಂತಹ ಸೂಕ್ತ ಅಪ್ರತಿರಥಸೂಕ್ತ. ಸಾ.ಭಾ

ದಶಾಕ್ಷರಾ ವಿರಾಡ್ವಿರಾಜೇಮೌ ಲೋಕೌ

ವಿಧೃತಾವನಯೋರ್ಲೋಕಯೋರ್ವಿಧೃತ್ಯಾ ಅಥೋ ದಶಾಕ್ಷರಾ ವಿರಾಡನ್ನಂ

ವಿರಾಡ್ವಿರಾಜ್ಯೇವಾನ್ನಾದ್ಯೇ ಪ್ರತಿ ತಿಷ್ಠತ್ಯಸದಿವ ವಾ ಅಂತರಿಕ್ಷ–

ದಶಾಕ್ಷರೇತಿ ದಶ–ಅಕ್ಷರಾ । ವಿರಾಡಿತಿ ವಿ–ರಾಟ್ । ವಿರಾಜೇತಿ ವಿ–ರಾಜಾ । ಇಮೌ । ಲೋಕೌ । ವಿಧೃತಾವಿತಿ ವಿ–ಧೃತೌ । ಅನಯೋಃ । ಲೋಕಯೋಃ । ವಿಧೃತ್ಯಾ ಇತಿ ವಿ–ಧೃತ್ಯೈ । ಅಥೋ ಇತಿ । ದಶಾಕ್ಷರೇತಿ ದಶ–ಅಕ್ಷರಾ । ವಿರಾಡಿತಿ ವಿ–ರಾಟ್ । ಅನ್ನಮ್ । ವಿರಾಡಿತಿ ವಿ–ರಾಟ್ । ವಿರಾಜೀತಿ ವಿ–ರಾಜಿ । ಏವ । ಅನ್ನಾದ್ಯ ಇತ್ಯನ್ನ–ಅದ್ಯೇ । ಪ್ರತೀತಿ । ತಿಷ್ಠತಿ । ಅಸತ್ । ಇವ । ವೈ । ಅಂತರಿಕ್ಷಮ್ ।

| ಬ್ರಾಹ್ಮಣಭಾಗ | ವಿವರಣೆ |
| --- | --- |
| **ದಶಾಕ್ಷರಾ ವಿರಾಟ್** | ವಿರಾಟ್ಛಂದಸ್ಸೂ ಹತ್ತು ಅಕ್ಷರಗಳುಳ್ಳದ್ದಾಗಿದೆ. |
| **ವಿರಾಜಾ ಇಮೌ ಲೋಕೌ ವಿಧೃತೌ** | ವಿರಾಟ್ಛಂದಸ್ಸಿನ ಸಾಮರ್ಥ್ಯದಿಂದಲೇ ಈ ಭೂಮಿ–ಅಂತರಿಕ್ಷಲೋಕಗಳು ಧರಿಸಲ್ಪಟ್ಟಿವೆ. |
| **ಅನಯೋಃ ಲೋಕಯೋಃ ವಿಧೃತ್ಯೈ** | (ಈ ದಶರ್ಚಸೂಕ್ತವು)ಈ ಲೋಕಗಳ ವಿಶೇಷವಾದ ಧಾರಣಕ್ಕೆ ಸಮರ್ಥವಾಗುತ್ತದೆ. |
| **ಅಥೋ ದಶಾಕ್ಷರಾ ವಿರಾಟ್** | ಮತ್ತು ವಿರಾಟ್ ಛಂದಸ್ಸು ಹತ್ತು ಅಕ್ಷರಗಳಿಂದ ಕೂಡಿದೆ. |
| **ಅನ್ನಮ್ ವಿರಾಟ್** | ಈ ವಿರಾಟ್ ಛಂದಸ್ಸು ಅನ್ನಹೇತುವಾಗಿ ಅನ್ನ ಸ್ವರೂಪವೇ ಆಗಿದೆ. |
| **ವಿರಾಜಿ ಅನ್ನಾದ್ಯೇ ಏವ ಪ್ರತಿತಿಷ್ಠತಿ** | (ಆದುದರಿಂದ ಈ ಸೂಕ್ತದ ಅನುವಚನದಿಂದ) ಯಜಮಾನನು ದಶಾಕ್ಷರವಾದ ವಿರಾಟ್ಛಂದಸ್ಸಿನಲ್ಲಿಯೂ ಅದರ ಫಲವಾದ ಅನ್ನದಲ್ಲಿಯೂ ಪ್ರತಿಷ್ಠಿತನಾಗುವನು. |

ಅಶ್ಮಸ್ಥಾಪನವಿಧಿ; ಸಂಖ್ಯಾಪ್ರಶಂಸೆ

| | |
| --- | --- |
| **ಅಂತರಿಕ್ಷಮ್ ಅಸತ್ ಇವ ವೈ** | ಅಂತರಿಕ್ಷವು ಅಮೂರ್ತವಾದುದರಿಂದ ಶೂನ್ಯವಾಗಿ ಇಲ್ಲದಿರುವಂತೆಯೇ ಆಗಿದೆ. |

–ಮಂತರಿಕ್ಷಮಿವಾಽಽಗ್ನೀಧ್ರಮಾಗ್ನೀಧ್ರೇಽ[ಆಗ್ನೀಧ್ರೇ(೨೭)ಅಶ್ಮಾನಂ]ಶ್ಮಾನನ್ನಿ ದಧಾತಿ ಸತ್ತ್ವಾಯ ದ್ವಾಭ್ಯಾಂ ಪ್ರತಿಷ್ಠಿತ್ಯೈ ವಿಮಾನ ಏಷ ದಿವೋ ಮಧ್ಯ ಆಸ್ತ ಇತ್ಯಾಹ ವ್ಯೇವೈತಯಾ ಮಿಮೀತೇ

---

ಅಂತರಿಕ್ಷಮ್ । ಇವ । ಆಗ್ನೀಧ್ರಮಿತ್ಯಾಗ್ನಿ–ಇಧ್ರಮ್ । ಆಗ್ನೀಧ್ರ ಇತ್ಯಾಗ್ನಿ–ಇಧ್ರೇ । (೨೭) । ಅಶ್ಮಾನಮ್ । ನೀತಿ । ದಧಾತಿ । ಸತ್ತ್ವಾಯೇತಿ ಸತ್–ತ್ವಾಯ । ದ್ವಾಭ್ಯಾಮ್ । ಪ್ರತಿಷ್ಠಿತ್ಯಾ ಇತಿ ಪ್ರತಿ–ಸ್ಥಿತ್ಯೈ । ವಿಮಾನ ಇತಿ ವಿ–ಮಾನಃ । ಏಷಃ । ದಿವಃ । ಮಧ್ಯೇ । ಆಸ್ತೇ । ಇತಿ । ಆಹ । ವೀತಿ । ಏವ । ಏತಯಾ । ಮಿಮೀತೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಆಗ್ನೀಧ್ರಮ್ ಅಂತರಿಕ್ಷಮ್ ಇವ** | ಆಗ್ನೀಧ್ರವೂ ಶಕಟ–ಗ್ರಹ–ಸಾದನಾದಿಗಳು ಇಲ್ಲದುದರಿಂದ ಶೂನ್ಯಸದೃಶವೇ ಆಗಿದೆ. |
| **ಆಗ್ನೀಧ್ರೇ ಅಶ್ಮಾನಮ್ ನಿದಧಾತಿ ಸತ್ತ್ವಾಯ** | ಆಗ್ನೀಧ್ರಸ್ಥಾನದಲ್ಲಿ ಅಶ್ಮ(ಕಲ್ಲು)ವನ್ನು ಸ್ಥಾಪಿಸಬೇಕು. ಇದು ಶೂನ್ಯತ್ವವನ್ನು ಹೋಗಲಾಡಿಸಿ ಸತ್ತ್ವ(ಇರುವಿಕೆ)ವನ್ನುಂಟುಮಾಡುತ್ತದೆ. |
| **ದ್ವಾಭ್ಯಾಮ್ ಪ್ರತಿಷ್ಠಿತ್ಯೈ** | 'ವಿಮಾನ ಏಷಃ' 'ಮಧ್ಯೇ ದಿವಃ' ಎಂಬ ಎರಡು ಮಂತ್ರಗಳಿಂದ (ಅಶ್ಮವನ್ನು ಸ್ಥಾಪಿಸಬೇಕು) ಇದು ಯಜಮಾನನ ಪ್ರತಿಷ್ಠೆ(ಉತ್ತಮಸ್ಥಿತಿ)ಗೆ ಕಾರಣವಾಗುತ್ತದೆ. |
| **ವಿಮಾನಃ ಏಷಃ ದಿವಃ ಮಧ್ಯೇ ಆಸ್ತೇ ಇತಿ ಆಹ** | 'ಈ ಅಶ್ಮವು ವಿವಿಧವಾದ ಜಗತ್ತನ್ನು ನಿರ್ಮಿಸಲು ಆಗ್ನೀಧ್ರಸ್ಥಾನವಾದ ಅಂತರಿಕ್ಷದ ಮಧ್ಯದಲ್ಲಿ ಸ್ಥಾಪಿತವಾಗಿದೆ' ಎಂದು ಈ ಮಂತ್ರಭಾಗವು ಹೇಳುತ್ತದೆ. |
| **ಏತಯಾ ವಿ ಮಿಮೀತೇ ಏವ** | ಈ ಮಂತ್ರಪಠನದಿಂದ ಯಜಮಾನನು ಆಗ್ನೀಧ್ರವನ್ನು ವಸ್ತುವಿಶಿಷ್ಟವಾಗುವಂತೆ ನಿರ್ಮಿಸುತ್ತಾನೆ. |

---

**'ಆಶುಃ ಶಿಶಾನಃ'** ಎಂದು ಪ್ರಾರಂಭಗೊಳ್ಳುವ ಈ ಅಪ್ರತಿರಥಸೂಕ್ತದಲ್ಲಿ ಒಟ್ಟು ಹದಿನೈದು ಋಕ್‌ಗಳು ಇವೆ. ಇಲ್ಲಿ **'ಇಷವಸ್ತಾ ಜಯಂತು'** ಎಂಬಲ್ಲಿಯವರೆಗಿನ ಹತ್ತು ಮಂತ್ರಗಳನ್ನು ವಿನಿಯೋಗಿಸಲಾಗಿದೆ. ಉಳಿದ ಮಂತ್ರಗಳು ವಿಕಲ್ಪಾರ್ಥವಾಗಿವೆ.

ಮಧ್ಯೇ ದಿವೋ ನಿಹಿತಃ ಪೃಶ್ನಿರಶ್ಮೇತ್ಯಾಹಾನ್ನಂ ವೈ ಪೃಶ್ನ್ಯನ್ನಮೇವಾವ

ರುಂಧೇ ಚತಸೃಭಿರಾ ಪುಚ್ಛಾದೇತಿ ಚತ್ವಾರಿ ಛಂದಾಗ್ಂಸಿ

---

ಮಧ್ಯೇ। ದಿವಃ। ನಿಹಿತ ಇತಿ ನಿ-ಹಿತಃ। ಪೃಶ್ನಿಃ। ಅಶ್ಮಾ। ಇತಿ। ಆಹ। ಅನ್ನಮ್। ವೈ। ಪೃಶ್ನಿ। ಅನ್ನಮ್। ಏವ।

ಅವೇತಿ। ರುಂಧೇ। ಚತಸೃಭಿರಿತಿ ಚತಸೃ-ಭಿಃ। ಏತಿ। ಪುಚ್ಛಾತ್। ಏತಿ। ಚತ್ವಾರಿ। ಛಂದಾಗ್ಂಸಿ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಮಧ್ಯೇ ದಿವಃ ನಿಹಿತಃ ಪೃಶ್ನಿಃ ಅಶ್ಮಾ ಇತಿ ಆಹ** | 'ಶ್ವೇತವರ್ಣದ ಈ ಅಶ್ಮವು ದ್ಯುಲೋಕದ ಮಧ್ಯದಲ್ಲಿ ಸ್ಥಾಪಿತವಾಗಿ ರಂಜನೀಯವಾದ ಜಗತ್ತಿನ ಉತ್ಪತ್ತಿಪ್ರಳಯರೂಪವಾದ ಎರಡು ಕೊನೆಗಳನ್ನು ಪರಮೇಶ್ವರರೂಪದಿಂದ ಪಾಲಿಸುತ್ತಿದೆ.' ಎಂದು 'ಮಧ್ಯೇ ದಿವಃ' ಎಂಬ ಮಂತ್ರಭಾಗವು ಹೇಳುತ್ತದೆ. |
| **ಅನ್ನಮ್ ವೈ ಪೃಶ್ನಿ** | ಅನ್ನವು ಪೃಶ್ನಿ (ಬಿಳುಪು) ವರ್ಣವಾಗಿದೆ. ಅಶ್ಮವೂ ಶ್ವೇತವರ್ಣವಾಗಿದೆ. |
| **ಅನ್ನಮ್ ಅವರುಂಧೇ ಏವ** | ಈ ಮಂತ್ರಪಾಠದಿಂದ ಯಜಮಾನನು ಬಿಳಿಯ ಬಣ್ಣದ ಅನ್ನವನ್ನು ಹೊಂದುತ್ತಾನೆ. |

**ಚಿತಿಪುಚ್ಛಗಮನ; ಮಂತ್ರಾಂಶಗಳ ವಿವರಣೆ**

| | |
|---|---|
| **ಚತಸೃಭಿಃ ಆ ಪುಚ್ಛಾತ್ ಏತಿ** | ('ಇಂದ್ರಂ ವಿಶ್ವಾ ಅವೀವೃಧನ್' ಎಂದು ಆರಂಭವಾಗುವ) ನಾಲ್ಕು ಮಂತ್ರಗಳಿಂದ ಯಜಮಾನನು ಆಗ್ನೀಧ್ರದಿಂದ ಹೊರಟು ಪಕ್ಷಿಯ ಆಕಾರದ ಅಗ್ನಿಚಿತಿಯ ಪುಚ್ಛದವರೆಗೂ ಹೋಗಬೇಕು. |
| **ಛಂದಾಗ್ಂಸಿ ಚತ್ವಾರಿ** | ಗಾಯತ್ರೀ ಮುಂತಾದ ಛಂದಸ್ಸುಗಳು ನಾಲ್ಕಷ್ಟೆ. |

---

ಪಾಠಕ್ರಮದಲ್ಲಿ ಮುಂದೆ ಇರುವ ಅಪ್ರತಿರಥಸೂಕ್ತದ ವಿವರಣೆಯ ಬಳಿಕ ಹಿಂದಿನ ಅನುವಾಕದಲ್ಲಿ ವಿವರಣೆಯನ್ನು ನೀಡದಿರುವ ಮಂತ್ರಗಳ ವಿವರಣೆಯು ಬ್ರಾಹ್ಮಣದಲ್ಲಿದೆ.

ಅಶ್ಮವು ಜಗತ್ತನ್ನು ನಿರ್ಮಿಸಲಾರದು. ಜಗತ್ತನ್ನು ಆವರಿಸಿ ನಿಲ್ಲಲಾರದು. ಆದರೂ ಪರಮೇಶ್ವರನ ಗುಣಗಳನ್ನು ಆಧರಿಸಿ ಅಶ್ಮದ ಸ್ತುತಿಯಾದುದರಿಂದ ವಿರೋಧವಿಲ್ಲ. ಬೃಹತ್ತಾದ ವಸ್ತುವಿನ ಗುಣಗಳಿಂದ ಲಘುವಾದ ವಸ್ತುವಿನ ಸ್ತುತಿಯು, ಸ್ತುತಿಯಾದುದರಿಂದ ವಿರೋಧವನ್ನು ತಾರದು.

ಛಂದೋಭಿರೇವೇಂದ್ರಂ ವಿಶ್ವಾ ಅವೀವೃಧನ್ನಿತ್ಯಾಹ

ವೃದ್ಧಿಮೇವೋಪಾವರ್ತತೇ ವಾಜಾನಾಗ್‌ಂ ಸತ್ಪತಿಂ ಪತಿ[ಪತಿಮ್(೨೮)

ಇತ್ಯಾಹಾ]ಮಿತ್ಯಾಹಾನ್ನಂ ವೈ ವಾಜೋಽನ್ನಮೇವಾವ ರುಂಧೇ

---

ಛಂದೋಭಿರಿತಿ ಛಂದಃ-ಭಿಃ । ಏವ । ಇಂದ್ರಮ್ । ವಿಶ್ವಾ । ಅವೀವೃಧನ್ನ್ । ಇತಿ । ಆಹ । ವೃದ್ಧಿಮ್ । ಏವ । ಉಪಾವರ್ತತ ಇತ್ಯುಪ-ಆವರ್ತತೇ । ವಾಜಾನಾಮ್ । ಸತ್ಪತಿಮಿತಿ ಸತ್-ಪತಿಮ್ । ಪತಿಮ್ । (೨೮) । ಇತಿ । ಆಹ । ಅನ್ನಮ್ । ವೈ । ವಾಜಃ । ಅನ್ನಮ್ । ಏವ । ಅವೇತಿ । ರುಂಧೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಛಂದೋಭಿಃ ಏವ ಆ ಪುಚ್ಛಾತ್ ಏತಿ | (ಮಂತ್ರಗಳಿಗೂ ಛಂದಸ್ಸುಗಳಿಗೂ) ನಾಲ್ಕು ಎಂಬ ಸಂಖ್ಯಾಸಾಮ್ಯವಿರುವುದರಿಂದ ಛಂದಸ್ಸುಗಳಿಂದ ಕೂಡಿದವನಾಗಿಯೇ ಪ್ರಯಾಣ ಮಾಡಿದವನಾಗುತ್ತಾನೆ. |
| ಇಂದ್ರಮ್ ವಿಶ್ವಾ ಅವೀವೃಧನ್ ಇತಿ ಆಹ | 'ಸ್ತುತಿರೂಪವಾದ ಸರ್ವವಾಕ್ಕುಗಳಿಂದಲೂ, ಐಶ್ವರ್ಯಯುಕ್ತನಾದ ಅಗ್ನಿದೇವನನ್ನು ಋತ್ವಿಜರು ವೃದ್ಧಿಗೊಳಿಸಿದರು' ಎಂದು 'ಇಂದ್ರಂ ವಿಶ್ವಾ' ಎಂಬ ಮಂತ್ರಭಾಗವು ಹೇಳುತ್ತದೆ. |
| ವೃದ್ಧಿಮ್ ಏವ ಉಪಾವರ್ತತೇ | ಈ ಮಂತ್ರಪಾಠದಿಂದ ಯಜಮಾನನು ವೃದ್ಧಿಯನ್ನು ಹೊಂದಿಯೇ ಹೊಂದುತ್ತಾನೆ. |
| ವಾಜಾನಾಮ್ ಸತ್ಪತಿಮ್ ಪತಿಮ್ ಇತಿ ಆಹ | 'ಅಗ್ನಿದೇವನು ಅನ್ನಕ್ಕೆ ಪಾಲಕನಾದ ಸನ್ಮಾರ್ಗವರ್ತಿಯಾದ ಯಜಮಾನನನ್ನು ಪಾಲಿಸಲಿ' ಎಂಬುದು ಈ ಮಂತ್ರಭಾಗದ ಅರ್ಥವಾಗಿದೆ. |
| ಅನ್ನಮ್ ವೈ ವಾಜಃ | ವಾಜಶಬ್ದವು ಅನ್ನವೆಂಬ ಅರ್ಥವನ್ನು ಕೊಡುತ್ತದೆ. |
| ಅನ್ನಮ್ ಅವರುಂಧೇ ಏವ | ಈ ಮಂತ್ರಪಾಠದಿಂದ ಯಜಮಾನನು ಅನ್ನವನ್ನು ಹೊಂದುತ್ತಾನೆ. |

ಸುಮ್ನಹೂರ್ಯಜ್ಞೋ ದೇವಾಗ್ಂ ಆ ಚ ವಕ್ಷದಿತ್ಯಾಹ ಪ್ರಜಾ ವೈ
ಪಶವಸ್ಸುಮ್ನಂ ಪ್ರಜಾಮೇವ ಪಶೂನಾತ್ಮನ್ಧತ್ತೇ ಯಕ್ಷದಗ್ನಿರ್ದೇವೋ
ದೇವಾಗ್ಂ ಆ ಚ ವಕ್ಷದಿತ್ಯಾಹ ಸ್ವಗಾಕೃತ್ಯೈ ವಾಜಸ್ಯ ಮಾ
ಪ್ರಸವೇನೋದ್ಗ್ರಾಭೇಣೋದಗ್ರಭೀದಿತ್ಯಾಹಾ-

---

ಸುಮ್ನಹೂರಿತಿ ಸುಮ್ನ-ಹೂಃ । ಯಜ್ಞಃ । ದೇವಾನ್ । ಏತಿ । ಚ । ವಕ್ಷತ್ । ಇತಿ । ಆಹ । ಪ್ರಜೇತಿ ಪ್ರ-ಜಾ । ವೈ । ಪಶವಃ । ಸುಮ್ನಮ್ । ಪ್ರಜಾಮಿತಿ ಪ್ರ-ಜಾಮ್ । ಏವ । ಪಶೂನ್ । ಆತ್ಮನ್ನ್ । ಧತ್ತೇ । ಯಕ್ಷತ್ । ಅಗ್ನಿಃ । ದೇವಃ । ದೇವಾನ್ । ಏತಿ । ಚ । ವಕ್ಷತ್ । ಇತಿ । ಆಹ । ಸ್ವಗಾಕೃತ್ಯಾ ಇತಿ ಸ್ವಗಾ-ಕೃತ್ಯೈ । ವಾಜಸ್ಯ । ಮಾ । ಪ್ರಸವೇನೇತಿ ಪ್ರ-ಸವೇನ । ಉದ್ಗ್ರಾಭೇಣೇತ್ಯುತ್-ಗ್ರಾಭೇಣ । ಉದಿತಿ । ಅಗ್ರಭೀತ್ । ಇತಿ । ಆಹ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಸುಮ್ನಹೂಃ ಯಜ್ಞಃ ದೇವಾನ್ ಆ ಚ ವಕ್ಷತ್ ಇತಿ ಆಹ** | 'ಪ್ರಜಾ-ಪಶುರೂಪವಾದ ಸುಖವನ್ನು ಸಂಪಾದಿಸಿ ಕೊಡುವ ಯಜ್ಞವು ದೇವತೆಗಳನ್ನು ಆಹ್ವಾನಿಸಲಿ' ಎಂಬುದು ಈ ಮಂತ್ರಭಾಗದ ಅರ್ಥವಾಗಿದೆ. |
| **ಪ್ರಜಾ ವೈ ಪಶವಃ ಸುಮ್ನಮ್** | ಪ್ರಜೆಗಳೂ, ಪಶುಗಳೂ ಸುಮ್ನಶಬ್ದಾರ್ಥವಾಗಿವೆ. |
| **ಪ್ರಜಾಮ್ ಏವ ಪಶೂನ್ ಆತ್ಮನ್ ಧತ್ತೇ** | ಈ ಮಂತ್ರಪಾಠದಿಂದ ಯಜಮಾನನು ಪ್ರಜೆಗಳನ್ನೂ ಪಶುಗಳನ್ನೂ ಪಡೆಯುತ್ತಾನೆ. |
| **ಯಕ್ಷತ್ ಅಗ್ನಿಃ ದೇವಃ ದೇವಾನ್ ಆ ಚ ವಕ್ಷತ್ ಇತಿ ಆಹ** | 'ಅಗ್ನಿದೇವನು ದೇವತೆಗಳನ್ನು ಆಹ್ವಾನಿಸಲಿ' ಎಂದು 'ಯಕ್ಷದಗ್ನಿಃ' ಮೊದಲಾದ ಮಂತ್ರಭಾಗವು ಹೇಳುತ್ತದೆ. |
| **ಸ್ವಗಾಕೃತ್ಯೈ** | ಇದು ಆ ದೇವತೆಗಳನ್ನು ತನ್ನವರನ್ನಾಗಿ ಮಾಡಿ ಕೊಳ್ಳಲು ಅನುಕೂಲವಾಗುತ್ತದೆ. |
| **ವಾಜಸ್ಯ ಮಾ ಪ್ರಸವೇನ ಉದ್ಗ್ರಾಭೇಣ ಉದಗ್ರಭೀತ್ ಇತಿ ಆಹ** | 'ಪರಮೈಶ್ವರ್ಯಯುಕ್ತನಾದ ಅಗ್ನಿಯು ಯಜಮಾನನಿಗೆ ಉತ್ಕರ್ಷವನ್ನು ತರುವನು' ಎಂದು ಮಂತ್ರಭಾಗವು ಹೇಳುತ್ತದೆ. |

–ಸೌ ವಾ ಆದಿತ್ಯ ಉದ್ಯನ್ನುದ್ಗ್ರಾಭ ಏಷ ನಿಮ್ರೋಚನ್ನಿಗ್ರಾಭೋ ಬ್ರಹ್ಮಣೈ ವಾಽಽತ್ಮಾನಮುದ್ಗೃಹ್ಣಾತಿ ಬ್ರಹ್ಮಣಾ ಭ್ರಾತೃವ್ಯಂ ನಿ ಗೃಹ್ಣಾತಿ ॥ ೨೯–6 ॥

[ಪ್ರಾಣ್ಯೈಃ ಪೋಷೋಽಪ್ರತ್ಯಾಗ್ನೀಧ್ರೇ ಪತಿಮೇಷ ದಶ ಚ ॥]

---

ಅಸೌ । ವೈ । ಆದಿತ್ಯಃ । ಉದ್ಯನ್ನಿತ್ಯುತ್–ಯನ್ನ್ । ಉದ್ಗ್ರಾಭ ಇತ್ಯುತ್–ಗ್ರಾಭಃ । ಏಷಃ । ನಿಮ್ರೋಚನ್ನಿತಿ ನಿ–ಮ್ರೋಚನ್ನ್ । ನಿಗ್ರಾಭ ಇತಿ ನಿ–ಗ್ರಾಭಃ । ಬ್ರಹ್ಮಣಾ । ಏವ । ಆತ್ಮಾನಮ್ । ಉದ್ಗೃಹ್ಣಾತೀತ್ಯುತ್–ಗೃಹ್ಣಾತಿ । ಬ್ರಹ್ಮಣಾ । ಭ್ರಾತೃವ್ಯಮ್ । ನೀತಿ । ಗೃಹ್ಣಾತಿ ॥ (೨೯) ॥

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಉದ್ಯನ್ ಅಸೌ ಆದಿತ್ಯಃ ಉದ್ಗ್ರಾಭಃ ವೈ | ಉದಯಿಸುವ ಈ ಆದಿತ್ಯನು ಉದ್ಗ್ರಾಭನು. |
| ಏಷಃ ನಿಮ್ರೋಚನ್ ನಿಗ್ರಾಭಃ | ಅಸ್ತಮಿಸುವ ಸೂರ್ಯನೇ ನಿಗ್ರಾಭನು. |
| ಬ್ರಹ್ಮಣಾ ಏವ ಆತ್ಮಾನಮ್ ಉದ್ಗೃಹ್ಣಾತಿ | ಈ ಮಂತ್ರಪಾಠದಿಂದ ಪರಿವೃಢನಾದ ಆದಿತ್ಯನ ಅನುಗ್ರಹದಿಂದ ಯಜಮಾನನು ತನ್ನನ್ನು ಶ್ರೇಷ್ಠನನ್ನಾಗಿ ಮಾಡಿಕೊಳ್ಳುತ್ತಾನೆ. |
| ಬ್ರಹ್ಮಣಾ ಭ್ರಾತೃವ್ಯಮ್ ನಿಗೃಹ್ಣಾತಿ | ಯಜಮಾನನು ಮಂತ್ರಬಲದಿಂದ ಶತ್ರುವನ್ನು ನಿಗ್ರಹಿಸುತ್ತಾನೆ. |

---

ಉದ್ಗ್ರಾಭ–ನಿಗ್ರಾಭಶಬ್ದಗಳು ಸ್ರುಕ್ ಅನ್ನು ಮೇಲೆತ್ತುವಿಕೆಗೂ, ಕೆಳಗೆ ತರುವಿಕೆಗೂ ವ್ಯಾಕರಣಶಾಸ್ತ್ರದಲ್ಲಿ ಸಿದ್ಧವಾಗಿ ಹೇಳಲ್ಪಟ್ಟಿವೆ.

ಊರ್ಧ್ವಮುಖ–ಅಧೋಮುಖವೆಂಬ ಗತಿಗಳು ಸೂರ್ಯನಿಗೆ ಉದಯಾಸ್ತಗಳಲ್ಲಿ ಇರುವುದರಿಂದ ಹೋಲಿಕೆಯಿಂದ ಆ ಅರ್ಥದಲ್ಲಿಯೂ ಶ್ರುತಿಯಲ್ಲಿ ಹೇಳಲಾಗಿದೆ ಎಂದು ಭ.ಭಾ.ಭಾಷ್ಯದ ವಿಶೇಷವಿದೆ.

## ॥ ಸಪ್ತಮೋಽನುವಾಕಃ ॥

ಪ್ರಾಚೀಮನು ಪ್ರದಿಶಂ ಪ್ರೇಹಿ ವಿದ್ವಾನಿತ್ಯಾಹ ದೇವಲೋಕಮೇವೈತಯೋಪಾ
ವರ್ತತೇ ಕ್ರಮಧ್ವಮಗ್ನಿನಾ ನಾಕಮಿತ್ಯಾಹೇ–

---

ಪ್ರಾಚೀಮ್ । ಅನ್ವಿತಿ । ಪ್ರದಿಶಮಿತಿ ಪ್ರ–ದಿಶಮ್ । ಪ್ರೇತಿ । ಇಹಿ । ವಿದ್ವಾನ್ । ಇತಿ । ಆಹ । ದೇವಲೋಕಮಿತಿ ದೇವ–ಲೋಕಮ್ । ಏವ । ಏತಯಾ । ಉಪಾವರ್ತತ ಇತ್ಯುಪ–ಆವರ್ತತೇ । ಕ್ರಮಧ್ವಮ್ । ಅಗ್ನಿನಾ । ನಾಕಮ್ । ಇತಿ । ಆಹ ।

---

ಹಿಂದಿನ ಅನುವಾಕದಲ್ಲಿ ಅಪ್ರತಿರಥಸೂಕ್ತ ಮುಂತಾದ ವಿಷಯಗಳನ್ನು ಹೇಳಲಾಯಿತು.
ಈ ಏಳನೆಯ ಅನುವಾಕದಲ್ಲಿ ಅಗ್ನಿಚಿತಿಯಲ್ಲಿ ವಹ್ನಿಪ್ರಕ್ಷೇಪವು ಉಕ್ತವಾಗಿದೆ.

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ಚಿತಿಯಲ್ಲಿ ಅಗ್ನಿಸ್ಥಾಪನವಿಧಿ** |
| **ಪ್ರಾಚೀಮ್ ಅನು ಪ್ರದಿಶಮ್ ಪ್ರೇಹಿ ವಿದ್ವಾನ್ ಇತಿ ಆಹ** | 'ಅಗ್ನಿದೇವನೇ! ಶ್ರೇಷ್ಠವಾದ ಪೂರ್ವದಿಕ್ಕನ್ನು ತಿಳಿದಿರುವ ನೀನು ಕ್ರಮವಾಗಿ ಶ್ರೇಷ್ಠತೆಯನ್ನು/ಪ್ರಜ್ವಲಿಸುವಿಕೆಯನ್ನು ಹೊಂದು' ಎಂದು ಈ ಮಂತ್ರಭಾಗವು ಹೇಳುತ್ತದೆ. |
| **ಏತಯಾ ದೇವಲೋಕಮ್ ಏವ ಉಪಾವರ್ತತೇ** | ಈ ಮಂತ್ರಪಾಠದಿಂದ ಯಜಮಾನನು ಇಷ್ಟಕೆಗಳ ಚಿತಿಯಲ್ಲಿ ಅಗ್ನಿಯನ್ನು ಸಮರ್ಪಿಸುತ್ತಾ, ದೇವಲೋಕವನ್ನು ಹೊಂದಲು ಪ್ರವೃತ್ತನಾಗುತ್ತಾನೆ. |
| **ಕ್ರಮಧ್ವಮ್ ಅಗ್ನಿನಾ ನಾಕಮ್ ಇತಿ ಆಹ** | 'ಋತ್ವಿಗ್ಯಜಮಾನರೇ! ಯಜ್ಞಸಾಧನವಾದ ಉಖೆಯಲ್ಲಿ ಸ್ಥಾಪಿಸಿರುವ ಅಗ್ನಿಯನ್ನು ಧರಿಸಿರುವ ನೀವು ಅಗ್ನಿಯ ಮೇಲ್ಭಾಗದಲ್ಲಿ ಹೆಜ್ಜೆಯಿಡಿ' ಎಂದು ಈ ಮಂತ್ರಭಾಗವು ಹೇಳುತ್ತದೆ. |

-ಮಾನೇವೈತಯಾ ಲೋಕಾನ್ಕ್ರಮತೇ ಪೃಥಿವ್ಯಾ ಅಹಮುದಂತರಿಕ್ಷಮಾಽರುಹ

ಮಿತ್ಯಾಹೇಮಾನೇವೈತಯಾ ಲೋಕಾನ್ತ್ಸಮಾರೋಹತಿ ಸುವರ್ಯಂತೋ

ನಾಪೇಕ್ಷಂತ ಇತ್ಯಾಹ ಸುವರ್ಗಮೇವೈತಯಾ ಲೋಕಮೇತ್ಯ-

---

ಇಮಾನ್ । ಏವ । ಏತಯಾ । ಲೋಕಾನ್ । ಕ್ರಮತೇ । ಪೃಥಿವ್ಯಾಃ । ಅಹಮ್ । ಉದಿತಿ । ಅಂತರಿಕ್ಷಮ್ । ಏತಿ ।

ಆರುಹಮ್ । ಇತಿ । ಆಹ । ಇಮಾನ್ । ಏವ । ಏತಯಾ । ಲೋಕಾನ್ । ಸಮಾರೋಹತೀತಿ ಸಮ್-ಆರೋಹತಿ ।

ಸುವಃ । ಯಂತಃ । ನ । ಅಪೇತಿ । ಈಕ್ಷಂತೇ । ಇತಿ । ಆಹ । ಸುವರ್ಗಮಿತಿ ಸುವಃ-ಗಮ್ । ಏವ । ಏತಯಾ ।

ಲೋಕಮ್ । ಏತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಏತಯಾ ಇಮಾನ್ ಲೋಕಾನ್ ಕ್ರಮತೇ ಏವ** | ಈ ಮಂತ್ರಪಾಠದಿಂದ ಯಜಮಾನನು ಈ ಲೋಕಗಳನ್ನುದ್ದೇಶಿಸಿ ಹೆಜ್ಜೆಯಿಟ್ಟವನಾಗುತ್ತಾನೆ. |
| **ಪೃಥಿವ್ಯಾಃ ಅಹಮ್ ಉತ್ ಅಂತರಿಕ್ಷಮ್ ಆರುಹಮ್ ಇತಿ ಆಹ** | 'ಯಜಮಾನನಾದ ನಾನು ಪೃಥಿವಿಯ ಮೇಲ್ಭಾಗದಲ್ಲಿ ಇರುವ ಅಂತರಿಕ್ಷವನ್ನು ಏರುತ್ತೇನೆ' ಎಂದು **'ಪೃಥಿವ್ಯಾ'** ಎಂಬ ಈ ಮಂತ್ರಭಾಗವು ಹೇಳುತ್ತದೆ. |
| **ಏತಯಾ ಇಮಾನ್ ಲೋಕಾನ್ ಏವ ಸಮಾರೋಹತಿ** | ಈ ಋಕ್ಕಿನ ಪಾಠದಿಂದ ಯಜಮಾನನು ಈ ಲೋಕಗಳನ್ನು ಚೆನ್ನಾಗಿ ಏರಿದವನಾಗುತ್ತಾನೆ. |
| **ಸುವಃ ಯಂತಃ ನಾಪೇಕ್ಷಂತೇ ಇತಿ ಆಹ** | 'ಯಜಮಾನರು ಕರ್ಮಾನುಷ್ಠಾನಗಳಿಂದ ಅಗ್ನಿಯನ್ನು ಚೆನ್ನಾಗಿ ಉಪಚರಿಸುತ್ತಾರೆ. ಅವರು ಸರ್ವಜಗತ್ತಿನ ಧಾರಣಹೇತುವಾದ ಅಗ್ನಿಯ ಅನುಗ್ರಹದಿಂದ ಅಂತರಿಕ್ಷವನ್ನೂ, ದ್ಯಾವಾಪೃಥಿವಿಗಳನ್ನೂ ಏರುತ್ತಾರೆ. ಬಳಿಕ ಸ್ವರ್ಗನಿವಾಸನಾದ ಆದಿತ್ಯನ ಮಂಡಲವನ್ನೂ ಹೊಂದುತ್ತಾರೆ. ಬೇರೆಯ ಯಾವ ಸ್ಥಾನವನ್ನೂ ಅಪೇಕ್ಷಿಸುವುದಿಲ್ಲ' ಎಂದು **'ಸುವರ್ಯಂತಃ'** ಎಂಬ ಮಂತ್ರಭಾಗವು ಹೇಳುತ್ತದೆ. |
| **ಏತಯಾ ಸುವರ್ಗಮ್ ಲೋಕಮ್ ಏತಿ ಏವ** | ಈ ಋಕ್ಕಿನ ಪಾಠದಿಂದ ಯಜಮಾನನು ಸ್ವರ್ಗಲೋಕವನ್ನೇ ಹೊಂದುತ್ತಾನೆ. |

–ಗ್ನೇ ಪ್ರೇಹಿ[(೩೦)ಪ್ರಥಮೋ]ಪ್ರಥಮೋ ದೇವಯತಾಮಿತ್ಯಾಹೋಭಯೇಷ್ವೇವೈ ತಯಾ ದೇವಮನುಷ್ಯೇಷು ಚಕ್ಷುರ್ದಧಾತಿ ಪಂಚಭಿರಧಿ ಕ್ರಾಮತಿ ಪಾಂಕ್ತೋ ಯಜ್ಞೋ ಯಾವಾನೇವ ಯಜ್ಞಸ್ತೇನ ಸಹ ಸುವರ್ಗಲ್ಲೋಕಮೇತಿ

---

ಅಗ್ನೇ । ಪ್ರೇತಿ । ಇಹಿ । (೩೦) । ಪ್ರಥಮಃ । ದೇವಯತಾಮಿತಿ ದೇವ–ಯತಾಮ್ । ಇತಿ । ಆಹ । ಉಭಯೇಷು । ಏವ । ಏತಯಾ । ದೇವಮನುಷ್ಯೇಷ್ವಿತಿ ದೇವ–ಮನುಷ್ಯೇಷು । ಚಕ್ಷುಃ । ದಧಾತಿ । ಪಂಚಭಿರಿತಿ ಪಂಚ–ಭಿಃ । ಅಧೀತಿ । ಕ್ರಾಮತಿ । ಪಾಂಕ್ತಃ । ಯಜ್ಞಃ । ಯಾವಾನ್ । ಏವ । ಯಜ್ಞಃ । ತೇನ । ಸಹ । ಸುವರ್ಗಮಿತಿ ಸುವಃ–ಗಮ್ । ಲೋಕಮ್ । ಏತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಅಗ್ನೇ ಪ್ರೇಹಿ ಪ್ರಥಮಃ ದೇವಯತಾಮ್ ಇತಿ ಆಹ** | 'ಅಗ್ನಿದೇವನೇ! ನಿನ್ನನ್ನು ದೇವತೆಯಾಗಿ ಅಪೇಕ್ಷಿಸುವ ಯಜಮಾನರ ಉಪಕಾರಕ್ಕಾಗಿ ನೀನು ಮೊದಲು ಬಾ' ಎಂದು **'ಅಗ್ನೇ ಪ್ರೇಹಿ'** ಎಂಬ ಮಂತ್ರಭಾಗವು ಹೇಳುತ್ತದೆ. |
| **ಏತಯಾ ಉಭಯೇಷು ದೇವಮನುಷ್ಯೇಷು ಚಕ್ಷುಃ ದಧಾತಿ ಏವ** | ಈ ಋಕ್ಕಿನಿಂದ ಯಜಮಾನನು ದೇವತೆಗಳಲ್ಲಿಯೂ ಮನುಷ್ಯರಲ್ಲಿಯೂ ಕಣ್ಣನ್ನು ಸ್ಥಾಪಿಸಿದವನಾಗುತ್ತಾನೆ. |
| **ಪಂಚಭಿಃ ಅಧಿ ಕ್ರಾಮತಿ** | ಈ ಐದು ಮಂತ್ರಗಳಿಂದ (ಯಜಮಾನನು ಅಗ್ನಿಯನ್ನು ತೆಗೆದುಕೊಂಡು ಇಷ್ಟಕೆಗಳಿಂದ ನಿರ್ಮಿತವಾದ ಚಿತಿಯ) ಮೇಲ್ಭಾಗವನ್ನು ಏರಬೇಕು. |
| **ಪಾಂಕ್ತಃ ಯಜ್ಞಃ** | ಯಜ್ಞವು ಪಂಚಾಂಗಗಳಿಂದ/ಧಾನಾ ಮುಂತಾದ ಐದು ಹವಿಸ್ಸುಗಳಿಂದ ಕೂಡಿದೆ. |
| **ಯಾವಾನ್ ಏವ ಯಜ್ಞಃ ತೇನ ಸಹ ಸುವರ್ಗಮ್ ಲೋಕಮ್ ಏತಿ** | ಯಜ್ಞವು ಎಷ್ಟು ಪ್ರಮಾಣವುಳ್ಳದ್ದಾಗಿದೆಯೋ, ಅದರೊಡನೆ/ಸರ್ವಾಂಗಯುಕ್ತವಾದ ಯಜ್ಞದೊಡನೆ ಯಜಮಾನನು ಸ್ವರ್ಗಲೋಕವನ್ನು ಹೊಂದುವನು. |

ನಕ್ತೋಷಾಸೇತಿ ಪುರೋಽನುವಾಕ್ಯಾಮನ್ವಾಹ ಪ್ರತ್ಯಾ ಅಗ್ನೇ ಸಹಸ್ರಾಕ್ಷೇತ್ಯಾಹ ಸಾಹಸ್ರಃ ಪ್ರಜಾಪತಿಃ ಪ್ರಜಾಪತೇರಾಪ್ತ್ಯೈ ತಸ್ಮೈ ತೇ ವಿಧೇಮ ವಾಜಾಯ ಸ್ವಾಹೇತ್ಯಾಹಾ–

---

ನಕ್ತೋಷಾಸಾ । ಇತಿ । ಪುರೋನುವಾಕ್ಯಾಮಿತಿ ಪುರಃ–ಅನುವಾಕ್ಯಾಮ್ । ಅನ್ವಿತಿ । ಆಹ । ಪ್ರತ್ತ್ಯೈ । ಅಗ್ನೇ । ಸಹಸ್ರಾಕ್ಷೇತಿ ಸಹಸ್ರ–ಅಕ್ಷ । ಇತಿ । ಆಹ । ಸಾಹಸ್ರಃ । ಪ್ರಜಾಪತಿರಿತಿ ಪ್ರಜಾ–ಪತಿಃ । ಪ್ರಜಾಪತೇರಿತಿ ಪ್ರಜಾ–ಪತೇಃ । ಆಪ್ತ್ಯೈ । ತಸ್ಮೈ । ತೇ । ವಿಧೇಮ । ವಾಜಾಯ । ಸ್ವಾಹಾ । ಇತಿ । ಆಹ ।

---

| ಬ್ರಾಹ್ಮಣಭಾಗ | ವಿವರಣೆ |
| --- | --- |
| **ನಕ್ತೋಷಾಸಾ ಇತಿ ಪುರೋನುವಾಕ್ಯಾಮ್ ಅನ್ವಾಹ ಪ್ರತ್ತ್ಯೈ** | ಮುಂದಿನ ಮಂತ್ರದಿಂದ ಹವಿಸ್ಸನ್ನು ನೀಡುವುದಕ್ಕಾಗಿ ಪುರೋನುವಾಕ್ಯೆಯಾಗಿ **'ನಕ್ತೋಷಾಸಾ'** ಎಂಬ ಮಂತ್ರವನ್ನು ಯಜಮಾನನು ಹೇಳಬೇಕು. |
| ***ಅಗ್ನೇ ಸಹಸ್ರಾಕ್ಷ ಇತಿ ಆಹ** | ಅಗ್ನಿದೇವನೇ! ನೀನು ಸಹಸ್ರಸಂಖ್ಯಾಕವಾದ ಚಕ್ಷುರಾದಿಗಳ ಸಂಬಂಧವುಳ್ಳವನಾಗಿರುವೆ ಎಂದು ಪುರೋನುವಾಕ್ಯೆಯ ಎರಡನೆಯ ಮಂತ್ರವು ಹೇಳುತ್ತದೆ. |
| **ಪ್ರಜಾಪತಿಃ ಸಾಹಸ್ರಃ** | ಪ್ರಜಾಪತಿಯು ವಿಶ್ವರೂಪಧರನಾಗಿ ಸಾಹಸ್ರನಾಗಿರುತ್ತಾನೆ. |
| **ಪ್ರಜಾಪತೇಃ ಆಪ್ತ್ಯೈ** | ಈ ಮಂತ್ರವು ಪ್ರಜಾಪತಿದೇವನ ಅನುಗ್ರಹಪ್ರಾಪ್ತಿಗೆ ಕಾರಣವಾಗುತ್ತದೆ. |
| **ತಸ್ಮೈ ತೇ ವಿಧೇಮ ವಾಜಾಯ ಸ್ವಾಹಾ ಇತಿ ಆಹ** | 'ಅಗ್ನಿಯೇ! ಅಂತಹ ಸಹಸ್ರಾಕ್ಷತ್ವ ಮುಂತಾದ ಗುಣಯುಕ್ತನಾದ ವಿರಾಜ(ಅನ್ನ)ಸ್ವರೂಪನಾದ ನಿನಗೆ ಇದು ಹುತವಾಗಲಿ' ಎಂದು ಈ ಮಂತ್ರಭಾಗವು ಹೇಳುತ್ತದೆ. |

---

**ತಾತ್ಪರ್ಯ:–'ಅಗ್ನೇ ಪ್ರೇಹಿ'** ಎಂಬ ಋಕ್ಕಿನ ತಾತ್ಪರ್ಯವು ಹೀಗಿದೆ; ಅಗ್ನಿದೇವತೆಯು ದೇವತೆಗಳಿಗೂ ಮಾನವರಿಗೂ ಚಕ್ಷುಃಸ್ಥಾನೀಯನಾಗಿರುತ್ತಾನೆ/ಕಣ್ಣಾಗಿರುತ್ತಾನೆ. ಲೋಕದಲ್ಲಿ ನಡೆಯುವ ಮನುಷ್ಯನಿಗೆ ಕಣ್ಣು ಮೊದಲು ಪ್ರಸರಿಸುತ್ತದೆ. ಹಾಗೆಯೇ ಯಜಮಾನನಿಗಿಂತಲೂ ಮೊದಲು ಅಗ್ನಿಯು ಹೋಗಲಿ.

ಈ ಮಂತ್ರದಲ್ಲಿ ದೇವತೆಗಳ ಮತ್ತು ಮನುಷ್ಯರ ಕಣ್ಣುಗಳೆಂಬ ಶಬ್ದವು ಇರುವುದರಿಂದ ಉಭಯರಿಗೂ ಕಣ್ಣನ್ನು

* ಈ ಮಂತ್ರವು ಯಾಜ್ಯಾನುವಾಕ್ಯೆಯೆಂದು ಭ.ಭಾ.ಭಾಷ್ಯದಲ್ಲಿದೆ.

–ನ್ನಂ ವೈ ವಾಜೋಽನ್ನಮೇವಾವ[(೩೧)ರುಂಧೇ]ರುಂಧೇ ದಧ್ನಃ

ಪೂರ್ಣಾಮೌದುಂಬರೀಗ್ಂ ಸ್ವಯಮಾತೃಣ್ಣಾಯಾಂ ಜುಹೋತ್ಯೂರ್ಗ್ವೈ

ದಧ್ಯೂರ್ಗುದುಂಬರೋಽಸೌ ಸ್ವಯಮಾತೃಣ್ಣಾಽಮುಷ್ಯಾಮೇವೋರ್ಜಂ ದಧಾತಿ

ತಸ್ಮಾದಮುತೋಽರ್ವಾಚೀಮೂರ್ಜಮುಪಜೀವಾಮ

---

ಅನ್ನಮ್ । ವೈ । ವಾಜಃ । ಅನ್ನಮ್ । ಏವ । ಅವೇತಿ । (೩೧) । ರುಂಧೇ । ದಧ್ನಃ । ಪೂರ್ಣಾಮ್ । ಔದುಂಬರೀಮ್ । ಸ್ವಯಮಾತೃಣ್ಣಾಯಾಮಿತಿ ಸ್ವಯಮ್–ಆತೃಣ್ಣಾಯಾಮ್ । ಜುಹೋತಿ । ಊರ್ಕ್ । ವೈ । ದಧಿ । ಊರ್ಕ್ । ಉದುಂಬರಃ । ಅಸೌ । ಸ್ವಯಮಾತೃಣ್ಣೇತಿ ಸ್ವಯಮ್–ಆತೃಣ್ಣಾ । ಅಮುಷ್ಯಾಮ್ । ಏವ । ಊರ್ಜಮ್ । ದಧಾತಿ । ತಸ್ಮಾತ್ । ಅಮುತಃ । ಅರ್ವಾಚೀಮ್ । ಊರ್ಜಮ್ । ಉಪೇತಿ । ಜೀವಾಮಃ ।

---

| ಬ್ರಾಹ್ಮಣಭಾಗ | ವಿವರಣೆ |
| --- | --- |
| **ಅನ್ನಮ್ ವೈ ವಾಜಃ** | ವಾಜವು ಅನ್ನವಾಗಿದೆ. |
| **ಅನ್ನಮ್ ಅವರುಂಧೇ ಏವ** | ಈ ಮಂತ್ರಪಾಠದಿಂದ ಯಜಮಾನನು ಅನ್ನವನ್ನು ಹೊಂದುತ್ತಾನೆ. |
| **ದಧ್ನಃ ಪೂರ್ಣಾಮ್ ಔದುಂಬರೀಮ್ ಸ್ವಯಮಾತೃಣ್ಣಾಯಾಮ್ ಜುಹೋತಿ** | ಮೊಸರಿನಿಂದ ತುಂಬಿದ ಅತ್ತಿಯ ಮರದ ಸ್ರುಕ್ಕಿನಿಂದ ('ತಸ್ಮೈ ತೇ ವಿಧೇಮ' ಎಂಬ ಮಂತ್ರದಿಂದ) ಸ್ವಯಮಾತೃಣ್ಣೇಷ್ಟಕೆಯಲ್ಲಿ ಹೋಮವನ್ನು ಮಾಡಬೇಕು. |
| **ದಧಿ ಊರ್ಕ್ ವೈ** | ಮೊಸರು ಅನ್ನರೂಪವಾಗಿದೆ. |
| **ಉದುಂಬರಃ ಊರ್ಕ್** | ಅತ್ತಿಯ ಮರವೂ ಅನ್ನರೂಪವಾಗಿದೆ. |
| **ಅಸೌ ಸ್ವಯಮಾತೃಣ್ಣಾ** | ಸ್ವಯಮಾತೃಣ್ಣೇಷ್ಟಕೆಯು ಸ್ವರ್ಗರೂಪವಾಗಿದೆ. |
| **ಅಮುಷ್ಯಾಮ್ ಊರ್ಜಮ್ ದಧಾತಿ ಏವ** | ಹೀಗೆ ಹೋಮವನ್ನು ಮಾಡಿದ ಯಜಮಾನನು ಸ್ವರ್ಗಲೋಕದಲ್ಲಿಯೇ ಅನ್ನವನ್ನು ಸ್ಥಾಪಿಸಿದವನಾಗುತ್ತಾನೆ. |
| **ತಸ್ಮಾತ್ ಅಮುತಃ ಅರ್ವಾಚೀಮ್ ಊರ್ಜಮ್ ಉಪ ಜೀವಾಮಃ** | ಈ ಕಾರಣದಿಂದ ನಾವು ಸ್ವರ್ಗಲೋಕದಿಂದ ಕೆಳಕ್ಕೆ ಬೀಳುವ ಅನ್ನವನ್ನು ಅವಲಂಬಿಸಿ ಬದುಕುವೆವು. |

ಸ್ತಿಸೃಭಿಸ್ಸಾದಯತಿ ತ್ರಿವೃದ್ವಾ ಅಗ್ನಿರ್ಯಾವಾನೇವಾಗ್ನಿಸ್ತಂ ಪ್ರತಿಷ್ಠಾಂ ಗಮಯತಿ ಪ್ರೇದ್ಧೋ ಅಗ್ನೇ ದೀದಿಹಿ ಪುರೋ ನ ಇತ್ಯೌದುಂಬರೀಮಾ ದಧಾತ್ಯೇಷಾ ವೈ ಸೂರ್ಮೀ ಕರ್ಣಕಾವತ್ಯೇತಯಾ ಹ ಸ್ಮ [ಸ್ಮ(೩೨)] ವೈ ದೇವಾ

---

ತಿಸೃಭಿರಿತಿ ತಿಸೃ–ಭಿಃ । ಸಾದಯತಿ । ತ್ರಿವೃದಿತಿ ತ್ರಿ–ವೃತ್ । ವೈ । ಅಗ್ನಿಃ । ಯಾವಾನ್ । ಏವ । ಅಗ್ನಿಃ । ತಮ್ । ಪ್ರತಿಷ್ಠಾಮಿತಿ ಪ್ರತಿ–ಸ್ಥಾಮ್ । ಗಮಯತಿ । ಪ್ರೇದ್ಧ ಇತಿ ಪ್ರ–ಇದ್ಧಃ । ಅಗ್ನೇ । ದೀದಿಹಿ । ಪುರಃ । ನಃ । ಇತಿ । ಔದುಂಬರೀಮ್ । ಏತಿ । ದಧಾತಿ । ಏಷಾ । ವೈ । ಸೂರ್ಮೀ । ಕರ್ಣಕಾವತೀತಿ ಕರ್ಣಕ–ವತೀ । ಏತಯಾ । ಹ । ಸ್ಮ । (೩೨) । ವೈ । ದೇವಾಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ತಿಸೃಭಿಃ ಸಾದಯತಿ | 'ಸುಪರ್ಣೋಽಸಿ' ಎಂಬ ಮೂರು ಮಂತ್ರಗಳಿಂದ ಸ್ವಯಮಾತೃಣ್ಣೇಷ್ಟಕೆಯಲ್ಲಿ ಅಗ್ನಿಯನ್ನು ಹಾಕಬೇಕು. |
| ತ್ರಿವೃತ್ ವೈ ಅಗ್ನಿಃ | ಅಗ್ನಿಯು ಆಹವನೀಯಾದಿ ಮೂರು ಗುಣಗಳುಳ್ಳವನು/ಮೂರು ಚಿತಿಗಳಲ್ಲಿ ಇರತಕ್ಕವನಾಗಿದ್ದಾನೆ. |
| ಯಾವಾನ್ ಏವ ಅಗ್ನಿಃ | (ಅಗ್ನಿಯ ಪ್ರತಿಷ್ಠೆಯನ್ನು ಮಾಡಿದ ಯಜಮಾನನು) ಅಗ್ನಿಯು ಎಷ್ಟು ಗುಣಗಳುಳ್ಳವನೋ, |
| ತಮ್ ಪ್ರತಿಷ್ಠಾಮ್ ಗಮಯತಿ | ಆ ಸರ್ವಾತ್ಮಕನಾದ ಅಗ್ನಿಯನ್ನು ಪ್ರತಿಷ್ಠೆ ಮಾಡಿದವನಾಗುತ್ತಾನೆ. |

**ಔದುಂಬರೀಸಮಿದಾಧಾನ; ಪ್ರಶಂಸೆ**

| | |
|---|---|
| ಪ್ರೇದ್ಧಃ ಅಗ್ನೇ ದೀದಿಹಿ ಪುರಃ ನಃ ಇತಿ ಔದುಂಬರೀಮ್ ಆದಧಾತಿ | 'ಪ್ರೇದ್ಧೋ ಅಗ್ನೇ ದೀದಿಹಿ ಪುರಃ ನಃ' ಎಂಬ ಮಂತ್ರದಿಂದ ಔದುಂಬರೀ ಸಮಿತ್ತನ್ನು ಸ್ವಯಮಾತೃಣ್ಣೆಯಲ್ಲಿ ಪ್ರತಿಷ್ಠೆ ಮಾಡಿರುವ ಅಗ್ನಿಯಲ್ಲಿ ಹಾಕಬೇಕು. |
| ಏಷಾ ವೈ ಸೂರ್ಮೀ ಕರ್ಣಕಾವತೀ | ಈ ಋಕ್ಕು ಚೆನ್ನಾಗಿ ಕಾದಿರುವ ಲೋಹಮಯವಾದ ರಂಧ್ರವುಳ್ಳ ಕಂಬವಾಗಿದೆ. |
| ಏತಯಾ ಹ ಸ್ಮ ವೈ ದೇವಾಃ | ಈ ಋಕ್ಕಿನಿಂದಲೇ ದೇವತೆಗಳು |

---

ಯಜಮಾನನು ಸ್ಥಾಪಿಸಿದವನಾಗುತ್ತಾನೆ.

ಅಸುರಾಣಾಗ್ಂ ಶತತರ್‌ಹಾಗ್ಂಸ್ತೃಗ್ಂಹಂತಿ ಯದೇತಯಾ ಸಮಿಧಮಾ

ದಧಾತಿ ವಜ್ರಮೇವೈತಚ್ಛತಘ್ನೀಂ ಯಜಮಾನೋ ಭ್ರಾತೃವ್ಯಾಯ ಪ್ರ ಹರತಿ

ಸ್ತೃತ್ಯಾ ಅಛಂಬಟ್ಕಾರಂ ವಿಧೇಮ ತೇ ಪರಮೇ ಜನ್ಮನ್ನಗ್ನ ಇತಿ

---

ಅಸುರಾಣಾಮ್ । ಶತತರ್‌ಹಾನಿತಿ ಶತ–ತರ್‌ಹಾನ್ । ತೃಗ್ಂಹಂತಿ । ಯತ್ । ಏತಯಾ । ಸಮಿಧಮಿತಿ ಸಮ್–ಇಧಮ್ । ಆದಧಾತೀತ್ಯಾ–ದಧಾತಿ । ವಜ್ರಮ್ । ಏವ । ಏತತ್ । ಶತಘ್ನೀಮಿತಿ ಶತ–ಘ್ನೀಮ್ । ಯಜಮಾನಃ । ಭ್ರಾತೃವ್ಯಾಯ । ಪ್ರೇತಿ । ಹರತಿ । ಸ್ತೃತ್ಯೈ । ಅಛಂಬಟ್ಕಾರಮಿತ್ಯಛಂಬಟ್–ಕಾರಮ್ । ವಿಧೇಮ । ತೇ । ಪರಮೇ । ಜನ್ಮನ್ । ಅಗ್ನೇ । ಇತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಅಸುರಾಣಾಮ್ ಶತತರ್‌ಹಾನ್ ತೃಗ್ಂಹಂತಿ** | ರಾಕ್ಷಸರಲ್ಲಿ ಒಂದೇ ಏಟಿಗೆ ನೂರಾರು ಜನರನ್ನು ಸಂಹರಿಸುವ ಸಾಮರ್ಥ್ಯವುಳ್ಳ ಶೂರರನ್ನು ಸಂಹರಿಸುವರು. |
| **ಯತ್ ಏತಯಾ ಸಮಿಧಮ್ ಆದಧಾತಿ** | ಈ 'ಪ್ರೇದ್ಧೋ ಅಗ್ನೇ' ಎಂಬ ಋಕ್ಕಿನಿಂದ ಯಜಮಾನನು ಸಮಿದಾಧಾನವನ್ನು ಮಾಡುತ್ತಾನೆ. **(ಹೀಗಾಗಿ)** |
| **ವಜ್ರಮ್ ಏವ ಏತತ್** | ಈ ಋಕ್ಕೆಂಬ ವಜ್ರಾಯುಧವನ್ನು |
| **ಶತಘ್ನೀಮ್ ಯಜಮಾನಃ ಭ್ರಾತೃವ್ಯಾಯ ಪ್ರಹರತಿ** | ನೂರಾರು ಶತ್ರುಗಳನ್ನು ಸಂಹರಿಸಬಲ್ಲ (ಆಯುಧವನ್ನು) ಯಜಮಾನನು ಶತ್ರುವಿನ ಮೇಲೆ ಪ್ರಯೋಗಿಸಿದವನಾಗುತ್ತಾನೆ. |
| **ಸ್ತೃತ್ಯೈ** | ಇದು ಶತ್ರುಗಳ ಹಿಂಸೆಗಾಗಿ ಆಗುತ್ತದೆ. |
| **ಅಛಂಬಟ್ಕಾರಮ್** | ತನಗೆ ಅಹಿಂಸಕವಾಗುವಂತೆ(ಪ್ರಹರಿಸುತ್ತಾನೆ)ಋಕ್ ಅನ್ನೇ ವಜ್ರವನ್ನು ಮಾಡಿ ಪ್ರಹರಿಸಿದವನಾಗುತ್ತಾನೆ. |

ಸಮಿದಾಧಾನವಿಧಿ; ಪ್ರಶಂಸೆ

| | |
|---|---|
| **ವಿಧೇಮ ತೇ ಪರಮೇ ಜನ್ಮನ್ ಅಗ್ನೇ ಇತಿ** | 'ವಿಧೇಮ ತೇ ಪರಮೇ ಜನ್ಮನ್ನಗ್ನೇ' ಎಂಬ ಮಂತ್ರದಿಂದ |

ವೈಕಂಕತೀಮಾ ದಧಾತಿ ಭಾ ಏವಾವ ರುಂಧೇ ತಾಗ್ಂ ಸವಿತುರ್ವರೇಣ್ಯಸ್ಯ

ಚಿತ್ರಾಮಿತಿ ಶಮೀಮಯೀಗ್ಂ ಶಾಂತ್ಯಾ ಅಗ್ನಿರ್ವಾ ಹ ವಾ ಅಗ್ನಿಚಿತಂ

ದುಹೇಽಗ್ನಿಚಿದ್ವಾಽಗ್ನಿಂ ದುಹೇ

---

ವೈಕಂಕತೀಮ್ । ಏತಿ । ದಧಾತಿ । ಭಾಃ । ಏವ । ಅವೇತಿ । ರುಂಧೇ । ತಾಮ್ । ಸವಿತುಃ । ವರೇಣ್ಯಸ್ಯ । ಚಿತ್ರಾಮ್ । ಇತಿ । ಶಮೀಮಯೀಮಿತಿ ಶಮೀ-ಮಯೀಮ್ । ಶಾಂತ್ಯೈ । ಅಗ್ನಿಃ । ವಾ । ಹ । ವೈ । ಅಗ್ನಿಚಿತಮಿತ್ಯಗ್ನಿ-ಚಿತಮ್ । ದುಹೇ । ಅಗ್ನಿಚಿದಿತ್ಯಗ್ನಿ-ಚಿತ್ । ವಾ । ಅಗ್ನಿಮ್ । ದುಹೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ವೈಕಂಕತೀಮ್ ಆದಧಾತಿ** | ಮುಳ್ಳುಬೇಲ ವೃಕ್ಷದ ಸಮಿತ್ತನ್ನು ಯಜಮಾನನು ಅಗ್ನಿಯಲ್ಲಿ ಹಾಕಬೇಕು. |
| **ಭಾಃ ಅವರುಂಧೇ ಏವ** | ಇದರಿಂದ ಯಜಮಾನನು ಅಗ್ನಿಯ ಪ್ರಕಾಶವನ್ನು ಹೊಂದುತ್ತಾನೆ. |
| **ತಾಮ್ ಸವಿತುಃ ವರೇಣ್ಯಸ್ಯ ಚಿತ್ರಾಮ್ ಇತಿ ಶಮೀಮಯೀಮ್** ಆದಧಾತಿ | **'ತಾಗ್ಂ...ಚಿತ್ರಾಮ್'** ಎಂಬ ಮಂತ್ರದಿಂದ ಯಜಮಾನನು ಅಗ್ನಿಯಲ್ಲಿ ಶಮೀಮಯವಾದ (ಬನ್ನಿ ಮರದ) ಸಮಿತ್ತನ್ನು ಅಗ್ನಿಯಲ್ಲಿ ಹಾಕಬೇಕು. |
| **ಶಾಂತ್ಯೈ** | *ಇದು ಶಾಂತಿಗೆ ಕಾರಣವಾಗುತ್ತದೆ. |
| **ಅಗ್ನಿಃ ವಾ ಹ ವೈ ಅಗ್ನಿಚಿತಮ್ ದುಹೇ** | ಅಗ್ನಿಯು ಅಗ್ನಿಚಯನವನ್ನು ಅನುಷ್ಠಿಸುವ ಯಜಮಾನನಿಂದ ಹವಿಸ್ಸನ್ನೂ ಸ್ತುತಿಯನ್ನೂ ಪಡೆಯುವ ದೋಹನವನ್ನು ಮಾಡುತ್ತಾನೆ. |
| **ಅಗ್ನಿಚಿತ್ ವಾ ಅಗ್ನಿಮ್ ದುಹೇ** | ಅಥವಾ ಅಗ್ನಿಚಯನವನ್ನು ಅನುಷ್ಠಿಸುವ ಯಜಮಾನನು ಅಗ್ನಿಯಿಂದ ತನ್ನ ಅಭೀಷ್ಟವನ್ನು ಪಡೆಯುವ ದೋಹನವನ್ನು ಮಾಡುತ್ತಾನೆ. |

---

ಹಸುವಿನಿಂದ ಹಾಲನ್ನು ಕರೆಯುವುದೇ ದೋಹ. ಇಲ್ಲಿ ಚಯನಾನುಷ್ಠಾನದ ಪ್ರಸಂಗದಲ್ಲಿ ಅದು ಎರಡು ಬಗೆಯಾಗಿದೆ. ಎರಡನೆಯ ಬಗೆಯ ದೋಹವಿಲ್ಲದೆ ಎಂದು ಶ್ರುತಿಯ ಅಭಿಪ್ರಾಯ.

---

* **'ತಗ್ಂ ಶಮ್ಯಾ ಅಶಮಯತ್'** ಎಂಬ ಶ್ರುತಿವಚನವಿದೆ. ಶಮಿಯು ಶಾಂತಿಗೆ ಕಾರಣವಾಗುತ್ತದೆ.

ತಾಗ್ಂ[ತಾಮ್(೩೩)ಸವಿತುಃ]ಸವಿತುರ್ವರೇಣ್ಯಸ್ಯ ಚಿತ್ರಾಮಿತ್ಯಾಹೈಷ ವಾ ಅಗ್ನೇರ್ದೋಹಸ್ತಮಸ್ಯ ಕಣ್ವ ಏವ ಶ್ರಾಯಸೋಽವೇತ್ತೇನ ಹ ಸ್ಮೈನಗ್ಂ ಸ ದುಹೇ ಯದೇತಯಾ ಸಮಿಧಮಾದಧಾತ್ಯಗ್ನಿಚಿದೇವ ತದಗ್ನಿಂ ದುಹೇ

---

ತಾಮ್ । (೩೩) । ಸವಿತುಃ । ವರೇಣ್ಯಸ್ಯ । ಚಿತ್ರಾಮ್ । ಇತಿ । ಆಹ । ಏಷಃ । ವೈ । ಅಗ್ನೇಃ । ದೋಹಃ । ತಮ್ । ಅಸ್ಯ । ಕಣ್ವಃ । ಏವ । ಶ್ರಾಯಸಃ । ಅವೇತ್ । ತೇನ । ಹ । ಸ್ಮ । ಏನಮ್ । ಸಃ । ದುಹೇ । ಯತ್ । ಏತಯಾ । ಸಮಿಧಮಿತಿ ಸಮ್–ಇಧಮ್ । ಆದಧಾತೀತ್ಯಾ–ದಧಾತಿ । ಅಗ್ನಿಚಿದಿತ್ಯಗ್ನಿ–ಚಿತ್ । ಏವ । ತತ್ । ಅಗ್ನಿಮ್ । ದುಹೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ತಾಮ್ ಸವಿತುಃ ವರೇಣ್ಯಸ್ಯ ಚಿತ್ರಾಮ್ ಇತಿ ಆಹ** | 'ಎಲ್ಲರಿಂದಲೂ ವರಣೀಯನಾದ ಸರ್ವಪ್ರೇರಕನಾದ ಅಗ್ನಿದೇವನ ಅನುಗ್ರಹಕಾರಿಣಿಯಾದ ಬುದ್ಧಿಯನ್ನು ಫಲಸಿದ್ಧಿಗಾಗಿ ನಾನು ಆಶ್ರಯಿಸುತ್ತೇನೆ' ಎಂಬ ಅರ್ಥದ ಈ ಮಂತ್ರವು ಅಗ್ನಿಯ ದೋಹರೂಪವಾಗಿದೆ. |
| **ಏಷಃ ವೈ ಅಗ್ನೇಃ ದೋಹಃ** | ಈ ಸಮಿದಾಧಾನವೇ ಅಗ್ನಿಯ ದೋಹರೂಪವಾಗಿದೆ. |
| **ಅಸ್ಯ ತಮ್** | ಅಗ್ನಿಗೆ ಸಂಬಂಧಿಸಿದ ಫಲಸ್ವೀಕಾರವೆಂಬ ಈ ದೋಹವನ್ನು |
| **ಶ್ರಾಯಸಃ ಕಣ್ವಃ ಏವ ಅವೇತ್** | ಶ್ರಯಸ್ಸಿನ ಮಗನಾದ ಕಣ್ವನು ಮೊದಲು ತಿಳಿದನು. |
| **ತೇನ ಹ ಸ್ಮ ಏನಮ್ ಸಃ ದುಹೇ** | ಈ ಮಂತ್ರಪಾಠದಿಂದ ಆ ಕಣ್ವಮುನಿಯಿಂದಲೇ ಈ ಯಜಮಾನನೂ ಅಗ್ನಿಯಿಂದ ಸ್ವಾಭೀಷ್ಟಫಲಗಳನ್ನು ಹೊಂದುವನು. |
| **ಯತ್ ಏತಯಾ ಸಮಿಧಮ್ ಆದಧಾತಿ** | **'ತಾಗ್ಂ ಸವಿತುಃ'** ಎಂಬ ಈ ಋಕ್ಕಿನಿಂದ ಸಮಿದಾಧಾನವನ್ನು ಮಾಡುವನೆಂಬುದು ಯಾವುದೋ |
| **ತತ್ ಅಗ್ನಿಚಿತ್ ಏವ ಅಗ್ನಿಮ್ ದುಹೇ** | ಅದರಿಂದ ಅಗ್ನಿಚಯನವನ್ನು ಮಾಡುವ ಯಜಮಾನನೇ ಅಗ್ನಿಯಿಂದ ತನ್ನ ಅಭೀಷ್ಟವನ್ನು ಪಡೆಯುವ ದೋಹನವನ್ನು ಮಾಡುತ್ತಾನೆ. |

## ಸಪ್ತ ತೇ ಅಗ್ನೇ ಸಮಿಧಸ್ಸಪ್ತ ಜಿಹ್ವಾ ಇತ್ಯಾಹ ಸಪ್ತೈವಾಸ್ಯ ಸಾಪ್ತಾನಿ ಪ್ರೀಣಾತಿ

---

ಸಪ್ತ । ತೇ । ಅಗ್ನೇ । ಸಮಿಧ ಇತಿ ಸಮ್–ಇಧಃ । ಸಪ್ತ । ಜಿಹ್ವಾಃ । ಇತಿ । ಆಹ । ಸಪ್ತ । ಏವ । ಅಸ್ಯ । ಸಾಪ್ತಾನಿ । ಪ್ರೀಣಾತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|

**ಪೂರ್ಣಾಹುತಿಯ ವಿಧಿ; ಪ್ರಶಂಸೆ**

| | |
|---|---|
| **ಸಪ್ತ ತೇ ಅಗ್ನೇ ಸಮಿಧಃ ಸಪ್ತ ಜಿಹ್ವಾಃ ಇತಿ ಆಹ** | ಅಗ್ನಿದೇವನೇ! ನಿನಗೆ ಸಂಬಂಧಿಸಿದ ಸಮಿತ್ತು ಮುಂತಾದವುಗಳು ಏಳು ಸಂಖ್ಯೆಯಿಂದ ಕೂಡಿದೆ ಎಂದು ಈ ಮಂತ್ರವು ಹೇಳುತ್ತದೆ. |
| **ಅಸ್ಯ ಸಪ್ತ ಏವ** | ಅಗ್ನಿಗೆ ಸಂಬಂಧಿಸಿದುದೆಲ್ಲವೂ ಏಳು. |
| **ಸಾಪ್ತಾನಿ ಪ್ರೀಣಾತಿ** | ಏಳು ಸಪ್ತಕಗಳನ್ನೂ ಯಜಮಾನನು ಪೂರ್ಣಾಹುತಿ ಯಿಂದ ತೃಪ್ತಿಪಡಿಸುತ್ತಾನೆ. |

---

ಏಳು ಸಂಖ್ಯೆಯಿಂದ ಕೂಡಿರುವ ದ್ರವ್ಯಗಳ ಒಂದು ಗುಂಪು '**ಸಾಪ್ತ**'ವೆನಿಸುತ್ತದೆ. ಇಂತಹ ಸಾಪ್ತಗಳು ಅಗ್ನಿಗೆ ಸಂಬಂಧಿಸಿದಂತೆ ಏಳು ಇವೆ. 1) ಏಳು ಸಮಿತ್ತುಗಳ ಸಮೂಹವು ಮೊದಲನೆಯ ಸಾಪ್ತವೆನಿಸುತ್ತದೆ. 2) ಜಿಹ್ವಾಸಪ್ತಕ. 3) ಋಷಿಸಪ್ತಕ. 4) ಧಾಮಸಪ್ತಕ/ಸ್ಥಾನಸಪ್ತಕ 5) ಹೋತೃಸಪ್ತಕ. 6) ಯಜನಪ್ರಕಾರಭೇದಸಪ್ತಕ 7) ಪೂರಣೀಯಸ್ಥಾನಸಪ್ತಕ.

1) **ಸಮಿತ್ಸಪ್ತಕ**–ಅಶ್ವತ್ಥ, ಉದುಂಬರ, ಪಲಾಶ, ಶಮೀ, ವಿಕಂಕತ, ಅಶನಿಹತವೃಕ್ಷ, (ಸಿಡಿಲು ಬಡಿದಿರುವ ಮರ) ಪುಷ್ಕರಪರ್ಣ ಇವು ಸಮಿತ್ಸಪ್ತಕಗಳು. ಇದು ಒಂದು ಸಾಪ್ತ.

2) **ಜಿಹ್ವಾಸಪ್ತಕ**–ಕಾಲೀ, ಕರಾಲೀ, ಮನೋಜವಾ, ಸುಲೋಹಿತಾ, ಸುಧೂಮ್ರವರ್ಣಾ, ಸ್ಫುಲಿಂಗಿನೀ, ವಿಶ್ವರುಚೀ, ಇವು ಹವಿಸ್ಸನ್ನು ಸ್ವೀಕರಿಸುವ ಏಳು ಜಿಹ್ವೆಗಳು. (ಲೇಲಾಯಮಾನಾ=ಅಗ್ನೇಃ ಹವಿರಾಹುತಿಗ್ರಸನಾರ್ಥಾ ಶಾಂಕರ ಭಾಷ್ಯ ಮುಂಡಕ. ೧. ೨. ೪)

3) **ಋಷಿಸಪ್ತಕ**–ಸಮಿತ್ತನ್ನು ತರುವಾಗ ಹೇಳಬೇಕಾದ ಏಳು ಮಂತ್ರಗಳು. (ಋಷಿಃ=ಮಂತ್ರ) ೧) ಅಶ್ವೋ ರೂಪಂ ಕೃತ್ವಾ...ಸುವೀರಾಃ ೨) ಊರ್ಜಃ...ಮದೇಮ ೩) ಗಾಯತ್ರಿಯಾ...ಅವರುದ್ಧ್ಯೈ/ದೇವಾನಾಂ...ಸಾಕ್ಷಾತ್ ೪) ಯಯಾ...ಅಹಮ್ ೫) ಯತ್ತೇ...ಪ್ರಭಾಹಿ ೬) ಯತ್ತೇ...ಭವೇಹ ೭) ಯತ್ಪರ್ಯಪಶ್ಯತ್..ಹರಾಮಿ

4) **ಧಾಮಸಪ್ತಕ/ಸ್ಥಾನಸಪ್ತಕ**–ಸೋಮಯಾಗದಲ್ಲಿ ವಹ್ನಿಧಾರಕಗಳಾದ ಆಹವನೀಯ, ಗಾರ್ಹಪತ್ಯ, ದಕ್ಷಿಣಾಗ್ನಿ, ಸಭ್ಯ, ಆವಸಥ್ಯ, ಪ್ರಾಜಹಿತ ಮತ್ತು ಆಗ್ನೀಧ್ರೀಯ.

5) **ಹೋತೃಸಪ್ತಕ**–ಯಾಗಾನುಷ್ಠಾನದಲ್ಲಿ ವಷಟ್ಕಾರವನ್ನು ಹೇಳುವ ಹೋತೃವೇ ಮುಂತಾದ ಏಳು ಋತ್ವಿಜರು. ೧) ಹೋತೃ ೨) ಪ್ರಶಾಸ್ತೃ ೩) ಬ್ರಾಹ್ಮಣಾಚ್ಛಂಸೀ ೪) ಪೋತೃ ೫) ನೇಷ್ಟೃ ೬) ಆಗ್ನೀಧ್ರ ೭) ಅಚ್ಛಾವಾಕ.

6) **ಯಜನಪ್ರಕಾರಭೇದಸಪ್ತಕ.**– ಯಾಗಭೇದಗಳು. ಸೋಮಸಂಸ್ಥೆಯ ಭೇದಗಳು. ೧) ಅಗ್ನಿಷ್ಟೋಮ ೨) ಅತ್ಯಗ್ನಿಷ್ಟೋಮ ೩) ಉಕ್ಥ್ಯ ೪) ಷೋಡಶೀ ೫) ಅತಿರಾತ್ರ ೬) ಅಪ್ತೋರ್ಯಾಮ ೭) ವಾಜಪೇಯ.

ಪೂರ್ಣಯಾ ಜುಹೋತಿ ಪೂರ್ಣ ಇವ ಹಿ ಪ್ರಜಾಪತಿಃ

ಪ್ರಜಾಪತೇ[ಪ್ರಜಾಪತೇಃ(೩೪)ಆಪ್ತ್ಯೈ೪೮]ರಾಪ್ತ್ಯೈ೪೮ ನ್ಯೂನಯಾ ಜುಹೋತಿ

ನ್ಯೂನಾದ್ಧಿ ಪ್ರಜಾಪತಿಃ ಪ್ರಜಾ ಅಸೃಜತ ಪ್ರಜಾನಾಗ್ಂ ಸೃಷ್ಟ್ಯಾ೪

---

ಪೂರ್ಣಯಾ । ಜುಹೋತಿ । ಪೂರ್ಣಃ । ಇವ । ಹಿ । ಪ್ರಜಾಪತಿರಿತಿ ಪ್ರಜಾ–ಪತಿಃ । ಪ್ರಜಾಪತೇರಿತಿ ಪ್ರಜಾ–ಪತೇಃ । (೩೪) । ಆಪ್ತ್ಯೈ೪೮ । ನ್ಯೂನಯೇತಿ ನಿ–ಊನಯಾ । ಜುಹೋತಿ । ನ್ಯೂನಾದಿತಿ ನಿ–ಊನಾತ್ । ಹಿ । ಪ್ರಜಾಪತಿರಿತಿ ಪ್ರಜಾ–ಪತಿಃ । ಪ್ರಜಾ ಇತಿ ಪ್ರ–ಜಾಃ । ಅಸೃಜತ । ಪ್ರಜಾನಾಮಿತಿ ಪ್ರ–ಜಾನಾಮ್ । ಸೃಷ್ಟ್ಯೈ೪೮ ।

---

| ಬ್ರಾಹ್ಮಣಭಾಗ | ವಿವರಣೆ |
| --- | --- |
| **ಪೂರ್ಣಯಾ ಜುಹೋತಿ** | ಆಜ್ಯಪೂರ್ಣವಾದ ಜುಹೂವಿನಿಂದ ಹೋಮ ಮಾಡಬೇಕು. |
| **ಪ್ರಜಾಪತಿಃ ಪೂರ್ಣಃ ಇವ ಹಿ** | ಪ್ರಜಾಪತಿಯು ಸರ್ವಕಾಮಪರಿಪೂರ್ಣನು. |
| **ಪ್ರಜಾಪತೇಃ ಆಪ್ತ್ಯೈ೪೮** | ಈ ಪೂರ್ಣಾಹುತಿಯಿಂದ ಯಜಮಾನನು ಪ್ರಜಾಪತಿ ದೇವನ ಅನುಗ್ರಹವನ್ನು ಪಡೆಯುವನು/ಪ್ರಜಾಪತಿಯನ್ನು ಹೊಂದುವನು. |
| **ನ್ಯೂನಯಾ ಜುಹೋತಿ** | *ನ್ಯೂನವಾದ ಆಜ್ಯದಿಂದ ತುಂಬಿದ್ದರೂ ಅಂತಹ ಜುಹೂವಿನಿಂದ ಪೂರ್ಣಾಹುತಿಯನ್ನು ಅನುಷ್ಠಿಸಬೇಕು. |
| **ನ್ಯೂನಾತ್ ಹಿ ಪ್ರಜಾಪತಿಃ ಪ್ರಜಾಃ ಅಸೃಜತ** | ಅಲ್ಪವಾದ ಬೀಜದಿಂದ ಪ್ರಜಾಪತಿಯು ಪ್ರೌಢವಾದ ಪ್ರಜೆಗಳನ್ನು ಸೃಷ್ಟಿಸುತ್ತಾನೆ. |
| **ಪ್ರಜಾನಾಮ್ ಸೃಷ್ಟ್ಯೈ೪೮** | (ಆದುದರಿಂದ) (ಇಂತಹ ನ್ಯೂನವಾದ ಹೋಮವೂ) ಪ್ರಜೆಗಳ ಸೃಷ್ಟಿಗೆ ಕಾರಣವಾಗುತ್ತದೆ. |

---

7) **ಪೂರಣೀಯಸ್ಥಾನಸಪ್ತಕ.** ಆಹವನೀಯ ಮುಂತಾದ ಏಳು ಉತ್ಪತ್ತಿಸ್ಥಾನಗಳು/ಭೂಃ, ಭುವಃ, ಸುವಃ, ಮಹಃ, ಜನಃ, ತಪಃ, ಸತ್ಯಮ್, ಎಂಬ–ಏಳು ಲೋಕಗಳು. ಇವು ಪೂರ್ಣಾಹುತಿಯಿಂದ ತೃಪ್ತಿಪಡಿಸುವ ಸಪ್ತ ಸಾಪ್ತಗಳು.

ಪೂರ್ಣಾಹುತಿಯ ವಿಧಿಯೊಡನೆ ಅಗ್ನಿದೇವನಿಗೆ ಸಂಬಂಧಿಸಿದ ಸಮಿತ್ತು ಮುಂತಾದ ಏಳು ಸಪ್ತಕಗಳೂ ಉಕ್ತವಾಗಿವೆ. ಇವು ಪೂರ್ಣಾಹುತಿಯಿಂದ ತೃಪ್ತವಾಗುತ್ತವೆ ಎಂದು ತಾತ್ಪರ್ಯ.

---

* ಇದು ಅನುಕಲ್ಪ ಅಥವಾ ಗೌಣಕಲ್ಪ.

ಅಗ್ನಿರ್ದೇವೇಭ್ಯೋ ನಿಲಾಯತ ಸ ದಿಶೋಽನು ಪ್ರಾವಿಶಜ್ಜುಹ್ವನ್ಮನಸಾ ದಿಶೋ ಧ್ಯಾಯೇದ್ದಿಗ್ಭ್ಯ ಏವೈನಮವ ರುಂಧೇ ದಧ್ನಾ ಪುರಸ್ತಾಜ್ಜುಹೋತ್ಯಾಜ್ಯೇನೋ ಪರಿಷ್ಟಾತ್ತೇಜಶ್ಚೈವಾಸ್ಮಾ ಇಂದ್ರಿಯಂ ಚ ಸಮೀಚೀ ದಧಾತಿ

---

ಅಗ್ನಿಃ । ದೇವೇಭ್ಯಃ । ನಿಲಾಯತ । ಸಃ । ದಿಶಃ । ಅನು । ಪ್ರೇತಿ । ಅವಿಶತ್ । ಜುಹ್ವತ್ । ಮನಸಾ । ದಿಶಃ । ಧ್ಯಾಯೇತ್ । ದಿಗ್ಭ್ಯ ಇತಿ ದಿಕ್-ಭ್ಯಃ । ಏವ । ಏನಮ್ । ಅವೇತಿ । ರುಂಧೇ । ದಧ್ನಾ । ಪುರಸ್ತಾತ್ । ಜುಹೋತಿ । ಆಜ್ಯೇನ । ಉಪರಿಷ್ಟಾತ್ । ತೇಜಃ । ಚ । ಏವ । ಅಸ್ಮೈ । ಇಂದ್ರಿಯಮ್ । ಚ । ಸಮೀಚೀ ಇತಿ । ದಧಾತಿ ।

---

| ಬ್ರಾಹ್ಮಣಭಾಗ | ವಿವರಣೆ |
| --- | --- |
| | **ಧ್ಯಾನವಿಧಿ; ಅರ್ಥವಾದ** |
| **ಅಗ್ನಿಃ ದೇವೇಭ್ಯಃ ನಿಲಾಯತ** | ಪೂರ್ವದಲ್ಲಿ ಅಗ್ನಿದೇವನು ದೇವತೆಗಳಿಂದ ದೂರವಾಗಿ ಹೊರಟುಹೋದನು. |
| **ಸಃ ದಿಶಃ ಅನು ಪ್ರಾವಿಶತ್** | ಅವನು ದಿಕ್ಕುಗಳನ್ನು ಪ್ರವೇಶಿಸಿದನು. |
| **ಜುಹ್ವತ್ ಮನಸಾ ದಿಶಃ ಧ್ಯಾಯೇತ್** | ಆದುದರಿಂದ ಯಜಮಾನನು ಹೋಮವನ್ನು ಮಾಡುವಾಗ ದಿಗ್ದೇವತೆಗಳನ್ನು ಧ್ಯಾನ ಮಾಡಬೇಕು. |
| **ದಿಗ್ಭ್ಯಃ ಏವ ಏನಮ್ ಅವರುಂಧೇ** | ಈ ಧ್ಯಾನದಿಂದ ಯಜಮಾನನು ದಿಕ್ಕುಗಳನ್ನು ಪ್ರವೇಶಿಸಿದ ಅಗ್ನಿಯನ್ನು ಹೊಂದಿದವನಾಗುತ್ತಾನೆ. |
| | **ದಧ್ಯಾಜ್ಯಹೋಮವಿಧಿ; ಪ್ರಶಂಸೆ** |
| **ದಧ್ನಾ ಪುರಸ್ತಾತ್ ಜುಹೋತಿ** | ಅಗ್ನಿಸ್ಥಾಪನೆಗೆ ಮೊದಲು ದಧಿಹೋಮವನ್ನು ಮಾಡಬೇಕು. |
| **ಆಜ್ಯೇನ ಉಪರಿಷ್ಟಾತ್** ಜುಹೋತಿ | ಅಗ್ನಿಪ್ರತಿಷ್ಠೆಯಾದ ನಂತರ ಆಜ್ಯಹೋಮವನ್ನು ಅನುಷ್ಠಿಸಬೇಕು. |
| **ಅಸ್ಮೈ ಇಂದ್ರಿಯಮ್ ಚ ತೇಜಃ ಚ ಸಮೀಚೀ ದಧಾತಿ ಏವ** | (ಆಜ್ಯವು ತೇಜೋರೂಪ. ದಧಿಯು ಇಂದ್ರಿಯರೂಪ. ಹೀಗಾಗಿ) ಈ ಹೋಮಗಳಿಂದ ಯಜಮಾನನಿಗಾಗಿ ಅಧ್ವರ್ಯುವು ತೇಜಸ್ಸನ್ನೂ ಇಂದ್ರಿಯಶಕ್ತಿಯನ್ನೂ ಚೆನ್ನಾಗಿ ಸಂಪಾದಿಸಿ ಕೊಟ್ಟವನಾಗುತ್ತಾನೆ. |

ದ್ವಾದಶಕಪಾಲೋ ವೈಶ್ವಾನರೋ ಭವತಿ ದ್ವಾದಶ ಮಾಸಾಸ್ಸಂವಥ್ಸರ ಸ್ಸಂವಥ್ಸರೋಽಗ್ನಿರ್ವೈಶ್ವಾನರಸ್ಸಾಕ್ಷಾ[ಸಾಕ್ಷಾತ್(೩೫)ಏವ]ದೇವ ವೈಶ್ವಾನರಮವರುಂಧೇ ಯತ್ಪ್ರಯಾಜಾನೂಯಾಜಾನ್ಕುರ್ಯಾದ್ವಿಕಸ್ತಿಸ್ಸಾ ಯಜ್ಞಸ್ಯ ದರ್ವಿಹೋಮಂ ಕರೋತಿ

---

ದ್ವಾದಶಕಪಾಲ ಇತಿ ದ್ವಾದಶ-ಕಪಾಲಃ । ವೈಶ್ವಾನರಃ । ಭವತಿ । ದ್ವಾದಶ । ಮಾಸಾಃ । ಸಂವಥ್ಸರ ಇತಿ ಸಮ್-ವಥ್ಸರಃ । ಸಂವಥ್ಸರ ಇತಿ ಸಮ್-ವತ್ಸರಃ । ಅಗ್ನಿಃ । ವೈಶ್ವಾನರಃ । ಸಾಕ್ಷಾದಿತಿ ಸ-ಅಕ್ಷಾತ್ । (೩೫) । ಏವ । ವೈಶ್ವಾನರಮ್ । ಅವೇತಿ । ರುಂಧೇ । ಯತ್ । ಪ್ರಯಾಜಾನೂಯಾಜಾನಿತಿ ಪ್ರಯಾಜ-ಅನೂಯಾಜಾನ್ । ಕುರ್ಯಾತ್ । ವಿಕಸ್ತಿರಿತಿ ವಿ-ಕಸ್ತಿಃ । ಸಾ । ಯಜ್ಞಸ್ಯ । ದರ್ವಿಹೋಮಮಿತಿ ದರ್ವಿ-ಹೋಮಮ್ । ಕರೋತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ವೈಶ್ವಾನರಯಾಗವಿಧಿ; ಅರ್ಥವಾದ** |
| **ದ್ವಾದಶಕಪಾಲಃ ವೈಶ್ವಾನರಃ ಭವತಿ** | ವೈಶ್ವಾನರದೇವತಾಕವಾದ ದ್ವಾದಶಕಪಾಲಪುರೋಡಾಶದ್ರವ್ಯದಿಂದ ಕೂಡಿದ ಯಾಗವನ್ನು ಮಾಡಬೇಕು. |
| **ದ್ವಾದಶ ಮಾಸಾಃ ಸಂವಥ್ಸರಃ** | ಹನ್ನೆರಡು ತಿಂಗಳು ಒಂದು ಸಂವತ್ಸರವಾಗಿದೆ. |
| **ಸಂವಥ್ಸರಃ ಅಗ್ನಿಃ ವೈಶ್ವಾನರಃ** | ಉಖ್ಯಾಗ್ನಿಯನ್ನು ಸಂವತ್ಸರಕಾಲ ಧರಿಸುವುದರಿಂದ ಅಗ್ನಿಯು ವೈಶ್ವಾನರಸ್ವರೂಪನಾಗಿರುತ್ತಾನೆ. |
| **ಸಾಕ್ಷಾತ್ ವೈಶ್ವಾನರಮ್ ಅವರುಂಧೇ ಏವ** | ಈ ವೈಶ್ವಾನರಯಾಗದಿಂದ ಯಜಮಾನನು ಸಾಕ್ಷಾತ್ತಾಗಿ ವೈಶ್ವಾನರನನ್ನೇ/ಅಗ್ನಿಯನ್ನೇ ಹೊಂದಿದವನಾಗುತ್ತಾನೆ. |
| | **ದರ್ವಿಹೋಮವಿಧಿ** |
| **ಯತ್ ಪ್ರಯಾಜಾನೂಯಾಜಾನ್ ಕುರ್ಯಾತ್** | ಪ್ರಯಾಜಾನೂಯಾಜಹೋಮಗಳನ್ನು ಇಲ್ಲಿ ಮಾಡುವುದೆಂಬುದು ಯಾವುದೋ |
| **ಯಜ್ಞಸ್ಯ ಸಾ ವಿಕಸ್ತಿಃ ದರ್ವಿಹೋಮಮ್ ಕರೋತಿ** | ಅದು ಯಜ್ಞದ ನಾಶಕ್ಕೆ ಕಾರಣವಾಗುತ್ತದೆ. ಆದುದರಿಂದ ದರ್ವಿಹೋಮವನ್ನು ಮಾಡಬೇಕು. |

ಯಜ್ಞಸ್ಯ ಪ್ರತಿಷ್ಠಿತ್ಯೈ ರಾಷ್ಟ್ರಂ ವೈ ವೈಶ್ವಾನರೋ ವಿಣ್ಮರುತೋ
ವೈಶ್ವಾನರಗ್ಂ ಹುತ್ವಾ ಮಾರುತಾಞ್ಜುಹೋತಿ ರಾಷ್ಟ್ರ ಏವ ವಿಶಮನು
ಬಧ್ನಾತ್ಯುಚ್ಚೈರ್ವೈಶ್ವಾನರಸ್ಯಾಽಽಶ್ರಾವಯತ್ಯುಪಾಗ್ಂಶು ಮಾರುತಾಞ್ಜುಹೋತಿ
ತಸ್ಮಾದ್ರಾಷ್ಟ್ರಂ ವಿಶಮತಿ ವದತಿ

---

ಯಜ್ಞಸ್ಯ । ಪ್ರತಿಷ್ಠಿತ್ಯಾ ಇತಿ ಪ್ರತಿ-ಸ್ಥಿತ್ಯೈ । ರಾಷ್ಟ್ರಮ್ । ವೈ । ವೈಶ್ವಾನರಃ । ವಿಟ್ । ಮರುತಃ । ವೈಶ್ವಾನರಮ್ । ಹುತ್ವಾ । ಮಾರುತಾನ್ । ಜುಹೋತಿ । ರಾಷ್ಟ್ರೇ । ಏವ । ವಿಶಮ್ । ಅನ್ವಿತಿ । ಬಧ್ನಾತಿ । ಉಚ್ಚೈಃ । ವೈಶ್ವಾನರಸ್ಯ । ಏತಿ । ಶ್ರಾವಯತಿ । ಉಪಾಗ್ಂಶ್ವಿತ್ಯುಪ-ಅಗ್ಂಶು । ಮಾರುತಾನ್ । ಜುಹೋತಿ । ತಸ್ಮಾತ್ । ರಾಷ್ಟ್ರಮ್ । ವಿಶಮ್ । ಅತೀತಿ । ವದತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಯಜ್ಞಸ್ಯ ಪ್ರತಿಷ್ಠಿತ್ಯೈ | ಇದು ಯಜ್ಞದ ಪ್ರಕೃಷ್ಟಸ್ಥಿತಿಗೆ ಕಾರಣವಾಗುತ್ತದೆ. |
| ರಾಷ್ಟ್ರಮ್ ವೈ ವೈಶ್ವಾನರಃ | ವೈಶ್ವಾನರಾಗ್ನಿಯು ರಾಷ್ಟ್ರಸ್ವರೂಪನು. |
| ವಿಟ್ ಮರುತಃ | ಮರುದ್ದೇವತೆಗಳು ಪ್ರಜಾಸ್ವರೂಪರು. |
| ವೈಶ್ವಾನರಮ್ ಹುತ್ವಾ ಮಾರುತಾನ್ ಜುಹೋತಿ | ವೈಶ್ವಾನರಯಾಗವನ್ನು ಮಾಡಿ ಮಾರುತಹೋಮಗಳನ್ನು ಅನುಷ್ಠಿಸಬೇಕು. |
| ರಾಷ್ಟ್ರೇ ಏವ ವಿಶಮ್ ಅನು ಬಧ್ನಾತಿ | ಇದರಿಂದ ಯಜಮಾನನು ರಾಷ್ಟ್ರದಲ್ಲಿ ಪ್ರಜೆಗಳನ್ನು ಕೂಡಿಸಿದವನಾಗುತ್ತಾನೆ. |
| ಉಚ್ಚೈಃ ವೈಶ್ವಾನರಸ್ಯ ಆ ಶ್ರಾವಯತಿ | ವೈಶ್ವಾನರಹೋಮದಲ್ಲಿ ಎತ್ತರವಾದ ಧ್ವನಿಯಿಂದ ಆಶ್ರಾವಣವನ್ನು (ಆಶ್ರಾವಯ)ಹೇಳಬೇಕು. |
| ಉಪಾಗ್ಂಶು ಮಾರುತಾನ್ ಜುಹೋತಿ | ಮಾರುತಹೋಮವನ್ನು ಮೆಲ್ಲಗಿನ ಧ್ವನಿಯಿಂದ ಅನುಷ್ಠಿಸಬೇಕು. |
| ತಸ್ಮಾತ್ ರಾಷ್ಟ್ರಮ್ ವಿಶಮ್ ಅತಿವದತಿ | ಆದುದರಿಂದ ಲೋಕದಲ್ಲಿಯೂ ಪ್ರಜೆಗಳನ್ನು ಅತಿಕ್ರಮಿಸಿ ರಾಷ್ಟ್ರವೇ ಅಧಿಕವೆಂದು ಜನರು ಹೇಳುತ್ತಾರೆ. |

ಮಾರುತಾ ಭವಂತಿ ಮರುತೋ ವೈ ದೇವಾನಾಂ ವಿಶೋ ದೇವವಿಶೇನೈವಾಸ್ಮೈ

ಮನುಷ್ಯವಿಶಮವರುಂಧೇ ಸಪ್ತ ಭವಂತಿ ಸಪ್ತಗಣಾ ವೈ ಮರುತೋ ಗಣಶ

ಏವ ವಿಶಮವ ರುಂಧೇ ಗಣೇನ ಗಣಮನುದ್ರುತ್ಯ ಜುಹೋತಿ

---

ಮಾರುತಾಃ । ಭವಂತಿ । ಮರುತಃ । ವೈ । ದೇವಾನಾಮ್ । ವಿಶಃ । ದೇವವಿಶೇನೇತಿ ದೇವ–ವಿಶೇನ । ಏವ । ಅಸ್ಮೈ । ಮನುಷ್ಯವಿಶಮಿತಿ ಮನುಷ್ಯ–ವಿಶಮ್ । ಅವೇತಿ । ರುಂಧೇ । ಸಪ್ತ । ಭವಂತಿ । ಸಪ್ತಗಣಾ ಇತಿ ಸಪ್ತ–ಗಣಾಃ । ವೈ । ಮರುತಃ । ಗಣಶ ಇತಿ ಗಣ–ಶಃ । ಏವ । ವಿಶಮ್ । ಅವೇತಿ । ರುಂಧೇ । ಗಣೇನ । ಗಣಮ್ । ಅನುದ್ರುತ್ಯೇತ್ಯನು–ದ್ರುತ್ಯ । ಜುಹೋತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಮಾರುತಾಃ ಭವಂತಿ** | ಮರುದ್ದೇವತಾಕವಾದ ಮಾರುತಹೋಮಗಳನ್ನು ಅನುಷ್ಠಿಸಬೇಕು. |
| **ಮರುತಃ ದೇವಾನಾಮ್ ವಿಶಃ ವೈ** | ಮರುತರು ದೇವತೆಗಳಲ್ಲಿ ಪ್ರಜೆಗಳಾಗಿರುತ್ತಾರೆ. |
| **ದೇವವಿಶೇನ ಏವ ಅಸ್ಮೈ ಮನುಷ್ಯವಿಶಮ್ ಅವರುಂಧೇ** | ಆದುದರಿಂದ ಅಧ್ವರ್ಯುವು ದೇವಪ್ರಜೆಗಳಿಂದಲೇ ಮಾನವಪ್ರಜೆಗಳನ್ನು ಮಾರುತಹೋಮದಿಂದ ಸಂಪಾದಿಸಿಕೊಟ್ಟವನಾಗುತ್ತಾನೆ. |
| **ಸಪ್ತ ಭವಂತಿ** | ಮಾರುತಪುರೋಡಾಶಗಳು ಏಳಾಗಿವೆ. |
| **ಮರುತಃ ಸಪ್ತಗಣಾಃ ವೈ** | ಮರುದ್ಗಣಗಳೂ ಏಳು. |
| **ಗಣಶಃ ಏವ ವಿಶಮ್ ಅವರುಂಧೇ** | ಇದರಿಂದ ಯಜಮಾನನು ಪ್ರಜೆಗಳನ್ನು ಗಣಗಣಗಳಾಗಿಯೇ ಹೊಂದುತ್ತಾನೆ. |
| **ಗಣಮ್ ಅನುದ್ರುತ್ಯ ಗಣೇನ ಜುಹೋತಿ** | ಹೋಮವನ್ನು ಮಾಡುವಾಗ ಗಣದಿಂದ ಗಣವನ್ನು ಕೂಡಿಸಿ ಹೋಮ ಮಾಡಬೇಕು./ಎರಡನೆಯ ಗಣದ ಹೋಮವನ್ನು ಮಾಡುವಾಗ ಪ್ರಥಮಗಣವನ್ನು ಉಚ್ಚರಿಸಬೇಕು. |

---

ಅತಿದೇಶದಿಂದ ಬಂದಿರುವ ಪ್ರಯಾಜ–ಅನೂಯಾಜಗಳಿಗೆ ಅಪವಾದವಾಗಿ ದರ್ವಿಹೋಮವನ್ನು ಇಲ್ಲಿ ವಿಧಾನ ಮಾಡಲಾಗಿದೆ.

ವೈಶ್ವಾನರಾಗ್ನಿಯು ರಾಷ್ಟ್ರಸ್ವರೂಪದ್ದಾಗಿದೆ. ಮರುದ್ದೇವತೆಗಳು ಪ್ರಜಾಸ್ವರೂಪರಾಗಿದ್ದಾರೆ. ರಾಷ್ಟ್ರವು ಪ್ರಜೆಗಳನ್ನು

ವಿಶಮೇವಾಸ್ಮಾ ಅನುವರ್ತ್ಮಾನಂ ಕರೋತಿ ॥ ೩೬-7 ॥

[ಅಗ್ನೇ ಪ್ರೇಹ್ಯವ ಸ್ಮ ದುಹೇ ತಾಂ ಪ್ರಜಾಪತೇಸ್ಸಾಕ್ಷಾನ್ಮನುಷ್ಯವಿಶಮೇಕವಿಗ್ಂಶತಿಶ್ಚ ॥]

---

ವಿಶಮ್ । ಏವ । ಅಸ್ಮೈ । ಅನುವರ್ತ್ಮಾನಮಿತ್ಯನು-ವರ್ತ್ಮಾನಮ್ । ಕರೋತಿ ॥ (೩೬) ॥

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಅಸ್ಮೈ ವಿಶಮ್ ಅನುವರ್ತ್ಮಾನಮ್ ಏವ ಕರೋತಿ | ಹೀಗೆ ಮಾಡುವುದರಿಂದ ಅಧ್ವರ್ಯುವು ಯಜಮಾನನಿಗೆ ಪ್ರಜೆಗಳು ಅನುಕೂಲರಾಗಿರುವಂತೆಯೇ ಮಾಡುತ್ತಾನೆ. |

---

ಮೀರುವುದರಿಂದ ವೈಶ್ವಾನರಹೋಮದಲ್ಲಿ ಆಶ್ರಾವಣವು ಎತ್ತರದ ಧ್ವನಿಯದ್ದಾಗಿರುತ್ತದೆ.

ಇಲ್ಲಿ ವೈಶ್ವಾನರಯಾಗ-ಮಾರುತಯಾಗಗಳಿಗೆ ಸಂಬಂಧಿಸಿದ ವಿಧಿಗಳು ಇವೆ. ಅರ್ಥವಾದಗಳೂ ಇವೆ.

ಮಾರುತ ಸಪ್ತಗಣಗಳು ಹೀಗಿವೆ.

'ಈದೃಙ್ಙ್' ಎಂದು ಆರಂಭಗೊಂಡು ನಾಲ್ಕನೆಯ ಕಾಂಡದ ಆರನೆಯ ಪ್ರಪಾಠಕದಲ್ಲಿ ಪಠಿತವಾಗಿರುವ ಐದು ಗಣಗಳು.

ಆಪಸ್ತಂಬಶ್ರೌತಸೂತ್ರದಲ್ಲಿ ಶಾಖಾಂತರದಲ್ಲಿದೆಯೆಂದು ಹೇಳಿರುವ 'ಸ್ವತವಾಂಶ್ಚ' ಮುಂತಾದವುಗಳ ಆರನೆಯ ಗಣ.

ಆರಣ್ಯಕದಲ್ಲಿ 'ಧುನಿಶ್ಚ' ಎಂದು ಪ್ರಾರಂಭಿಸಲ್ಪಟ್ಟು ಹೇಳಿರುವ ಏಳನೆಯ ಗಣ.

'ಮಿತಾಸಶ್ಚ' ಎಂಬುದಾಗಿ ಪ್ರಾರಂಭಗೊಳ್ಳುವ ಮಂತ್ರಭಾಗವು ಅನುಷಂಗವಾಗಿ ಎಲ್ಲದಕ್ಕೂ ಸೇರುತ್ತದೆ.*

'ಧುನಿಶ್ಚ' 'ಉಗ್ರಶ್ಚ' ಎಂಬುದಾಗಿ ಆರಣ್ಯಕದಲ್ಲಿ ಹೇಳಿರುವ ಗಣಗಳು ಎರಡು ಎಂದು ಭ. ಭಾ. ಭಾಷ್ಯವಿದೆ.

---

* ಕೃ. ಯ. ವೇದ ಕನ್ನಡ ಪ್ರಕಾಶನ ಸಂಪುಟ-೧೧ ಪುಟ-೨೨೦

## ॥ ಅಷ್ಟಮೋಽನುವಾಕಃ ॥

ವಸೋರ್ಧಾರಾಂ ಜುಹೋತಿ ವಸೋರ್ಮೇ ಧಾರಾಽಸದಿತಿ ವಾ ಏಷಾ
ಹೂಯತೇ ಘೃತಸ್ಯ ವಾ ಏನಮೇಷಾ ಧಾರಾಽಮುಷ್ಮಿಁಲ್ಲೋಕೇ
ಪಿನ್ವಮಾನೋಪ ತಿಷ್ಠತ

---

ವಸೋಃ । ಧಾರಾಮ್ । ಜುಹೋತಿ । ವಸೋಃ । ಮೇ । ಧಾರಾ । ಅಸತ್ । ಇತಿ । ವೈ । ಏಷಾ । ಹೂಯತೇ ।
ಘೃತಸ್ಯ । ವೈ । ಏನಮ್ । ಏಷಾ । ಧಾರಾ । ಅಮುಷ್ಮಿನ್ । ಲೋಕೇ । ಪಿನ್ವಮಾನಾ । ಉಪೇತಿ । ತಿಷ್ಠತೇ ।

---

ಈ ಅಷ್ಟಮಾನುವಾಕದಲ್ಲಿ ವಸೋರ್ಧಾರಾಹೋಮವು ಉಕ್ತವಾಗಿದೆ. 'ಅಗ್ನಾವಿಷ್ಣೂ' ಮೊದಲಾದ ಹನ್ನೊಂದು ಅನುವಾಕಗಳಿಂದ ಈ ವಸೋರ್ಧಾರಾಹೋಮವನ್ನು ಸಂತತವಾಗಿರುವಂತೆ ಮಾಡಬೇಕು.

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ವಸೋರ್ಧಾರಾಮ್ ಜುಹೋತಿ** | (ಧನವು ತನ್ನಲ್ಲಿ ಯಾವಾಗಲೂ ಇರಬೇಕೆಂದು ಬಯಸುವ ಯಜಮಾನನಿಗಾಗಿ) ಅಧ್ವರ್ಯುವು ವಸೋರ್ಧಾರಾಹೋಮವನ್ನು ಮಾಡಬೇಕು. |
| **ವಸೋಃ ಮೇ ಧಾರಾ ಅಸತ್ ಇತಿ ವೈ ಏಷಾ ಹೂಯತೇ** | ನನಗೆ ವಸುವಿನ (ಧನದ) ಧಾರೆಯು ಯಾವಾಗಲೂ ಉಂಟಾಗಲಿ ಎಂದು ತಾನೇ ಈ ಹೋಮವು ಅನುಷ್ಠಿಸಲ್ಪಡುತ್ತದೆ. |
| **ಘೃತಸ್ಯ ವೈ ಏಷಾ ಧಾರಾ ಅಮುಷ್ಮಿನ್ ಲೋಕೇ ಏನಮ್ ಪಿನ್ವಮಾನಾ ಉಪತಿಷ್ಠತೇ** | ಈ ಘೃತಾಹುತಿಯು ಸ್ವರ್ಗದಲ್ಲಿ ಈ ಯಜಮಾನನನ್ನು ತೃಪ್ತಿಪಡಿಸುತ್ತಾ ಸೇವಿಸುತ್ತದೆ. |

ಆಜ್ಯೇನ ಜುಹೋತಿ ತೇಜೋ ವಾ ಆಜ್ಯಂ ತೇಜೋ ವಸೋರ್ಧಾರಾ ತೇಜಸೈ ವಾಸ್ಮೈ ತೇಜೋಽವರುಂಧೇಽಥೋ ಕಾಮಾ ವೈ ವಸೋರ್ಧಾರಾ ಕಾಮಾನೇವಾವ ರುಂಧೇ ಯಂ ಕಾಮಯೇತ ಪ್ರಾಣಾನಸ್ಯಾನ್ನಾದ್ಯಂ ವಿ[(೩೭)ಛಿಂದ್ಯಾಮ್]ಚ್ಛಿಂದ್ಯಾಮಿತಿ

---

ಆಜ್ಯೇನ । ಜುಹೋತಿ । ತೇಜಃ । ವೈ । ಆಜ್ಯಮ್ । ತೇಜಃ । ವಸೋಃ । ಧಾರಾ । ತೇಜಸಾ । ಏವ । ಅಸ್ಮೈ । ತೇಜಃ । ಅವೇತಿ । ರುಂಧೇ । ಅಥೋ ಇತಿ । ಕಾಮಾಃ । ವೈ । ವಸೋಃ । ಧಾರಾ । ಕಾಮಾನ್ । ಏವ । ಅವೇತಿ । ರುಂಧೇ । ಯಮ್ । ಕಾಮಯೇತ । ಪ್ರಾಣಾನಿತಿ ಪ್ರ-ಅನಾನ್ । ಅಸ್ಯ । ಅನ್ನಾದ್ಯಮಿತ್ಯನ್ನ-ಅದ್ಯಮ್ । ವೀತಿ । (೩೭) । ಛಿಂದ್ಯಾಮ್ । ಇತಿ ।

---

ಬ್ರಾಹ್ಮಣಭಾಗ — ವಿವರಣೆ

### ಹೋಮದ್ರವ್ಯವಿಧಿ; ಪ್ರಶಂಸೆ

| ಬ್ರಾಹ್ಮಣಭಾಗ | ವಿವರಣೆ |
|---|---|
| ಆಜ್ಯೇನ ಜುಹೋತಿ | ಆಜ್ಯದಿಂದ ಈ ಹೋಮವನ್ನು ಮಾಡಬೇಕು. |
| ಆಜ್ಯಮ್ ತೇಜಃ ವೈ | ಆಜ್ಯವು ತೇಜಃಸ್ವರೂಪವಾಗಿದೆ. |
| ವಸೋರ್ಧಾರಾ ತೇಜಃ | (ಸುವರ್ಣಾದಿಧನಸಮೃದ್ಧಿಗೆ ಕಾರಣವಾದ) ವಸೋರ್ಧಾರೆಯೂ ತೇಜೋರೂಪವಾಗಿದೆ. |
| ತೇಜಸಾ ಏವ ಅಸ್ಮೈ ತೇಜಃ ಅವರುಂಧೇ | (ಆದುದರಿಂದ ಈ ಹೋಮ ಮಾಡಿದ ಅಧ್ವರ್ಯುವು ಯಜಮಾನನಿಗೆ) ತೇಜಸ್ಸಿನಿಂದಲೇ ತೇಜಸ್ಸನ್ನು ಸಂಪಾದಿಸಿಕೊಟ್ಟವನಾಗುತ್ತಾನೆ. |
| ಅಥೋ ಕಾಮಾಃ ವೈ ವಸೋರ್ಧಾರಾ | ಮತ್ತು ವಸೋರ್ಧಾರೆಯು ಕಾಮನಾರೂಪವಾಗಿದೆ. |
| ಕಾಮಾನ್ ಅವರುಂಧೇ ಏವ | ಈ ಹೋಮದಿಂದ ಯಜಮಾನನು ತನ್ನ ಇಷ್ಟಾರ್ಥಗಳನ್ನು ಹೊಂದುತ್ತಾನೆ. |

### ವಸೋರ್ಧಾರೆಯ ಸಾಂತತ್ಯವಿಧಿ; ಅರ್ಥವಾದ

| ಬ್ರಾಹ್ಮಣಭಾಗ | ವಿವರಣೆ |
|---|---|
| ಯಮ್ ಅಸ್ಯ ಪ್ರಾಣಾನ್ ಅನ್ನಾದ್ಯಮ್ ವಿಚ್ಛಿಂದ್ಯಾಮ್ ಇತಿ ಕಾಮಯೇತ | ಅಧ್ವರ್ಯುವು ಯಾವ ಯಜಮಾನನನ್ನು ಪ್ರಾಣಗಳಿಂದಲೂ, ಶ್ರೇಷ್ಠವಾದ ಅನ್ನದಿಂದಲೂ ವಿಚ್ಛಿನ್ನನನ್ನಾಗಿ ಮಾಡಬೇಕೆಂದು ಬಯಸುವನೋ |

ವಿಗ್ರಾಹಂ ತಸ್ಯ ಜುಹುಯಾತ್ಪ್ರಾಣಾನೇವಾಸ್ಯಾನ್ನಾದ್ಯಂ ವಿ ಚ್ಛಿನತ್ತಿ ಯಂ ಕಾಮಯೇತ ಪ್ರಾಣಾನಸ್ಯಾನ್ನಾದ್ಯಗ್ಂ ಸಂತನುಯಾಮಿತಿ ಸಂತತಾಂ ತಸ್ಯ ಜುಹುಯಾತ್ಪ್ರಾಣಾನೇವಾಸ್ಯಾನ್ನಾದ್ಯಗ್ಂ ಸಂತನೋತಿ

---

ವಿಗ್ರಾಹಮಿತಿ ವಿ-ಗ್ರಾಹಮ್ । ತಸ್ಯ । ಜುಹುಯಾತ್ । ಪ್ರಾಣಾನಿತಿ ಪ್ರ-ಅನಾನ್ । ಏವ । ಅಸ್ಯ । ಅನ್ನಾದ್ಯಮಿತ್ಯನ್ನ-ಅದ್ಯಮ್ । ವೀತಿ । ಛಿನತ್ತಿ । ಯಮ್ । ಕಾಮಯೇತ । ಪ್ರಾಣಾನಿತಿ ಪ್ರ-ಅನಾನ್ । ಅಸ್ಯ । ಅನ್ನಾದ್ಯಮಿತ್ಯನ್ನ-ಅದ್ಯಮ್ । ಸಮಿತಿ । ತನುಯಾಮ್ । ಇತಿ । ಸಂತತಾಮಿತಿ ಸಮ್-ತತಾಮ್ । ತಸ್ಯ । ಜುಹುಯಾತ್ । ಪ್ರಾಣಾನಿತಿ ಪ್ರ-ಅನಾನ್ । ಏವ । ಅಸ್ಯ । ಅನ್ನಾದ್ಯಮಿತ್ಯನ್ನ-ಅದ್ಯಮ್ । ಸಮಿತಿ । ತನೋತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ತಸ್ಯ ವಿಗ್ರಾಹಮ್ ಜುಹುಯಾತ್ | ಆ ಯಜಮಾನನ ವಸೋರ್ಧಾರಾ ಆಹುತಿಯನ್ನು ಮಧ್ಯದಲ್ಲಿ ವಿಚ್ಛಿನ್ನವಾದವುಗಳನ್ನಾಗಿ ಮಾಡಬೇಕು. |
| ಅಸ್ಯ ಪ್ರಾಣಾನ್ ಅನ್ನಾದ್ಯಮ್ ಏವ ವಿಚ್ಛಿನತ್ತಿ | ಇದರಿಂದ ಯಜಮಾನನ ಪ್ರಾಣಾದಿಗಳನ್ನೂ ಅನ್ನವನ್ನೂ ವಿಚ್ಛಿತ್ತಿಗೊಳಿಸಿದವನಾಗುತ್ತಾನೆ. |
| ಯಮ್ ಅಸ್ಯ ಪ್ರಾಣಾನ್ ಅನ್ನಾದ್ಯಮ್ ಸಮ್ ತನುಯಾಮ್ ಇತಿ ಕಾಮಯೇತ | ಅಧ್ವರ್ಯುವು ಯಾವ ಯಜಮಾನನನ್ನು ಪ್ರಾಣಾದಿಗಳಿಂದಲೂ ಶ್ರೇಷ್ಠವಾದ ಅನ್ನದಿಂದಲೂ ಯಾವಾಗಲೂ ತುಂಬಿದವನಾಗಿರಬೇಕೆಂದು ಬಯಸುವನೋ |
| ತಸ್ಯ ಸಂತತಾಮ್ ಜುಹುಯಾತ್ | ಆ ಯಜಮಾನನಿಗೆ ಸಂಬಂಧಿಸಿದ ವಸೋರ್ಧಾರೆಯನ್ನು ಮಧ್ಯದಲ್ಲಿ ವಿಚ್ಛಿತ್ತಿ ಇಲ್ಲದಂತೆ ಅನುಷ್ಠಿಸಬೇಕು. |
| ಅಸ್ಯ ಪ್ರಾಣಾನ್ ಅನ್ನಾದ್ಯಮ್ ಸಮ್ ತನೋತಿ ಏವ | ಇದರಿಂದ ಅಧ್ವರ್ಯುವು ಈ ಯಜಮಾನನ ಪ್ರಾಣಾದಿಗಳನ್ನೂ ಅನ್ನವನ್ನೂ ಯಾವಾಗಲೂ ಇರುವಂತೆ ಮಾಡುತ್ತಾನೆ. |

---

**ತಾತ್ಪರ್ಯ:–** 'ವಸೋರ್ಧಾರಾ' ಶಬ್ದವು ಅನ್ವರ್ಥವಾಗಿದೆಯೆಂದು ಇಲ್ಲಿ ಹೇಳಿದೆ.

ದ್ವಾದಶ ದ್ವಾದಶಾನಿ ಜುಹೋತಿ ದ್ವಾದಶ ಮಾಸಾಃ

ಸಂವಥ್ಸರಸ್ಸಂವಥ್ಸರೇಣೈವಾಸ್ಮಾ ಅನ್ನಮವ ರುಂಧೇ–

ದ್ವಾದಶ । ದ್ವಾದಶಾನಿ । ಜುಹೋತಿ । ದ್ವಾದಶ । ಮಾಸಾಃ । ಸಂವಥ್ಸರ ಇತಿ ಸಮ್–ವಥ್ಸರಃ । ಸಂವಥ್ಸರೇಣೇತಿ ಸಮ್–ವಥ್ಸರೇಣ । ಏವ । ಅಸ್ಮೈ । ಅನ್ನಮ್ । ಅವೇತಿ । ರುಂಧೇ ।

| ಬ್ರಾಹ್ಮಣಭಾಗ | ವಿವರಣೆ |
|---|---|
| **ದ್ವಾದಶ ದ್ವಾದಶಾನಿ ಜುಹೋತಿ** | ಅಧ್ವರ್ಯುವು **'ವಾಜಶ್ಚ ಮೇ'** ಎಂದು ಆರಂಭಿಸಿ **'ಅನ್ನಂ ಚ ಮೇऽಕ್ಷುಚ್ಚ ಮೇ'** ಎಂಬಲ್ಲಿಯವರೆಗಿನ ಹನ್ನೆರಡು ಮಂತ್ರಗಳ ಹನ್ನೆರಡು ಸಮೂಹಗಳನ್ನು ಪಠಿಸುತ್ತಾ ವಸೋರ್ಧಾರಾಹೋಮವನ್ನು ಮಾಡಬೇಕು.* |
| **ದ್ವಾದಶ ಮಾಸಾಃ ಸಂವಥ್ಸರಃ** | ಹನ್ನೆರಡು ಮಾಸಗಳು ಸಂವತ್ಸರವಾಗಿದೆ. |
| **ಅಸ್ಮೈ ಸಂವಥ್ಸರೇಣ ಅನ್ನಮ್ ಅವರುಂಧೇ ಏವ** | ಈ ಮಂತ್ರಪಾಠದಿಂದ ಅಧ್ವರ್ಯುವು ಈ ಯಜಮಾನನಿಗೆ ಸಂವತ್ಸರದಿಂದಲೇ ಅನ್ನವನ್ನು ಸಂಪಾದಿಸಿಯೇ ಕೊಟ್ಟವನಾಗುತ್ತಾನೆ. |

* ಅಗ್ನಾವಿಷ್ಣೂ...ಆಗತಮ್ । ೧) ವಾಜಶ್ಚ ಮೇ...ಸುವಶ್ಚ ಮೇ । ೨) ಪ್ರಾಣಶ್ಚ ಮೇ...ಬಲಂ ಚ ಮೇ । ೩) ಓಜಶ್ಚ ಮ...ಶರೀರಾಣಿ ಚ ಮೇ । ೪) ಜ್ಯೈಷ್ಠ್ಯಂ ಚ ಮೇ...ದ್ರಾಘುಯಾ ಚ ಮೇ । ೫) ವೃದ್ಧಂ ಚ ಮೇ...ಜನಿಷ್ಯಮಾಣಂ ಚ ಮೇ । ೬) ಸೂಕ್ತಂ ಚ ಮೇ...ಕ್ಲ್ಪುಪ್ತಿಶ್ಚ ಮೇ । ೭) ಮತಿಶ್ಚ ಮೇ...ಯಶಶ್ಚ ಮೇ । ೮) ಭಗಶ್ಚ ಮೇ...ಪ್ರಸೂಶ್ಚ ಮೇ । ೯) ಸೀರಂ ಚ ಮೇ...ಶಯನಂ ಚ ಮೇ । ೧೦) ಸೂಷಾ ಚ ಮೇ...ವೃಷ್ಟಿಶ್ಚ ಮೇ । ೧೧) ಜೈತ್ರಂ ಚ ಮ...ಪೂರ್ಣತರಂ ಚ ಮೇ । ೧೨) ಅಕ್ಷಿತಿಶ್ಚ ಮೇ **ಕೂಯವಾಶ್ಚ ಮೇ ।**

'ದ್ವಾದಶ ದ್ವಾದಶಾನಿ' ಎಂಬುದಾಗಿ ಶ್ರುತಿವಚನ. 'ಅಗ್ನಾವಿಷ್ಣೂ' ಎಂದು ಆರಂಭಿಸಿ 'ಊರ್ಕ್ ಚ ಮೇ' ಅನುವಾಕದಲ್ಲಿ 'ಅನ್ನಂ ಚ ಮೇ' ಎಂಬ ಮಂತ್ರಕ್ಕೆ ಮೊದಲು 135 ಮಂತ್ರಗಳಾಗುತ್ತವೆ. 'ವಸೋರ್ಧಾರಾಂ ಜುಹೋತಿ' ಎಂಬ ಅನುವಾಕದಲ್ಲಿ **'ಅನ್ನಂ ಚ ಮೇऽಕ್ಷುಚ್ಚಮ ಇತ್ಯಾಹ'** ಎಂಬ ವಿವರಣೆಯನ್ನು ಶ್ರುತಿಯು ಆರಂಭಿಸಿರುವುದೇ ಈ ರೀತಿಯ ಪರಿಗಣನೆಗೆ ಕಾರಣ. ಆದರೆ 'ಅನ್ನಂ ಚ ಮೇ' ಎಂಬ ಮಂತ್ರದ ಆರಂಭಕ್ಕೆ ಮೊದಲು 144 ಮಂತ್ರಗಳು [12x12] ಎಂದು ಶ್ರುತಿಯು ಹೇಳುತ್ತದೆ. ಈ ಸಂಖ್ಯಾಸಂಪತ್ತಿಗಾಗಿ 'ಕೂಯವಾಶ್ಚ ಮೇ' ಎಂಬ ಮಂತ್ರವನ್ನು ಹತ್ತು ಬಾರಿ ಹೇಳಬೇಕು. ಒಂದು ಬಾರಿ ಅದು ಶ್ರುತಿಯಲ್ಲಿ ಪಠಿತವಾಗಿರುವ ಕಾರಣ 9 ಆವೃತ್ತಿಗಳಾಗುತ್ತವೆ. ಆಗ 'ಅಕ್ಷಿತಿಶ್ಚ ಮೇ' ಎಂಬಲ್ಲಿಯವರೆಗೆ 134 ಮಂತ್ರಗಳಾಗಿದ್ದು **'ಕೂಯವಾಶ್ಚ ಮೇ'** ಎಂಬುದರ 10 ಮಂತ್ರಗಳನ್ನು ಸೇರಿಸಿ [1+9] 144 ಮಂತ್ರಗಳಾಗುತ್ತವೆ.

ಕೆಳಗಿನ ಕಾರಿಕೆಯು ಈ ವಿವರಣೆಯನ್ನು ಹೊಂದಿದೆ:–

'ಪೂರ್ವೇ ತ್ವನ್ನಂ ಚ ಮೇ ಮಂತ್ರಾತ್ ಪಂಚತ್ರಿಂಶಚ್ಛತಂ ಗತಾಃ ।
ದ್ವಾದಶ ದ್ವಾದಶಾನೀತಿ ಸಂಖ್ಯಾಸಂಪಾದನಾಯ ತು ॥
ಕೂಯವಾಶ್ಚ ಮೇ ಇತ್ಯೇತತ್ ದಶಕೃತ್ವೋ ಯಜುಃ ಪಠೇತ್ ॥'

–ऽನ್ನಂ ಚ ಮೇऽಕ್ಷುಚ್ಚ ಮ ಇತ್ಯಾಹೈತದ್ವಾ [ವೈ(೩೮)] ಅನ್ನಸ್ಯ ರೂಪಗ್ಂ ರೂಪೇಣೈವಾನ್ನಮವರುಂಧೇऽಗ್ನಿಶ್ಚ ಮ ಆಪಶ್ಚಮ ಇತ್ಯಾಹೈಷಾ ವಾ ಅನ್ನಸ್ಯ ಯೋನಿಸ್ಸಯೋನ್ಯೈವಾನ್ನಮವ ರುಂಧೇ–

---

ಅನ್ನಮ್ । ಚ । ಮೇ । ಅಕ್ಷುತ್ । ಚ । ಮೇ । ಇತಿ । ಆಹ । ಏತತ್ । ವೈ । (೩೮) । ಅನ್ನಸ್ಯ । ರೂಪಮ್ । ರೂಪೇಣ । ಏವ । ಅನ್ನಮ್ । ಅವೇತಿ । ರುಂಧೇ । ಅಗ್ನಿಃ । ಚ । ಮೇ । ಆಪಃ । ಚ । ಮೇ । ಇತಿ । ಆಹ । ಏಷಾ । ವೈ । ಅನ್ನಸ್ಯ । ಯೋನಿಃ । ಸಯೋನೀತಿ ಸ–ಯೋನಿ । ಏವ । ಅನ್ನಮ್ । ಅವೇತಿ । ರುಂಧೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|

ವಸೋರ್ಧಾರಾ ಮಂತ್ರಾವಯವಭಾಗಗಳ ಪ್ರಶಂಸೆ; ಅರ್ಥವಾದ

| | |
|---|---|
| **ಅನ್ನಮ್ ಚ ಮೇ ಅಕ್ಷುತ್ ಚ ಮೇ ಇತಿ ಆಹ** | (ಅಗ್ನಾವಿಷ್ಣು ದೇವತೆಗಳೇ) 'ನನಗೆ ಅನ್ನವು ಹಸಿವು ಇಲ್ಲದಂತೆ ಸಂಪನ್ನವಾಗಿರಲಿ' ಎಂದು ಈ ಮಂತ್ರಭಾಗವು ಹೇಳುತ್ತದೆ. |
| **ಏತತ್ ವೈ ಅನ್ನಸ್ಯ ರೂಪಮ್** | (ಅಕ್ಷುಚ್ಚ ಮೇ ಎಂಬುದಕ್ಕಿಂತಲೂ ಶ್ರುತಿಯಲ್ಲಿ ಮುಂದೆ ಪಠಿತವಾಗಿರುವ) ವ್ರೀಹಿ ಮೊದಲಾದವುಗಳು ಅನ್ನಸಾಧನವಾಗಿವೆ. |
| **ರೂಪೇಣ ಏವ ಅನ್ನಮ್ ಅವರುಂಧೇ** | ಈ ಮಂತ್ರಪಾಠದಿಂದ ಆಯಾ ರೂಪದ ಅನ್ನವನ್ನೇ ಪಡೆಯುವನು. |
| **ಅಗ್ನಿಃ ಚ ಮೇ ಆಪಃ ಚ ಮೇ ಇತಿ ಆಹ** | ಅಗ್ನಿಯೂ, ನೀರೂ ನನಗೆ ಒದಗಲಿ ಎಂದು ಈ ಮಂತ್ರವಾಕ್ಯಗಳು ಹೇಳುತ್ತವೆ. |
| **ಏಷಾ ವೈ ಅನ್ನಸ್ಯ ಯೋನಿಃ** | ಇದೇ ಅನ್ನದ ಕಾರಣ ವಾಗಿದೆಯಷ್ಟೆ. |
| **ಸಯೋನಿ ಏವ ಅನ್ನಮ್ ಅವರುಂಧೇ** | ಈ ಮಂತ್ರಪಾಠವನ್ನು ಮಾಡಿ ಹೋಮವನ್ನು ಮಾಡಿದ ಯಜಮಾನನು ಅನೇಕ ಪ್ರಕಾರವಾದ ಕಾರಣಸಹಿತವಾದ ಅನ್ನವನ್ನು ಹೊಂದುತ್ತಾನೆ. |

---

'ದ್ವಾದಶ ದ್ವಾದಶಾನಿ ಜುಹೋತಿ' ಎಂಬ ವಿಧಿವಾಕ್ಯವು 'ಕೂಯವಾಶ್ಚ ಮೇ' ಎಂಬಲ್ಲಿ ಮುಕ್ತಾಯವಾಗುತ್ತದೆ. ಬಳಿಕ ಆರಂಭವಾಗುವ 'ಅನ್ನಂ ಚ ಮೇऽಕ್ಷುಚ್ಚ ಮೇ' ಎಂಬ ವಾಕ್ಯಗಳು ಆ ಅನುವಾಕದ ಕಡೆಯಲ್ಲಿ ಇರುವ 'ನೀವಾರಾಶ್ಚ ಮೇ' ಎಂಬಲ್ಲಿಯವರೆಗೆ ಇವೆ. ಈ ಎಲ್ಲ ವಾಕ್ಯಗಳಿಂದ ಪ್ರತಿಪಾದಿತವಾಗುವುದು ಅನ್ನದ ಸ್ವರೂಪವೇ

–ऽರ್ಧೇಂದ್ರಾಣಿ ಜುಹೋತಿ ದೇವತಾ ಏವಾವ ರುಂಧೇ ಯತ್ಸರ್ವೇಷಾಮರ್ಧ

ಮಿಂದ್ರಃ ಪ್ರತಿ ತಸ್ಮಾದಿಂದ್ರೋ ದೇವತಾನಾಂ ಭೂಯಿಷ್ಠಭಾಕ್ತಮ

ಇಂದ್ರಮುತ್ತರಮಾಹೇಂದ್ರಿಯ–

---

ಅರ್ಧೇಂದ್ರಾಣೀತ್ಯರ್ಧ–ಇಂದ್ರಾಣಿ । ಜುಹೋತಿ । ದೇವತಾಃ । ಏವ । ಅವೇತಿ । ರುಂಧೇ । ಯತ್ । ಸರ್ವೇಷಾಮ್ । ಅರ್ಧಮ್ । ಇಂದ್ರಃ । ಪ್ರತೀತಿ । ತಸ್ಮಾತ್ । ಇಂದ್ರಃ । ದೇವತಾನಾಮ್ । ಭೂಯಿಷ್ಠಭಾಕ್ತಮ ಇತಿ ಭೂಯಿಷ್ಠಭಾಕ್–ತಮಃ । ಇಂದ್ರಮ್ । ಉತ್ತರಮಿತ್ಯುತ್–ತರಮ್ । ಆಹ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಅರ್ಧೇಂದ್ರಾಣಿ ಜುಹೋತಿ** | 'ಅಗ್ನಿಶ್ಚ ಮ ಇಂದ್ರಶ್ಚ ಮೇ' ಮುಂತಾದ ವಾಕ್ಯಗಳ ಅರ್ಧಭಾಗದಲ್ಲಿ ಇಂದ್ರಪದವುಳ್ಳ ಮಂತ್ರವಿದೆ. ಹೀಗಾಗಿ ಈ ವಾಕ್ಯಗಳು ಅರ್ಧೇಂದ್ರಗಳು. ಈ ವಾಕ್ಯಗಳನ್ನು ಪಠಿಸುತ್ತಾ ಅಧ್ವರ್ಯುವು ವಸೋರ್ಧಾರಾ ಹೋಮವನ್ನು ಅನುಷ್ಠಿಸಬೇಕು. |
| **ದೇವತಾಃ ಅವರುಂಧೇ ಏವ** | ಈ ಮಂತ್ರಪಾಠದಿಂದ ಯಜಮಾನನು (ಅಗ್ನಿ, ಸೋಮ ಮುಂತಾದ ದೇವತೆಗಳನ್ನು ಪೂರ್ವಾರ್ಧದಲ್ಲಿ ಶ್ರುತಿಯು ಹೇಳಿರುವುದರಿಂದ) ದೇವತೆಗಳನ್ನು ನಿಶ್ಚಯವಾಗಿ ಹೊಂದುವನು. |
| **ಯತ್ ಸರ್ವೇಷಾಮ್ ಪ್ರತಿ ಅರ್ಧಮ್ ಇಂದ್ರಃ** | ಇಲ್ಲಿಯ ಎಲ್ಲ ವಾಕ್ಯಗಳಲ್ಲಿಯೂ ಉತ್ತರಾರ್ಧದಲ್ಲಿ 'ಇಂದ್ರ' ಪದದ ಪಾಠವಿರುವುದರಿಂದ/ಇಂದ್ರನು ಸರ್ವ ದೇವತೆಗಳ ಪ್ರತಿನಿಧಿಯಾಗಿರುವುದರಿಂದ/ಎಲ್ಲರ ಹವಿಸ್ಸಿನಲ್ಲಿಯೂ ಅರ್ಧಭಾಗಕ್ಕೆ ಇಂದ್ರನು ಸ್ವಾಮಿಯಾಗಿರುವುದರಿಂದ (ಭ. ಭಾ. ಭಾ) |
| **ತಸ್ಮಾತ್ ದೇವತಾನಾಮ್ ಇಂದ್ರಃ ಭೂಯಿಷ್ಠಭಾಕ್ತಮಃ** | (ಅದರಿಂದ) ದೇವತೆಗಳಲ್ಲಿ ಇಂದ್ರನು ಅಧಿಕವಾಗಿ ಹವಿರ್ಭಾಗವನ್ನು ಪಡೆಯುವವನಾಗಿದ್ದಾನೆ. |
| **ಇಂದ್ರಮ್ ಉತ್ತರಮ್ ಆಹ** | ವೇದವು ಮಂತ್ರಗಳ ಉತ್ತರಭಾಗಗಳಲ್ಲಿ ಇಂದ್ರನನ್ನು ಹೇಳಿದೆ. |

–ಮೇವಾಸ್ಮಿನ್ನುಪರಿಷ್ಟಾದ್ದಧಾತಿ ಯಜ್ಞಾಯುಧಾನಿ ಜುಹೋತಿ

ಯಜ್ಞೋ॰[ಯಜ್ಞಃ(೩೯)]ವೈ ಯಜ್ಞಾಯುಧಾನಿ ಯಜ್ಞಮೇವಾವ

ರುಂಧೇಽಥೋ ಏತದ್ವೈ ಯಜ್ಞಸ್ಯ ರೂಪಗ್ಂ

---

ಇಂದ್ರಿಯಮ್ । ಏವ । ಅಸ್ಮಿನ್ನ್ । ಉಪರಿಷ್ಟಾತ್ । ದಧಾತಿ । ಯಜ್ಞಾಯುಧಾನೀತಿ ಯಜ್ಞ–ಆಯುಧಾನಿ ।

ಜುಹೋತಿ । ಯಜ್ಞಃ । (೩೯) । ವೈ । ಯಜ್ಞಾಯುಧಾನೀತಿ ಯಜ್ಞ–ಆಯುಧಾನಿ । ಯಜ್ಞಮ್ । ಏವ । ಅವೇತಿ ।

ರುಂಧೇ । ಅಥೋ ಇತಿ । ಏತತ್ । ವೈ । ಯಜ್ಞಸ್ಯ । ರೂಪಮ್ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಅಸ್ಮಿನ್ ಇಂದ್ರಿಯಮ್ ಏವ ಉಪರಿಷ್ಟಾತ್ ದಧಾತಿ** | ಹೀಗಾಗಿ ಈ ಮಂತ್ರಭಾಗಗಳ ಪಾಠದಿಂದ ಅಧ್ವರ್ಯುವು ಈ ಯಜಮಾನನಲ್ಲಿಯೂ ಶಿರೋಭಾಗದಲ್ಲಿ ಚಕ್ಷುರಾದಿಯಾದ ಇಂದ್ರಿಯಗಳನ್ನು ಸ್ಥಾಪಿಸಿದವನಾಗುತ್ತಾನೆ. |
| **ಯಜ್ಞಾಯುಧಾನಿ ಜುಹೋತಿ** | ಯಜ್ಞಾಯುಧಗಳನ್ನು (ಯಜ್ಞದ ಅನುಷ್ಠಾನದ ಸಾಧನಗಳು) ಹೇಳುವ 'ಅಗ್ಂಶುಶ್ಚ ಮೇ' 'ಇಧ್ಮಶ್ಚ ಮೇ' ಎಂಬ ಮಂತ್ರಗಳನ್ನು ಪಠಿಸುತ್ತಾ ವಸೋರ್ಧಾರಾ ಹೋಮವನ್ನು ಮಾಡಬೇಕು. |
| **ಯಜ್ಞಾಯುಧಾನಿ ಯಜ್ಞಃ ವೈ ಯಜ್ಞಮ್ ಅವರುಂಧೇ ಏವ** | ಯಜ್ಞಸಾಧನಗಳೆಲ್ಲವೂ ಯಜ್ಞವೇ ಆಗಿವೆ. (ಇವುಗಳನ್ನು ಹೇಳುತ್ತಾ ಹೋಮವನ್ನು ಮಾಡುವುದರಿಂದ) ಯಜಮಾನನು ಯಜ್ಞವನ್ನು ಹೊಂದಿದವನಾಗುತ್ತಾನೆ. |
| **ಅಥೋ ಏತತ್ ವೈ ಯಜ್ಞಸ್ಯ ರೂಪಮ್** | ಮತ್ತು 'ಅಂಶುಗ್ರಹ' 'ಅದಾಭ್ಯಗ್ರಹ' ಮುಂತಾದ ಗ್ರಹಗಳು (ಸೋಮಪಾತ್ರೆಗಳು) ನೇರವಾಗಿ ಯಜ್ಞದ ಸಾಧನಗಳು. (ಮುಂದಿನ ಅನುವಾಕದ)ಇಧ್ಮ, ಬರ್ಹಿಗಳು ಪರಂಪರೆಯಿಂದ ಯಜ್ಞನಿಷ್ಪಾದಕಗಳು. ಹೀಗಾಗಿ ಇವೆಲ್ಲವೂ ಯಜ್ಞದ ಸ್ವರೂಪಗಳೇ ಆಗಿವೆ. |

---

ಇದೆ. ಹಸಿವು ಅನ್ನದಿಂದ ನೀಗುವುದರಿಂದ **'ವ್ರೀಹಯಶ್ಚ ಮೇ'** ಎಂಬುದರ ಬಳಿಕ ಹೇಳಿರುವ ಧಾನ್ಯಗಳೆಲ್ಲವೂ ಅನ್ನಸಾಧನಗಳೇ ಆಗಿವೆ.

ರೂಪೇಣೈವ ಯಜ್ಞಮವರುಂಧೇಽವಭೃಥಶ್ಚ ಮೇ ಸ್ವಗಾಕಾರಶ್ಚ ಮ
ಇತ್ಯಾಹ ಸ್ವಗಾಕೃತ್ಯಾ ಅಗ್ನಿಶ್ಚ ಮೇ ಘರ್ಮಶ್ಚ ಮ ಇತ್ಯಾಹೈತದ್ವೈ
ಬ್ರಹ್ಮವರ್ಚಸಸ್ಯ ರೂಪಗ್ಂ ರೂಪೇಣೈವ ಬ್ರಹ್ಮವರ್ಚಸಮವ ರುಂಧ

---

ರೂಪೇಣ । ಏವ । ಯಜ್ಞಮ್ । ಅವೇತಿ । ರುಂಧೇ । ಅವಭೃಥ ಇತ್ಯವ-ಭೃಥಃ । ಚ । ಮೇ । ಸ್ವಗಾಕಾರ ಇತಿ ಸ್ವಗಾ-ಕಾರಃ । ಚ । ಮೇ । ಇತಿ । ಆಹ । ಸ್ವಗಾಕೃತ್ಯಾ ಇತಿ ಸ್ವಗಾ-ಕೃತ್ಯೈ । ಅಗ್ನಿಃ । ಚ । ಮೇ । ಘರ್ಮಃ । ಚ । ಮೇ । ಇತಿ । ಆಹ । ಏತತ್ । ವೈ । ಬ್ರಹ್ಮವರ್ಚಸಸ್ಯೇತಿ ಬ್ರಹ್ಮ-ವರ್ಚಸಸ್ಯ । ರೂಪಮ್ । ರೂಪೇಣ । ಏವ । ಬ್ರಹ್ಮವರ್ಚಸಮಿತಿ ಬ್ರಹ್ಮ-ವರ್ಚಸಮ್ । ಅವೇತಿ । ರುಂಧೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ರೂಪೇಣ ಏವ ಯಜ್ಞಮ್ ಅವರುಂಧೇ | ಇವುಗಳನ್ನು ಹೇಳುತ್ತಾ ಹೋಮವನ್ನು ಮಾಡುವುದರಿಂದ ರೂಪದಿಂದ ಕೂಡಿದ ಯಜ್ಞವನ್ನು ಪಡೆದವನಾಗುತ್ತಾನೆ. |
| ಅವಭೃಥಃ ಚ ಮೇ ಸ್ವಗಾಕಾರಃ ಚ ಮೇ ಇತಿ ಆಹ | 'ಯಜ್ಞಾವಸಾನದ ಅವಭೃಥವೂ, ಹೋಮಸಮಯದಲ್ಲಿ ಹೇಳುವ ಸ್ವಗಾಕಾರವೂ ನನಗೆ ಲಭಿಸಲಿ' ಎಂದು ಈ ಮಂತ್ರಭಾಗವು ಹೇಳುತ್ತದೆ. |
| ಸ್ವಗಾಕೃತ್ಯೈ | ಇದು ಯಜ್ಞದ/ಯಜ್ಞಫಲದ ಸ್ವಾಧೀನತೆಗೆ ಕಾರಣವಾಗುತ್ತದೆ. |
| ಅಗ್ನಿಶ್ಚ ಮೇ ಘರ್ಮಶ್ಚ ಮೇ ಇತಿ ಆಹ | 'ಈ ಯಜ್ಞದಿಂದ ಚಯನ ಮಾಡಲ್ಪಡುತ್ತಿರುವ ಅಗ್ನಿಯೂ ಪ್ರವರ್ಗ್ಯವೂ ತಮ್ಮ ತಮ್ಮ ಕಾರ್ಯ ಸಮರ್ಥವಾಗಲಿ' ಎಂದು ಈ ಮಂತ್ರಭಾಗವು ಹೇಳುತ್ತದೆ. |
| ಏತತ್ ವೈ ಬ್ರಹ್ಮವರ್ಚಸಸ್ಯ ರೂಪಮ್ | ಅಗ್ನಿ ಮುಂತಾದವುಗಳು ಬ್ರಹ್ಮವರ್ಚಸದ ರೂಪಗಳಾಗಿವೆ/ಅವುಗಳಿಂದ ಬ್ರಹ್ಮವರ್ಚಸವು ಲಭಿಸುತ್ತದೆ. |
| ರೂಪೇಣ ಏವ ಬ್ರಹ್ಮವರ್ಚಸಮ್ ಅವರುಂಧೇ | ಈ ಮಂತ್ರಪಾಠದಿಂದ ಯಜಮಾನನು ಬ್ರಹ್ಮವರ್ಚಸವನ್ನು ರೂಪದಿಂದಲೇ ಪಡೆದವನಾಗುತ್ತಾನೆ. |

ಋಕ್ಚ ಮೇ ಸಾಮ ಚ ಮ ಇತ್ಯಾಹೈ[ಆಹ(೪೦)ಏತತ್]ತದ್ವೈ ಛಂದಸಾಗ್ಂ ರೂಪಗ್ಂ ರೂಪೇಣೈವ ಛಂದಾಗ್ಂಸ್ಯವರುಂಧೇ ಗರ್ಭಾಶ್ಚ ಮೇ ವಥ್ಸಾಶ್ಚ ಮ ಇತ್ಯಾಹೈತದ್ವೈ ಪಶೂನಾಗ್ಂ ರೂಪಗ್ಂ ರೂಪೇಣೈವ ಪಶೂನವ ರುಂಧೇ

---

ಋಕ್ । ಚ । ಮೇ । ಸಾಮ । ಚ । ಮೇ । ಇತಿ । ಆಹ । (೪೦) । ಏತತ್ । ವೈ । ಛಂದಸಾಮ್ । ರೂಪಮ್ । ರೂಪೇಣ । ಏವ । ಛಂದಾಗ್ಂಸಿ । ಅವೇತಿ । ರುಂಧೇ । ಗರ್ಭಾಃ । ಚ । ಮೇ । ವಥ್ಸಾಃ । ಚ । ಮೇ । ಇತಿ । ಆಹ । ಏತತ್ । ವೈ । ಪಶೂನಾಮ್ । ರೂಪಮ್ । ರೂಪೇಣ । ಏವ । ಪಶೂನ್ । ಅವೇತಿ । ರುಂಧೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಋಕ್ ಚ ಮೇ ಸಾಮ ಚ ಮೇ ಇತಿ ಆಹ** | 'ನನ್ನ ಯಜ್ಞದಿಂದ ಋಕ್, ಸಾಮ ಮೊದಲಾದ ಛಂದಸ್ಸುಗಳು ತಮ್ಮ ತಮ್ಮ ಕಾರ್ಯಸಮರ್ಥವಾಗಲಿ' ಎಂದು ಈ ಮಂತ್ರಭಾಗವು ಹೇಳುತ್ತದೆ. |
| **ಏತತ್ ವೈ ಛಂದಸಾಮ್ ರೂಪಮ್** | ಈ ಋಗಾದಿಗಳು ಛಂದಸ್ಸುಗಳ ರೂಪವಾಗಿವೆ. |
| **ರೂಪೇಣ ಏವ ಛಂದಾಗ್ಂಸಿ ಅವರುಂಧೇ** | ಈ ಮಂತ್ರಪಾಠದಿಂದ ಯಜಮಾನನು ಸ್ವರೂಪದಿಂದ ಛಂದಸ್ಸುಗಳನ್ನು ಹೊಂದಿದವನಾಗುತ್ತಾನೆ. |
| **ಗರ್ಭಾಶ್ಚ ಮೇ ವತ್ಸಾಶ್ಚ ಮ ಇತಿ ಆಹ** | 'ನನ್ನ ಯಜ್ಞದ ಫಲವಾಗಿ ಗರ್ಭಗಳೂ, ಕರುಗಳೂ ತಮ್ಮ ತಮ್ಮ ವ್ಯಾಪಾರದಲ್ಲಿ ಸಮರ್ಥವಾಗಲಿ' ಎಂದು ಈ ಮಂತ್ರಭಾಗವು ಹೇಳುತ್ತದೆ. |
| **ಏತತ್ ವೈ ಪಶೂನಾಮ್ ರೂಪಮ್** | ಗರ್ಭಾದಿಗಳು ಪಶುಗಳ ರೂಪವಾಗಿವೆ. |
| **ರೂಪೇಣ ಏವ ಪಶೂನ್ ಅವರುಂಧೇ** | ಯಜಮಾನನು ಈ ಮಂತ್ರಪಠನದಿಂದ ಗರ್ಭಾದಿ ಪಶುರೂಪದಿಂದಲೇ ಪಶುಗಳನ್ನು ಸಂಪಾದಿಸುತ್ತಾನೆ. |

---

ಹೀಗೆ ನಾಲ್ಕನೆಯ ಅನುವಾಕದ ವಾಕ್ಯಗಳ ಪ್ರಶಂಸೆಯು ಇದೆ.

ಅಗ್ನಿಯು ಪಾಕಹೇತುವಾದುದರಿಂದ ಅನ್ನಕಾರಣನಾಗಿದ್ದಾನೆ. ನೀರಿನಿಂದ ಓಷಧಿಗಳು ಜನಿಸಿ, ಬೆಳೆಯುವುದರಿಂದ ಅದೂ ಅನ್ನಕಾರಣವಾಗಿದೆ.

ಶ್ರುತಿಯಲ್ಲಿ ಅನುವಾಕದಲ್ಲಿರುವ ಒಂದೆರಡು ವಾಕ್ಯಗಳನ್ನು ವಿವರಿಸಿ ಪ್ರಶಂಸೆ ಇರುತ್ತದೆ. ಇಲ್ಲಿ ಐದನೆಯ ಅನುವಾಕದ ವಾಕ್ಯಗಳ ಪ್ರಶಂಸೆಯು ಇದೆ.

ಕಲ್ಪಾಞ್ಜುಹೋತ್ಯಕ್ಲೃಪ್ತಸ್ಯ ಕ್ಲೃಪ್ತ್ಯೈ ಯುಗ್ಮದಯುಜೇ ಜುಹೋತಿ

ಮಿಥುನತ್ವಾಯೋತ್ತರಾವತೀ ಭವತೋಽಭಿಕ್ರಾಂತ್ಯಾ

---

ಕಲ್ಪಾನ್ । ಜುಹೋತಿ । ಅಕ್ಲೃಪ್ತಸ್ಯ । ಕ್ಲೃಪ್ತ್ಯೈ । ಯುಗ್ಮದಯುಜೇ ಇತಿ ಯುಗ್ಮತ್-ಅಯುಜೇ । ಜುಹೋತಿ । ಮಿಥುನತ್ವಾಯೇತಿ ಮಿಥುನ-ತ್ವಾಯ । ಉತ್ತರಾವತೀ ಇತ್ಯುತ್ತರಾ-ವತೀ । ಭವತಃ । ಅಭಿಕ್ರಾಂತ್ಯಾ ಇತ್ಯಭಿ-ಕ್ರಾಂತ್ಯೈ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಕಲ್ಪಾನ್ ಜುಹೋತಿ** | **'ಅಯುರ್ಯಜ್ಞೇನ ಕಲ್ಪತಾಮ್'** ಮೊದಲಾದ ಮಂತ್ರಗಳು ಕಲ್ಪಗಳು. ಅವುಗಳನ್ನು ಪಠಿಸುತ್ತಾ ವಸೋರ್ಧಾರಾ ಹೋಮವನ್ನು ಅನುಷ್ಠಿಸಬೇಕು. |
| **ಅಕ್ಲೃಪ್ತಸ್ಯ ಕ್ಲೃಪ್ತ್ಯೈ** | (ಈ ಮಂತ್ರಗಳನ್ನು ಪಠಿಸುತ್ತಾ ಯಜಮಾನನು ಹೋಮವನ್ನು ಮಾಡುವುದು) ಮೊದಲು ತಮ್ಮ ತಮ್ಮ ಕಾರ್ಯದಲ್ಲಿ ಅಸಮರ್ಥವಾದ ವಸ್ತುಗಳು ತಮ್ಮ ತಮ್ಮ ಕಾರ್ಯಗಳಲ್ಲಿ ಸಮರ್ಥವಾಗುವಂತೆ ಮಾಡಲು ಕಾರಣವಾಗುತ್ತದೆ. |
| **ಯುಗ್ಮದಯುಜೇ ಜುಹೋತಿ** | ಯಜಮಾನನು (ಯುಗ್ಮತ್)ಸಮಸಂಖ್ಯಾಪ್ರತಿಪಾದಕವಾದ 'ಚತಸ್ರಶ್ಚ ಮೇ' ಮೊದಲಾದ ಮಂತ್ರಗಳನ್ನೂ, (ಅಯುಜೇ) ವಿಷಮಸಂಖ್ಯಾಪ್ರತಿಪಾದಕವಾದ 'ಏಕಾ ಚ ಮೇ' ಮುಂತಾದ ಮಂತ್ರಗಳನ್ನೂ ಪಠಿಸುತ್ತಾ ವಸೋರ್ಧಾರಾಹೋಮವನ್ನು ಅನುಷ್ಠಿಸಬೇಕು. |
| **ಮಿಥುನತ್ವಾಯ** | (ರಾಶಿದ್ವಯದಲ್ಲಿರುವ ಮಂತ್ರಗಳು ಸ್ತ್ರೀಪುರುಷರಂತೆ ಪರಸ್ಪರವಿಲಕ್ಷಣವಾಗಿವೆ) ಈ ಮಂತ್ರಪಾಠದಿಂದ ಹೋಮವು ಸ್ತ್ರೀಪುರುಷರನ್ನು ಜೊತೆಗೂಡಿಸಲು ನಿಮಿತ್ತವಾಗುತ್ತದೆ. |
| **ಉತ್ತರಾವತೀ ಭವತಃ** | ಈ ಮಂತ್ರಗಳು ಒಂದು, ಮೂರು, ನಾಲ್ಕು, ಎಂಟು-ಹೀಗೆ ಉತ್ತರೋತ್ತರವೃದ್ಧಿರೂಪವಾಗಿವೆ. |
| **ಅಭಿಕ್ರಾಂತ್ಯೈ** | ಇವುಗಳನ್ನು ಪಠಿಸುತ್ತಾ ಹೋಮಾನುಷ್ಠಾನ ಮಾಡುವುದು ಎಲ್ಲವನ್ನೂ ವ್ಯಾಪಿಸಲು ಕಾರಣವಾಗುತ್ತದೆ./ ಸ್ವರ್ಗಪ್ರಾಪ್ತಿಗೆ ಕಾರಣವಾಗುತ್ತದೆ. [ಭ. ಭಾ. ಭಾ] |

ಏಕಾ ಚ ಮೇ ತಿಸ್ರಶ್ಚ ಮ ಇತ್ಯಾಹ ದೇವಛಂದಸಂ ವಾ ಏಕಾ ಚ ತಿಸ್ರಶ್ಚ

[(೪೧) ಮನುಷ್ಯಛಂದಸಂ]ಮನುಷ್ಯಛಂದಸಂ ಚತಸ್ರಶ್ಚಾಷ್ಟೌ ಚ

ದೇವಛಂದಸಂ ಚೈವ ಮನುಷ್ಯಛಂದಸಂ ಚಾವ ರುಂಧ

---

ಏಕಾ । ಚ । ಮೇ । ತಿಸ್ರಃ । ಚ । ಮೇ । ಇತಿ । ಆಹ । ದೇವಛಂದಸಮಿತಿ ದೇವ–ಛಂದಸಮ್ । ವೈ । ಏಕಾ । ಚ । ತಿಸ್ರಃ । ಚ । (೪೧) । ಮನುಷ್ಯಛಂದಸಮಿತಿ ಮನುಷ್ಯ–ಛಂದಸಮ್ । ಚತಸ್ರಃ । ಚ । ಅಷ್ಟೌ । ಚ । ದೇವಛಂದಸಮಿತಿ ದೇವ–ಛಂದಸಮ್ । ಚ । ಏವ । ಮನುಷ್ಯಛಂದಸಮಿತಿ ಮನುಷ್ಯ–ಛಂದಸಮ್ । ಚ । ಅವೇತಿ । ರುಂಧೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಏಕಾ ಚ ಮೇ ತಿಸ್ರಃ ಚ ಮೇ ಇತಿ ಆಹ** | ಶ್ರುತಿಯು 'ಏಕಾ ಚ ಮೇ ತಿಸ್ರಃ ಚ ಮೇ' ಎಂದು ಹೇಳುತ್ತದೆ. |
| **ಏಕಾ ಚ ತಿಸ್ರಃ ಚ ದೇವಛಂದಸಮ್ ವೈ** | ಒಂದು ಮುಂತಾದ ವಿಷಮಸಂಖ್ಯೆಯಿಂದ ದೇವತೆಗಳಿಗೆ ಪ್ರಿಯವಾದ ಛಂದಸ್ಸುಗಳು ನಿಷ್ಪನ್ನವಾಗುತ್ತವೆ. ಅವು ದೇವಛಂದಸ್ಸುಗಳು. |
| **ಚತಸ್ರಃ ಚ ಅಷ್ಟೌ ಚ ಮನುಷ್ಯಛಂದಸಮ್** | ನಾಲ್ಕು ಮುಂತಾದ ಸಮಸಂಖ್ಯೆಯಿಂದ ಮನುಷ್ಯರಿಗೆ ಪ್ರಿಯವಾದ ಛಂದಸ್ಸುಗಳು ಉಂಟಾಗುತ್ತವೆ. ಅವು ಮನುಷ್ಯಛಂದಸ್ಸುಗಳು. |
| **ದೇವಛಂದಸಮ್ ಚ ಮನುಷ್ಯಛಂದಸಮ್ ಚ ಅವರುಂಧೇ ಏವ** | ಈ ಎರಡು ಬಗೆಯಾದ ಮಂತ್ರಗಳ ಪಠನದಿಂದ ಹೋಮವನ್ನು ಅನುಷ್ಠಿಸುವ ಯಜಮಾನನು ದೇವಛಂದಸ್ಸನ್ನೂ, ಮನುಷ್ಯಛಂದಸ್ಸನ್ನೂ ಹೊಂದುವನು. |

---

ಇದು 'ಅಗ್ನಿಶ್ಚ ಮ ಇಂದ್ರಶ್ಚ ಮೇ' ಎಂಬ ಆರನೆಯ ಅನುವಾಕದ ಮಂತ್ರಗಳ ಪ್ರಶಂಸೆ.

ಇವು 'ಅಗ್ಂಶುಶ್ಚ ಮೇ' 'ಇಧ್ಮಶ್ಚ ಮೇ' ಎಂಬ ಏಳನೆಯ ಮತ್ತು ಎಂಟನೆಯ ಅನುವಾಕಗಳ ವಾಕ್ಯಗಳ ಪ್ರಶಂಸೆಯಾಗಿದೆ.

ಇದು ಒಂಬತ್ತನೆಯ ಅನುವಾಕದಲ್ಲಿರುವ ಪೂರ್ವಭಾಗದ ಮಂತ್ರಗಳ ಪ್ರಶಂಸೆಯಾಗಿದೆ.

ಇದು ಹತ್ತನೆಯ ಅನುವಾಕದ ಪೂರ್ವಭಾಗದ ಮಂತ್ರಗಳ ಪ್ರಶಂಸೆ.

ಆ ತ್ರಯಸ್ತ್ರಿಗ್ಂಶತೋ ಜುಹೋತಿ ತ್ರಯಸ್ತ್ರಿಗ್ಂಶದ್ವೈ ದೇವತಾ ದೇವತಾ

ಏವಾವ ರುಂಧ ಆಽಷ್ಟಾಚತ್ವಾರಿಗ್ಂಶತೋ ಜುಹೋತ್ಯಷ್ಟಾಚತ್ವಾರಿಗ್ಂಶದಕ್ಷರಾ

ಜಗತೀ ಜಾಗತಾಃ ಪಶವೋ ಜಗತ್ಯೈವಾಸ್ಮೈ ಪಶೂನವ ರುಂಧೇ

---

ಏತಿ । ತ್ರಯಸ್ತ್ರಿಗ್ಂಶತ ಇತಿ ತ್ರಯಃ-ತ್ರಿಗ್ಂಶತಃ । ಜುಹೋತಿ । ತ್ರಯಸ್ತ್ರಿಗ್ಂಶದಿತಿ ತ್ರಯಃ-ತ್ರಿಗ್ಂಶತ್ । ವೈ । ದೇವತಾಃ । ದೇವತಾಃ । ಏವ । ಅವೇತಿ । ರುಂಧೇ । ಏತಿ । ಅಷ್ಟಾಚತ್ವಾರಿಗ್ಂಶತ ಇತ್ಯಷ್ಟಾ-ಚತ್ವಾರಿಗ್ಂಶತಃ । ಜುಹೋತಿ । ಅಷ್ಟಾಚತ್ವಾರಿಗ್ಂಶದಕ್ಷರೇತ್ಯಷ್ಟಾಚತ್ವಾರಿಗ್ಂಶತ್-ಅಕ್ಷರಾ । ಜಗತೀ ।

---

| ಬ್ರಾಹ್ಮಣಭಾಗ | ವಿವರಣೆ |
|---|---|

### ರಾಶಿದ್ವಯದ ಸಂಖ್ಯಾವೃದ್ಧಿಯ ಅವಧಿಪ್ರಶಂಸೆ

| | |
|---|---|
| ಆ ತ್ರಯಸ್ತ್ರಿಗ್ಂಶತಃ ಜುಹೋತಿ | ವಿಷಮಸಂಖ್ಯಾಪ್ರತಿಪಾದಕವಾದ ಮಂತ್ರಗಳಲ್ಲಿ 'ತ್ರಯಸ್ತ್ರಿಗ್ಂಶಚ್ಚ ಮೇ' ಎಂಬಲ್ಲಿಯವರೆಗೆ ಪಠಿಸುತ್ತಾ ಹೋಮವನ್ನು ಮಾಡಬೇಕು. |
| ದೇವತಾಃ ತ್ರಯಸ್ತ್ರಿಗ್ಂಶತ್ ವೈ | ದೇವತೆಗಳ ಸಂಖ್ಯೆಯು ಮೂವತ್ತುಮೂರಾಗಿದೆ. |
| ದೇವತಾಃ ಅವರುಂಧೇ ಏವ | ಈ ಸಂಖ್ಯಾಸಾಮ್ಯದಿಂದ ಈ ಮಂತ್ರವನ್ನು ಪಠಿಸಿ ಹೋಮವನ್ನು ಅನುಷ್ಠಿಸುವ ಯಜಮಾನನು ದೇವತೆಗಳನ್ನು /ದೇವತಾನುಗ್ರಹವನ್ನು ಹೊಂದಿಯೇ ಹೊಂದುತ್ತಾನೆ. |
| ಆ ಅಷ್ಟಾಚತ್ವಾರಿಗ್ಂಶತಃ ಜುಹೋತಿ | ಸಮಸಂಖ್ಯಾವಾಚಕವಾದ ಶಬ್ದರಾಶಿಯಲ್ಲಿ 'ಅಷ್ಟಾಚತ್ವಾರಿಗ್ಂಶಚ್ಚ ಮೇ' ವರೆಗಿನ ಸಂಖ್ಯಾವಾಚಕ ಗಳನ್ನು ಪಠಿಸುತ್ತಾ ವಸೋರ್ಧಾರಾಹೋಮವನ್ನು ಮಾಡಬೇಕು. |
| ಅಷ್ಟಾಚತ್ವಾರಿಗ್ಂಶದಕ್ಷರಾ ಜಗತೀ | ಜಗತೀಛಂದಸ್ಸು ನಲವತ್ತೆಂಟು ಅಕ್ಷರಗಳಿಂದ ಕೂಡಿದೆ. |
| ಪಶವಃ ಜಾಗತಾಃ | ಪಶುಗಳೂ ಜಗತೀಛಂದಸ್ಸಿಗೆ ಸಂಬಂಧಿಸಿದವುಗಳು. |
| ಅಸ್ಮೈ ಜಗತ್ಯಾ ಏವ ಪಶೂನ್ ಅವರುಂಧೇ | ಈ ಮಂತ್ರಭಾಗಗಳನ್ನು ಪಠಿಸಿ ಹೋಮ ಮಾಡುವ ದರಿಂದ ಯಜಮಾನನು ಪಶುಗಳನ್ನು ಹೊಂದುತ್ತಾನೆ/ ಅಧ್ವರ್ಯುವು ಯಜಮಾನನಿಗೆ ಪಶುಪ್ರಾಪ್ತಿಯನ್ನು ಮಾಡಿ ಕೊಡುತ್ತಾನೆ. |

ವಾಜಶ್ಚ ಪ್ರಸವಶ್ಚೇತಿ ದ್ವಾದಶಂ ಜುಹೋತಿ ದ್ವಾದಶ

ಮಾಸಾಸ್ಸಂವಥ್ಸರಸ್ಸಂವಥ್ಸರ ಏವ ಪ್ರತಿ ತಿಷ್ಠತಿ ॥ ೪೨-8 ॥

[ವಿ ವೈ ಯಜ್ಞಸ್ಸಾಮ ಚ ಮ ಇತ್ಯಾಹ ಚ ತಿಸ್ರಶ್ಚೈಕಾನ್ನ ಪಂಚಾಶಚ್ಚ ॥]

---

ಜಾಗತಾಃ । ಪಶವಃ । ಜಗತ್ಯಾ । ಏವ । ಅಸ್ಮೈ । ಪಶೂನ್ । ಅವೇತಿ । ರುಂಧೇ । ವಾಜಃ । ಚ । ಪ್ರಸವ ಇತಿ ಪ್ರ-ಸವಃ । ಚ । ಇತಿ । ದ್ವಾದಶಮ್ । ಜುಹೋತಿ । ದ್ವಾದಶ । ಮಾಸಾಃ । ಸಂವಥ್ಸರ ಇತಿ ಸಮ್-ವಥ್ಸರಃ । ಸಂವಥ್ಸರ ಇತಿ ಸಮ್-ವಥ್ಸರೇ । ಏವ । ಪ್ರತೀತಿ । ತಿಷ್ಠತಿ ॥ ೪೨ ॥

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ವಾಜಃ ಚ ಪ್ರಸವಃ ಚ ಇತಿ ದ್ವಾದಶಮ್ ಜುಹೋತಿ** | ವಾಜಶ್ಚ, ಪ್ರಸವಶ್ಚ, ಅಪಿಜಶ್ಚ, ಕ್ರತುಶ್ಚ, ಸುವಶ್ಚ, ಮೂರ್ಧಾ ಚ, ವ್ಯಶ್ನಿಯಶ್ಚ, ಆಂತ್ಯಾಯನಶ್ಚ, ಅಂತ್ಯಶ್ಚ, ಭೌವನಶ್ಚ, ಭುವನಶ್ಚ, ಅಧಿಪತಿಶ್ಚ ಎಂಬ ಹನ್ನೆರಡು ಮಂತ್ರಗಳನ್ನು ಪಠಿಸುತ್ತಾ ವಸೋರ್ಧಾರಾ ಹೋಮವನ್ನು ಮಾಡಬೇಕು. |
| **ದ್ವಾದಶ ಮಾಸಾಃ ಸಂವಥ್ಸರಃ** | ಹನ್ನೆರಡು ಮಾಸಗಳು ಒಂದು ಸಂವತ್ಸರವಾಗಿವೆ. |
| **ಸಂವಥ್ಸರೇ ಏವ ಪ್ರತಿತಿಷ್ಠತಿ** | ಈ ಹನ್ನೆರಡು ಮಂತ್ರಗಳನ್ನು ಪಠಿಸುತ್ತಾ ಹೋಮ ಮಾಡುವುದರಿಂದ ಯಜಮಾನನು ಸಂವತ್ಸರ ಕಾಲದಲ್ಲಿ ಪ್ರತಿಷ್ಠೆಯನ್ನು/ಉತ್ತಮಸ್ಥಿತಿಯನ್ನು ಹೊಂದುವನು. |

---

**'ಕಲ್ಪಾನ್ ಜುಹೋತಿ'** ಎಂಬುದು ದಶಮಾನುವಾಕದ ಕೊನೆಯ ಭಾಗದ ಮಂತ್ರಗಳ ಪ್ರಶಂಸೆಯಾಗಿದೆ.

ಸಂಖ್ಯಾವಾಚಕಶಬ್ದಗಳ ತಾತ್ಪರ್ಯವನ್ನು ದೇವಛಂದಸ್ಸು ಮನುಷ್ಯಛಂದಸ್ಸು ಎಂಬುದಾಗಿ ಶ್ರುತಿಯು ವಿವರಿಸಿದೆ. 'ಏಕಾ ಚ ಮೇ' ಮುಂತಾದ ಮಂತ್ರಗಳೇ ದೇವಪ್ರಿಯವಾದ ಛಂದಸ್ಸುಗಳು. 'ಚತಸ್ರಶ್ಚ ಮೇ' ಮುಂತಾದವುಗಳೇ ಮನುಷ್ಯಪ್ರಿಯವಾದ ಛಂದಸ್ಸುಗಳು ಎಂದೂ ತಾತ್ಪರ್ಯ.

'ವಾಜಶ್ಚ ಪ್ರಸವಶ್ಚ' ಎಂಬುದಾಗಿ ವಸೋರ್ಧಾರಾಮಂತ್ರದಲ್ಲಿ ಅಂತಿಮಾನುವಾಕದಲ್ಲಿ ಕಡೆಯ ಭಾಗದಲ್ಲಿ ಪಠಿತವಾಗಿರುವ ಮಂತ್ರಗಳ ಪ್ರಶಂಸೆಯು ಇದಾಗಿದೆ.

## ॥ ನವಮೋಽನುವಾಕಃ ॥

ಅಗ್ನಿರ್ದೇವೇಭ್ಯೋಽಪಾಕ್ರಾಮದ್ಭಾಗಧೇಯಮಿಚ್ಛಮಾನಸ್ತಂ ದೇವಾ
ಅಬ್ರುವನ್ನುಪ ನ ಆ ವರ್ತಸ್ವ ಹವ್ಯನ್ನೋ ವಹೇತಿ

---

ಅಗ್ನಿಃ । ದೇವೇಭ್ಯಃ । ಅಪೇತಿ । ಅಕ್ರಾಮತ್ । ಭಾಗಧೇಯಮಿತಿ ಭಾಗ–ಧೇಯಮ್ । ಇಚ್ಛಮಾನಃ । ತಮ್ । ದೇವಾಃ । ಅಬ್ರುವನ್ನ್ । ಉಪೇತಿ । ನಃ । ಐತಿ । ವರ್ತಸ್ವ । ಹವ್ಯಮ್ । ನಃ । ವಹ । ಇತಿ ।

---

ಈ ಅನುವಾಕದಲ್ಲಿ ವಾಜಪ್ರಸವೀಯಹೋಮವು ಉಕ್ತವಾಗಿದೆ.

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ವಾಜಪ್ರಸವೀಯಹೋಮವಿಧಿ; ಪ್ರಶಂಸೆ** |
| **ಅಗ್ನಿಃ ದೇವೇಭ್ಯಃ ಅಪಾಕ್ರಾಮತ್ ಭಾಗಧೇಯಮ್ ಇಚ್ಛಮಾನಃ** | (ಒಂದು ಕಾಲದಲ್ಲಿ ಭಾಗರಹಿತನಾದ) ಅಗ್ನಿಯು ತನ್ನ ಭಾಗವನ್ನು ಹೊಂದಲು ಬಯಸಿದವನಾಗಿ ದೇವತೆಗಳಿಂದ ದೂರಕ್ಕೆ ಹೊರಟುಹೋದನು. |
| **ತಮ್ ದೇವಾಃ** | ಆಗ ದೇವತೆಗಳು ಅಗ್ನಿಯನ್ನು (ಹುಡುಕಿ) |
| **ನಃ ಉಪ ಆವರ್ತಸ್ವ** | 'ನಮ್ಮ ಬಳಿಗೆ ಹಿಂದಿರುಗಿ ಬಾ' |
| **ನಃ ಹವ್ಯಮ್ ಆ ವಹ ಇತಿ** | 'ನಮ್ಮ ಹವ್ಯಗಳನ್ನು(ಮೊದಲಿನಂತೆ) ತಂದು ಕೊಡು' |
| **ಅಬ್ರುವನ್** | ಎಂದು ಹೇಳಿದರು. |

---

**ತಾತ್ಪರ್ಯ:–** ಪ್ರಥಮಕಾಂಡದ ಸಪ್ತಮಪ್ರಪಾಠಕದ **'ವಾಜಸ್ಯೇಮಮ್'** ಎಂದು ಆರಂಭವಾಗುವ ಮಂತ್ರಗಳೂ ನಾಲ್ಕನೆಯ ಕಾಂಡದ ಸಪ್ತಮಪ್ರಪಾಠಕದ **'ವಾಜೋ ನಃ ಸಪ್ತ'** ಮುಂತಾದ ಮಂತ್ರಗಳೂ ವಾಜಪ್ರಸವೀಯ ಹೋಮದ ಮಂತ್ರಗಳಾಗಿವೆ. ಇವು ಒಟ್ಟು ಹದಿನಾಲ್ಕು ಮಂತ್ರಗಳಾಗುತ್ತವೆ.

ಸೋಽಬ್ರವೀದ್ವರಂ ವೃಣೈ ಮಹ್ಯಮೇವ ವಾಜಪ್ರಸವೀಯಂ ಜುಹವನ್ನಿತಿ
ತಸ್ಮಾದಗ್ನಯೇ ವಾಜಪ್ರಸವೀಯಂ ಜುಹ್ವತಿ ಯದ್ವಾಜಪ್ರಸವೀಯಂ
ಜುಹೋತ್ಯಗ್ನಿಮೇವ ತದ್ಭಾಗಧೇಯೇನ ಸಮರ್ಧಯತ್ಯಥೋ ಅಭಿಷೇಕ
ಏವಾಸ್ಯ ಸ ಚತುರ್ದಶಭಿರ್ಜುಹೋತಿ

---

ಸಃ । ಅಬ್ರವೀತ್ । ವರಮ್ । ವೃಣೈ । ಮಹ್ಯಮ್ । ಏವ । ವಾಜಪ್ರಸವೀಯಮಿತಿ ವಾಜ-ಪ್ರಸವೀಯಮ್ । ಜುಹವನ್ನ್ । ಇತಿ । ತಸ್ಮಾತ್ । ಅಗ್ನಯೇ । ವಾಜಪ್ರಸವೀಯಮಿತಿ ವಾಜ-ಪ್ರಸವೀಯಮ್ । ಜುಹ್ವತಿ । ಯತ್ । ವಾಜಪ್ರಸವೀಯಮಿತಿ ವಾಜ-ಪ್ರಸವೀಯಮ್ । ಜುಹೋತಿ । ಅಗ್ನಿಮ್ । ಏವ । ತತ್ । ಭಾಗಧೇಯೇನೇತಿ ಭಾಗ-ಧೇಯೇನ । ಸಮಿತಿ । ಅರ್ಧಯತಿ । ಅಥೋ ಇತಿ । ಅಭಿಷೇಕ ಇತ್ಯಭಿ-ಸೇಕಃ । ಏವ । ಅಸ್ಯ । ಸಃ । ಚತುರ್ದಶಭಿರಿತಿ ಚತುರ್ದಶ-ಭಿಃ । ಜುಹೋತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಸಃ ವರಮ್ ವೃಣೈ ಮಹ್ಯಮ್ ಏವ ವಾಜ ಪ್ರಸವೀಯಮ್ ಜುಹವನ್ ಇತಿ ಅಬ್ರವೀತ್ ತಸ್ಮಾತ್ ಅಗ್ನಯೇ ವಾಜಪ್ರಸವೀಯಮ್ ಜುಹ್ವತಿ** | ಆಗ ಆ ಅಗ್ನಿಯು 'ನನಗೆ ವಾಜಪ್ರಸವೀಯಹೋಮವನ್ನು ಮಾಡಬೇಕು.' ಎಂಬ ವರವನ್ನು ಕೇಳಿಕೊಂಡನು. (ಅದರಂತೆ ದೇವತೆಗಳು ಅನುಷ್ಠಿಸಿದರು) ಆದುದರಿಂದ ಅಗ್ನಿಗಾಗಿಯೇ ವಾಜಪ್ರಸವೀಯಹೋಮವನ್ನು ಅನುಷ್ಠಿಸುತ್ತಾರೆ. |
| **ಯತ್ ವಾಜಪ್ರಸವೀಯಮ್ ಜುಹೋತಿ** | ವಾಜಪ್ರಸವೀಯಹೋಮವನ್ನು ಅನುಷ್ಠಿಸುವುದೆಂಬುದು ಯಾವುದೋ |
| **ತತ್ ಅಗ್ನಿಮ್ ಏವ ಭಾಗಧೇಯೇನ ಸಮರ್ಧಯತಿ** | ಅದರಿಂದ ಯಜಮಾನನು ಅಗ್ನಿಯನ್ನು ತನ್ನ ಭಾಗದಿಂದ ಸಮೃದ್ಧನನ್ನಾಗಿ ಮಾಡುತ್ತಾನೆ. |
| **ಅಥೋ ಸಃ ಏವ ಅಸ್ಯ ಅಭಿಷೇಕಃ** | ಮತ್ತು ಈ ವಾಜಪ್ರಸವೀಯಹೋಮವು ಅಗ್ನಿಗೆ ಅಭಿಷೇಕರೂಪವಾಗಿಯೇ ಇದೆ. |
| **ಚತುರ್ದಶಭಿಃ ಜುಹೋತಿ** | ಹದಿನಾಲ್ಕು ಮಂತ್ರಗಳಿಂದ ವಾಜಪ್ರಸವೀಯಹೋಮವನ್ನು ಅನುಷ್ಠಿಸಬೇಕು. |

ಸಪ್ತ ಗ್ರಾಮ್ಯಾ ಓಷಧಯಸ್ಸಪ್ತಾ [ಸಪ್ತ(೪೩)ಆರಣ್ಯಾ]ರಣ್ಯಾ

ಉಭಯೀಷಾಮವರುದ್ಧ್ಯಾ ಅನ್ನಸ್ಯಾನ್ನಸ್ಯ ಜುಹೋತ್ಯನ್ನಸ್ಯಾನ್ನಸ್ಯಾವರುದ್ಧ್ಯಾ

ಔದುಂಬರೇಣ ಸ್ರುವೇಣ ಜುಹೋತ್ಯೂರ್ಗ್ವಾ ಉದುಂಬರ

---

ಸಪ್ತ । ಗ್ರಾಮ್ಯಾಃ । ಓಷಧಯಃ । ಸಪ್ತ । (೪೩) । ಆರಣ್ಯಾಃ । ಉಭಯೀಷಾಮ್ । ಅವರುದ್ಧ್ಯಾ ಇತ್ಯವ-ರುಧ್ಯೈ ।

ಅನ್ನಸ್ಯಾನ್ನಸ್ಯೇತ್ಯನ್ನಸ್ಯ-ಅನ್ನಸ್ಯ । ಜುಹೋತಿ । ಅನ್ನಸ್ಯಾನ್ನಸ್ಯೇತ್ಯನ್ನಸ್ಯ-ಅನ್ನಸ್ಯ । ಅವರುದ್ಧ್ಯಾ ಇತ್ಯವ-ರುಧ್ಯೈ ।

ಔದುಂಬರೇಣ । ಸ್ರುವೇಣ । ಜುಹೋತಿ । ಊರ್ಕ್ । ವೈ । ಉದುಂಬರಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಸಪ್ತ ಗ್ರಾಮ್ಯಾಃ ಓಷಧಯಃ** | ತಿಲ(ಎಳ್ಳು), ಮಾಷ(ಉದ್ದು), ವ್ರೀಹಿ(ಭತ್ತ), ಯವ (ಜವೆ ಗೋಧಿ), ಪ್ರಿಯಂಗು, ಅಣು, ಗೋಧೂಮ, (ಗೋಧಿ) ಇವು ಏಳು ಗ್ರಾಮ್ಯ ಓಷಧಿಗಳು. |
| **ಸಪ್ತ ಆರಣ್ಯಾಃ** ಓಷಧಯಃ | ಶ್ಯಾಮಾಕ, ನೀವಾರ, ಜರ್ತಿಲ, ಗವೀಧುಕ, ವೇಣು, ಗಾರ್ಮುತ, ಮರ್ಕಟಕ–ಈ ಏಳು ಆರಣ್ಯಕವಾದ ಓಷಧಿಗಳು.* |
| **ಉಭಯೀಷಾಮ್ ಅವರುಧ್ಯೈ** | ಈ ಹೋಮದಿಂದ ಉಭಯವಿಧವಾದ ಓಷಧಿಗಳು ಪ್ರಾಪ್ತವಾಗುತ್ತವೆ. |
| **ಅನ್ನಸ್ಯ ಅನ್ನಸ್ಯ ಜುಹೋತಿ** | ಒಂದೊಂದು ಅನ್ನವು ಲಭಿಸುವುದಕ್ಕಾಗಿ ಒಂದೊಂದು ಮಂತ್ರದಿಂದ ಒಂದೊಂದು ಅನ್ನವನ್ನು ಹೋಮ ಮಾಡಬೇಕು. |
| **ಅನ್ನಸ್ಯಾನ್ನಸ್ಯ ಅವರುಧ್ಯೈ** | ಇದು ಸಾಂಕರ್ಯವಿಲ್ಲದಂತೆ ಎಲ್ಲ ಅನ್ನಪ್ರಾಪ್ತಿಗೆ ಸಾಧನವಾಗುತ್ತದೆ. |

[ಜುಹೂವಿಗೆ ಬದಲಾಗಿ] ಔದುಂಬರಸ್ರುವವಿಧಿ; ಪ್ರಶಂಸೆ.

| | |
|---|---|
| **ಔದುಂಬರೇಣ ಸ್ರುವೇಣ ಜುಹೋತಿ** | ಔದುಂಬರಸ್ರುವದಿಂದ ವಾಜಪ್ರಸವೀಯಹೋಮವನ್ನು ಅನುಷ್ಠಿಸಬೇಕು. |
| **ಊರ್ಕ್ ವೈ ಉದುಂಬರಃ** | ಔದುಂಬರವು ಸ್ವಾದುರಸಸ್ವರೂಪವಾಗಿದೆ. |

---

* ಓಷಧ್ಯಃ ಫಲಪಾಕಾಂತಾಃ । –ಅಮರಕೋಶ. ಒಮ್ಮೆ ಫಲಿಸುವ ಸಸ್ಯಗಳು. ಬತ್ತ ಮುಂತಾದವುಗಳು.

ಊರ್ಗನ್ನಮೂರ್ಜ್ಯೆವಾಸ್ಮಾ ಊರ್ಜಮನ್ನಮವ ರುಂಧೇಽಗ್ನಿರ್ವೈ

ದೇವಾನಾಮಭಿಷಿಕ್ತೋಽಗ್ನಿಚಿನ್ಮನುಷ್ಯಾಣಾಂ ತಸ್ಮಾದಗ್ನಿಚಿದ್ವರ್‍ಷತಿ ನ

ಧಾವೇದವರುದ್ಧಗ್ಂಹ್ಯಸ್ಯಾನ್ನಮನ್ನಮಿವ ಖಲು ವೈ ವರ್‍ಷಂ

---

ಊರ್ಕ್ । ಅನ್ನಮ್ । ಊರ್ಜಾ । ಏವ । ಅಸ್ಮೈ । ಊರ್ಜಮ್ । ಅನ್ನಮ್ । ಅವೇತಿ । ರುಂಧೇ । ಅಗ್ನಿಃ । ವೈ ।

ದೇವಾನಾಮ್ । ಅಭಿಷಿಕ್ತ ಇತ್ಯಭಿ-ಸಿಕ್ತಃ । ಅಗ್ನಿಚಿದಿತ್ಯಗ್ನಿ-ಚಿತ್ । ಮನುಷ್ಯಾಣಾಮ್ । ತಸ್ಮಾತ್ । ಅಗ್ನಿಚಿದಿತ್ಯಗ್ನಿ-

ಚಿತ್ । ವರ್‍ಷತಿ । ನ । ಧಾವೇತ್ । ಅವರುದ್ಧಮಿತ್ಯವ-ರುದ್ಧಮ್ । ಹಿ । ಅಸ್ಯ । ಅನ್ನಮ್ । ಅನ್ನಮ್ । ಇವ ।

ಖಲು । ವೈ । ವರ್‍ಷಮ್ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಅನ್ನಮ್ ಊರ್ಕ್** | ಹೋಮದ್ರವ್ಯವಾದ ಅನ್ನವೂ ಸ್ವಾದುರಸೋಪೇತವಾಗಿದೆ. |
| **ಅಸ್ಮೈ ಊರ್ಜಾ ಏವ ಊರ್ಜಮ್ ಅನ್ನಮ್ ಅವರುಂಧೇ** | ಆದುದರಿಂದ ಅಧ್ವರ್ಯುವು ಈ ಯಜಮಾನನಿಗೆ ಸ್ವಾದುರಸೋಪೇತವಾದ ಹೋಮಸಾಧನದಿಂದಲೇ ಸ್ವಾದುರಸವುಳ್ಳ ಅನ್ನವನ್ನು ಸಂಪಾದಿಸಿಕೊಟ್ಟವನಾಗುತ್ತಾನೆ. |
| **ದೇವಾನಾಮ್ ಅಗ್ನಿಃ ವೈ ಅಭಿಷಿಕ್ತಃ** | ಚಯನ ಮಾಡಲ್ಪಟ್ಟ ಅಗ್ನಿಯು ದೇವತೆಗಳಲ್ಲಿ ಅಭಿಷಿಕ್ತನಾದವನಂತೆ. |
| **ಮನುಷ್ಯಾಣಾಮ್ ಅಗ್ನಿಚಿತ್** ಅಭಿಷಿಕ್ತಃ | ಅಗ್ನಿಚಯನವನ್ನು ಮಾಡಿದ ಯಜಮಾನನು ಮನುಷ್ಯರಲ್ಲಿ ಅಭಿಷಿಕ್ತನಾದವನು. |

ಧಾವನನಿಷೇಧ; ಅರ್ಥವಾದ

| | |
|---|---|
| **ತಸ್ಮಾತ್ ವರ್‍ಷತಿ ಅಗ್ನಿಚಿತ್ ನ ಧಾವೇತ್** | ಆದುದರಿಂದ ಚಯನ ಮಾಡಿದ ಯಜಮಾನನು ಮಳೆಯು ಬಂದಾಗ ಓಡಿಹೋಗಬಾರದು. |
| **ಅಸ್ಯ ಅನ್ನಮ್ ಅವರುದ್ಧಮ್ ಹಿ** | ಈ ಯಜಮಾನನಿಗೆ ಅನ್ನವು ಪ್ರಾಪ್ತವಾಗಿಯೇ ಇದೆ. |
| **ವರ್‍ಷಮ್ ಅನ್ನಮ್ ಇವ ಖಲು ವೈ** | ಮಳೆಯೂ ಅನ್ನಸಾಧನವಾಗಿ ಅನ್ನವೇ ಆಗಿದೆ. |

ಯದ್ಧಾವೇದನ್ನಾದ್ಯಾದ್ಧಾವೇದುಪಾವರ್ತೇತಾನ್ನಾದ್ಯಮೇವಾಭ್ಯು[ಅಭಿ(೪೪) ಉಪಾವರ್ತತೇ] ಪಾವರ್ತತೇ ನಕ್ತೋಷಾಸೇತಿ ಕೃಷ್ಣಾಯೈ ಶ್ವೇತವಥ್ಸಾಯೈ ಪಯಸಾ ಜುಹೋತ್ಯಹ್ನೈವಾಸ್ಮೈ ರಾತ್ರಿಂ ಪ್ರ ದಾಪಯತಿ

---

ಯತ್ । ಧಾವೇತ್ । ಅನ್ನಾದ್ಯಾದಿತ್ಯನ್ನ-ಅದ್ಯಾತ್ । ಧಾವೇತ್ । ಉಪಾವರ್ತೇತೇತ್ಯುಪ-ಆವರ್ತೇತ । ಅನ್ನಾದ್ಯಮಿತ್ಯನ್ನ-ಅದ್ಯಮ್ । ಏವ । ಅಭೀತಿ । (೪೪) । ಉಪಾವರ್ತತ ಇತ್ಯುಪ-ಆವರ್ತತೇ । ನಕ್ತೋಷಾಸಾ । ಇತಿ । ಕೃಷ್ಣಾಯೈ । ಶ್ವೇತವತ್ಸಾಯಾ ಇತಿ ಶ್ವೇತ-ವತ್ಸಾಯೈ । ಪಯಸಾ । ಜುಹೋತಿ । ಅಹ್ನಾ । ಏವ । ಅಸ್ಮೈ । ರಾತ್ರಿಮ್ । ಪ್ರೇತಿ । ದಾಪಯತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯತ್ ಧಾವೇತ್** | ಮಳೆಯು ಬಂದಾಗ ಓಡುವುದೆಂಬುದು |
| **ಅನ್ನಾದ್ಯಾತ್ ಧಾವೇತ್** | ಶ್ರೇಷ್ಠವಾದ ಅನ್ನದಿಂದಲೇ ದೂರವಾಗಿ ಓಡಿ ಹೋದಂತಾಗುತ್ತದೆ. |
| **ಉಪಾವರ್ತೇತ** | ಆದುದರಿಂದ ಮಳೆಯು ಬಂದಾಗ ಓಡದೆ ಹಿಂದಿರುಗಿ ಬರಬೇಕು. |
| **ಅನ್ನಾದ್ಯಮ್ ಅಭಿ ಉಪಾವರ್ತತೇ ಏವ** | ಹೀಗೆ ಮಾಡುವುದರಿಂದ ಶ್ರೇಷ್ಠವಾದ ಅನ್ನದ ಅಭಿಮುಖವಾಗಿಯೇ ಹಿಂದಿರುಗಿ ಬಂದಂತಾಗುತ್ತದೆ. (ಇದರಿಂದ ಅನ್ನಪ್ರಾಪ್ತಿಯಾಗುತ್ತದೆ) |

### ಕ್ಷೀರಹೋಮವಿಧಿ; ಅರ್ಥವಾದ

| | |
|---|---|
| **ನಕ್ತೋಷಾಸಾ ಇತಿ ಕೃಷ್ಣಾಯೈ ಶ್ವೇತವತ್ಸಾಯೈ ಪಯಸಾ ಜುಹೋತಿ** | **'ನಕ್ತೋಷಾಸಾ...ದ್ರವಿಣೋದಾಃ'** ಎಂಬ ಮಂತ್ರದಿಂದ ಬಿಳಿಯ ಬಣ್ಣದ ಕರುವುಳ್ಳ ಕರಿಯ ಬಣ್ಣದ ಧೇನುವಿನ ಹಾಲಿನಿಂದ ಹೋಮವನ್ನು ಅನುಷ್ಠಿಸಬೇಕು. |
| **ಅಸ್ಮೈ ಅಹ್ನಾ ಏವ ರಾತ್ರಿಮ್ ಪ್ರದಾಪಯತಿ** | ಈ ಹೋಮದಿಂದ ಅಧ್ವರ್ಯುವು ಕರುವಿನಂತಿರುವ ಹಗಲಿನಿಂದ ಧೇನುವಿನಂತಿರುವ ರಾತ್ರಿಯನ್ನು ಕೊಟ್ಟವನಾಗುತ್ತಾನೆ./(ಹಾಲು ಇಳಿಸುವಂತೆ ಮಾಡುತ್ತಾನೆ) |

ರಾತ್ರಿಯಾಽಹರಹೋರಾತ್ರೇ ಏವಾಸ್ಮೈ ಪ್ರತ್ತೇ ಕಾಮಮನ್ನಾದ್ಯಂ ದುಹಾತೇ

ರಾಷ್ಟ್ರಭೃತೋ ಜುಹೋತಿ ರಾಷ್ಟ್ರಮೇವಾವ ರುಂಧೇ ಷಡ್ಭಿರ್ಜುಹೋತಿ

ಷಡ್ವಾ ಋತವ ಋತುಷ್ವೇವ ಪ್ರತಿ ತಿಷ್ಠತಿ

---

ರಾತ್ರಿಯಾ । ಅಹಃ । ಅಹೋರಾತ್ರೇ ಇತ್ಯಹಃ-ರಾತ್ರೇ । ಏವ । ಅಸ್ಮೈ । ಪ್ರತ್ತೇ ಇತಿ । ಕಾಮಮ್ । ಅನ್ನಾದ್ಯಮಿತ್ಯನ್ನ-ಅದ್ಯಮ್ । ದುಹಾತೇ ಇತಿ । ರಾಷ್ಟ್ರಭೃತ ಇತಿ ರಾಷ್ಟ್ರ-ಭೃತಃ । ಜುಹೋತಿ । ರಾಷ್ಟ್ರಮ್ । ಏವ । ಅವೇತಿ । ರುಂಧೇ । ಷಡ್ಭಿರಿತಿ ಷಟ್-ಭಿಃ । ಜುಹೋತಿ । ಷಟ್ । ವೈ । ಋತವಃ । ಋತುಷು । ಏವ । ಪ್ರತೀತಿ । ತಿಷ್ಠತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ರಾತ್ರಿಯಾ ಅಹಃ** ಪ್ರದಾಪಯತಿ | ಧೇನುಸಮಾನವಾದ ರಾತ್ರಿಯಿಂದ ಹಗಲಿಗೆ ಸಮಾನವಾದ ಪಯಸ್ಸನ್ನು (ಹಾಲನ್ನು) ಯಜಮಾನನಿಗೆ ಒದಗಿಸಿಕೊಡುತ್ತಾನೆ. |
| **ಪ್ರತ್ತೇ ಅಹೋರಾತ್ರೇ** | ಹೀಗೆ ಪರಸ್ಪರದತ್ತವಾಗಿರುವ ಅಹೋರಾತ್ರಗಳು |
| **ಅಸ್ಮೈ ಕಾಮಮ್ ಅನ್ನಾದ್ಯಮ್ ದುಹಾತೇ ಏವ** | ಈ ಯಜಮಾನನಿಗೆ ಅನ್ನಾದ್ಯರೂಪವಾದ ಕಾಮವನ್ನು ಒದಗಿಸಿಕೊಡುತ್ತವೆ. (ಇವು ಇಷ್ಟಾರ್ಥವನ್ನು ಕರುಣಿಸಲಿ) |

ರಾಷ್ಟ್ರಭೃದ್ಧೋಮವಿಧಿ; ಅರ್ಥವಾದ

| | |
|---|---|
| **ರಾಷ್ಟ್ರಭೃತಃ ಜುಹೋತಿ** | 'ಋತಾಷಾಡೃತಧಾಮಾ' ಮುಂತಾದ ಮಂತ್ರಗಳಿಂದ ರಾಷ್ಟ್ರಭೃದ್ಧೋಮಗಳನ್ನು ಅನುಷ್ಠಿಸಬೇಕು. |
| **ರಾಷ್ಟ್ರಮ್ ಅವರುಂಧೇ ಏವ** | ಇದರಿಂದ ರಾಷ್ಟ್ರವನ್ನೇ ಹೊಂದಿದವನಾಗುತ್ತಾನೆ. |
| **ಷಡ್ಭಿಃ ಜುಹೋತಿ** | ಆರು ಪರ್ಯಾಯಗಳಿಂದ ಹೋಮವನ್ನು ಮಾಡಬೇಕು. |
| **ಋತವಃ ಷಟ್ ವೈ** | ಋತುಗಳು ಆರಷ್ಟೆ. |
| **ಋತುಷು ಏವ ಪ್ರತಿತಿಷ್ಠತಿ** | ಈ ಹೋಮಗಳಿಂದ ಯಜಮಾನನು ಋತುಗಳಲ್ಲಿಯೇ ಪ್ರತಿಷ್ಠಿತನಾಗುವನು. |

ಭುವನಸ್ಯ ಪತ ಇತಿ ರಥಮುಖೇ ಪಂಚಾऽऽಹುತೀರ್ಜುಹೋತಿ ವಜ್ರೋ ವೈ ರಥೋ ವಜ್ರೇಣೈವ ದಿಶೋ[ದಿಶಃ (೪೫)ಅಭಿ]ऽಭಿ ಜಯತ್ಯಗ್ನಿಚಿತಗ್ಂ ಹ ವಾ ಅಮುಷ್ಮಿಲ್ಲೋಕೇ ವಾತೋऽಭಿ ಪವತೇ

---

ಭುವನಸ್ಯ । ಪತೇ । ಇತಿ । ರಥಮುಖ ಇತಿ ರಥ-ಮುಖೇ । ಪಂಚ । ಆಹುತೀರಿತ್ಯಾ-ಹುತೀಃ । ಜುಹೋತಿ । ವಜ್ರಃ । ವೈ । ರಥಃ । ವಜ್ರೇಣ । ಏವ । ದಿಶಃ । (೪೫) । ಅಭೀತಿ । ಜಯತಿ । ಅಗ್ನಿಚಿತಮಿತ್ಯಗ್ನಿ-ಚಿತಮ್ । ಹ । ವೈ । ಅಮುಷ್ಮಿನ್ । ಲೋಕೇ । ವಾತಃ । ಅಭೀತಿ । ಪವತೇ ।

---

ಬ್ರಾಹ್ಮಣಭಾಗ — ವಿವರಣೆ

ರಾಷ್ಟ್ರಭೃದ್ಧೋಮದ ಪಕ್ಷಾಂತರವಿಧಿ; ಅರ್ಥವಾದ

| ಬ್ರಾಹ್ಮಣಭಾಗ | ವಿವರಣೆ |
|---|---|
| **ಭುವನಸ್ಯ ಪತೇ ಇತಿ ರಥಮುಖೇ ಪಂಚ ಆಹುತೀಃ ಜುಹೋತಿ** | ಯಜಮಾನನು 'ಭುವನಸ್ಯ ಪತೇ...ಸ್ವಸ್ತಿಮ್' ಎಂಬ ಮಂತ್ರದಿಂದ ರಥಮುಖದಲ್ಲಿ (ಗಾಡಿಯ ಈಚುಗಳು ಸೇರುವಲ್ಲಿ) ಐದು ಆಹುತಿಗಳನ್ನು ಮಾಡಬೇಕು. |
| **ರಥಃ ವಜ್ರಃ ವೈ** | ರಥವು ವಜ್ರಸ್ವರೂಪವಾಗಿದೆ. |
| **ವಜ್ರೇಣ ಏವ ದಿಶಃ ಅಭಿಜಯತಿ** | ಈ ಹೋಮದಿಂದ ಯಜಮಾನನು ವಜ್ರಾಯುಧದಿಂದಲೇ ದಿಕ್ಕುಗಳನ್ನು ಜಯಿಸಿದವನಾಗುತ್ತಾನೆ. |

ವಾತನಾಮಹೋಮವಿಧಿ; ಅರ್ಥವಾದ

| ಬ್ರಾಹ್ಮಣಭಾಗ | ವಿವರಣೆ |
|---|---|
| **ಅಮುಷ್ಮಿನ್ ಲೋಕೇ ಅಗ್ನಿಚಿತಮ್ ಅಭಿ ವಾತಃ ಪವತೇ ಹ ವೈ** | ಅಗ್ನಿಚಯನವನ್ನು ಮಾಡಿದ ಯಜಮಾನನ ಅಭಿಮುಖವಾಗಿಯೇ ಸ್ವರ್ಗಲೋಕದಲ್ಲಿ ತಂಪಾದ ಮೆಲ್ಲಗಿನ ಮತ್ತು ಸುಗಂಧಪೂರ್ಣವಾದ ವಾಯುವು ಬೀಸುತ್ತದೆ. |

---

ಶ್ರುತಿಯು '**ನಕ್ತೋಷಾಸಾ**' ಎಂಬ ಮಂತ್ರದಿಂದ ಕ್ಷೀರಹೋಮವನ್ನು ವಿಧಿಸಿದೆ. ಕ್ಷೀರವು ಕರಿಯ ಬಣ್ಣದ ಹಸುವಿನದ್ದಾಗಿರಬೇಕು. ಆದರ ಕರುವು ಬೆಳ್ಳಗಿರಬೇಕು. ಈ ಕಪ್ಪು-ಬಿಳುಪುಗಳನ್ನು ರಾತ್ರಿ-ಹಗಲು ಎಂಬ ಅಭಿಪ್ರಾಯದಿಂದಲೂ, ಕರುವಿನಿಂದಲೇ ಹಸುವು ಹಾಲನ್ನು ಇಳಿಸುವುದರಿಂದಲೂ, ಹಸುವೇ ಕರುವನ್ನು ಕೊಡುವುದರಿಂದಲೂ ಪರಸ್ಪರಪ್ರದಾನ ಎಂಬ ಅಭಿಪ್ರಾಯದಿಂದಲೂ, ರಾತ್ರಿ-ಹಗಲುಗಳು ಭಿನ್ನರೂಪವುಳ್ಳವುಗಳಾಗಿದ್ದರೂ ಐಕಮತ್ಯ

ವಾತನಾಮಾನಿ ಜುಹೋತ್ಯಭ್ಯೇವೈನಮಮುಷ್ಮಿಲ್ಲೋಕೇ ವಾತಃ ಪವತೇ ತ್ರೀಣಿ ಜುಹೋತಿ ತ್ರಯ ಇಮೇ ಲೋಕಾ ಏಭ್ಯ ಏವ ಲೋಕೇಭ್ಯೋ ವಾತಮವ ರುಂಧೇ ಸಮುದ್ರೋಽಸಿ ನಭಸ್ವಾನಿತ್ಯಾಹೈ-

---

ವಾತನಾಮಾನೀತಿ ವಾತ-ನಾಮಾನಿ । ಜುಹೋತಿ । ಅಭೀತಿ । ಏವ । ಏನಮ್ । ಅಮುಷ್ಮಿನ್ನ್ । ಲೋಕೇ । ವಾತಃ । ಪವತೇ । ತ್ರೀಣಿ । ಜುಹೋತಿ । ತ್ರಯಃ । ಇಮೇ । ಲೋಕಾಃ । ಏಭ್ಯಃ । ಏವ । ಲೋಕೇಭ್ಯಃ । ವಾತಮ್ । ಅವೇತಿ । ರುಂಧೇ । ಸಮುದ್ರಃ । ಅಸಿ । ನಭಸ್ವಾನ್ । ಇತಿ । ಆಹ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ವಾತನಾಮಾನಿ ಜುಹೋತಿ** | ಆದುದರಿಂದ ಅಗ್ನಿಚಯನ ಮಾಡಿದವನು **'ಸಮುದ್ರೋಽಸಿ'** ಮುಂತಾದ ಮೂರು ಮಂತ್ರಗಳನ್ನು ಹೇಳಿ ವಾತನಾಮ ಹೋಮಗಳನ್ನು ಅನುಷ್ಠಿಸಬೇಕು. |
| **ಅಮುಷ್ಮಿನ್ ಲೋಕೇ ಏನಮ್ ಅಭಿ ಏವ ವಾತಃ ಪವತೇ** | ಹೀಗೆ ಹೋಮ ಮಾಡಿದ ಈ ಅಗ್ನಿಚಯನಕರ್ತನನ್ನು ಕುರಿತೇ ವಾಯುದೇವನು ಸ್ವರ್ಗಲೋಕದಲ್ಲಿ ಗುಣಯುಕ್ತನಾಗಿ ಅಭಿಮುಖವಾಗಿ ಬೀಸುವನು. |
| **ತ್ರೀಣಿ ಜುಹೋತಿ** | **'ಸಮುದ್ರೋಽಸಿ...ಸ್ವಾಹಾ' 'ಮಾರುತೋಽಸಿ...ಸ್ವಾಹಾ' 'ಅವಸ್ಯುರಸಿ...ಸ್ವಾಹಾ'** ಎಂಬ ಮೂರು ಮಂತ್ರಗಳಿಂದ ವಾತನಾಮಹೋಮಗಳನ್ನು ಮಾಡಬೇಕು. |
| **ಇಮೇ ಲೋಕಾಃ ತ್ರಯಃ** | ಭೂರಾದಿಲೋಕಗಳು ಮೂರು. |
| **ಏಭ್ಯಃ ಏವ ಲೋಕೇಭ್ಯಃ ವಾತಮ್ ಅವ ರುಂಧೇ** | ಯಜಮಾನನು ಈ ಮೂರು ಲೋಕಗಳಿಂದಲೇ ವಾಯುವನ್ನು ಹೊಂದಿದವನಾಗುತ್ತಾನೆ. |
| **ಸಮುದ್ರಃ ಅಸಿ ನಭಸ್ವಾನ್ ಇತಿ ಆಹ** | 'ಓ! ವಾಯುವೇ! ನೀನು ದೇವತೆಗಳಲ್ಲಿ ಸಮುದ್ರನಂತೆ ವಿಶಾಲನಾಗಿದ್ದೀಯೆ. ನೀನು ನಿನ್ನ ಪ್ರಸಾರಕ್ಕಾಗಿ ವಿಸ್ತೀರ್ಣವಾದ ಅಂತರಿಕ್ಷವನ್ನು ಹೊಂದಿದ್ದೀಯೆ' ಎಂಬ ಅರ್ಥವನ್ನು **'ಸಮುದ್ರೋಽಸಿ ನಭಸ್ವಾನ್'** ಎಂಬ ಮಂತ್ರವು ಕೊಡುತ್ತದೆ. |

-ತದ್ವೈ ವಾತಸ್ಯ ರೂಪಗ್ಂ ರೂಪೇಣೈವ ವಾತಮವ ರುಂಧೇಽಞ್ಜಲಿನಾ

ಜುಹೋತಿ ನ ಹ್ಯೇತೇಷಾಮನ್ಯಥಾಽಽಹುತಿರವಕಲ್ಪತೇ ॥ ೪೬-9 ॥

[ಓಷಧಯಸ್ಸಪ್ತಾಭಿ ದಿಶೋಽನ್ಯಥಾ ದ್ವೇ ಚ ॥]

---

ಏತತ್ । ವೈ । ವಾತಸ್ಯ । ರೂಪಮ್ । ರೂಪೇಣ । ಏವ । ವಾತಮ್ । ಅವೇತಿ । ರುಂಧೇ । ಅಞ್ಜಲಿನಾ ।

ಜುಹೋತಿ । ನ । ಹಿ । ಏತೇಷಾಮ್ । ಅನ್ಯಥಾ । ಆಹುತಿರಿತ್ಯಾ-ಹುತಿಃ । ಅವಕಲ್ಪತ ಇತ್ಯವ-ಕಲ್ಪತೇ ॥ (೪೬) ॥

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಏತತ್ ವೈ ವಾತಸ್ಯ ರೂಪಮ್ ರೂಪೇಣ ಏವ ವಾತಮ್ ಅವರುಂಧೇ** | ಈ ಮಂತ್ರೋಕ್ತವಾದುದೇ ವಾತದ ರೂಪವಾಗಿದೆ. ಈ ಕಾರಣದಿಂದ ಯಜಮಾನನು ವಾತರೂಪ ದಿಂದಲೇ ವಾತವನ್ನು ಪಡೆದವನಾಗುತ್ತಾನೆ. |

**ಅಂಜಲಿವಿಧಿ**

| | |
|---|---|
| **ಅಞ್ಜಲಿನಾ ಜುಹೋತಿ** | ಎರಡು ಕೈಗಳನ್ನು ಜೋಡಿಸಿದ ಬೊಗಸೆಯಿಂದ ವಾತನಾಮಹೋಮವನ್ನು ಮಾಡಬೇಕು. |
| **ಏತೇಷಾಮ್ ಅನ್ಯಥಾ ಆಹುತಿಃ ನ ಅವಕಲ್ಪತೇ ಹಿ** | ಈ ಹೋಮಗಳನ್ನು ಬೇರೆಯ ರೀತಿಯಲ್ಲಿ ಮಾಡಲು ಸಾಧ್ಯವಿಲ್ಲವಷ್ಟೆ. |

---

ವುಳ್ಳ ಮನಸ್ಸಿನಿಂದ ಹಸು-ಕರುವಿನಂತೆ ಇವೆ ಎಂಬ ಆಶಯದಿಂದಲೂ ಇವು ಯಜಮಾನನಿಗೆ ಇಷ್ಟಾರ್ಥವನ್ನು ಒಗ್ಗೂಡಿಸಿ ಕರುಣಿಸಲಿ ಎಂಬ ತಾತ್ಪರ್ಯವಿದೆ.

ಅಗಲ ಮಾಡಿರುವ ಎರಡು ಹಸ್ತಗಳನ್ನು ಜೋಡಿಸಿ ಬೊಗಸೆ ಮಾಡುವಾಗ ಅಗ್ನಿಯಲ್ಲಿ ವಾಯುವನ್ನು ಉತ್ಪಾದನ ಮಾಡುವುದೇ ವಾತನಾಮಹೋಮ. ಇದು ಹೋಮಸಾಧನವಾದ ಅಂಜಲಿವಿಧಿ. **'ನ ಹ್ಯೇತಸ್ಯಾವದಾನಮಸ್ತೀತಿ ವಿಜ್ಞಾಯತೇ'** ಎಂದು ಬ್ರಾಹ್ಮಣಾಂತರವಿದೆ. [ಆಪ. ಶ್ರೌ. ಸೂ. 17.20.12] ಪುರೋಡಾಶಾದಿಗಳಂತೆ ವಾಯುವನ್ನು ಖಂಡವನ್ನಾಗಿ ಬೇರ್ಪಡಿಸಲು ಆಗುವುದಿಲ್ಲವಷ್ಟೆ. ಬೀಸಣಿಗೆಯಂತೆ ಅಗ್ನಿಯಲ್ಲಿ ವಾಯುವು ಸಂಚರಿಸುವಂತೆ ಮಾಡಬೇಕು ಎಂದು ತಾತ್ಪರ್ಯ.

## ॥ ದಶಮೋಽನುವಾಕಃ ॥

ಸುವರ್ಗಾಯ ವೈ ಲೋಕಾಯ ದೇವರಥೋ ಯುಜ್ಯತೇ ಯತ್ರಾಕೂತಾಯ ಮನುಷ್ಯರಥ ಏಷ ಖಲು ವೈ ದೇವರಥೋ ಯದಗ್ನಿರಗ್ನಿಂ ಯುನಜ್ಮಿ ಶವಸಾ ಘೃತೇನೇತ್ಯಾಹ

---

ಸುವರ್ಗಾಯೇತಿ ಸುವಃ–ಗಾಯ । ವೈ । ಲೋಕಾಯ । ದೇವರಥ ಇತಿ ದೇವ–ರಥಃ । ಯುಜ್ಯತೇ । ಯತ್ರಾಕೂತಾಯೇತಿ ಯತ್ರ–ಆಕೂತಾಯ । ಮನುಷ್ಯರಥ ಇತಿ ಮನುಷ್ಯ–ರಥಃ । ಏಷಃ । ಖಲು । ವೈ । ದೇವರಥ ಇತಿ ದೇವ–ರಥಃ । ಯತ್ । ಅಗ್ನಿಃ । ಅಗ್ನಿಮ್ । ಯುನಜ್ಮಿ । ಶವಸಾ । ಘೃತೇನ । ಇತಿ । ಆಹ ।

---

ಈ ಹತ್ತನೆಯ ಅನುವಾಕದಲ್ಲಿ ಅಗ್ನಿಯೋಗವಿಧಿಯು ಹೇಳಲ್ಪಟ್ಟಿದೆ.

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಸುವರ್ಗಾಯ ಲೋಕಾಯ ವೈ ದೇವರಥಃ ಯುಜ್ಯತೇ** | ಸ್ವರ್ಗಲೋಕಕ್ಕೆ ಹೋಗುವುದಕ್ಕಾಗಿ ದೇವರಥವು ಜೋಡಿಸಲ್ಪಡುತ್ತದೆ. |
| **ಯತ್ರ ಆಕೂತಾಯ ಮನುಷ್ಯರಥಃ** ಯುಜ್ಯತೇ | ಬೇಕಾದ ಗ್ರಾಮಾಂತರಕ್ಕೆ ಹೋಗಲು ಮನುಷ್ಯರಥ (ಬಂಡಿ)ವು ಜೋಡಿಸಲ್ಪಡುತ್ತದೆ. |
| **ಯತ್ ಅಗ್ನಿಃ ಏಷಃ ಖಲು ವೈ ದೇವರಥಃ** | ಈ ಚಿತನಾದ ಅಗ್ನಿಯೇ ದೇವರಥನಾಗಿದ್ದಾನೆ. |
| **ಅಗ್ನಿಮ್ ಯುನಜ್ಮಿ ಶವಸಾ ಘೃತೇನ ಇತಿ ಆಹ** | 'ನಾನು ಬಲಯುಕ್ತವಾದ ಘೃತದಿಂದ/ಘೃತಾದಿ ದ್ರವ್ಯಯುಕ್ತವಾದ ಕರ್ಮದಿಂದ ಅಗ್ನಿಯನ್ನು ಜೋಡಿಸುತ್ತೇನೆ' ಎಂದು ಈ ಮಂತ್ರವು ಹೇಳುತ್ತದೆ. |

# ಯುನಕ್ತ್ಯೇವೈನಗ್ಂ ಸ ಏನಂ ಯುಕ್ತಸ್ಸುವರ್ಗಂ ಲೋಕಮಭಿ ವಹತಿ ಯತ್ಸರ್ವಾಭಿಃ ಪಂಚಭಿರ್ಯುಞ್ಜ್ಯಾದ್ಯುಕ್ತೋಽಸ್ಯಾಗ್ನಿಃ ಪ್ರಚ್ಯುತಸ್ಸ್ಯಾದಪ್ರತಿಷ್ಠಿತಾ ಆಹುತಯಸ್ಸ್ಯುರಪ್ರತಿಷ್ಠಿತಾಸ್ಸ್ತೋಮಾ ಅಪ್ರತಿಷ್ಠಿತಾನ್ಯುಕ್ಥಾನಿ

---

ಯುನಕ್ತಿ । ಏವ । ಏನಮ್ । ಸಃ । ಏನಮ್ । ಯುಕ್ತಃ । ಸುವರ್ಗಮಿತಿ ಸುವಃ-ಗಮ್ । ಲೋಕಮ್ । ಅಭೀತಿ । ವಹತಿ । ಯತ್ । ಸರ್ವಾಭಿಃ । ಪಂಚಭಿರಿತಿ ಪಂಚ-ಭಿಃ । ಯುಞ್ಜ್ಯಾತ್ । ಯುಕ್ತಃ । ಅಸ್ಯ । ಅಗ್ನಿಃ । ಪ್ರಚ್ಯುತ ಇತಿ ಪ್ರ-ಚ್ಯುತಃ । ಸ್ಯಾತ್ । ಅಪ್ರತಿಷ್ಠಿತಾ ಇತ್ಯಪ್ರತಿ-ಸ್ಥಿತಾಃ । ಆಹುತಯ ಇತ್ಯಾ-ಹುತಯಃ । ಸ್ಯುಃ । ಅಪ್ರತಿಷ್ಠಿತಾ ಇತ್ಯಪ್ರತಿ-ಸ್ಥಿತಾಃ । ಸ್ತೋಮಾಃ । ಅಪ್ರತಿಷ್ಠಿತಾನೀತ್ಯಪ್ರತಿ-ಸ್ಥಿತಾನಿ । ಉಕ್ಥಾನಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಏನಮ್ ಯುನಕ್ತಿ ಏವ | ಮೇಲಿನ ಮಂತ್ರದಿಂದ ಅಗ್ನಿಯೋಜನವನ್ನು ಅಧ್ವರ್ಯುವು ಮಾಡುತ್ತಾನೆ. |
| ಸಃ ಯುಕ್ತಃ ಏನಮ್ ಸುವರ್ಗಮ್ ಲೋಕಮ್ ಅಭಿ ವಹತಿ | ಹೀಗೆ ಯುಕ್ತನಾದ (ಜೋಡಿಸಲ್ಪಟ್ಟ) ಅಗ್ನಿಯು ಈ ಯಜಮಾನನನ್ನು ಸ್ವರ್ಗಲೋಕಕ್ಕೆ ಒಯ್ಯುತ್ತಾನೆ. |

### ಮಂತ್ರತ್ರಯದಿಂದ ಅಗ್ನಿಯೋಗವಿಧಿ; ಪ್ರಶಂಸೆ

| | |
|---|---|
| ಯತ್ ಸರ್ವಾಭಿಃ ಪಂಚಭಿಃ ಯುಞ್ಜ್ಯಾತ್ | ಇಲ್ಲಿ ಪಠಿತವಾಗಿರುವ 'ಅಗ್ನಿಂ ಯುನಜ್ಮಿ...' ಎಂಬಲ್ಲಿ ಪ್ರಾರಂಭಿಸಿ 'ಉದ್ಯೋ...ಷಥೇ' ಎಂಬಲ್ಲಿಯವರೆಗಿನ ಐದು ಮಂತ್ರಗಳಿಂದ ಅಗ್ನಿಯೋಗವನ್ನು ಮಾಡಿದರೆ (ಪುನಃ ಅಗ್ನಿಯೋಗಕ್ಕೆ ಮಂತ್ರವಿಲ್ಲವಾದುದರಿಂದ) |
| ಅಸ್ಯ ಯುಕ್ತಃ ಅಗ್ನಿಃ ಪ್ರಚ್ಯುತಃ ಸ್ಯಾತ್ | ಈ ಯಜಮಾನನಿಗೆ ಸಂಬಂಧಿಸಿದ ಯುಕ್ತನಾದ ಅಗ್ನಿಯು ಬಹುಶಃ ಜಾರಿಹೋದಾನು. |
| ಆಹುತಯಃ ಅಪ್ರತಿಷ್ಠಿತಾಃ ಸ್ಯುಃ | ಆಹುತಿಗಳೂ ಸ್ಥಿರವಾಗಿ ಇರಲಾರವು. |
| ಸ್ತೋಮಾಃ ಅಪ್ರತಿಷ್ಠಿತಾಃ ಸ್ಯುಃ | ಸಾಮವೇದದ ಸ್ತೋಮಗಳೂ ಸ್ಥಿರವಾಗಿರಲಾರವು. |
| ಉಕ್ಥಾನಿ ಅಪ್ರತಿಷ್ಠಿತಾನಿ ಸ್ಯುಃ | ಋಗ್ವೇದದ ಶಸ್ತ್ರಗಳೂ ಸ್ಥಿರವಾಗಿರಲಾರವು. |

ತಿಸೃಭಿಃ ಪ್ರಾತಸ್ಸವನೇಽಭಿ ಮೃಶತಿ ತ್ರಿವೃ[ತ್ರಿವೃತ್(೪೭)ವಾ]ದ್ವಾ

ಅಗ್ನಿರ್ಯಾವಾನೇವಾಗ್ನಿಸ್ತಂ ಯುನಕ್ತಿ ಯಥಾಽನಸಿ ಯುಕ್ತ ಆಧೀಯತ

ಏವಮೇವ ತತ್ಪ್ರತ್ಯಾಹುತಯಸ್ತಿಷ್ಠಂತಿ ಪ್ರತಿ ಸ್ತೋಮಾಃ ಪ್ರತ್ಯು-

---

ತಿಸೃಭಿರಿತಿ ತಿಸೃ-ಭಿಃ । ಪ್ರಾತಸ್ಸವನ ಇತಿ ಪ್ರಾತಃ-ಸವನೇ । ಅಭೀತಿ । ಮೃಶತಿ । ತ್ರಿವೃದಿತಿ ತ್ರಿ-ವೃತ್ । (೪೭) । ವೈ । ಅಗ್ನಿಃ । ಯಾವಾನ್ । ಏವ । ಅಗ್ನಿಃ । ತಮ್ । ಯುನಕ್ತಿ । ಯಥಾ । ಅನಸಿ । ಯುಕ್ತೇ । ಆಧೀಯತ ಇತ್ಯಾ-ಧೀಯತೇ । ಏವಮ್ । ಏವ । ತತ್ । ಪ್ರತೀತಿ । ಆಹುತಯ ಇತ್ಯಾ-ಹುತಯಃ । ತಿಷ್ಠಂತಿ । ಪ್ರತೀತಿ । ಸ್ತೋಮಾಃ । ಪ್ರತೀತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ತಿಸೃಭಿಃ ಪ್ರಾತಃಸವನೇ ಅಭಿಮೃಶತಿ** | (ಪುನಃ ಅಗ್ನಿಯೋಗಕ್ಕಾಗಿ ಎರಡು ಮಂತ್ರಗಳನ್ನು ಉಳಿಸಿ) ಮೂರು ಮಂತ್ರಗಳಿಂದ ಪ್ರಾತಃಸವನದಲ್ಲಿ ಅಗ್ನ್ಯಭಿಮರ್ಶನ/ಅಗ್ನಿಸ್ಪರ್ಶನವನ್ನು ಮಾಡಬೇಕು. |
| **ಅಗ್ನಿಃ ತ್ರಿವೃತ್ ವೈ** | ಅಗ್ನಿಯು ಆಹವನೀಯ, ಗಾರ್ಹಪತ್ಯ ಮತ್ತು ದಕ್ಷಿಣಾಗ್ನಿರೂಪನಾಗಿ ತ್ರಿಗುಣಾತ್ಮಕನಾಗಿರುತ್ತಾನೆ. |
| **ಅಗ್ನಿಃ ಯಾವಾನ್ ಏವ** | ಅಗ್ನಿಯು ಎಷ್ಟು ಪ್ರಮಾಣದಲ್ಲಿರುವನೋ/ರೂಪದಲ್ಲಿರುವನೋ |
| **ತಮ್ ಯುನಕ್ತಿ** | ಅಂತಹ ಸಂಪೂರ್ಣನಾದ ಅಗ್ನಿಯನ್ನೇ ಯಜಮಾನನು ಅಭಿಮರ್ಶನ ಮಾಡಿದವನಾಗುತ್ತಾನೆ. |
| **ಯಥಾ ಯುಕ್ತೇ ಅನಸಿ ಆಧೀಯತೇ** | ಹೇಗೆ ಎತ್ತುಗಳು ಕಟ್ಟಲ್ಪಟ್ಟಿರುವ ಬಂಡಿಯಲ್ಲಿ ಬೇಕಾದ ವಸ್ತುಗಳು ಇಡಲ್ಪಡುವವೋ |
| **ತತ್ ಏವಮ್ ಏವ** | ಆ ಅಗ್ನಿಯೂ ಹಾಗೆಯೇ ಆಗುತ್ತಾನೆ/ದೇವರಥವೂ ಹಾಗೆಯೇ ಆಗುತ್ತದೆ. (ಹೀಗೆ ಸಿದ್ಧಪಡಿಸಿದ ದೇವರಥರೂಪನಾದ ಅಗ್ನಿಯಲ್ಲಿ) |
| **ಆಹುತಯಃ ಪ್ರತಿ ತಿಷ್ಠಂತಿ** | (ಈ ಯಜಮಾನನು) ಅರ್ಪಿಸಿದ ಆಹುತಿಗಳು ಸ್ಥಿರವಾಗಿರುತ್ತವೆ. |
| **ಸ್ತೋಮಾಃ ಪ್ರತಿ** ತಿಷ್ಠಂತಿ | ಸ್ತೋಮಗಳೂ ನಿಲ್ಲುತ್ತವೆ. |

–ಕ್ಥಾನಿ ಯಜ್ಞಾಯಜ್ಞಿಯಸ್ಯ ಸ್ತೋತ್ರೇ ದ್ವಾಭ್ಯಾಮಭಿ ಮೃಶತ್ಯೇತಾವಾನ್, ವೈ ಯಜ್ಞೋ ಯಾವಾನಗ್ನಿಷ್ಟೋಮೋ ಭೂಮಾ ತ್ವಾ ಅಸ್ಯಾತ ಊರ್ಧ್ವಃ ಕ್ರಿಯತೇ ಯಾವಾನೇವ ಯಜ್ಞಸ್ತಮಂತತೋಽನ್ವಾರೋಹತಿ

---

ಉಕ್ಥಾನಿ । ಯಜ್ಞಾಯಜ್ಞಿಯಸ್ಯ । ಸ್ತೋತ್ರೇ । ದ್ವಾಭ್ಯಾಮ್ । ಅಭೀತಿ । ಮೃಶತಿ । ಏತಾವಾನ್ । ವೈ । ಯಜ್ಞಃ । ಯಾವಾನ್ । ಅಗ್ನಿಷ್ಟೋಮ ಇತ್ಯಗ್ನಿ–ಸ್ತೋಮಃ । ಭೂಮಾ । ತು । ವೈ । ಅಸ್ಯ । ಅತಃ । ಊರ್ಧ್ವಃ । ಕ್ರಿಯತೇ । ಯಾವಾನ್ । ಏವ । ಯಜ್ಞಃ । ತಮ್ । ಅಂತತಃ । ಅನ್ವಾರೋಹತೀತ್ಯನು–ಆರೋಹತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಉಕ್ಥಾನಿ ಪ್ರತಿ** ತಿಷ್ಠಂತಿ | ಶಸ್ತ್ರಗಳೂ ಪ್ರತಿಷ್ಠಿತವಾಗುತ್ತವೆ. |
| **ಯಜ್ಞಾಯಜ್ಞಿಯಸ್ಯ ಸ್ತೋತ್ರೇ** | ಯಜ್ಞಾಯಜ್ಞಿಯಸ್ತೋತ್ರವು ಪ್ರವೃತ್ತವಾಗುವ ತೃತೀಯಸವನದಲ್ಲಿ |
| **ದ್ವಾಭ್ಯಾಮ್ ಅಭಿಮೃಶತಿ** | ಮಿಕ್ಕ ಎರಡು ಮಂತ್ರಗಳಿಂದ ಅಗ್ನಿಯ ಅಭಿಮರ್ಶನವನ್ನು ಮಾಡಬೇಕು. |
| **ಯಾವಾನ್ ಅಗ್ನಿಷ್ಟೋಮಃ ಏತಾವಾನ್ ವೈ ಯಜ್ಞಃ** | ಅಗ್ನಿಷ್ಟೋಮವು ಎಷ್ಟೋ ಯಜ್ಞವೆಂದರೆ ಅಷ್ಟೇ ಆಗಿದೆ. |
| **ಅಸ್ಯ ಭೂಮಾ ತ್ವೈ*[ತು+ವೈ] ಅತಃ ಊರ್ಧ್ವಃ ಕ್ರಿಯತೇ** | (ಅಗ್ನಿಷ್ಟೋಮವು ಪ್ರಕೃತಿಯಾಗವಾದುದರಿಂದ) ಇದರ ವಿಸ್ತೃತವಾದ ರೂಪವೇ ಮುಂದಿನ ಯಾಗಗಳಲ್ಲಿ ಅನುಷ್ಠಿಸಲ್ಪಡುತ್ತದೆ. |
| **ಯಾವಾನ್ ಏವ ಯಜ್ಞಃ ತಮ್ ಅಂತತಃ ಅನ್ವಾರೋಹತಿ** | ಯಜ್ಞವೆಂಬುದು ಎಷ್ಟು ಇದೆಯೋ, ಅದೆಲ್ಲವನ್ನೂ ಕಡೆಯಲ್ಲಿ ಪಡೆಯುತ್ತಾನೆ. |

---

**ತಾತ್ಪರ್ಯ:– ಯಜ್ಞಾಯಜ್ಞಾ ವೋ ಅಗ್ನಯೇ [ಸಾಮವೇದ ಸಂಹಿತಾ 1.1.4.1]** ಎಂಬ ಋಕ್ಕಿನಲ್ಲಿ ಉತ್ಪನ್ನವಾದ ಸಾಮ ಯಜ್ಞಾಯಜ್ಞಿಯ. ಈ ಸಾಮಕ್ಕೆ ಸಂಬಂಧಿಸಿದ ಸ್ತೋತ್ರವು ತೃತೀಯಸವನದಲ್ಲಿ ಪ್ರವೃತ್ತವಾಗುತ್ತದೆ. ಪ್ರಾತಃಸವನ ಪಾಠ ಮಾಡಿ ಉಳಿದ ಎರಡು ಮಂತ್ರಗಳಿಂದ ಅಗ್ನಿಯ ಅಭಿಮರ್ಶನವನ್ನು ಮಾಡಬೇಕು. ಪ್ರಕೃತಿಯಾಗವಾದ ಅಗ್ನಿಷ್ಟೋಮವು ಯಜ್ಞಾಯಜ್ಞಿಯಸ್ತೋತ್ರದಿಂದಲೇ ಮುಕ್ತಾಯವಾಗುತ್ತದೆ. ಉಕ್ಥ್ಯ, ಅತಿರಾತ್ರ ಮುಂತಾದ ಇತರ ಯಜ್ಞಗಳೆಲ್ಲದರಲ್ಲಿಯೂ ಯಜ್ಞಾಯಜ್ಞಿಯಸ್ತೋತ್ರದ ಬಳಿಕ ಹೇಳುವ ಸ್ತೋತ್ರವು

---

* ತು ಎಂಬಲ್ಲಿರುವ ಉಕಾರಕ್ಕೆ ವಕಾರವು ಬರುತ್ತದೆ. [ತೈ. ಪ್ರಾ. 5.13] ತುನುಪೂರ್ವ ಉದಾತ್ತಯೋರ್ವಕಾರಃ ।

ದ್ವಾಭ್ಯಾಂ ಪ್ರತಿಷ್ಠಿತ್ಯಾ ಏಕಯಾಽಪ್ರಸ್ತುತಂ ಭವತ್ಯಥಾ[ಅಥ(೪೮)ಅಭಿ]ಭಿ

ಮೃಶತ್ಯುಪೈನಮುತ್ತರೋ ಯಜ್ಞೋ ನಮತ್ಯಥೋ ಸಂತತ್ಯೈ ಪ್ರ ವಾ

ಏಷೋಽಸ್ಮಾಲ್ಲೋಕಾಚ್ಯವತೇ ಯೋಽಗ್ನಿಂ ಚಿನುತೇ

---

ದ್ವಾಭ್ಯಾಮ್ । ಪ್ರತಿಷ್ಠಿತ್ಯಾ ಇತಿ ಪ್ರತಿ-ಸ್ಥಿತ್ಯೈ । ಏಕಯಾ । ಅಪ್ರಸ್ತುತಮಿತ್ಯಪ್ರ-ಸ್ತುತಮ್ । ಭವತಿ । ಅಥ । (೪೮) । ಅಭೀತಿ । ಮೃಶತಿ । ಉಪೇತಿ । ಏನಮ್ । ಉತ್ತರ ಇತ್ಯುತ್-ತರಃ । ಯಜ್ಞಃ । ನಮತಿ । ಅಥೋ ಇತಿ । ಸಂತತ್ಯಾ ಇತಿ ಸಮ್-ತತ್ಯೈ । ಪ್ರೇತಿ । ವೈ । ಏಷಃ । ಅಸ್ಮಾತ್ । ಲೋಕಾತ್ । ಚ್ಯವತೇ । ಯಃ । ಅಗ್ನಿಮ್ । ಚಿನುತೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ದ್ವಾಭ್ಯಾಮ್ ಪ್ರತಿಷ್ಠಿತ್ಯೈ | ಎರಡು ಮಂತ್ರಗಳಿಂದ ಅಭಿಮರ್ಶನವನ್ನು ಮಾಡುವುದು ಪ್ರಕೃಷ್ಟಸ್ಥಿತಿಗೆ ಕಾರಣವಾಗುತ್ತದೆ. |
| | **ಅಭಿಮರ್ಶನಕಾಲವಿಶೇಷವಿಧಿ** |
| ಏಕಯಾ ಅಪ್ರಸ್ತುತಮ್ ಭವತಿ | (ಯಾವಾಗ) ಯಜ್ಞಾಯಜ್ಞಿಯಸ್ತೋತ್ರದಲ್ಲಿ (ಆವೃತ್ತಿಯಲ್ಲಿ) ಅಂತ್ಯಸ್ತೋತ್ರಕ್ಕಾಗಿರುವ ಋಕ್‌ಗೆ ಸಂಬಂಧಿಸಿದ ಸ್ತೋತ್ರವು ಪ್ರಸ್ತಾವವಾಗಿರುವುದಿಲ್ಲವೋ |
| ಅಥ ಅಭಿಮೃಶತಿ | ಆಗ ಎರಡು ಮಂತ್ರಗಳಿಂದ ಅಭಿಮರ್ಶನವನ್ನು ಮಾಡಬೇಕು. |
| ಏನಮ್ ಉತ್ತರಃ ಯಜ್ಞಃ ಉಪ ನಮತಿ | ಇದರಿಂದ ಉತ್ತರಕಾಲದಲ್ಲಿ ಮಾಡುವ ಯಜ್ಞಸಮೂಹವೆಲ್ಲವೂ ಈ ಯಜಮಾನನನ್ನು ಹೊಂದುತ್ತದೆ. |
| ಅಥೋ ಸಂತತ್ಯೈ | ಮತ್ತು ಯಜ್ಞವು ಯಾವಾಗಲೂ ವಿಚ್ಛಿತ್ತಿಯಿಲ್ಲದೆ ಪ್ರವೃತ್ತವಾಗುವುದಕ್ಕೆ ಕಾರಣವಾಗುತ್ತದೆ. |
| | **ಪುನಶ್ಚಿತಿವಿಧಿ; ಪ್ರಶಂಸೆ** |
| ಯಃ ಅಗ್ನಿಮ್ ಚಿನುತೇ | ಯಾವನು ಅಗ್ನಿಚಯನವನ್ನು ಅನುಷ್ಠಿಸುವನೋ |
| ಏಷಃ ಅಸ್ಮಾತ್ ಲೋಕಾತ್ ಪ್ರ ಚ್ಯವತೇ ವೈ | ಈತನು ಈ ಲೋಕದಿಂದ ಪ್ರಚ್ಯುತನಾಗುತ್ತಾನೆ. |

ನ ವಾ ಏತಸ್ಯಾನಿಷ್ಟಕ ಆಹುತಿರವ ಕಲ್ಪತೇ ಯಾಂ ವಾ ಏಷೋಽನಿಷ್ಟಕ ಆಹುತಿಂ ಜುಹೋತಿ ಸ್ರವತಿ ವೈ ಸಾ ತಾಗ್ಂ ಸ್ರವಂತೀಂ ಯಜ್ಞೋಽನು ಪರಾ ಭವತಿ ಯಜ್ಞಂ ಯಜಮಾನೋ ಯತ್ಪುನಶ್ಚಿತಿಂ ಚಿನುತ ಆಹುತೀನಾಂ ಪ್ರತಿಷ್ಠಿತ್ಯೈ೮

---

ನ । ವೈ । ಏತಸ್ಯ । ಅನಿಷ್ಟಕೇ । ಆಹುತಿರಿತ್ಯಾ–ಹುತಿಃ । ಅವೇತಿ । ಕಲ್ಪತೇ । ಯಾಮ್ । ವೈ । ಏಷಃ । ಅನಿಷ್ಟಕೇ । ಆಹುತಿಮಿತ್ಯಾ–ಹುತಿಮ್ । ಜುಹೋತಿ । ಸ್ರವತಿ । ವೈ । ಸಾ । ತಾಮ್ । ಸ್ರವಂತೀಮ್ । ಯಜ್ಞಃ । ಅನು । ಪರೇತಿ । ಭವತಿ । ಯಜ್ಞಮ್ । ಯಜಮಾನಃ । ಯತ್ । ಪುನಶ್ಚಿತಿಮಿತಿ ಪುನಃ–ಚಿತಿಮ್ । ಚಿನುತೇ । ಆಹುತೀನಾಮಿತ್ಯಾ–ಹುತೀನಾಮ್ । ಪ್ರತಿಷ್ಠಿತ್ಯಾ ಇತಿ ಪ್ರತಿ–ಸ್ಥಿತ್ಯೈ೮ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಅನಿಷ್ಟಕೇ ಏತಸ್ಯ ಆಹುತಿಃ ನ ಅವ ಕಲ್ಪತೇ ವೈ** | ಇಷ್ಟಕಾರಹಿತವಾದ ಪ್ರದೇಶದಲ್ಲಿ ಈ ಯಜಮಾನನು ಮಾಡುವ ಆಹುತಿಯು ಸ್ಥಿರವಾಗಿ ನಿಲ್ಲಲಾರದು. |
| **ಯಾಮ್ ವೈ ಏಷಃ ಅನಿಷ್ಟಕೇ ಆಹುತಿಮ್ ಜುಹೋತಿ** | ಈ ಯಜಮಾನನು ಇಷ್ಟಕಾರಹಿತವಾದ ಪ್ರದೇಶದಲ್ಲಿ ಆಹುತಿಯನ್ನು ಅರ್ಪಿಸಿದರೆ |
| **ಸ್ರವತಿ ವೈ ಸಾ** | ಅದು ಸ್ರವಿತವಾಗುತ್ತದೆ. |
| **ತಾಮ್ ಸ್ರವಂತೀಮ್** | ಸ್ರವಿತವಾಗುತ್ತಿರುವ ಆ ಆಹುತಿಯನ್ನು |
| **ಅನು ಯಜ್ಞಃ ಪರಾ ಭವತಿ** | ಅನುಸರಿಸಿ ಯಜ್ಞವು ನಶಿಸಿ ಹೋಗುತ್ತದೆ. |
| **ಯಜ್ಞಮ್** ಅನು **ಯಜಮಾನಃ** ಪರಾ ಭವತಿ | ಹೀಗೆ ನಶಿಸಿದ ಯಜ್ಞವನ್ನು ಅನುಸರಿಸಿ ಯಜಮಾನನು ನಾಶ ಹೊಂದುವನು. |
| **ಯತ್ ಪುನಶ್ಚಿತಿಮ್ ಚಿನುತೇ** | ಪುನಶ್ಚಯನವನ್ನು ಯಜಮಾನನು ಅನುಷ್ಠಿಸುವನೆಂಬುದು |
| **ಆಹುತೀನಾಮ್ ಪ್ರತಿಷ್ಠಿತ್ಯೈ೮** | ಹೋಮಗಳ ದೃಢವಾದ ಇರುವಿಕೆಗಾಗಿ (ಸ್ಥಿತಿ) ಆಗುತ್ತದೆ. |

---

ಅಗ್ನಿಷ್ಟೋಮದ ಬಾಹುಳ್ಯವೇ ಆಗಿದೆ. ಇದರ ಹೊರತು ಬೇರೆಯ ನೂತನ ಶರೀರವುಳ್ಳ ಯಜ್ಞವೇ ಇಲ್ಲ.

ಪ್ರತ್ಯಾಹುತಯಸ್ತಿಷ್ಠಂತಿ [ತಿಷ್ಠಂತಿ(೪೯)] ನ ಯಜ್ಞಃ ಪರಾಭವತಿ ನ ಯಜಮಾನೋಽಷ್ಟಾವುಪ ದಧಾತ್ಯಷ್ಟಾಕ್ಷರಾ ಗಾಯತ್ರೀ ಗಾಯತ್ರೇಣೈವೈನಂ ಛಂದಸಾ ಚಿನುತೇ ಯದೇಕಾದಶ ತ್ರೈಷ್ಟುಭೇನ

---

ಪ್ರತೀತಿ । ಆಹುತಯ ಇತ್ಯಾ-ಹುತಯಃ । ತಿಷ್ಠಂತಿ । (೪೯) । ನ । ಯಜ್ಞಃ । ಪರಾಭವತೀತಿ ಪರಾ-ಭವತಿ । ನ । ಯಜಮಾನಃ । ಅಷ್ಟೌ । ಉಪೇತಿ । ದಧಾತಿ । ಅಷ್ಟಾಕ್ಷರೇತ್ಯಷ್ಟಾ-ಅಕ್ಷರಾ । ಗಾಯತ್ರೀ । ಗಾಯತ್ರೇಣ । ಏವ । ಏನಮ್ । ಛಂದಸಾ । ಚಿನುತೇ । ಯತ್ । ಏಕಾದಶ । ತ್ರೈಷ್ಟುಭೇನ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಆಹುತಯಃ ಪ್ರತಿತಿಷ್ಠಂತಿ** | ಇದರಿಂದ ಆಹುತಿಗಳು ಸ್ರವಿಸದೆ ಸ್ಥಿರವಾಗಿ ನಿಲ್ಲುತ್ತವೆ. |
| **ಯಜ್ಞಃ ನ ಪರಾಭವತಿ** | ಯಜ್ಞವೂ ನಶಿಸದೆ ಸ್ಥಿರವಾಗಿ ಇರುತ್ತದೆ. |
| **ಯಜಮಾನಃ ನ** ಪರಾಭವತಿ | ಯಜಮಾನನೂ ಹಾನಿಗೊಳಗಾಗುವುದಿಲ್ಲ. |

**ಪುನಶ್ಚಿತಿಯಲ್ಲಿ ಸಂಖ್ಯಾವಿಧಿ; ಪ್ರಶಂಸೆ**

| | |
|---|---|
| **ಅಷ್ಟೌ ಉಪ ದಧಾತಿ** | ಎಂಟು ಇಷ್ಟಕೆಗಳ ಉಪಧಾನವನ್ನು ಮಾಡಬೇಕು. |
| **ಅಷ್ಟಾಕ್ಷರಾ ಗಾಯತ್ರೀ** | ಗಾಯತ್ರೀಛಂದಸ್ಸು ಎಂಟು ಅಕ್ಷರಗಳಿಂದ ಕೂಡಿದುದು. |
| **ಗಾಯತ್ರೇಣ ಛಂದಸಾ ಏವ ಏನಮ್ ಚಿನುತೇ** | (ಈ ಎಂಟು ಇಷ್ಟಕೆಗಳ ಉಪಧಾನದಿಂದ ಯಜಮಾನನು) ಗಾಯತ್ರಛಂದಸ್ಸಿನಿಂದಲೇ ಈ ಪುನಶ್ಚಯನವನ್ನು ಮಾಡಿದವನಾಗುತ್ತಾನೆ. |
| **ಯತ್ ಏಕಾದಶ** ಉಪದಧಾತಿ **ತ್ರೈಷ್ಟುಭೇನ** ಛಂದಸಾ ಏವ ಏನಮ್ ಚಿನುತೇ | ಹನ್ನೊಂದು ಇಷ್ಟಕೆಗಳನ್ನು ಉಪಧಾನ ಮಾಡಿದರೆ ತ್ರೈಷ್ಟುಭಛಂದಸ್ಸಿನಿಂದ ಈ ಪುನಶ್ಚಯನವನ್ನು ಮಾಡಿದವನಾಗುತ್ತಾನೆ. |

---

ಹೀಗಾಗಿ ಯಜ್ಞಾಯಜ್ಞಿಯಸ್ತೋತ್ರದ ಸಮಯದಲ್ಲಿ ಮಾಡುವ ಅಭಿಮರ್ಶನವು ಸಮಸ್ತಯಜ್ಞಪ್ರಾಪ್ತಿಗೂ, ಪ್ರಕೃಷ್ಟಸ್ಥಿತಿಗೂ ಕಾರಣವಾಗುತ್ತದೆ.

ಯದ್ದ್ವಾದಶ ಜಾಗತೇನ ಛಂದೋಭಿರೇವೈನಂ ಚಿನುತೇ ನಪಾತ್ಕೋ ವೈ ನಾಮೈಷೋಽಗ್ನಿರ್ಯತ್ಪುನಶ್ಚಿತಿರ್ಯ ಏವಂ ವಿದ್ವಾನ್ಪುನಶ್ಚಿತಿಂ ಚಿನುತ ಆ ತೃತೀಯಾತ್ಪುರುಷಾದನ್ನಮತ್ತಿ

---

ಯತ್ । ದ್ವಾದಶ । ಜಾಗತೇನ । ಛಂದೋಭಿರಿತಿ ಛಂದಃ-ಭಿಃ । ಏವ । ಏನಮ್ । ಚಿನುತೇ । ನಪಾತ್ಕಃ । ವೈ । ನಾಮ । ಏಷಃ । ಅಗ್ನಿಃ । ಯತ್ । ಪುನಶ್ಚಿತಿರಿತಿ ಪುನಃ-ಚಿತಿಃ । ಯಃ । ಏವಮ್ । ವಿದ್ವಾನ್ । ಪುನಶ್ಚಿತಿಮಿತಿ ಪುನಃ-ಚಿತಿಮ್ । ಚಿನುತೇ । ಏತಿ । ತೃತೀಯಾತ್ । ಪುರುಷಾತ್ । ಅನ್ನಮ್ । ಅತ್ತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯತ್ ದ್ವಾದಶ** ಉಪದಧಾತಿ | ಹನ್ನೆರಡು ಇಷ್ಟಕೆಗಳನ್ನು ಉಪಧಾನ ಮಾಡಿದರೆ |
| **ಜಾಗತೇನ** ಛಂದಸಾ ಏವ ಏನಮ್ ಚಿನುತೇ | ಜಾಗತಛಂದಸ್ಸಿನಿಂದ ಈ ಪುನಶ್ಚಯನವನ್ನು ಮಾಡಿದವನಾಗುತ್ತಾನೆ. |
| **ಛಂದೋಭಿಃ ಏವ ಏನಮ್ ಚಿನುತೇ** | ಹೀಗೆ ಪುನಶ್ಚಿತಿಯನ್ನು ಮಾಡಿದ ಯಜಮಾನನು ಛಂದಸ್ಸುಗಳಿಂದಲೇ ಚಯನವನ್ನು ಮಾಡಿದವನಾಗುತ್ತಾನೆ. |

**ಪುನಶ್ಚಿತಿಯ ಪ್ರಶಂಸೆ**

| | |
|---|---|
| **ಯತ್ ಪುನಶ್ಚಿತಿಃ ಏಷಃ ನಪಾತ್ಕಃ ನಾಮ ಅಗ್ನಿಃ ವೈ** | ಆಹುತಿಗಳನ್ನು ಸ್ರವಿಸದಂತೆ ಮಾಡಿ ನಾಶಪಡಿಸದಿರುವುದರಿಂದ ಪುನಶ್ಚಿತಿರೂಪವಾದ ಅಗ್ನಿಯು ಯಾವುದೋ ಆ ಅಗ್ನಿಯು 'ನಪಾತ್ಕ'ನೆಂದು ಪ್ರಸಿದ್ಧಿಯು ಇದೆ. |
| **ಯಃ ಏವಮ್ ವಿದ್ವಾನ್ ಪುನಶ್ಚಿತಿಮ್ ಚಿನುತೇ** | ಯಾವ ಯಜಮಾನನು ಈ ರೀತಿ ತಿಳಿದು ಪುನಶ್ಚಿತಿಯನ್ನು ಅನುಷ್ಠಿಸುವನೋ |
| **ಆ ತೃತೀಯಾತ್ ಪುರುಷಾತ್ ಅನ್ನಮ್ ಅತ್ತಿ** | ಅವನು ತನ್ನ ಪುತ್ರಪೌತ್ರಾದಿಯಾದ ಮೂರು ತಲೆಮಾರಿನವರೆಗೂ ತಿನ್ನಲು ಅನ್ನಸಮೃದ್ಧಿಯನ್ನು ಪಡೆಯುತ್ತಾನೆ. |

---

ಪುನಶ್ಚಿತಿಯನ್ನು ಹನ್ನೊಂದು ಅಥವಾ ಹನ್ನೆರಡು ಇಷ್ಟಕೆಗಳಿಂದ ಮಾಡಬೇಕೆಂಬ ವಿಧಿಯು ಶಾಖಾಂತರೀಯಾನುಸಾರಿಯಾಗಿದೆ. 'ಯೇನರ್‌ಷಯಃ' ಎಂದು ಆರಂಭಿಸಿ ಈ ಶಾಖೆಯಲ್ಲಿ ಎಂಟು ಮಂತ್ರಗಳು ಇವೆ. [ತೈ. ಸಂ. 4.7.13]

ಯಥಾ ವೈ ಪುನರಾಧೇಯ ಏವಂ ಪುನಶ್ಚಿತಿರ್ಯೋಽಗ್ನ್ಯಾಧೇಯೇನ ನ [ನ (೫೦)ಋಧ್ನೋತಿ]ರ್ಧ್ನೋತಿ ಸ ಪುನರಾಧೇಯಮಾ ಧತ್ತೇ ಯೋಽಗ್ನಿಂ ಚಿತ್ವಾ ನರ್ಧ್ನೋತಿ ಸ ಪುನಶ್ಚಿತಿಂ ಚಿನುತೇ ಯತ್ಪುನಶ್ಚಿತಿಂ ಚಿನುತ ಋದ್ಧ್ಯಾ ಅಥೋ ಖಲ್ವಾಹುರ್ನ ಚೇತವ್ಯೇತಿ

---

ಯಥಾ । ವೈ । ಪುನರಾಧೇಯ ಇತಿ ಪುನಃ-ಆಧೇಯಃ । ಏವಮ್ । ಪುನಶ್ಚಿತಿರಿತಿ ಪುನಃ-ಚಿತಿಃ । ಯಃ । ಅಗ್ನ್ಯಾಧೇಯೇನೇತ್ಯಗ್ನಿ-ಆಧೇಯೇನ । ನ । (೫೦) । ಋದ್ಧ್ನೋತಿ । ಸಃ । ಪುನರಾಧೇಯಮಿತಿ ಪುನಃ-ಆಧೇಯಮ್ । ಏತಿ । ಧತ್ತೇ । ಯಃ । ಅಗ್ನಿಮ್ । ಚಿತ್ವಾ । ನ । ಋಧ್ನೋತಿ । ಸಃ । ಪುನಶ್ಚಿತಿಮಿತಿ ಪುನಃ-ಚಿತಿಮ್ । ಚಿನುತೇ । ಯತ್ । ಪುನಶ್ಚಿತಿಮಿತಿ ಪುನಃ-ಚಿತಿಮ್ । ಚಿನುತೇ । ಋದ್ಧ್ಯೈ । ಅಥೋ ಇತಿ । ಖಲು । ಆಹುಃ । ನ । ಚೇತವ್ಯಾ । ಇತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|

ಹೋಲಿಕೆಯೊಡನೆ ಮತ್ತೊಂದು ರೀತಿಯಲ್ಲಿ ಪುನಶ್ಚಿತಿಯ ಪ್ರಶಂಸೆ

| | |
|---|---|
| **ಯಥಾ ವೈ ಪುನರಾಧೇಯಃ** | ಪುನರಾಧೇಯವಿರುವಂತೆಯೇ |
| **ಏವಮ್ ಪುನಶ್ಚಿತಿಃ** | ಪುನಶ್ಚಿತಿಯೂ ಇದೆ. |
| **ಯಃ ಅಗ್ನ್ಯಾಧೇಯೇನ ನ ಋಧ್ನೋತಿ** | ಯಾವ ಯಜಮಾನನು ಅಗ್ನ್ಯಾಧಾನವನ್ನು ಮಾಡಿ ಸಮೃದ್ಧಿಯನ್ನು ಹೊಂದುವುದಿಲ್ಲವೋ, |
| **ಸಃ ಪುನರಾಧೇಯಮ್ ಆ ಧತ್ತೇ** | ಅವನು ಪುನರಾಧಾನವನ್ನು ಮಾಡುತ್ತಾನೆ. |
| **ಯಃ ಅಗ್ನಿಮ್ ಚಿತ್ವಾ ನ ಋಧ್ನೋತಿ** | ಹಾಗೆಯೇ ಪ್ರಥಮಚಯನವನ್ನು ಮಾಡಿ ಸಮೃದ್ಧಿಯನ್ನು ಹೊಂದುವುದಿಲ್ಲವೋ |
| **ಸಃ ಪುನಶ್ಚಿತಿಮ್ ಚಿನುತೇ** | ಆ ಯಜಮಾನನು ಪುನಶ್ಚಿತಿಯನ್ನು ಅನುಷ್ಠಿಸುತ್ತಾನೆ. |
| **ಯತ್ ಪುನಶ್ಚಿತಿಮ್ ಚಿನುತೇ** | ಹೀಗೆ ಪುನಶ್ಚಯನವನ್ನು ಅನುಷ್ಠಿಸುವನೆಂಬುದು |
| **ಋದ್ಧ್ಯೈ** | ಸಮೃದ್ಧಿಗೆ ಕಾರಣವಾಗುತ್ತದೆ. |

ಹೋಲಿಕೆಯೊಡನೆ ಪುನಶ್ಚಿತಿಯ ಯುಕ್ತತೆ

| | |
|---|---|
| **ಅಥೋ ಖಲು ಆಹುಃ ನ ಚೇತವ್ಯಾ ಇತಿ** | ಪುನಶ್ಚಯನವನ್ನು ಮಾಡಬಾರದೆಂದು ಕೆಲವರು ತಿಳಿದವರು ಹೇಳುತ್ತಾರೆ. |

ರುದ್ರೋ ವಾ ಏಷ ಯದಗ್ನಿರ್ಯಥಾ ವ್ಯಾಘ್ರಗ್ಂ ಸುಪ್ತಂ ಬೋಧಯತಿ ತಾದೃಗೇವ ತದಥೋ ಖಲ್ವಾಹುಶ್ಚೇತವ್ಯೇತಿ ಯಥಾ ವಸೀಯಾಗ್ಂಸಂ ಭಾಗಧೇಯೇನ ಬೋಧಯತಿ ತಾದೃಗೇವ ತನ್ಮನುರಗ್ನಿಮಚಿನುತ ತೇನ ನಾಽಽರ್ಧ್ನೋ–

ರುದ್ರಃ । ವೈ । ಏಷಃ । ಯತ್ । ಅಗ್ನಿಃ । ಯಥಾ । ವ್ಯಾಘ್ರಮ್ । ಸುಪ್ತಮ್ । ಬೋಧಯತಿ । ತಾದೃಕ್ । ಏವ । ತತ್ । ಅಥೋ ಇತಿ । ಖಲು । ಆಹುಃ । ಚೇತವ್ಯಾ । ಇತಿ । ಯಥಾ । ವಸೀಯಾಗ್ಂಸಮ್ । ಭಾಗಧೇಯೇನೇತಿ ಭಾಗ–ಧೇಯೇನ । ಬೋಧಯತಿ । ತಾದೃಕ್ । ಏವ । ತತ್ । ಮನುಃ । ಅಗ್ನಿಮ್ । ಅಚಿನುತ । ತೇನ । ನ । ಆರ್ಧ್ನೋತ್ ।

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯತ್ ಅಗ್ನಿಃ ರುದ್ರಃ ವೈ ಏಷಃ** | ಏಕೆಂದರೆ ಈ ಅಗ್ನಿಯೆಂಬುವನು ರುದ್ರನೇ. (ಕ್ರೂರನು) |
| **ಯಥಾ ಸುಪ್ತಮ್ ವ್ಯಾಘ್ರಮ್ ಬೋಧಯತಿ ತತ್ ತಾದೃಕ್ ಏವ** | ಪುನಶ್ಚಯನ ಮಾಡುವುದೆಂಬುದು ಹೇಗೆ ಮಲಗಿ ನಿದ್ರಿಸುತ್ತಿರುವ ಹುಲಿಯನ್ನು ಎಚ್ಚರಗೊಳಿಸುತ್ತಾನೆಯೋ ಆ ರೀತಿಯೇ **(ಶಾಖಾಂತರದ ಪೂರ್ವಪಕ್ಷ)** |
| **ಅಥೋ ಖಲು ಚೇತವ್ಯಾ ಇತಿ ಆಹುಃ** | ಸಿದ್ಧಾಂತವನ್ನು ಬಲ್ಲವರು ಪುನಶ್ಚಿತಿಯನ್ನು ಅನುಷ್ಠಿಸಬೇಕೆಂದು ಹೇಳುತ್ತಾರೆ. |
| **ಯಥಾ ವಸೀಯಾಗ್ಂಸಮ್ ಭಾಗಧೇಯೇನ ಬೋಧಯತಿ ತಾದೃಕ್ ಏವ ತತ್** | ಯಾವ ರೀತಿಯಲ್ಲಿ ಧನಾಢ್ಯನಾದ ಪ್ರಭುವನ್ನು ಕಾಣಿಕೆಯನ್ನು ನೀಡಿ ಪ್ರಸನ್ನಗೊಳಿಸಿ ಒಲಿಸಿಕೊಳ್ಳುವನೋ ಆ ರೀತಿ ಅಗ್ನಿಯನ್ನು ಒಲಿಸಿಕೊಂಡು ಕಾಮನೆಗಳನ್ನು ಪಡೆಯುತ್ತಾನೆ. (ಆ ರೀತಿಯೇ ಇದು) ಆದುದರಿಂದ ಪುನಶ್ಚಿತಿಯನ್ನು ಮಾಡಬೇಕು. **(ಸಿದ್ಧಾಂತ)** |

ಪುನಃ ಪ್ರಶಂಸೆ

| | |
|---|---|
| **ಮನುಃ ಅಗ್ನಿಮ್ ಅಚಿನುತ ತೇನ ನ ಆರ್ಧ್ನೋತ್** | ಮನುಪ್ರಜಾಪತಿಯು ಅಗ್ನಿಚಯನವನ್ನು ಮಾಡಿದನು. ಆದರೆ ಅದರಿಂದ ಸಮೃದ್ಧಿಯನ್ನು ಪಡೆಯಲಿಲ್ಲ. |

-ಥ್ಸ ಏತಾಂ ಪುನಶ್ಚಿತಿಮಪಶ್ಯತ್ತಾಮಚಿನುತ ತಯಾ ವೈ ಸ

ಆರ್ಧ್ನೋದ್ಯತ್ಪುನಶ್ಚಿತಿಂ ಚಿನುತ ಋಧ್ಯೈ ॥ ೫೧–10 ॥

[ತ್ರಿವೃದಥ ತಿಷ್ಠಂತ್ಯಗ್ನ್ಯಾಧೇಯೇನ ನಾಚಿನುತ ಸಪ್ತದಶ ಚ ॥]

---

ಸಃ । ಏತಾಮ್ । ಪುನಶ್ಚಿತಿಮಿತಿ ಪುನಃ–ಚಿತಿಮ್ । ಅಪಶ್ಯತ್ । ತಾಮ್ । ಅಚಿನುತ । ತಯಾ । ವೈ । ಸಃ ।

ಆರ್ಧ್ನೋತ್ । ಯತ್ । ಪುನಶ್ಚಿತಿಮಿತಿ ಪುನಃ–ಚಿತಿಮ್ । ಚಿನುತೇ । ಋಧ್ಯೈ ॥ ೫೧ ॥

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಸಃ ಏತಾಮ್ ಪುನಶ್ಚಿತಿಮ್ ಅಪಶ್ಯತ್ | ಬಳಿಕ ಅವನು ಸಮೃದ್ಧಿಗಾಗಿ ಈ ಪುನಶ್ಚಿತಿಯನ್ನು ಸಾಧನವನ್ನಾಗಿ ತಿಳಿದನು. |
| ತಾಮ್ ಅಚಿನುತ | ಆ ಪುನಶ್ಚಿತಿಯನ್ನು ಅನುಷ್ಠಿಸಿದನು. |
| ತಯಾ ವೈ ಸಃ ಆರ್ಧ್ನೋತ್ | ಅದರಿಂದ ಅವನು ಸಮೃದ್ಧಿಯನ್ನು ಹೊಂದಿದನು. |
| ಯತ್ ಪುನಶ್ಚಿತಿಮ್ ಚಿನುತೇ ಋಧ್ಯೈ | ಆದುದರಿಂದ ಪುನಶ್ಚಿತಿಯನ್ನು ಅನುಷ್ಠಿಸುವನೆಂಬುವುದು ಸಮೃದ್ಧಿಗೆ ಕಾರಣವಾಗುತ್ತದೆ. |

## ॥ ಏಕಾದಶೋಽನುವಾಕಃ ॥

ಛಂದಶ್ಚಿತಂ ಚಿನ್ವೀತ ಪಶುಕಾಮಃ ಪಶವೋ ವೈ ಛಂದಾಗ್ಂಸಿ ಪಶುಮಾನೇವ

ಭವತಿ ಶ್ಯೇನಚಿತಂ ಚಿನ್ವೀತ ಸುವರ್ಗಕಾಮಃ

---

ಛಂದಶ್ಚಿತಮಿತಿ ಛಂದಃ–ಚಿತಮ್ । ಚಿನ್ವೀತ । ಪಶುಕಾಮ ಇತಿ ಪಶು–ಕಾಮಃ । ಪಶವಃ । ವೈ । ಛಂದಾಗ್ಂಸಿ । ಪಶುಮಾನಿತಿ ಪಶು–ಮಾನ್ । ಏವ । ಭವತಿ । ಶ್ಯೇನಚಿತಮಿತಿ ಶ್ಯೇನ–ಚಿತಮ್ । ಚಿನ್ವೀತ । ಸುವರ್ಗಕಾಮ ಇತಿ ಸುವರ್ಗ–ಕಾಮಃ ।

---

ಈ ಹನ್ನೊಂದನೆಯ ಅನುವಾಕದಲ್ಲಿ ಕೆಲವು ಕಾಮ್ಯಚಯನಗಳೂ ಅನಂತರ ವಿಹವ್ಯೇಷ್ಟಕೆಗಳೂ ಹೇಳಲ್ಪಟ್ಟಿವೆ.

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ಕಾಮ್ಯಚಯನವಿಧಿ; ಫಲ** |
| **ಪಶುಕಾಮಃ ಛಂದಶ್ಚಿತಮ್ ಚಿನ್ವೀತ** | ಪಶುಕಾಮನಾದ ಯಜಮಾನನು **'ಅಗ್ನಿರ್ಮೂರ್ಧಾ'** ಮೊದಲಾದ ನಾನಾಛಂದೋಯುಕ್ತವಾದ ಮಂತ್ರಗಳಿಂದ ಚಿತನಾದ ಅಗ್ನಿಯ ಚಯನವನ್ನು ಮಾಡಬೇಕು. |
| **ಛಂದಾಗ್ಂಸಿ ಪಶವಃ ವೈ** | ಛಂದಸ್ಸುಗಳು ಪಶುರೂಪವಾಗಿವೆ. (ಏಕೆಂದರೆ ಪಶುಗಳು ಛಂದೋದೇವತಾಕವಾದವುಗಳು.) |
| **ಪಶುಮಾನ್ ಏವ ಭವತಿ** | ಈ ಚಯನದಿಂದ ಯಜಮಾನನು ಪಶುಗಳನ್ನು ಹೊಂದಿದವನಾಗುತ್ತಾನೆ. |
| | **ಕಾಮ್ಯಚಯನವಿಧಿ** |
| **ಸುವರ್ಗಕಾಮಃ ಶ್ಯೇನಚಿತಮ್ ಚಿನ್ವೀತ** | ಸ್ವರ್ಗಲೋಕವನ್ನು ಅಪೇಕ್ಷಿಸುವ ಯಜಮಾನನು ಶ್ಯೇನಪಕ್ಷಿಯ ಆಕಾರದಲ್ಲಿ ಅಗ್ನಿಚಯನವನ್ನು ಮಾಡಬೇಕು. |

ಶ್ಯೇನೋ ವೈ ವಯಸಾಂ ಪತಿಷ್ಠಃ ಶ್ಯೇನ ಏವ ಭೂತ್ವಾ ಸುವರ್ಗಂ ಲೋಕಂ ಪತತಿ ಕಙ್ಕಚಿತಞ್ಚಿನ್ವೀತ ಯಃ ಕಾಮಯೇತ ಶೀರ್ಷಣ್ವಾನಮುಷ್ಮಿಲ್ಲೋಕೇ ಸ್ಯಾಮಿತಿ ಶೀರ್ಷಣ್ವಾನೇವಾಮುಷ್ಮಿಲ್ಲೋಕೇ ಭವತ್ಯ-

---

ಶ್ಯೇನಃ । ವೈ । ವಯಸಾಮ್ । ಪತಿಷ್ಠಃ । ಶ್ಯೇನಃ । ಏವ । ಭೂತ್ವಾ । ಸುವರ್ಗಮಿತಿ ಸುವಃ-ಗಮ್ । ಲೋಕಮ್ । ಪತತಿ । ಕಙ್ಕಚಿತಮಿತಿ ಕಙ್ಕ-ಚಿತಮ್ । ಚಿನ್ವೀತ । ಯಃ । ಕಾಮಯೇತ । ಶೀರ್ಷಣ್ವಾನಿತಿ ಶೀರ್ಷಣ್ಣ್-ವಾನ್ । ಅಮುಷ್ಮಿನ್ನ್ । ಲೋಕೇ । ಸ್ಯಾಮ್ । ಇತಿ । ಶೀರ್ಷಣ್ವಾನಿತಿ ಶೀರ್ಷಣ್ಣ್-ವಾನ್ । ಏವ । ಅಮುಷ್ಮಿನ್ನ್ । ಲೋಕೇ । ಭವತಿ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ವಯಸಾಮ್ ಶ್ಯೇನಃ ಪತಿಷ್ಠಃ ವೈ | ಪಕ್ಷಿಗಳಲ್ಲಿ ಶ್ಯೇನವು (ಡೇಗೆಯು) ಅತ್ಯಂತ ಶೀಘ್ರ ಗಾಮಿಯಷ್ಟೆ. |
| ಶ್ಯೇನಃ ಏವ ಭೂತ್ವಾ ಸುವರ್ಗಮ್ ಲೋಕಮ್ ಪತತಿ | ಈ ಚಯನವನ್ನು ಮಾಡಿದ ಯಜಮಾನನು ಶ್ಯೇನ ಪಕ್ಷಿಯಂತೆ ಶೀಘ್ರಗಾಮಿಯಾಗಿ ಸ್ವರ್ಗಲೋಕಕ್ಕೆ ಹಾರುತ್ತಾನೆ. |

**ಕಾಮ್ಯಚಯನವಿಧಿ**

| | |
|---|---|
| ಯಃ ಅಮುಷ್ಮಿನ್ ಲೋಕೇ ಶೀರ್ಷಣ್ವಾನ್ ಸ್ಯಾಮ್ ಇತಿ ಕಾಮಯೇತ | ಯಾರು ಸ್ವರ್ಗಲೋಕದಲ್ಲಿ ಮುಖ್ಯನಾಗಿರಬೇಕೆಂದು ಬಯಸುವನೋ |
| ಕಙ್ಕಚಿತಮ್ ಚಿನ್ವೀತ | ಕಂಕಪಕ್ಷಿಯ(ಗಿಡುಗಗಳಲ್ಲಿ ಒಂದು ಜಾತಿ) ಆಕಾರ ವಾಗಿ ಚಯನವನ್ನು ಮಾಡಬೇಕು. |
| ಅಮುಷ್ಮಿನ್ ಲೋಕೇ ಶೀರ್ಷಣ್ವಾನ್ ಏವ ಭವತಿ | ಹೀಗೆ ಚಯನವನ್ನು ಮಾಡಿದ ಯಜಮಾನನು ಸ್ವರ್ಗಲೋಕದಲ್ಲಿ ಶ್ರೇಷ್ಠನೇ ಆಗುತ್ತಾನೆ. |

–ಲಜಚಿತಞ್ಚಿನ್ವೀತ ಚತುಸ್ಸೀತಂ ಪ್ರತಿಷ್ಠಾಕಾಮಶ್ಚತಸ್ರೋ ದಿಶೋ ದಿಕ್ಷ್ವೇವ ಪ್ರತಿ ತಿಷ್ಠತಿ ಪ್ರಉಗಚಿತಞ್ಚಿನ್ವೀತ ಭ್ರಾತೃವ್ಯವಾನ್ಪ್ರ[ಪ್ರ(೫೨)ಏವ]ವ ಭ್ರಾತೃವ್ಯಾನ್ನುದತ

---

ಅಲಜಚಿತಮಿತ್ಯಲಜ–ಚಿತಮ್ । ಚಿನ್ವೀತ । ಚತುಸ್ಸೀತಮಿತಿ ಚತುಃ–ಸೀತಮ್ । ಪ್ರತಿಷ್ಠಾಕಾಮ ಇತಿ ಪ್ರತಿಷ್ಠಾ–ಕಾಮಃ । ಚತಸ್ರಃ । ದಿಶಃ । ದಿಕ್ಷು । ಏವ । ಪ್ರತೀತಿ । ತಿಷ್ಠತಿ । ಪ್ರಉಗಚಿತಮಿತಿ ಪ್ರ ಉಗ–ಚಿತಮ್ । ಚಿನ್ವೀತ । ಭ್ರಾತೃವ್ಯವಾನಿತಿ ಭ್ರಾತೃವ್ಯ–ವಾನ್ । ಪ್ರೇತಿ । (೫೨) । ಏವ । ಭ್ರಾತೃವ್ಯಾನ್ । ನುದತೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ಮತ್ತೊಂದು ಕಾಮ್ಯಚಯನವಿಧಿ** |
| **ಪ್ರತಿಷ್ಠಾಕಾಮಃ** | ಪ್ರತಿಷ್ಠೆ(ಶ್ರೇಷ್ಠಸ್ಥಿತಿ)ಯನ್ನು ಬಯಸುವವನು |
| **ಚತುಸ್ಸೀತಮ್ ಅಲಜಚಿತಮ್ ಚಿನ್ವೀತ** | ನಾಲ್ಕು ನೇಗಿಲುಗೆರೆಗಳ ಪ್ರದೇಶದಲ್ಲಿ ಅಲಜ (ಇದೂ ಗಿಡುಗಗಳಲ್ಲಿ ಒಂದು ಜಾತಿ)ಪಕ್ಷಿಯ ಆಕಾರ ದಲ್ಲಿ ಚಯನವನ್ನು ಮಾಡಬೇಕು. |
| **ಚತಸ್ರಃ ದಿಶಃ** | ದಿಕ್ಕುಗಳು ನಾಲ್ಕು. |
| **ದಿಕ್ಷು ಏವ ಪ್ರತಿ ತಿಷ್ಠತಿ** | (ನಾಲ್ಕು ನೇಗಿಲಗೆರೆಗಳ ಪ್ರದೇಶದಲ್ಲಿ ಚಯನವನ್ನು ಮಾಡುವುದರಿಂದ) ದಿಕ್ಕುಗಳಲ್ಲಿ ಪ್ರತಿಷ್ಠಿತನೇ ಆಗು ತ್ತಾನೆ. |
| | **ಇನ್ನೊಂದು ಕಾಮ್ಯಚಯನವಿಧಿ** |
| **ಭ್ರಾತೃವ್ಯವಾನ್** | ಹಗೆಗಳಿರುವ ಯಜಮಾನನು (ಶತ್ರುನಾಶಕ್ಕಾಗಿ) |
| **ಪ್ರಉಗಚಿತಮ್ ಚಿನ್ವೀತ** | ಗಾಡಿಯ ಮುಂಭಾಗದ ಆಕಾರದಲ್ಲಿ ಚಯನ ವನ್ನು ಮಾಡಬೇಕು. |
| **ಭ್ರಾತೃವ್ಯಾನ್ ಪ್ರ ನುದತೇ ಏವ** | (ಈ ಚಯನದಿಂದ)ಶತ್ರುಗಳನ್ನು ನಿಶ್ಚಯವಾಗಿಯೂ ನಾಶಪಡಿಸುತ್ತಾನೆ. (ಬಂಡಿಯಂತೆ ಈ ಚಯನವು ಶತ್ರುಗಳನ್ನು ದೂರ ಒಯ್ಯುತ್ತದೆ.) |

ಉಭಯತಃ ಪ್ರ ಉಗಞ್ಚಿನ್ವೀತ ಯಃ ಕಾಮಯೇತ ಪ್ರಜಾತಾನ್ಭ್ರಾತೃವ್ಯಾ
ನ್ನುದೇಯ ಪ್ರತಿ ಜನಿಷ್ಯಮಾಣಾನಿತಿ ಪ್ರೈವ ಜಾತಾನ್ಭ್ರಾತೃವ್ಯಾನ್ನುದತೇ ಪ್ರತಿ
ಜನಿಷ್ಯಮಾಣಾನ್ರಥಚಕ್ರಚಿತಞ್ಚಿನ್ವೀತ ಭ್ರಾತೃವ್ಯವಾನ್, ವಜ್ರೋ ವೈ ರಥೋ

---

ಉಭಯತಃಪ್ರಉಗಮಿತ್ಯುಭಯತಃ-ಪ್ರಉಗಮ್ । ಚಿನ್ವೀತ । ಯಃ । ಕಾಮಯೇತ । ಪ್ರೇತಿ । ಜಾತಾನ್ । ಭ್ರಾತೃವ್ಯಾನ್ । ನುದೇಯ । ಪ್ರತೀತಿ । ಜನಿಷ್ಯಮಾಣಾನ್ । ಇತಿ । ಪ್ರೇತಿ । ಏವ । ಜಾತಾನ್ । ಭ್ರಾತೃವ್ಯಾನ್ । ನುದತೇ । ಪ್ರತೀತಿ । ಜನಿಷ್ಯಮಾಣಾನ್ । ರಥಚಕ್ರಚಿತಮಿತಿ ರಥಚಕ್ರ-ಚಿತಮ್ । ಚಿನ್ವೀತ । ಭ್ರಾತೃವ್ಯವಾನಿತಿ ಭ್ರಾತೃವ್ಯ-ವಾನ್ । ವಜ್ರಃ । ವೈ । ರಥಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯಃ ಪ್ರಜಾತಾನ್ ಭ್ರಾತೃವ್ಯಾನ್** | ಯಾವ ಯಜಮಾನನು ಹುಟ್ಟಿರುವ ಶತ್ರುಗಳನ್ನೂ |
| **ಜನಿಷ್ಯಮಾಣಾನ್ ಭ್ರಾತೃವ್ಯಾನ್** | ಮುಂದೆ ಜನಿಸಲಿರುವ ಶತ್ರುಗಳನ್ನೂ |
| **ಪ್ರತಿ ನುದೇಯ ಇತಿ ಕಾಮಯೇತ** | ನಾಶ ಪಡಿಸುವೆನೆಂದು ಬಯಸುವನೋ |
| **ಉಭಯತಃಪ್ರಉಗಮ್ ಚಿನ್ವೀತ** | (ಆ ಯಜಮಾನನು) ಪೂರ್ವಪಶ್ಚಿಮಭಾಗಗಳಲ್ಲಿ ಶಕಟದ (ಗಾಡಿಯ) ಮುಖದ ಆಕಾರದಲ್ಲಿ ಚಯನವನ್ನು ಮಾಡಬೇಕು. |
| **ಜಾತಾನ್ ಭ್ರಾತೃವ್ಯಾನ್ ಪ್ರ ನುದತೇ ಏವ** | (ಈ ಚಯನದಿಂದ) ಹುಟ್ಟಿರುವ ಶತ್ರುಗಳನ್ನು ನಾಶ ಪಡಿಸಿಯೇ ಪಡಿಸುತ್ತಾನೆ. |
| **ಜನಿಷ್ಯಮಾಣಾನ್** ಭ್ರಾತೃವ್ಯಾನ್ **ಪ್ರತಿ** ನುದತೇ | ಮುಂದೆ ಜನಿಸಲಿರುವ ಶತ್ರುಗಳನ್ನೂ ನಾಶಪಡಿಸುವನು. |

**ಮತ್ತೊಂದು ಕಾಮ್ಯಚಯನ**

| | |
|---|---|
| **ಭ್ರಾತೃವ್ಯವಾನ್** | ಶತ್ರುಗಳಿರುವ ಯಜಮಾನನು ರಥದ ಚಕ್ರದಂತೆ |
| **ರಥಚಕ್ರಚಿತಮ್ ಚಿನ್ವೀತ** | ವರ್ತುಲಾಕಾರವಾಗಿ ಚಯನವನ್ನು ಮಾಡಬೇಕು. |
| **ರಥಃ ವಜ್ರಃ ವೈ** | ರಥವು ವಜ್ರದಂತೆ ಶತ್ರುನಾಶಕವಾಗಿದೆ. |

ವಜ್ರಮೇವ ಭ್ರಾತೃವ್ಯೇಭ್ಯಃ ಪ್ರ ಹರತಿ ದ್ರೋಣಚಿತಞ್ಚಿನ್ವೀತಾನ್ನಕಾಮೋ

ದ್ರೋಣೇ ವಾ ಅನ್ನಂ ಭ್ರಿಯತೇ ಸಯೋನ್ಯೇವಾನ್ನಮವ ರುಂಧೇ

ಸಮೂಹ್ಯಞ್ಚಿನ್ವೀತ ಪಶುಕಾಮಃ ಪಶುಮಾನೇವ ಭವತಿ

---

ವಜ್ರಮ್ । ಏವ । ಭ್ರಾತೃವ್ಯೇಭ್ಯಃ । ಪ್ರೇತಿ । ಹರತಿ । ದ್ರೋಣಚಿತಮಿತಿ ದ್ರೋಣ-ಚಿತಮ್ । ಚಿನ್ವೀತ । ಅನ್ನಕಾಮ ಇತ್ಯನ್ನ-ಕಾಮಃ । ದ್ರೋಣೇ । ವೈ । ಅನ್ನಮ್ । ಭ್ರಿಯತೇ । ಸಯೋನೀತಿ ಸ-ಯೋನಿ । ಏವ । ಅನ್ನಮ್ । ಅವೇತಿ । ರುಂಧೇ । ಸಮೂಹ್ಯಮಿತಿ ಸಮ್-ಊಹ್ಯಮ್ । ಚಿನ್ವೀತ । ಪಶುಕಾಮ ಇತಿ ಪಶು-ಕಾಮಃ । ಪಶುಮಾನಿತಿ ಪಶು-ಮಾನ್ । ಏವ । ಭವತಿ । (೫೩) ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಭ್ರಾತೃವ್ಯೇಭ್ಯಃ ವಜ್ರಮ್ ಏವ ಪ್ರ ಹರತಿ | ಈ ಚಯನವನ್ನು ಮಾಡಿದ ಯಜಮಾನನು ಶತ್ರುಗಳ ಮೇಲೆ ವಜ್ರವನ್ನೇ ಪ್ರಹರಿಸಿದವನಾಗುತ್ತಾನೆ. |

ಇನ್ನೊಂದು ಕಾಮ್ಯಚಯನ

| | |
|---|---|
| ಅನ್ನಕಾಮಃ | ಅನ್ನವನ್ನು ಅಪೇಕ್ಷಿಸುವ ಯಜಮಾನನು |
| ದ್ರೋಣಚಿತಮ್ ಚಿನ್ವೀತ | ಕಣಜದ ಆಕಾರದಲ್ಲಿ ಚಯನವನ್ನು ಮಾಡಬೇಕು. |
| ದ್ರೋಣೇ ವೈ ಅನ್ನಮ್ ಭ್ರಿಯತೇ | ಕಣಜದಲ್ಲಿ ಧಾನ್ಯವು ಇಡಲ್ಪಡುತ್ತದೆಯಷ್ಟೆ. |
| ಸಯೋನಿ ಅನ್ನಮ್ ಏವ ಅವ ರುಂಧೇ | (ಕಣಜವು ಧಾನ್ಯವನ್ನು ಧರಿಸುತ್ತದೆ. ಧಾನ್ಯವು ಅನ್ನದ ಪ್ರಕೃತಿಯಾಗಿದೆ) ಕಣಜದ ಆಕಾರದ ಚಯನದಿಂದ ಯಜಮಾನನು ಧಾನ್ಯಸ್ಥಾನಸಹಿತವಾದ ಅನ್ನವನ್ನು ಹೊಂದುವನು. |

ಮತ್ತೊಂದು ಬಗೆಯ ಕಾಮ್ಯಚಯನ

| | |
|---|---|
| ಪಶುಕಾಮಃ ಸಮೂಹ್ಯಮ್ ಚಿನ್ವೀತ | ಪಶುಗಳನ್ನು ಬಯಸುವವನಾದ ಯಜಮಾನನು ಸಮೂಹಾಕಾರವಾಗಿ ಚಯನವನ್ನು ಮಾಡಬೇಕು. |
| ಪಶುಮಾನ್ ಏವ ಭವತಿ | ಹೀಗೆ ಚಯನವನ್ನು ಮಾಡಿದ ಯಜಮಾನನು ಪಶು ಸಮೂಹವನ್ನೇ ಪಡೆಯುವನು. |

[(೫೩)ಪರಿಚಾಯ್ಯಂ] ಪರಿಚಾಯ್ಯಞ್ಚಿನ್ವೀತ ಗ್ರಾಮಕಾಮೋ ಗ್ರಾಮ್ಯೇವ ಭವತಿ ಶ್ಮಶಾನಚಿತಞ್ಚಿನ್ವೀತ ಯಃ ಕಾಮಯೇತ ಪಿತೃಲೋಕ ಋಧ್ನುಯಾಮಿತಿ ಪಿತೃಲೋಕ ಏವರ್ಧ್ನೋತಿ ವಿಶ್ವಾಮಿತ್ರಜಮದಗ್ನೀ

---

ಪರಿಚಾಯ್ಯಮಿತಿ ಪರಿ–ಚಾಯ್ಯಮ್ । ಚಿನ್ವೀತ । ಗ್ರಾಮಕಾಮ ಇತಿ ಗ್ರಾಮ–ಕಾಮಃ । ಗ್ರಾಮೀ । ಏವ । ಭವತಿ । ಶ್ಮಶಾನಚಿತಮಿತಿ ಶ್ಮಶಾನ–ಚಿತಮ್ । ಚಿನ್ವೀತ । ಯಃ । ಕಾಮಯೇತ । ಪಿತೃಲೋಕ ಇತಿ ಪಿತೃ–ಲೋಕೇ । ಋಧ್ನುಯಾಮ್ । ಇತಿ । ಪಿತೃಲೋಕ ಇತಿ ಪಿತೃ–ಲೋಕೇ । ಏವ । ಋಧ್ನೋತಿ । ವಿಶ್ವಾಮಿತ್ರಜಮದಗ್ನೀ ಇತಿ ವಿಶ್ವಾಮಿತ್ರ–ಜಮದಗ್ನೀ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ಕಾಮ್ಯಚಯನ** |
| **ಗ್ರಾಮಕಾಮಃ ಪರಿಚಾಯ್ಯಮ್ ಚಿನ್ವೀತ** | ಗ್ರಾಮವನ್ನು ತನ್ನದಾಗಿ ಮಾಡಿಕೊಳ್ಳಲು ಬಯಸುವ ಯಜಮಾನನು ಮಧ್ಯಮ ಸ್ವಯಮಾತೃಣ್ಣೇಷ್ಟಕೆಯ ಸುತ್ತಲೂ ಪ್ರದಕ್ಷಿಣಾಕಾರವಾಗಿ ಪರಿಚಾಯ್ಯವೆನಿಸಿ ಕೊಳ್ಳುವ ಚಯನವನ್ನು ಮಾಡಬೇಕು. |
| **ಗ್ರಾಮೀ ಏವ ಭವತಿ** | ಈ ರೀತಿ ಚಯನವನ್ನು ಮಾಡುವ ಯಜಮಾನನು ನಿಶ್ಚಯವಾಗಿಯೂ ಗ್ರಾಮಾಧಿಪತಿಯೇ ಆಗುವನು. |
| **ಯಃ ಪಿತೃಲೋಕೇ ಋಧ್ನುಯಾಮ್ ಇತಿ ಕಾಮಯೇತ** | ಯಾವ ಯಜಮಾನನು ಪಿತೃಲೋಕದಲ್ಲಿ ವೃದ್ಧಿಯನ್ನು ಹೊಂದಲು ಬಯಸುವನೋ (ಆ ಯಜಮಾನನು) |
| **ಶ್ಮಶಾನಚಿತಮ್ ಚಿನ್ವೀತ** | ಶ್ಮಶಾನಚಿತವೆಂಬ ಅಗ್ನಿಯನ್ನು ಚಯನ ಮಾಡಬೇಕು. |
| **ಪಿತೃಲೋಕೇ ಋಧ್ನೋತಿ ಏವ** | (ಎರಡು ಬಗೆಯ ಶ್ಮಶಾನವಿರುತ್ತದೆ. ಅದು ಮಂಡಲಾಕಾರವಿರಬಹುದು ಅಥವಾ ಚೌಕಾಕಾರವಿರಬಹುದು) ಈ ರೀತಿಯ ಚಯನದಿಂದ ಯಜಮಾನನು ಪಿತೃಲೋಕದಲ್ಲಿ ವೃದ್ಧಿಯನ್ನು ಹೊಂದುವನು. |
| | **ವಿಹವ್ಯೇಷ್ಟಕೋಪಧಾನವಿಧಿ; ಉಪಾಖ್ಯಾನ** |
| **ವಿಶ್ವಾಮಿತ್ರಜಮದಗ್ನೀ** | ವಿಶ್ವಾಮಿತ್ರ ಮತ್ತು ಜಮದಗ್ನಿಮುನಿಗಳು |

ವಸಿಷ್ಠೇನಾಸ್ಪರ್ಧೇತಾಗ್ಂ ಸ ಏತಾ ಜಮದಗ್ನಿರ್ವಿಹವ್ಯಾ ಅಪಶ್ಯತ್ತಾ ಉಪಾಧತ್ತ ತಾಭಿರ್ವೈ ಸ ವಸಿಷ್ಠಸ್ಯೇಂದ್ರಿಯಂ ವೀರ್ಯಮವೃಙ್ಕ್ತ ಯದ್ವಿಹವ್ಯಾ ಉಪದಧಾತೀಂದ್ರಿಯಮೇವ ತಾಭಿರ್ವೀರ್ಯಂ ಯಜಮಾನೋ ಭ್ರಾತೃವ್ಯಸ್ಯ ವೃಙ್ಕ್ತೇ

---

ವಸಿಷ್ಠೇನ । ಅಸ್ಪರ್ಧೇತಾಮ್ । ಸಃ । ಏತಾಃ । ಜಮದಗ್ನಿಃ । ವಿಹವ್ಯಾ ಇತಿ ವಿ-ಹವ್ಯಾಃ । ಅಪಶ್ಯತ್ । ತಾಃ । ಉಪೇತಿ । ಅಧತ್ತ । ತಾಭಿಃ । ವೈ । ಸಃ । ವಸಿಷ್ಠಸ್ಯ । ಇಂದ್ರಿಯಮ್ । ವೀರ್ಯಮ್ । ಅವೃಙ್ಕ್ತ । ಯತ್ । ವಿಹವ್ಯಾ ಇತಿ ವಿ-ಹವ್ಯಾಃ । ಉಪದಧಾತೀತ್ಯುಪ-ದಧಾತಿ । ಇಂದ್ರಿಯಮ್ । ಏವ । ತಾಭಿಃ । ವೀರ್ಯಮ್ । ಯಜಮಾನಃ । ಭ್ರಾತೃವ್ಯಸ್ಯ । ವೃಙ್ಕ್ತೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ವಸಿಷ್ಠೇನ ಅಸ್ಪರ್ಧೇತಾಮ್** | ವಸಿಷ್ಠರ ಮೇಲೆ ಸ್ಪರ್ಧಿಸುತ್ತಿದ್ದರು. |
| **ಸಃ ಜಮದಗ್ನಿಃ ಏತಾಃ ವಿಹವ್ಯಾಃ ಅಪಶ್ಯತ್** | ಆಗ ಜಮದಗ್ನಿಯು ಸ್ಪರ್ಧೆಯಲ್ಲಿ ಗೆಲ್ಲಲು ಈ ವಿಹವ್ಯೇಷ್ಟಕೆಗಳನ್ನು ಉಪಾಯವನ್ನಾಗಿ ತಿಳಿದನು. |
| **ತಾಃ ಉಪಾಧತ್ತ** | ಆ ವಿಹವ್ಯೇಷ್ಟಕೆಗಳನ್ನು ಜಮದಗ್ನಿಯು ಉಪಧಾನ ಮಾಡಿದನು. |
| **ತಾಭಿಃ ಸಃ ವಸಿಷ್ಠಸ್ಯ ಇಂದ್ರಿಯಮ್ ವೀರ್ಯಮ್ ಅವೃಙ್ಕ್ತ ವೈ** | ಆ ಇಷ್ಟಕೆಗಳಿಂದ ಜಮದಗ್ನಿಯು ವಸಿಷ್ಠರ ಇಂದ್ರಿಯ ಶಕ್ತಿಯನ್ನೂ ಸಾಮರ್ಥ್ಯವನ್ನೂ ನಶಿಸುವಂತೆ ಮಾಡಿದನು. |
| **ಯತ್ ವಿಹವ್ಯಾಃ ಉಪದಧಾತಿ** | ಯಾವ ಯಜಮಾನನು ವಿಹವ್ಯೇಷ್ಟಕೆಗಳನ್ನು ಉಪಧಾನ ಮಾಡುವನೋ |
| **ತಾಭಿಃ ಯಜಮಾನಃ ಭ್ರಾತೃವ್ಯಸ್ಯ ಇಂದ್ರಿಯಮ್ ವೀರ್ಯಮ್ ಏವ ವೃಙ್ಕ್ತೇ** | ಆ ಇಷ್ಟಕೆಗಳಿಂದ ಯಜಮಾನನು ಹಗೆಯ ಇಂದ್ರಿಯ ಶಕ್ತಿಯನ್ನೂ ದೇಹಸಾಮರ್ಥ್ಯವನ್ನೂ ನಶಿಸುವಂತೆ ಮಾಡುತ್ತಾನೆ. |

ಹೋತುರ್ಧಿಷ್ಣಿಯ ಉಪ ದಧಾತಿ ಯಜಮಾನಾಯತನಂ ವೈ [(೫೪)]
ಹೋತಾ ಸ್ವ ಏವಾಸ್ಮಾ ಆಯತನ ಇಂದ್ರಿಯಂ ವೀರ್ಯಮವರುಂಧೇ
ದ್ವಾದಶೋಪ ದಧಾತಿ ದ್ವಾದಶಾಕ್ಷರಾ ಜಗತೀ ಜಾಗತಾಃ ಪಶವೋ

---

ಹೋತುಃ । ಧಿಷ್ಣಿಯೇ । ಉಪೇತಿ । ದಧಾತಿ । ಯಜಮಾನಾಯತನಮಿತಿ ಯಜಮಾನ–ಆಯತನಮ್ । ವೈ ।
(೫೪) । ಹೋತಾ । ಸ್ವೇ । ಏವ । ಅಸ್ಮೈ । ಆಯತನ ಇತ್ಯಾ–ಯತನೇ । ಇಂದ್ರಿಯಮ್ । ವೀರ್ಯಮ್ । ಅವೇತಿ ।
ರುಂಧೇ । ದ್ವಾದಶ । ಉಪೇತಿ । ದಧಾತಿ । ದ್ವಾದಶಾಕ್ಷರೇತಿ ದ್ವಾದಶ–ಅಕ್ಷರಾ । ಜಗತೀ । ಜಾಗತಾಃ । ಪಶವಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ವಿಹವ್ಯೇಷ್ಟಕೆಗಳ ವಿಶೇಷವಿಧಿ–ಅರ್ಥವಾದ** |
| **ಹೋತುಃ ಧಿಷ್ಣಿಯೇ ಉಪ ದಧಾತಿ** | ವಿಹವ್ಯೇಷ್ಟಕೆಗಳನ್ನು ಹೋತೃವಿನ ಸ್ಥಾನದಲ್ಲಿ ಅಧ್ವರ್ಯುವು ಉಪಧಾನ ಮಾಡಬೇಕು. |
| **ಹೋತಾ ಯಜಮಾನಾಯತನಮ್ ವೈ** | ಯಜಮಾನನಿಗೆ ಸಂಬಂಧಿಸಿದ ದೇವತಾಹ್ವಾನಾದಿಗಳನ್ನು ಹೋತೃವು ಮಾಡುವುದರಿಂದ ಹೋತೃವು ಯಜಮಾನಸ್ಥಾನನಾಗಿದ್ದಾನೆ. |
| **ಸ್ವೇ ಆಯತನೇ ಏವ ಅಸ್ಮೈ** | (ಅಧ್ವರ್ಯುವು) ಯಜಮಾನನಿಗಾಗಿ ಹೋತೃವಿನ ಧಿಷ್ಣಿಯ(ಸ್ಥಾನ)ದಲ್ಲಿ ವಿಹವ್ಯೇಷ್ಟಕೋಪಧಾನವನ್ನು ಮಾಡುವುದರಿಂದ ಯಜಮಾನನಿಗೆ ತನ್ನದಾದ ಸ್ಥಾನದಲ್ಲಿಯೇ |
| **ಇಂದ್ರಿಯಮ್ ವೀರ್ಯಮ್ ಅವರುಂಧೇ** | ಇಂದ್ರಿಯಶಕ್ತಿಯನ್ನೂ, ಬಲವನ್ನೂ ಸಂಪಾದಿಸಿ ಕೊಟ್ಟವನಾಗುತ್ತಾನೆ. |
| | **ವಿಹವ್ಯೇಷ್ಟಕೆಗಳ ಸಂಖ್ಯಾವಿಶೇಷವಿಧಿ; ಅರ್ಥವಾದ** |
| **ದ್ವಾದಶ ಉಪ ದಧಾತಿ** | ಅಧ್ವರ್ಯುವು ಹನ್ನೆರಡು ವಿಹವ್ಯೇಷ್ಟಕೆಗಳನ್ನು ಉಪಧಾನ ಮಾಡಬೇಕು. |
| **ಜಗತೀ ದ್ವಾದಶಾಕ್ಷರಾ** | ಜಗತೀ ಛಂದಸ್ಸು ಹನ್ನೆರಡು ಅಕ್ಷರಗಳಿಂದ ಕೂಡಿದೆ. |
| **ಜಾಗತಾಃ ಪಶವಃ** | ಪಶುಗಳೂ ಜಗತೀಛಂದೋದೇವತಾಕವಾದವುಗಳು. |

ಜಗತ್ಯೈವಾಸ್ಮೈ ಪಶೂನವ ರುಂಧೇಽಷ್ಟಾವಷ್ಟಾವನ್ಯೇಷು ಧಿಷ್ಣಿಯೇಷೂಪ ದಧಾತ್ಯಷ್ಟಾಶಫಾಃ ಪಶವಃ ಪಶೂನೇವಾವ ರುಂಧೇ ಷಣ್ಮಾರ್ಜಾಲೀಯೇ

---

ಜಗತ್ಯಾ । ಏವ । ಅಸ್ಮೈ । ಪಶೂನ್ । ಅವೇತಿ । ರುಂಧೇ । ಅಷ್ಟಾವಷ್ಟಾವಿತ್ಯಷ್ಟೌ-ಅಷ್ಟೌ । ಅನ್ಯೇಷು । ಧಿಷ್ಣಿಯೇಷು । ಉಪೇತಿ । ದಧಾತಿ । ಅಷ್ಟಾಶಫಾ ಇತ್ಯಷ್ಟಾ-ಶಫಾಃ । ಪಶವಃ । ಪಶೂನ್ । ಏವ । ಅವೇತಿ । ರುಂಧೇ । ಷಟ್ । ಮಾರ್ಜಾಲೀಯೇ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಜಗತ್ಯಾ ಏವ ಅಸ್ಮೈ ಪಶೂನ್ ಅವರುಂಧೇ** | ಜಗತೀಛಂದೋದೇವತೆಗಳ ಅನುಗ್ರಹದಿಂದ ಯಜಮಾನನಿಗೆ ಪಶುಗಳನ್ನು ಸಂಪಾದಿಸಿಕೊಟ್ಟವನಾಗುತ್ತಾನೆ. |
| **ಅನ್ಯೇಷು ಧಿಷ್ಣಿಯೇಷು ಅಷ್ಟೌ ಅಷ್ಟೌ ಉಪದಧಾತಿ** | ಉಳಿದ ಪ್ರಶಾಸ್ತೃ, ಪೋತೃ, ಬ್ರಾಹ್ಮಣಾಚ್ಛಂಸೀ, ನೇತೃ, ಅಚ್ಛಾವಾಕ ಮುಂತಾದವರ ಸ್ಥಾನಗಳಲ್ಲಿ ಎಂಟು ಎಂಟು ವಿಹವ್ಯೇಷ್ಟಕೆಗಳನ್ನು ಉಪಧಾನ ಮಾಡಬೇಕು. |
| **ಪಶವಃ ಅಷ್ಟಾಶಫಾಃ** | ಪಶುಗಳು ಎಂಟು ಗೊರಸುಗಳನ್ನು ಹೊಂದಿರುವುವು. |
| **ಪಶೂನ್ ಅವರುಂಧೇ ಏವ** | ಆದುದರಿಂದ ಈ ಎಂಟು ಇಷ್ಟಕೆಗಳ ಉಪಧಾನದಿಂದ ಯಜಮಾನನು ಪಶುಗಳನ್ನು ಪಡೆದೇ ಪಡೆಯುತ್ತಾನೆ. |
| **ಮಾರ್ಜಾಲೀಯೇ ಷಟ್** ಉಪದಧಾತಿ | ಮಾರ್ಜಾಲೀಯಧಿಷ್ಣಿಯ(ಸ್ಥಾನ)ದಲ್ಲಿ ಆರು ವಿಹವ್ಯೇಷ್ಟಕೆಗಳನ್ನು ಉಪಧಾನ ಮಾಡಬೇಕು. |

---

**ತಾತ್ಪರ್ಯ:**–ವಿಹವ್ಯೇಷ್ಟಕೆಗಳ ಸಂಖ್ಯಾವಿಧಿಯಲ್ಲಿ ಹನ್ನೆರಡು ಇಷ್ಟಕೆಗಳನ್ನು ಉಪಧಾನ ಮಾಡಬೇಕೆಂಬ ವಿಧಿಯು ಇದೆ.

**'ಮಮಾಗ್ನೇ ವರ್ಚಃ...'** [ತೈ. ಸಂ. 4.7.13] ಎಂಬ ಅನುವಾಕದಲ್ಲಿ ಮಂತ್ರಗಳು ಪಠಿತವಾಗಿವೆ. ಆ ಅನುವಾಕದಲ್ಲಿ ಹತ್ತು ಮಂತ್ರಗಳು ಮಾತ್ರ ಪಠಿತವಾಗಿವೆ. ಹನ್ನೆರಡು ಮಂತ್ರಗಳಿಂದ ಉಪಧಾನ ಮಾಡಬೇಕೆಂಬ ವಿಧಿಯು ಇರುವುದರಿಂದ ಈ ರೀತಿಯ ಸಂದರ್ಭದಲ್ಲಿ ಕರ್ಮಾನುಷ್ಠಾನವು ಹೇಗೆಂದು ಸೂತ್ರಕಾರರು ತಿಳಿಸಿರುತ್ತಾರೆ.

**'ಅಲ್ಪೀಯಾಂಸೋ ಮಂತ್ರಾ ಭೂಯಾಂಸಿ ಕರ್ಮಾಣಿ ತತ್ರ ಸಮಶಃ ಪ್ರತಿವಿಭಜ್ಯ ಪೂರ್ವೈಃ ಕರ್ಮಾಣಿ ಕಾರಯೇತ್ ಉತ್ತರೈರುತ್ತರಾಣಿ, ಅಲ್ಪೀಯಾಂಸಿ ಕರ್ಮಾಣಿ ಭೂಯಾಂಸೋ ಮಂತ್ರಾಸ್ತತ್ರ ಪ್ರತಿಮಂತ್ರಂ ಕುರ್ಯಾತ್, ಅವಶಿಷ್ಟಾ ವಿಕಲ್ಪಾರ್ಥಾ ಯಥಾ ಯೂಪದ್ರವ್ಯಾಣೀತಿ।'**

ಷಡ್ವಾ ಋತವ ಋತವಃ ಖಲು ವೈ ದೇವಾಃ ಪಿತರ ಋತೂನೇವ

ದೇವಾನ್ಪಿತೄನ್ಪ್ರೀಣಾತಿ ॥ ೫೫–11 ॥

[ಪ್ರ ಭವತಿ ಯಜಮಾನಾಯತನಂ ವಾ ಅಷ್ಟಾಚತ್ವಾರಿಗ್ಂಶಚ್ಚ ॥]

---

ಷಟ್ । ವೈ । ಋತವಃ । ಋತವಃ । ಖಲು । ವೈ । ದೇವಾಃ । ಪಿತರಃ । ಋತೂನ್ । ಏವ । ದೇವಾನ್ । ಪಿತೄನ್ ।

ಪ್ರೀಣಾತಿ ॥ ೫೫ ॥

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಋತವಃ ಷಟ್ ವೈ** | ಋತುಗಳು ಆರಷ್ಟೆ. |
| **ಋತವಃ ಖಲು ವೈ ದೇವಾಃ ಪಿತರಃ** | ಋತುಗಳು ದೇವತಾಸ್ವರೂಪರೂ, ಪಿತೃಸ್ವರೂಪರೂ ಆಗಿವೆಯಷ್ಟೆ. |
| **ಋತೂನ್ ದೇವಾನ್ ಪಿತೄನ್ ಪ್ರೀಣಾತಿ ಏವ** | (ಈ ಮಾರ್ಜಾಲೀಯೋಪಧಾನದಿಂದ) ಯಜಮಾನನು ದೇವತಾಸ್ವರೂಪರೂ, ಪಿತೃಸ್ವರೂಪರೂ ಆಗಿರುವ ಋತುದೇವತೆಗಳನ್ನು ತೃಪ್ತಿಪಡಿಸಿದವನಾ ಗುತ್ತಾನೆ. |

---

**'ಅಂತಾಲ್ಲೋಪೋ ವೃದ್ಧಿರ್ವಾ।'**

ಶ್ರುತಿಯಲ್ಲಿ ಪಠಿತವಾದ ಮಂತ್ರಗಳು ಕಡಿಮೆಯಾಗಿದ್ದು, ಅವುಗಳಿಂದ ಅನುಷ್ಠಿಸಬೇಕಾದ ಕರ್ಮಗಳ ಸಂಖ್ಯೆಯು ಅಧಿಕವಾಗಿದ್ದರೆ, ಆಗ ಪಠಿತವಾಗಿರುವ ಮಂತ್ರಗಳನ್ನು ಸಮಸಂಖ್ಯೆಯಾಗಿರುವಂತೆ ವಿಭಜಿಸಿ, ಪೂರ್ವದ ಅರ್ಧದ ಮಂತ್ರಗಳನ್ನು ಪಠಿಸಿ ಕರ್ಮಾನುಷ್ಠಾನವನ್ನು ಮಾಡಬೇಕು. ಉತ್ತರಾರ್ಧದ ಮಂತ್ರಗಳಿಂದಲೂ ಅನುಷ್ಠಾನವನ್ನು ಮಾಡಬೇಕು. ಕಡಿಮೆಯಾದ ಮಂತ್ರಗಳನ್ನು ಆವೃತ್ತಿಯನ್ನು ಮಾಡಿಕೊಂಡು ತುಂಬಿಕೊಳ್ಳಬೇಕು. ಈ ಆವೃತ್ತಿಯೂ ಸಹ ಈ ರೀತಿ ಪೂರ್ವಾರ್ಧದ ಅಂತ್ಯದ ಮಂತ್ರವನ್ನೂ ಉತ್ತರಾರ್ಧದ ಅಂತಿಮ ಮಂತ್ರವನ್ನೂ ಆವೃತ್ತಿ ಮಾಡುವಂತಿರಬೇಕು.

ಶ್ರುತಿಯಲ್ಲಿ ಪಠಿತವಾದ ಮಂತ್ರಗಳು ಹೆಚ್ಚಾಗಿದ್ದು, ಅವುಗಳಿಂದ ಅನುಷ್ಠಿತವಾಗಬೇಕಾದ ಕರ್ಮಗಳ ಸಂಖ್ಯೆಯು ಕಡಿಮೆ ಇದ್ದರೆ, ಎಷ್ಟು ಕರ್ಮಗಳೋ ಅಷ್ಟು ಮಂತ್ರಗಳನ್ನು ಪ್ರಾರಂಭದಿಂದ ಪಠಿಸಿ ಅನುಷ್ಠಿಸಬೇಕು. ಉಳಿಯುವ ಮಂತ್ರಗಳು ಈ ಕರ್ಮದಲ್ಲಿಯೇ ವಿಕಲ್ಪವಾಗಿ ವಿನಿಯೋಗಿಸಲ್ಪಡಬೇಕು.

ಈ ವೃದ್ಧಿ–ಲೋಪಗಳು ಅಂತ್ಯದಲ್ಲಿ ಪಠಿತವಾದುದರಲ್ಲಿಯೇ ಹೊರತು ಪ್ರಾರಂಭದಲ್ಲಿ ಪಠಿತವಾದ ಮಂತ್ರಗಳಿಗಲ್ಲ. ಈ ವಿಹವ್ಯೇಷ್ಟಕೋಪಧಾನದಲ್ಲಿ ಐದನೆಯ ಹಾಗೂ ಹತ್ತನೆಯ ಮಂತ್ರಗಳ ಆವೃತ್ತಿಯನ್ನು ಮಾಡಬೇಕು. ಮಾರ್ಜಾಲೀಯೋಪಧಾನದಲ್ಲಿ ಏಳನೆಯ ಮಂತ್ರದಿಂದ ಲೋಪ.

## ॥ ದ್ವಾದಶೋಽನುವಾಕಃ ॥

ಪವಸ್ವ ವಾಜಸಾತಯ ಇತ್ಯನುಷ್ಟುಕ್ಪ್ರತಿಪದ್ಭವತಿ ತಿಸ್ರೋಽನುಷ್ಟುಭಶ್ಚತಸ್ರೋ ಗಾಯತ್ರಿಯೋ

---

ಪವಸ್ವ । ವಾಜಸಾತಯ ಇತಿ ವಾಜ–ಸಾತಯೇ । ಇತಿ । ಅನುಷ್ಟುಗಿತ್ಯನು–ಸ್ತುಕ್ । ಪ್ರತಿಪದಿತಿ ಪ್ರತಿ–ಪತ್ । ಭವತಿ । ತಿಸ್ರಃ । ಅನುಷ್ಟುಭ ಇತ್ಯನು–ಸ್ತುಭಃ । ಚತಸ್ರಃ । ಗಾಯತ್ರಿಯಃ ।

---

ಈ ಹನ್ನೆರಡನೆಯ ಅನುವಾಕದಲ್ಲಿ ಅಶ್ವಮೇಧಯಾಗಕ್ಕೆ ಸಂಬಂಧಿಸಿದ ಋಕ್, ಸ್ತೋಮ, ಸಾಮಗಳು ಹೇಳಲ್ಪಟ್ಟಿವೆ.

---

| ಬ್ರಾಹ್ಮಣಭಾಗ | ವಿವರಣೆ |
|---|---|
| | **ಬಹಿಷ್ಪವಮಾನಸ್ತೋತ್ರದಲ್ಲಿ ಋಕ್ಕಿನ ವಿಧಿ** |
| **ಪವಸ್ವ ವಾಜಸಾತಯೇ ಇತಿ ಅನುಷ್ಟುಕ್ ಪ್ರತಿಪತ್ ಭವತಿ** | ಬಹಿಷ್ಪವಮಾನಸ್ತೋತ್ರದಲ್ಲಿ '**ಪವಸ್ವ ವಾಜ ಸಾತಯೇ**' ಎಂಬ ಅನುಷ್ಟುಪ್ ಛಂದಸ್ಸಿನ ಋಕ್ ಮೊದಲನೆಯ ಋಕ್ಕಾಗುತ್ತದೆ. |
| **ತಿಸ್ರಃ ಅನುಷ್ಟುಭಃ** | ತೃಚೆಯಲ್ಲಿ ಮೂರು ಅನುಷ್ಟುಪ್* ಛಂದಸ್ಸಿನ ಮಂತ್ರಗಳಿವೆ. |
| **ಚತಸ್ರಃ ಗಾಯತ್ರಿಯಃ** | (ಅವುಗಳನ್ನು ಮೂರು ಮೂರು ಪಾದದ ಗಾಯತ್ರೀ ಛಂದಸ್ಸಿನಂತೆ ವಿಭಜಿಸಿದರೆ) ನಾಲ್ಕು ಗಾಯತ್ರೀ ಛಂದಸ್ಸುಗಳಾಗುತ್ತವೆ. |

---

* ಅನುಷ್ಟುಪ್ ಛಂದಸ್ಸು 8 ಅಕ್ಷರಗಳುಳ್ಳ 4 ಪಾದಗಳನ್ನು ಹೊಂದಿದೆ. ಹೀಗಾಗಿ ಒಂದು ಅನುಷ್ಟುಪ್ ಛಂದಸ್ಸಿನ ಮಂತ್ರದಲ್ಲಿ (8x4)=32 ಅಕ್ಷರಗಳು ಇರುತ್ತವೆ. ಇಂತಹ ಅನುಷ್ಟುಪ್ ಛಂದಸ್ಸಿನ 3 ಮಂತ್ರಗಳೆಂದರೆ (32x3) 96 ಅಕ್ಷರಗಳಾಗುತ್ತವೆ. ಈ 96 ಅಕ್ಷರಗಳನ್ನು ಗಾಯತ್ರೀಛಂದಸ್ಸಿಗೆ ಅನುಗುಣವಾಗಿ ವಿಭಜಿಸಿದರೆ ಗಾಯತ್ರೀಛಂದಸ್ಸಿನಲ್ಲಿ 8 ಅಕ್ಷರಗಳ ಮೂರು ಪಾದಗಳಿರುವುದರಿಂದ (8x3=24) ಅವು 24 ಅಕ್ಷರಗಳಿರುತ್ತವೆ. ಇಂತಹ ಗಾಯತ್ರೀಛಂದಸ್ಸಿನ ಮಂತ್ರಗಳು 4 ಅಂದರೆ (24x4) 96 ಅಕ್ಷರಗಳಾಗುತ್ತವೆ. 3 ಅನುಷ್ಟುಪ್‌ಗಳನ್ನು ವಿಭಜಿಸಿ ನಾಲ್ಕು ಗಾಯತ್ರಿಗಳನ್ನು ಮಾಡಿದಂತಾಯಿತು. ಇದನ್ನೇ ಶ್ರುತಿಯು ಹೇಳುತ್ತಿದೆ.

ಯತ್ತಿಸ್ರೋಽನುಷ್ಟುಭಸ್ತಸ್ಮಾದಶ್ವಸ್ತ್ರಿಭಿಸ್ತಿಷ್ಠಗ್ಂಸ್ತಿಷ್ಠತಿ ಯಚ್ಚತಸ್ರೋ ಗಾಯತ್ರಿಯಸ್ತಸ್ಮಾಥ್ಸರ್ವಾಗ್ಂಶ್ಚತುರಃ ಪದಃ ಪ್ರತಿದಧತ್ಪಲಾಯತೇ ಪರಮಾ ವಾ ಏಷಾ ಛಂದಸಾಂ ಯದನುಷ್ಟುಕ್ಪರಮಶ್ಚತುಷ್ಟೋಮಸ್ಸ್ತೋಮಾನಾಂ

---

ಯತ್ । ತಿಸ್ರಃ । ಅನುಷ್ಟುಭ ಇತ್ಯನು-ಸ್ತುಭಃ । ತಸ್ಮಾತ್ । ಅಶ್ವಃ । ತ್ರಿಭಿರಿತಿ ತ್ರಿ-ಭಿಃ । ತಿಷ್ಠನ್ । ತಿಷ್ಠತಿ । ಯತ್ । ಚತಸ್ರಃ । ಗಾಯತ್ರಿಯಃ । ತಸ್ಮಾತ್ । ಸರ್ವಾನ್ । ಚತುರಃ । ಪದಃ । ಪ್ರತಿದಧದಿತಿ ಪ್ರತಿ-ದಧತ್ । ಪಲಾಯತೇ । ಪರಮಾ । ವೈ । ಏಷಾ । ಛಂದಸಾಮ್ । ಯತ್ । ಅನುಷ್ಟುಗಿತ್ಯನು-ಸ್ತುಕ್ । ಪರಮಃ । ಚತುಷ್ಟೋಮ ಇತಿ ಚತುಃ-ಸ್ತೋಮಃ । ಸ್ತೋಮಾನಾಮ್ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯತ್ ಅನುಷ್ಟುಭಃ ತಿಸ್ರಃ** | ಆ ಗಾಯತ್ರೀಛಂದಸ್ಸಿನ ನಾಲ್ಕು ಮಂತ್ರಗಳು (ವಿಭಾಗ ವಿಲ್ಲದಾಗ) ಸ್ವರೂಪದಿಂದ ಮೂರು ಅನುಷ್ಟುಪ್‌ಗಳಾಗಿರುವುದರಿಂದ |
| **ತಸ್ಮಾತ್ ತಿಷ್ಠನ್ ಅಶ್ವಃ ತ್ರಿಭಿಃ ತಿಷ್ಠತಿ** | (ಅನುಷ್ಟುಪ್‌ಗಳು ಮೂರು ಆಗಿರುವುದರಿಂದ) (ನಿಲ್ಲ ಬೇಕಾದ ಕಡೆಯಲ್ಲಿ) ನಿಂತುಕೊಳ್ಳುವ ಅಶ್ವವು (ಒಂದು ಕಾಲಿನ ಮೇಲೆ ಭಾರವನ್ನು ಬಿಡದೆ) ಮೂರು ಕಾಲುಗಳಿಂದ ನಿಲ್ಲುತ್ತದೆ. |
| **ಯತ್ ಗಾಯತ್ರಿಯಃ ಚತಸ್ರಃ** | (ವಿಭಾಗ ಮಾಡಿದಾಗ) ನಾಲ್ಕು ಗಾಯತ್ರೀಛಂದಸ್ಸಿನ ಮಂತ್ರಗಳಾಗುವುದೆಂಬುದು ಯಾವುದೋ |
| **ತಸ್ಮಾತ್ ಸರ್ವಾನ್ ಚತುರಃ ಪದಃ** | ಆದರಿಂದ ಎಲ್ಲ ನಾಲ್ಕು ಕಾಲುಗಳನ್ನೂ |
| **ಪ್ರತಿದಧತ್ ಪಲಾಯತೇ** | ಭೂಮಿಯ ಮೇಲೆ ಇಡುತ್ತಾ ಓಡುತ್ತದೆ. |

ಛಂದಸ್ಸು ಮೊದಲಾದವುಗಳ ಪ್ರಶಂಸೆ

| | |
|---|---|
| **ಯತ್ ಅನುಷ್ಟುಕ್** | ಅನುಷ್ಟುಪ್ ಎಂಬುದು ಯಾವುದೋ |
| **ಏಷಾ ಛಂದಸಾಮ್ ಪರಮಾ ವೈ** | ಇದು ಛಂದಸ್ಸುಗಳಲ್ಲಿ ಶ್ರೇಷ್ಠವಾದುದ್ದಾಗಿದೆ. |
| **ಸ್ತೋಮಾನಾಮ್** | ತ್ರಿವೃತ್ ಮುಂತಾದ ಸ್ತೋಮಗಳಲ್ಲಿ |
| **ಚತುಷ್ಟೋಮಃ ಪರಮಃ** | ತ್ರಿವೃತ್, ಪಂಚದಶ, ಸಪ್ತದಶ, ಏಕವಿಂಶ ಎಂಬ ಚತುಷ್ಟೋಮವು ಶ್ರೇಷ್ಠವಾದುದ್ದಾಗಿದೆ. |

ಪರಮಸ್ತ್ರಿರಾತ್ರೋ ಯಜ್ಞಾನಾಂ ಪರಮೋಽಶ್ವಃ ಪಶೂನಾಂ ಪರಮೇಣೈವೈನಂ ಪರಮತಾಂ ಗಮಯತ್ಯೇಕವಿಗ್ಂಶಮಹರ್ಭವತಿ [ಭವತಿ(೫೬)] ಯಸ್ಮಿನ್ನಶ್ವ ಆಲಭ್ಯತೇ

ಪರಮಃ । ತ್ರಿರಾತ್ರ ಇತಿ ತ್ರಿ-ರಾತ್ರಃ । ಯಜ್ಞಾನಾಮ್ । ಪರಮಃ । ಅಶ್ವಃ । ಪಶೂನಾಮ್ । ಪರಮೇಣ । ಏವ । ಏನಮ್ । ಪರಮತಾಮ್ । ಗಮಯತಿ । ಏಕವಿಗ್ಂಶಮಿತ್ಯೇಕ-ವಿಗ್ಂಶಮ್ । ಅಹಃ । ಭವತಿ । (೫೬) । ಯಸ್ಮಿನ್ನ್ । ಅಶ್ವಃ । ಆಲಭ್ಯತ ಇತ್ಯಾ-ಲಭ್ಯತೇ ।

| ಬ್ರಾಹ್ಮಣಭಾಗ | ವಿವರಣೆ |
|---|---|
| **ಯಜ್ಞಾನಾಮ್ ತ್ರಿರಾತ್ರಃ ಪರಮಃ** | ತ್ರಿರಾತ್ರರೂಪವಾದ ಅಶ್ವಮೇಧವು ಮಹಾಪ್ರಾಯಶ್ಚಿತ್ತರೂಪವಾಗಿ ಯಜ್ಞಗಳಲ್ಲಿ ಶ್ರೇಷ್ಠವಾದುದಾಗಿದೆ. |
| **ಪಶೂನಾಮ್ ಅಶ್ವಃ ಪರಮಃ** | ಪಶುಗಳಲ್ಲಿ ಅಶ್ವವು ಶ್ರೇಷ್ಠವಾದುದಾಗಿದೆ. |
| **ಪರಮೇಣ ಏವ ಏನಮ್ ಪರಮತಾಮ್ ಗಮಯತಿ** | (ಹೀಗೆ ಬಹಿಷ್ಪವಮಾನಸ್ತೋತ್ರದ ಪ್ರಥಮ ಅನುಷ್ಟುಪ್ ಛಂದಸ್ಸಿನ ಋಕ್) ಶ್ರೇಷ್ಠವಾದ ವಸ್ತುಗಳ ಸಮೂಹದಿಂದ ಕೂಡಿದ್ದಾಗಿ ಅಶ್ವಮೇಧಯಾಗವನ್ನು/ಯಜಮಾನನಿಗೆ ಶ್ರೇಷ್ಠವನ್ನಾಗಿ ಮಾಡುತ್ತದೆ/ಯಜಮಾನನನ್ನು ಶ್ರೇಷ್ಠನನ್ನಾಗಿ ಮಾಡಿ ಉತ್ತಮಗತಿಯನ್ನುಂಟು ಮಾಡುತ್ತದೆ. |

ಏಕವಿಂಶಸ್ತೋಮವಿಧಿ; ಅರ್ಥವಾದ

| | |
|---|---|
| **ಯಸ್ಮಿನ್ ಅಶ್ವಃ ಆಲಭ್ಯತೇ ಅಹಃ ಏಕವಿಗ್ಂಶಮ್ ಭವತಿ** | ಯಾವ ದಿನದಲ್ಲಿ ಅಶ್ವಾಲಂಭನವಾಗುತ್ತದೆಯೋ ಆ ದಿನವು ಏಕವಿಂಶಸ್ತೋಮಾತ್ಮಕವಾಗಿರುತ್ತದೆ. |

**ತಾತ್ಪರ್ಯ:**-ಅಶ್ವಮೇಧಯಾಗವು ಮೂರು ದಿನಗಳಲ್ಲಿ ಅನುಷ್ಠಾನ ಮಾಡುವಂತಹದು. ಈ ದಿನಗಳಲ್ಲಿ 'ಉಕ್ಥ್ಯ' ಎಂಬ ಹೆಸರಿನ ಎರಡನೆಯ ದಿನದಲ್ಲಿ ಅಶ್ವಾಲಂಭನವನ್ನು ಅನುಷ್ಠಿಸಬೇಕು. ಈ ಅಹಸ್ಸಿನಲ್ಲಿ ಏಕವಿಂಶಸ್ತೋಮದ ಅನುಷ್ಠಾನವು ಇರಬೇಕು.

ದ್ವಾದಶ ಮಾಸಾಃ ಪಂಚರ್ತವಸ್ತ್ರಯ ಇಮೇ ಲೋಕಾ ಅಸಾವಾದಿತ್ಯ ಏಕವಿಗ್ಂಶ ಏಷ ಪ್ರಜಾಪತಿಃ ಪ್ರಾಜಾಪತ್ಯೋಽಶ್ವಸ್ತಮೇವ ಸಾಕ್ಷಾದೃಧ್ನೋತಿ ಶಕ್ವರಯಃ ಪೃಷ್ಠಂ ಭವಂತ್ಯನ್ಯದನ್ಯಚ್ಛಂದೋ–

---

ದ್ವಾದಶ । ಮಾಸಾಃ । ಪಂಚ । ಋತವಃ । ತ್ರಯಃ । ಇಮೇ । ಲೋಕಾಃ । ಅಸೌ । ಆದಿತ್ಯಃ । ಏಕವಿಗ್ಂಶ ಇತ್ಯೇಕ–ವಿಗ್ಂಶಃ । ಏಷಃ । ಪ್ರಜಾಪತಿರಿತಿ ಪ್ರಜಾ–ಪತಿಃ । ಪ್ರಾಜಾಪತ್ಯ ಇತಿ ಪ್ರಾಜಾ–ಪತ್ಯಃ । ಅಶ್ವಃ । ತಮ್ । ಏವ । ಸಾಕ್ಷಾದಿತಿ ಸ–ಅಕ್ಷಾತ್ । ಋಧ್ನೋತಿ । ಶಕ್ವರಯಃ । ಪೃಷ್ಠಮ್ । ಭವಂತಿ । ಅನ್ಯದನ್ಯದಿತ್ಯನ್ಯತ್–ಅನ್ಯತ್ । ಛಂದಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ದ್ವಾದಶ ಮಾಸಾಃ ಪಂಚ ಋತವಃ ಇಮೇ ಲೋಕಾಃ ತ್ರಯಃ ಅಸೌ ಆದಿತ್ಯಃ ಏಕವಿಗ್ಂಶಃ | ಹನ್ನೆರಡು ಮಾಸಗಳು, ಐದು ಋತುಗಳು, (ಹೇಮಂತ–ಶಿಶಿರಗಳು ಒಂದೆಂದು ಪರಿಗಣನೆ) ಮೂರು ಲೋಕಗಳು, (12+5+3=20) ಈ ಸೂರ್ಯ ದೇವನು ಇಪ್ಪತ್ತೊಂದನೆಯವನು. ಅವನು ಏಕವಿಂಶ ಸ್ತೋಮಾತ್ಮಕನು. |
| ಏಷಃ ಪ್ರಜಾಪತಿಃ | ಈ ಏಕವಿಂಶವು ಪ್ರಜಾಪತಿರೂಪವಾಗಿದೆ. |
| ಅಶ್ವಃ ಪ್ರಾಜಾಪತ್ಯಃ | *ಈ ಅಶ್ವವೂ ಪ್ರಜಾಪತಿಜನ್ಯವಾಗಿದೆ. |
| ತಮ್ ಸಾಕ್ಷಾತ್ ಏವ ಋಧ್ನೋತಿ | ಈ ಕಾರಣದಿಂದ ಈ ಏಕವಿಂಶಸ್ತೋಮವು ಆ ಅಶ್ವವನ್ನು ಸಾಕ್ಷಾತ್ತಾಗಿಯೇ ಸಮೃದ್ಧವನ್ನಾಗಿ ಮಾಡುತ್ತದೆ. |

**ಪೃಷ್ಠಸ್ತೋತ್ರದಲ್ಲಿ ಶಕ್ವರೀಛಂದಸ್ಸಿನ ವಿಧಾನ–ಪ್ರಶಂಸೆ**

| | |
|---|---|
| ಶಕ್ವರಯಃ ಪೃಷ್ಠಮ್ ಭವಂತಿ | ಶಕ್ವರೀಛಂದಸ್ಸಿನಿಂದ ಕೂಡಿದ ಋಕ್ಕುಗಳಿಂದ ಪೃಷ್ಠ ಸ್ತೋತ್ರವು ಯುಕ್ತವಾಗಿರಬೇಕು. |
| ಅನ್ಯದನ್ಯತ್ ಛಂದಃ | (ಈ ಸಪ್ತಪದಾತ್ಮಕವಾದ ಶಕ್ವರೀಛಂದಸ್ಸಿನಲ್ಲಿ ಗಾಯತ್ರಿಯೇ ಮೊದಲಾದ) ಬೇರೆ ಬೇರೆಯ ಛಂದಸ್ಸುಗಳು ಸೇರಿವೆ. |

---

* [ತೈ. ಸಂ. 5.3.12]

–ऽನ್ಯೇऽನ್ಯೇ ವಾ ಏತೇ ಪಶವ ಆ ಲಭ್ಯಂತ ಉತೇವ ಗ್ರಾಮ್ಯಾ ಉತೇವಾऽऽರಣ್ಯಾ ಯಚ್ಛಕ್ವರಯಃ ಪೃಷ್ಠಂ ಭವಂತ್ಯಶ್ವಸ್ಯ ಸರ್ವತ್ವಾಯ ಪಾರ್ಥುರಶ್ಮಂ ಬ್ರಹ್ಮಸಾಮಂ ಭವತಿ ರಶ್ಮಿನಾ ವಾ ಅಶ್ವೋ[ಅಶ್ವಃ(೫೭)] ಯತ

---

ಅನ್ಯೇऽನ್ಯ ಇತ್ಯನ್ಯೇ–ಅನ್ಯೇ । ವೈ । ಏತೇ । ಪಶವಃ । ಏತಿ । ಲಭ್ಯಂತೇ । ಉತ । ಇವ । ಗ್ರಾಮ್ಯಾಃ । ಉತ । ಇವ । ಆರಣ್ಯಾಃ । ಯತ್ । ಶಕ್ವರಯಃ । ಪೃಷ್ಠಮ್ । ಭವಂತಿ । ಅಶ್ವಸ್ಯ । ಸರ್ವತ್ವಾಯೇತಿ ಸರ್ವ–ತ್ವಾಯ । ಪಾರ್ಥುರಶ್ಮಮಿತಿ ಪಾರ್ಥು–ರಶ್ಮಮ್ । ಬ್ರಹ್ಮಸಾಮಮಿತಿ ಬ್ರಹ್ಮ–ಸಾಮಮ್ । ಭವತಿ । ರಶ್ಮಿನಾ । ವೈ । ಅಶ್ವಃ । (೫೭) । ಯತಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| ಏತೇ ಅನ್ಯೇ ಅನ್ಯೇ ಪಶವಃ | (ಈ ಅಶ್ವಮೇಧದಲ್ಲಿ) ಬೇರೆ ಬೇರೆ ರೀತಿಯ |
| ಆಲಭ್ಯಂತೇ ವೈ | ಪಶುಗಳು ಆಲಂಭನ ಮಾಡಲ್ಪಡುತ್ತವೆಯಷ್ಟೆ. |
| ಉತ ಇವ ಗ್ರಾಮ್ಯಾಃ | ಅವು ಗ್ರಾಮ್ಯಪಶುಗಳೂ, |
| ಉತ ಇವ ಆರಣ್ಯಾಃ | ಆರಣ್ಯಪಶುಗಳೂ (ಆಗಿವೆ). |
| ಯತ್ ಶಕ್ವರಯಃ ಪೃಷ್ಠಮ್ ಭವಂತಿ | ಶಕ್ವರೀಛಂದಸ್ಸಿನ (ಮಂತ್ರಗಳಿಂದ) ಪೃಷ್ಠಸ್ತೋತ್ರಗಳಾಗುವುದರಿಂದ (ಅದು) |
| ಅಶ್ವಸ್ಯ ಸರ್ವತ್ವಾಯ | ಅಶ್ವಕ್ಕೆ ಸರ್ವಪಶ್ವಾತ್ಮಕತ್ವವನ್ನು ತಂದುಕೊಡುತ್ತದೆ. |

ಪ್ರಾಕೃತಸಾಮದ ಸ್ಥಾನದಲ್ಲಿ ಪಾರ್ಥುರಶ್ಮಸಾಮವಿಧಿ; ಪ್ರಶಂಸೆ

| | |
|---|---|
| ಪಾರ್ಥುರಶ್ಮಮ್ ಬ್ರಹ್ಮಸಾಮಮ್ ಭವತಿ | ಪೃಥುರಶ್ಮಿಮಹರ್ಷಿಯು ಕಂಡ ಸಾಮವಾದ ಪಾರ್ಥುರಶ್ಮವು ಬ್ರಹ್ಮಸಾಮವಾಗುತ್ತದೆ. |
| ರಶ್ಮಿನಾ ವೈ ಯತಃ ಅಶ್ವಃ | ಹಗ್ಗದಿಂದ ಕಟ್ಟಲ್ಪಟ್ಟ ಕುದುರೆಯು (ತನ್ನ ಮೇಲೆ ಇರುವ ಸವಾರನ ಇಚ್ಛೆಯಂತೆ ನಡೆದುಕೊಳ್ಳುತ್ತದೆ) |

---

ಪೃಷ್ಠಸ್ತೋತ್ರದಲ್ಲಿ ಶಕ್ವರೀಛಂದಸ್ಸಿನ ಋಕ್ಕುಗಳು ಇರಬೇಕೆಂಬ ವಿಧಿಯು ಇದೆ. ಏಳು ಪಾದಗಳಿಂದ ಕೂಡಿರುವ ಶಕ್ವರೀಛಂದಸ್ಸಿನಲ್ಲಿ ಮೂರು ಪಾದಗಳು ಇರುವ ಗಾಯತ್ರಿಯೂ, ನಾಲ್ಕು ಪಾದಗಳು ಇರುವ ತ್ರಿಷ್ಟುಪ್ ಛಂದಸ್ಸೂ,

ಈಶ್ವರೋ ವಾ ಅಶ್ವೋಽಯತೋಽಪ್ರತಿಷ್ಠಿತಃ ಪರಾಂ ಪರಾವತಂ

ಗಂತೋರ್ಯತ್ಪಾರ್ಥುರಶ್ಮಂ ಬ್ರಹ್ಮಸಾಮಂ ಭವತ್ಯಶ್ವಸ್ಯ ಯತ್ಯೈಲ ಧೃತ್ಯೈಲ

ಸಂಕ್ಕೃಲತ್ಯಚ್ಛಾವಾಕಸಾಮಂ ಭವತ್ಯುತ್ಸನ್ನಯಜ್ಞೋ ವಾ ಏಷ ಯದಶ್ವಮೇಧಃ

---

ಈಶ್ವರಃ । ವೈ । ಅಶ್ವಃ । ಅಯತಃ । ಅಪ್ರತಿಷ್ಠಿತ ಇತ್ಯಪ್ರತಿ–ಸ್ಥಿತಃ । ಪರಾಮ್ । ಪರಾವತಮಿತಿ ಪರಾ–ವತಮ್ ।

ಗಂತೋಃ । ಯತ್ । ಪಾರ್ಥುರಶ್ಮಮಿತಿ ಪಾರ್ಥು–ರಶ್ಮಮ್ । ಬ್ರಹ್ಮಸಾಮಮಿತಿ ಬ್ರಹ್ಮ–ಸಾಮಮ್ । ಭವತಿ ।

ಅಶ್ವಸ್ಯ । ಯತ್ಯೈಲ । ಧೃತ್ಯೈಲ । ಸಂಕೃತೀತಿ ಸಮ್–ಕೃತಿ । ಅಚ್ಛಾವಾಕಸಾಮಮಿತ್ಯಚ್ಛಾವಾಕ–ಸಾಮಮ್ । ಭವತಿ ।

ಉತ್ಸನ್ನಯಜ್ಞ ಇತ್ಯುತ್ಸನ್ನ–ಯಜ್ಞಃ । ವೈ । ಏಷಃ । ಯತ್ । ಅಶ್ವಮೇಧ ಇತ್ಯಶ್ವ–ಮೇಧಃ ।

---

| ಬ್ರಾಹ್ಮಣಭಾಗ | ವಿವರಣೆ |
|---|---|
| **ಅಯತಃ ಅಪ್ರತಿಷ್ಠಿತಃ ಅಶ್ವಃ** | ಬಂಧನಕ್ಕೆ ಒಳಗಾಗದೆ ಹಿಡಿತದಲ್ಲಿ ಇರದ ಅಶ್ವವು |
| **ಪರಾಮ್ ಪರಾವತಮ್ ಗಂತೋಃ** | (ಸವಾರನ ಇಚ್ಛೆಗಿಂತಲೂ) ದೂರಕ್ಕಿಂತಲೂ ದೂರ |
| **ಈಶ್ವರಃ ವೈ** | ದಲ್ಲಿರುವ ಪ್ರದೇಶಕ್ಕೆ ಹೋಗಲು ಸಮರ್ಥವಾಗುತ್ತದೆ. |
| **ಯತ್ ಪಾರ್ಥುರಶ್ಮಮ್ ಬ್ರಹ್ಮಸಾಮಮ್** | ಪಾರ್ಥುರಶ್ಮಬ್ರಹ್ಮಸಾಮವು ಇರುತ್ತದೆಯೆಂಬುದು |
| **ಭವತಿ** | ಯಾವುದೋ (ಅದು) |
| **ಅಶ್ವಸ್ಯ ಯತ್ಯೈಲ ಧೃತ್ಯೈಲ** | ಅಶ್ವದ ಬಂಧನಕ್ಕೂ, ಧಾರಣಕ್ಕೂ ಸಮರ್ಥವಾಗುತ್ತದೆ. |

ಸಂಕೃತಿಸಾಮವಿಧಿ; ಪ್ರಶಂಸೆ

| | |
|---|---|
| **ಸಂಕೃತಿ ಅಚ್ಛಾವಾಕಸಾಮಮ್ ಭವತಿ** | ಸಂಕೃತಿಸಾಮವು ಅಚ್ಛಾವಾಕಸಾಮವಾಗಿರಬೇಕು. |
| **ಯತ್ ಏಷಃ ಅಶ್ವಮೇಧಃ** | ಈ ಅಶ್ವಮೇಧಯಜ್ಞವೆಂಬುದು (ಅನುಷ್ಠಿಸಬೇಕಾದ ಹಲವು ಅವಯವಗಳಿಂದ ಕೂಡಿರುವುದರಿಂದ) |
| **ಉತ್ಸನ್ನಯಜ್ಞಃ ವೈ** | ನಷ್ಟವಾಗುವಂತಹ ಯಜ್ಞಾವಯವಗಳಿಂದ ಕೂಡಿದೆ. |

---

ಐದು ಪಾದಗಳು ಇರುವ ಪಂಕ್ತಿಛಂದಸ್ಸೂ ಒಳಗೊಂಡಿದೆ. ಅಶ್ವವನ್ನೇ ಪ್ರಧಾನಪಶುವನ್ನಾಗಿ ಹೊಂದಿರುವ ಅಶ್ವಮೇಧಯಾಗದಲ್ಲಿ ಗ್ರಾಮ್ಯ–ಆರಣ್ಯಗಳಾದ ಅನೇಕ ಪಶುಗಳು ಆಲಂಭನ ಮಾಡಲ್ಪಡುತ್ತವೆ.

# ಕಸ್ತದ್ವೇದೇತ್ಯಾಹುರ್ಯದಿ ಸರ್ವೋ ವಾ ಕ್ರಿಯತೇ ನ ವಾ ಸರ್ವ ಇತಿ ಯಥ್ಸಂಕೃತ್ಯಚ್ಛಾವಾಕಸಾಮಂ ಭವತ್ಯಶ್ವಸ್ಯ ಸರ್ವತ್ವಾಯ ಪರ್ಯಾಪ್ತ್ಯಾ ಅನಂತರಾಯಾಯ

---

ಕಃ । ತತ್ । ವೇದ । ಇತಿ । ಆಹುಃ । ಯದಿ । ಸರ್ವಃ । ವಾ । ಕ್ರಿಯತೇ । ನ । ವಾ । ಸರ್ವಃ । ಇತಿ । ಯತ್ । ಸಂಕೃತೀತಿ ಸಮ್-ಕೃತಿ । ಅಚ್ಛಾವಾಕಸಾಮಮಿತ್ಯಚ್ಛಾವಾಕ-ಸಾಮಮ್ । ಭವತಿ । ಅಶ್ವಸ್ಯ । ಸರ್ವತ್ವಾಯೇತಿ ಸರ್ವ-ತ್ವಾಯ । ಪರ್ಯಾಪ್ತ್ಯಾ ಇತಿ ಪರಿ-ಆಪ್ತ್ಯೈ । ಅನಂತರಾಯಾಯೇತ್ಯನಂತಃ-ಆಯಾಯ ।

---

| ಬ್ರಾಹ್ಮಣಭಾಗ | ವಿವರಣೆ |
| --- | --- |
| ಯದಿ ವಾ ಸರ್ವಃ ಕ್ರಿಯತೇ ನ ವಾ ಸರ್ವಃ ಇತಿ | ಈ ಯಜ್ಞವು ಸಂಪೂರ್ಣವಾಗಿ ಅನುಷ್ಠಿಸಲ್ಪಡುತ್ತಿದೆಯೆಂದಾಗಲೀ, ಎಲ್ಲವೂ ಅನುಷ್ಠಿಸಲ್ಪಡುತ್ತಿಲ್ಲವೆಂಬುದನ್ನಾಗಲೀ |
| ತತ್ ಕಃ ವೇದ ಇತಿ ಆಹುಃ | ಇದನ್ನು ಯಾರು ತಾನೇ ತಿಳಿಯಬಲ್ಲನು ಎಂದು ಬಲ್ಲವರು ಹೇಳುತ್ತಾರೆ. |
| ಯತ್ ಸಂಕೃತಿ ಅಚ್ಛಾವಾಕಸಾಮಮ್ ಭವತಿ | ಯಾವ ಕಾರಣದಿಂದ (ಈ ಅಶ್ವಮೇಧಯಾಗದಲ್ಲಿ) ಸಂಕೃತಿಸಾಮವು ಅಚ್ಛಾವಾಕಸಾಮವಾಗುವುದೋ |
| ಅಶ್ವಸ್ಯ ಸರ್ವತ್ವಾಯ | (ಅದು) ಅಶ್ವಕ್ಕೆ ಸಂಬಂಧಿಸಿದ ಈ ಅಶ್ವಮೇಧ ಯಾಗದ ಸರ್ವಾವಯವಸಂಪೂರ್ತಿಗೆ ಕಾರಣವಾಗುತ್ತದೆ. |
| ಪರ್ಯಾಪ್ತ್ಯೈ ಅನಂತರಾಯಾಯ | (ಇದು ದೇವತೆಗಳ) ಸಂಪೂರ್ಣತೃಪ್ತಿಗೂ (ಯಜಮಾನನ ಸ್ವರ್ಗಪ್ರಾಪ್ತಿಗೆ) ವಿಘ್ನವಿಲ್ಲದಂತೆ ಮಾಡುವುದಕ್ಕೂ (ಸಾಧನವಾಗುತ್ತದೆ.) |

---

ಹೀಗಿರುವುದರಿಂದ ಅಶ್ವಮೇಧಕ್ಕೆ ಸಂಬಂಧಿಸಿದ ಪೃಷ್ಠಸ್ತೋತ್ರದಲ್ಲಿ ನಾನಾ ಛಂದಸ್ಸುಗಳಿಂದ ಕೂಡಿದ ಶಕ್ವರೀ ಛಂದಸ್ಸಿನ ಋಕ್‌ಗಳನ್ನು ಅಳವಡಿಸಿ ಗಾನ ಮಾಡಿದರೆ, ನಾನಾತ್ವಸಾಮ್ಯದಿಂದ ಅಶ್ವವನ್ನು ಸರ್ವಪಶುರೂಪವನ್ನಾಗಿ ಮಾಡಿದಂತಾಗುತ್ತದೆ. ಇದೇ ಅಶ್ವದ ಸರ್ವತ್ವ.

ಸಂಕೃತಿಸಾಮವು ತನ್ನ ಹೆಸರಿಗೆ ಅನುಗುಣವಾಗಿ ಎಲ್ಲವನ್ನೂ ಸರಿಪಡಿಸುತ್ತದೆ.

ಸರ್ವಸ್ತೋಮೋಽತಿರಾತ್ರ ಉತ್ತಮಮಹರ್ಭವತಿ ಸರ್ವಸ್ಯಾಽಽಪ್ತ್ಯೈ ಸರ್ವಸ್ಯ ಜಿತ್ಯೈ ಸರ್ವಮೇವ ತೇನಾಽಽಪ್ನೋತಿ ಸರ್ವಂ ಜಯತಿ ॥ ೫೮-12 ॥

[ಅಹರ್ಭವತಿ ವಾ ಅಶ್ವೋಽಹರ್ಭವತಿ ದಶ ಚ ॥]

---

ಸರ್ವಸ್ತೋಮ ಇತಿ ಸರ್ವ-ಸ್ತೋಮಃ । ಅತಿರಾತ್ರ ಇತ್ಯತಿ-ರಾತ್ರಃ । ಉತ್ತಮಮಿತ್ಯುತ್-ತಮಮ್ । ಅಹಃ । ಭವತಿ । ಸರ್ವಸ್ಯ । ಆಪ್ತ್ಯೈ । ಸರ್ವಸ್ಯ । ಜಿತ್ಯೈ । ಸರ್ವಮ್ । ಏವ । ತೇನ । ಆಪ್ನೋತಿ । ಸರ್ವಮ್ । ಜಯತಿ ॥ (೫೮) ॥

---

ಬ್ರಾಹ್ಮಣಭಾಗ — ವಿವರಣೆ

ಸರ್ವಸ್ತೋಮವಿಧಿ; ಅರ್ಥವಾದ

| ಬ್ರಾಹ್ಮಣಭಾಗ | ವಿವರಣೆ |
|---|---|
| ಸರ್ವಸ್ತೋಮಃ ಅತಿರಾತ್ರಃ ಉತ್ತಮಮ್ ಅಹಃ ಭವತಿ | ತ್ರಿವೃತ್ ಸ್ತೋಮದಿಂದ ಆರಂಭಿಸಿ ತ್ರಯಸ್ತ್ರಿಂಶತ್ ಸ್ತೋಮದವರೆಗಿನ ಎಲ್ಲ ಸ್ತೋಮಗಳೂ ಯಾವ ಅತಿರಾತ್ರದಲ್ಲಿರುತ್ತವೆಯೋ ಅಂತಹ ಅತಿರಾತ್ರವು ಅಶ್ವಮೇಧದ ಮೂರನೆಯ ದಿನದಲ್ಲಿ ಅನುಷ್ಠಿಸಲ್ಪಡಬೇಕು. |
| ಸರ್ವಸ್ಯ ಆಪ್ತ್ಯೈ | ಈ ಹಿಂದೆ ಪ್ರಾಪ್ತವಾಗದ ಎಲ್ಲವನ್ನೂ ಯಜಮಾನನು ಪಡೆಯಲೂ, |
| ಸರ್ವಸ್ಯ ಜಿತ್ಯೈ | ಈ ಹಿಂದೆ ಗೆಲ್ಲಲಾಗದ ಎಲ್ಲರನ್ನೂ ಯಜಮಾನನು ಜಯಿಸುವುದಕ್ಕಾಗಿಯೂ (ಇದು ಸಾಧನವಾಗುತ್ತದೆ) |
| ತೇನ ಸರ್ವಮ್ ಏವ ಆಪ್ನೋತಿ ಸರ್ವಮ್ ಜಯತಿ | ಈ ಸರ್ವಸ್ತೋಮದ/ಅಶ್ವಮೇಧದ ಅನುಷ್ಠಾನದಿಂದ ಧನಾದಿಗಳೆಲ್ಲವನ್ನೂ ಪಡೆಯುವನು. ಎಲ್ಲ ವೈರಿವರ್ಗವನ್ನೂ ಗೆಲ್ಲುವನು. |

---

ಎಲ್ಲ ಸ್ತೋಮಗಳಿಂದಲೂ ಕೂಡಿರುವ ಅತಿರಾತ್ರದ ಅನುಷ್ಠಾನದಿಂದ, ಸರ್ವಸ್ತೋಮದಿಂದ ಅನುಷ್ಠಾನವಾದಂತೆ ಆಗಿ, ಈ ಅಶ್ವಮೇಧಯಾಗದ ಅನುಷ್ಠಾನದಿಂದ ಯಜಮಾನನು ಸಮಸ್ತವನ್ನೂ ಪಡೆಯುವನು ಶತ್ರುಗಳನ್ನು ಜಯಿಸುವನು. ಹೀಗೆ ಅಶ್ವಮೇಧ ಯಾಗವು ಸರ್ವಪ್ರದವೆನಿಸಿದೆ. ಸರ್ವಪಾಪಹರಣವೆನಿಸಿದೆ.

ದೇವಾಸುರಾಸ್ತೇನರ್ತವ್ಯಾ ರುದ್ರೋಽಶ್ಮನ್ನೃಷದೇ ವಡುದೇನಂ ಪ್ರಾಚೀಮಿತಿ ವಸೋರ್ಧಾರಾ ಮಗ್ನಿರ್ದೇವೇಭ್ಯಃ ಸುವರ್ಗಾಯ ಯತ್ರಾಕೂತಾಯ ಛಂದಶ್ಚಿತಂ ಪವಸ್ವ ದ್ವಾದಶ ॥ 12 ॥

ದೇವಾಸುರಾ ಅಜಾಯಾಂ ವೈ ಗ್ರುಮುಷ್ಟಿಃ ಪ್ರಥಮೋ ದೇವಯತಾಮೇತದ್ವೈ ಛಂದಸಾಮೃಧ್ನೋತ್ಯಷ್ಟಾ ಪಂಚಾಶತ್ ॥ 58 ॥

॥ ದೇವಾಸುರಾಸ್ಸರ್ವಾಜ್ಞಯತಿ ॥

ಹರಿಃ ಓಮ್ ॥

ಶ್ರೀ ಕೃಷ್ಣಾರ್ಪಣಮಸ್ತು ॥

ಇತಿ ಪಂಚಮಕಾಂಡೇ ಚತುರ್ಥಃ ಪ್ರಶ್ನಃ

# ಕೃಷ್ಣ ಯಜುರ್ವೇದ ಕನ್ನಡ ಪ್ರಕಾಶನ

**ಸಂಪುಟ – ೧**

(ವೇದಗಳ ಪರಿಚಯ, ಕೃಷ್ಣ ಯಜುರ್ವೇದ ಪರಿಚಯ, ಯಜ್ಞಗಳ ಪರಿಚಯ)

**ಸಂಪುಟ – ೨**

ತೈತ್ತಿರೀಯ ಸಂಹಿತಾ (ಪ್ರಥಮ ಕಾಂಡ 1–2 ಪ್ರಪಾಠಕಗಳು)

**ಸಂಪುಟ – ೩**

ತೈತ್ತಿರೀಯ ಸಂಹಿತಾ (ಪ್ರಥಮ ಕಾಂಡ 3–4–5 ಪ್ರಪಾಠಕಗಳು)

**ಸಂಪುಟ – ೪**

ತೈತ್ತಿರೀಯ ಸಂಹಿತಾ (ಪ್ರಥಮ ಕಾಂಡ 6–7–8 ಪ್ರಪಾಠಕಗಳು)

**ಸಂಪುಟ – ೫**

ತೈತ್ತಿರೀಯ ಸಂಹಿತಾ (ದ್ವಿತೀಯ ಕಾಂಡ 1–2 ಪ್ರಪಾಠಕಗಳು)

**ಸಂಪುಟ – ೬**

ತೈತ್ತಿರೀಯ ಸಂಹಿತಾ (ದ್ವಿತೀಯ ಕಾಂಡ 3–4 ಪ್ರಪಾಠಕಗಳು)

**ಸಂಪುಟ – ೭**

ತೈತ್ತಿರೀಯ ಸಂಹಿತಾ (ದ್ವಿತೀಯ ಕಾಂಡ 5–6 ಪ್ರಪಾಠಕಗಳು)

**ಸಂಪುಟ – ೮**

ತೈತ್ತಿರೀಯ ಸಂಹಿತಾ (ತೃತೀಯ ಕಾಂಡ 1–2–3 ಪ್ರಪಾಠಕಗಳು)

**ಸಂಪುಟ – ೯**

ತೈತ್ತಿರೀಯ ಸಂಹಿತಾ (ತೃತೀಯ ಕಾಂಡ 4–5 ಪ್ರಪಾಠಕಗಳು)
(ಚತುರ್ಥ ಕಾಂಡ 1ನೆಯ ಪ್ರಪಾಠಕ)

**ಸಂಪುಟ – ೧೦**

ತೈತ್ತಿರೀಯ ಸಂಹಿತಾ (ಚತುರ್ಥ ಕಾಂಡ 2–3–4 ಪ್ರಪಾಠಕಗಳು)

**ಸಂಪುಟ – ೧೧**

ತೈತ್ತಿರೀಯ ಸಂಹಿತಾ (ಚತುರ್ಥ ಕಾಂಡ 5–6–7 ಪ್ರಪಾಠಕಗಳು)

**ಸಂಪುಟ – ೧೨**

ತೈತ್ತಿರೀಯ ಸಂಹಿತಾ (ಪಂಚಮಕಾಂಡ – ೧, ೨, ೩ ಹಾಗೂ ೪ನೇಯ ಪ್ರಪಾಠಕಗಳು)

ಪ್ರತಿಗಳಿಗೆ :

**ಜ್ಯೋತಿ ಸಾಂಸ್ಕೃತಿಕ ಪ್ರತಿಷ್ಠಾನ (ರಿ.)**

31, ಪಂಪಮಹಾಕವಿರಸ್ತೆ, ಬೆಂಗಳೂರು–560 004

ದೂರವಾಣಿ : 26677852

ಮುದ್ರಕರು : ಪರಿಮಳ ಮುದ್ರಣಾಲಯ, ಹನುಮಂತನಗರ, ಬೆಂಗಳೂರು–50 ದೂ. : 26606061